# ಗದ್ಯ ವಿಹಾರ

೨






ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
1972

# ಮೊದಲ ಮಾತು

ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳನ್ನು ಮುಖ್ಯವಾಗಿ ಗಮನದಲ್ಲಿಟ್ಟು ಕೊಂಡು, ಸಾಮಾನ್ಯ ಓದುಗರಿಗೂ ಉಪಯೋಗವಾಗುವಂತೆ, ಕನ್ನಡ ಗದ್ಯದ ವಿವಿಧ ಮಾದರಿಗಳನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಬೇಕೆಂಬ ಕನ್ನಡ ಅಧ್ಯಯನ ಮಂಡಳಿಯ ತೀರ್ಮಾನವನ್ನು ಕಾರ್ಯರೂಪಕ್ಕೆ ತರಲು ವಿಶ್ವವಿದ್ಯಾನಿಲಯ ಒಂದು ಸಂಪಾದಕ ಸಮಿತಿಯನ್ನು ೧೯೬೯ರಲ್ಲಿ ನೇಮಿಸಿತು. ಆಗ ಕನ್ನಡ ಅಧ್ಯಯನ ಮಂಡಳಿಯ ಅಧ್ಯಕ್ಷರಾಗಿದ್ದ ಪ್ರೊ. ಡಿ. ಜವರೇಗೌಡರೇ ಈ ಸಂಪಾದಕ ಸಮಿತಿಯ ಅಧ್ಯಕ್ಷರೂ ಆಗಿದ್ದರು. ಡಾ. ಹಾ. ಮಾ. ನಾಯಕ, ಪ್ರೊ. ಎಸ್. ವಿ. ಪರಮೇಶ್ವರ ಭಟ್ಟ, ಡಾ. ಎಚ್. ತಿಪ್ಪೇರುದ್ರಸ್ವಾಮಿ ಹಾಗೂ ಡಾ. ಪ್ರಭುಶಂಕರ ಅವರು ಸಮಿತಿಯ ಸದಸ್ಯರಾಗಿದ್ದರು. ಮೂರು ಸಂಪುಟಗಳ ಈ ಗದ್ಯಸಂಗ್ರಹಕ್ಕೆ 'ಗದ್ಯವಿಹಾರ'ವೆಂದು ಹೆಸರಿಟ್ಟು, ಈ ಸಂಪುಟಗಳಲ್ಲಿ ಮೊದಲನೆಯದು ಹಳಗನ್ನಡ ನಡುಗನ್ನಡ ಗದ್ಯಭಾಗಗಳನ್ನೂ, ಎರಡು ಮೂರನೆಯವು ಆಧುನಿಕ ಲಲಿತ ಸಾಹಿತ್ಯ ಭಾಗಗಳನ್ನೂ ಮತ್ತು ಶಾಸ್ತ್ರಗದ್ಯಭಾಗಗಳನ್ನೂ ಒಳಗೊಂಡಿರಬೇಕೆಂದೂ, ಈ ಭಾಗಗಳು ಆದಷ್ಟೂ ಪ್ರಾತಿನಿಧಿಕವಾಗಿರಬೇಕೆಂದೂ ಸಮಿತಿ ತೀರ್ಮಾನಿಸಿತು. ತೀರ್ಮಾನಕ್ಕೆ ಅನುಗುಣವಾಗಿ ಅದು ಮೊದಲನೆಯ ಸಂಪುಟವನ್ನು ಸಿದ್ಧಗೊಳಿಸಿತು. ಆ ಸಂಪುಟಕ್ಕೆ ಬರೆದ ಮೊದಲ ಮಾತಿನಲ್ಲಿ ಪ್ರೊ. ಜವರೇಗೌಡರು ಹೀಗೆ ಬರೆದಿದ್ದರು :

"ಎರಡು ಸಾವಿರ ವರ್ಷಗಳ ದೀರ್ಘ ಇತಿಹಾಸವಿರುವ ಕನ್ನಡ ಸಾಹಿತ್ಯದಲ್ಲಿ ಗದ್ಯಪ್ರಕಾರ ಪದ್ಯಪ್ರಕಾರದಷ್ಟೆ ಸಮಪ್ರಮಾಣದಲ್ಲಿ ಹುಲುಸಾಗಿ ಬೆಳೆದಿಲ್ಲವೆಂಬ ಅಭಿಪ್ರಾಯವಿದೆ. ಒಂಭತ್ತನೆಯ ಶತಮಾನಕ್ಕೆ ಹಿಂದೆ ಸಾಕಷ್ಟು ಗದ್ಯ ಬೆಳೆದಿತ್ತೆಂಬುದಕ್ಕೆ ಕ್ರಿ. ಶ. ೪೫೦ರ ಹಲ್ಮಿಡಿ ಶಾಸನ ಮತ್ತು ಕವಿರಾಜಮಾರ್ಗದ ಉಲ್ಲೇಖಗಳು ಸಾಕ್ಷಿಯಾಗಿವೆ. ವಡ್ಡಾರಾಧನೆಯಂಥ ಗದ್ಯಕೃತಿಯ ಸೃಷ್ಟಿ ಆ ಕಾಲಕ್ಕೆ ಕನ್ನಡ ಗದ್ಯ ಪ್ರೌಢವಾಗಿ ಪಕ್ವವಾಗಿ ಸಮರ್ಪಕವಾಗಿ ಸರ್ವಶಕ್ತವಾಗಿ ವೀರ್ಯವತ್ತಾಗಿ ಸರ್ವಾಂಗ ಸುಂದರವಾಗಿ ಬೆಳೆದಿತ್ತೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಚಂಪೂಕೃತಿಗಳಲ್ಲಿ ವಚನಗಳಲ್ಲಿ ರಗಳೆಗಳಲ್ಲಿ ಉಗಾಭೋಗಗಳಲ್ಲಿ ಒಡೆಯರ ಕಾಲದ ಕೃತಿಗಳಲ್ಲಿ ಕನ್ನಡ ಗದ್ಯದ ನಾನಾ ರೂಪ ವಿಲಾಸಗಳನ್ನು ಕಾಣಬಹುದಾಗಿದೆ. ಆಧುನಿಕ ಗದ್ಯವಂತು ಜಗತ್ತಿನ ನಾನಾ ಭಾಷಾ ಸಾಹಿತ್ಯಗಳ ಸಾರಸತ್ವವನ್ನು ಹೀರಿಕೊಂಡು ಸುಪುಷ್ಟವಾಗಿ ವಿಶ್ವರೂಪಾತ್ಮಕವಾಗಿ ಸರ್ವಂಕಷವಾಗಿ ಸರ್ವವ್ಯಾಪಕವಾಗಿ, ಜಗತ್ತಿನ ಸಮೃದ್ಧ ಭಾಷೆಗಳಿಗೆ ಸರಿಸಮವಾಗಿ ಬೆಳೆದಿದೆ.

"ಇಷ್ಟು ಸಂಪತ್ಸಮೃದ್ಧವಾದ ಗದ್ಯದ ವಿವಿಧ ಮುಖಗಳನ್ನು ಪರಿಚಯಿಸಿ ಕೊಡುವ ಸಂಕಲನ ಗ್ರಂಥಗಳು ತುಂಬ ಕಡಿಮೆ. ಈ ಶತಮಾನ ಪ್ರಧಾನವಾಗಿ ಗದ್ಯಯುಗ. ಆಧುನಿಕ ವಿಜ್ಞಾನದ ಸಮಗ್ರಾಭಿವ್ಯಕ್ತಿಗೆ ಅದು ಸಾಧನವಾಗಬೇಕಾಗಿದೆ. ಮಡಿ ಮೈಲಿಗೆಯ ಸಂಕೋಚವಿಲ್ಲದೆ ಬಿಂಕಬಿಗುಮಾನವಿಲ್ಲದೆ ಸಂಸ್ಕೃತ ಇಂಗ್ಲಿಷ್ ಪರ್ಷಿಯನ್ ಅರೇಬಿಕ್ ಮೊದಲಾದ ಭಾಷೆಗಳಿಂದ ಸಲೀಸಾಗಿ ಶಬ್ದಸಾಮಗ್ರಿಯನ್ನೂ ಅವುಗಳ ಚೇಗು ಬನಿಗಳನ್ನೂ ಸ್ಥೂಲ ಸೂಕ್ಷ್ಮಗಳನ್ನೂ

ಎರವಲು ಪಡೆದುಕೊಂಡು, ರಕ್ತಗತ ಮಾಡಿಕೊಂಡು ಲೋಕಭಾಷೆಯಾಗಬಲ್ಲ ಸಾಮರ್ಥ್ಯವನ್ನು ಪಡೆದಿದೆ. ಇಂಥ ಗದ್ಯದ ರೂಪರೇಷೆಗಳನ್ನು ಕೇವಲ ದಿಗ್ದರ್ಶನ ರೀತಿಯಲ್ಲಿ ತೋರಿಸಿಕೊಡುವ ಸಲುವಾಗಿ 'ಗದ್ಯವಿಹಾರ'ದ ಮೂರು ಸಂಪುಟಗಳನ್ನು ಪ್ರಕಟಿಸಬೇಕೆಂದು ತೀರ್ಮಾನವಾಯಿತು."

ಈ ಮಾತುಗಳನ್ನು ಗಮನದಲ್ಲಿಟ್ಟುಕೊಂಡು ಈಗ 'ಗದ್ಯವಿಹಾರ'ದ ಎರಡನೆಯ ಸಂಪುಟ ಪ್ರಕಟವಾಗುತ್ತಿದೆ. ಡಾ. ಹಾ. ಮಾ. ನಾಯಕ (ಅಧ್ಯಕ್ಷ), ಪ್ರಾ. ಎಸ್. ವಿ. ಪರಮೇಶ್ವರ ಭಟ್ಟ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಡಾ. ಪ್ರಭುಶಂಕರ, ಶ್ರೀ ಸಿ. ಪಿ ಕೃಷ್ಣಕುಮಾರ್—ಇವರನ್ನೊಳಗೊಂಡ ಸಂಪಾದಕ ಸಮಿತಿ ಪ್ರಕೃತ ಸಂಪುಟವನ್ನು ಸಿದ್ಧಪಡಿಸಿದೆ.

ಇದರಲ್ಲಿ ಹೊಸಗನ್ನಡ ಶಾಸ್ತ್ರಗದ್ಯದ ಕೆಲವು ಪ್ರಾತಿನಿಧಿಕ ಮಾದರಿಗಳನ್ನು ಕೊಡಲಾಗಿದೆ. ಧರ್ಮ, ಸಾಹಿತ್ಯ, ಕಲೆ, ವಿಮರ್ಶೆ, ವಿಜ್ಞಾನ, ಸಮಾಜವಿಜ್ಞಾನ ಮೊದಲಾದ ನಾನಾ ಶಾಸ್ತ್ರ ವಿಷಯಗಳಿಗೆ ಸಂಬಂಧಿಸಿದಂತೆ ಕನ್ನಡ ಹೇಗೆ ಬಳಕೆಯಾಗಿದೆ ಎಂಬುದನ್ನು ಈ ಬರಹಗಳು ತೋರಿಸುತ್ತವೆ. ಈ ಸಂಕಲನದಲ್ಲಿ ಸೇರಬೇಕಾಗಿರುವ ಈಚಿನವರ ಬರಹಗಳು ಇನ್ನೂ ಇವೆ. ಆದರೆ ಸಂಪುಟ ಈಗಾಗಲೇ ಗಾತ್ರದ್ದಾಗಿರುವುದರಿಂದ ಆಯ್ಕೆಯನ್ನು ಒಂದು ಘಟ್ಟಕ್ಕೆ ನಿಲ್ಲಿಸಲಾಗಿದೆ. ಮುಂದಿನ ಬರಹಗಳನ್ನು ಇನ್ನೂ ಒಂದು ಸಂಪುಟದಲ್ಲಿ (ಮೂರನೆಯದು) ಪ್ರಕಟಿಸಬೇಕೆಂದು ತೀರ್ಮಾನಿಸಲಾಗಿದೆ. ಆದ್ದರಿಂದ ನಾಲ್ಕನೆಯ ಸಂಪುಟ ಲಲಿತಗದ್ಯಕ್ಕೆ ಮೀಸಲಾಗುತ್ತದೆ. ಶಾಸ್ತ್ರಗದ್ಯ ಈಚಿನ ಎರಡು ದಶಕಗಳಲ್ಲಿ ಬಹುಮುಖವಾಗಿ ಬೆಳೆದಿರುವುದರಿಂದ ಹೀಗೆ ಮಾಡುವುದು ಅನಿವಾರ್ಯ. ಹೊಸ ಪೀಳಿಗೆಯ ಲೇಖಕರ ಗದ್ಯವನ್ನು ಸಮಗ್ರವಾಗಿ ಅವಲೋಕಿಸುವ ದೃಷ್ಟಿಯಿಂದಲೂ ಇದು ಅಗತ್ಯ.

ಈ ಸಂಕಲನವನ್ನು ೧೯೭೩ರಲ್ಲಿ ನಡೆಯುವ ಬಿ.ಎ., ಬಿ.ಎಸ್‌ಸಿ. ಮೊದಲ ಪರೀಕ್ಷೆಗೆ ಸವಿಸ್ತರ ಪಠ್ಯಪುಸ್ತಕವನ್ನಾಗಿ ಗೊತ್ತುಮಾಡಿದೆ. ೩, ೪, ೬, ೮, ೯, ೧೦, ೧೨, ೧೪, ೧೬, ೧೮, ೨೧, ೨೪, ೨೬, ೩೦, ೩೧ ಮತ್ತು ೩೩—ಈ ಭಾಗಗಳು ಮಾತ್ರ ಈ ಪರೀಕ್ಷೆಗೆ ನಿಯಮಿತವಾಗಿವೆ.

ಈ ಸಂಪುಟವನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ ಸಂಪಾದಕ ಮಂಡಳಿಯ ಸದಸ್ಯ ಮಿತ್ರರಿಗೆ, ಅಚ್ಚಿಗೆ ಅಣಿಗೊಳಿಸಿದ ಪಠ್ಯಪುಸ್ತಕ ಹಾಗೂ ಭಾಷಾಂತರ ವಿಭಾಗದ ಸಹೋದ್ಯೋಗಿಗಳಿಗೆ, ಅಚ್ಚುಮಾಡಿದ ವಿಶ್ವವಿದ್ಯಾನಿಲಯದ ಮುದ್ರಣಾಲಯದ ನಿರ್ದೇಶಕ ಶ್ರೀ ಎಚ್. ನರಸಣ್ಣ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನನ್ನ ವಂದನೆಗಳು ಸಲ್ಲುತ್ತವೆ. ಈ ಸಂಕಲನದಲ್ಲಿ ಲೇಖನಗಳನ್ನು ಸೇರಿಸಲು ಕೃಪೆಮಾಡಿ ಒಪ್ಪಿದ ಲೇಖಕರಿಗೆ, ಕಣ್ಮರೆಯಾಗಿರುವ ಲೇಖಕರ ಗ್ರಂಥಸ್ವಾಮ್ಯವನ್ನು ಹೊಂದಿರುವ ಅವರ ಬಂಧುವರ್ಗದವರಿಗೆ, ಶ್ರೀ ಬಿ.ಎಂ.ಶ್ರೀ. ಹಾಗೂ ಶ್ರೀ ಗೋವಿಂದ ಪೈ ಅವರ ಲೇಖನಗಳನ್ನು ಬಳಸಲು ಸಮ್ಮತಿಸಿದ ಕಾವ್ಯಾಲಯದ ಒಡೆಯರಿಗೆ ನನ್ನ ಕೃತಜ್ಞತೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು

ಹಾ. ಮಾ. ನಾಯಕ
ಅಧ್ಯಕ್ಷ, ಸಂಪಾದಕ ಮಂಡಳಿ

# ಪರಿವಿಡಿ

# ಹೊಸಗನ್ನಡ ನುಡಿಗನ್ನಡಿ : ಪೀಠಿಕೆ

ಶ್ರೀರಮಣನ ಪದಕಮಲವ ಸಿರದಿಂ ಸಾಷ್ಟಾಂಗಮೆರಗಿ ಕೃಷ್ಣಾಚಾರ್ಯಂ
ಶ್ರೀರಂಗಪುರನಿಕೇತಂ ಬರೆದನು ಹೊಸಗನ್ನಡನುಡಿಗನ್ನಡಿಯೊಲವಿಂ.
ಹೊಸಗನ್ನಡನುಡಿಗನ್ನಡಿ ಎಸೆವ ಪ್ರಶ್ನೋತ್ತರಾವಳಿ ರಚಿತವಾಕ್ಯಂ
ದಶಸಂಖ್ಯ ಪ್ರಕರಣಗಳಿಮೆಸೆಗುಂ ವ್ಯಾಕರಣಮೊಳಿಯೆ ವಿಬುಧರು ಮೆಲ್ಲಂ.

ಈ ಭೂಮಂಡಲದೊಳಗಿರುವ ಭಾಷೆಗಳೊಳಗೆ ಸಂಸ್ಕೃತ ಭಾಷೆಯು ಆದಿ ಭಾಷೆಯು; ಅದೇಕೆಂದರೆ, ಸಂಸ್ಕೃತವು ಪೂರ್ಣ ಭಾಷೆಯಾದ್ದರಿಂದಲೂ, ಅದರಲ್ಲಿರುವ ಸಮಸ್ತ ಪದಗಳಿಗೂ ಅವಯವಾರ್ಥವಿರುವದ್ದರಿಂದಲೂ, ಆದರಲ್ಲಿರುವ ಪದಗಳೊಳಗೆ ಬಹು ಪದಗಳು ಇತರ ಭಾಷೆಗಳಲ್ಲೆಲ್ಲಾ ಬಂದಿರುವದ್ದರಿಂದಲೂ, ಆ ಭಾಷೆಗಳೆಲ್ಲಾ ಪದಗಳಿಗೂ ಅವಯವಾರ್ಥವಿಲ್ಲದ್ದರಿಂದಲೂ ಸಂಸ್ಕೃತವಾದಿ ಭಾಷೆಯಾಯಿತು. ಆ ಸಂಸ್ಕೃತ ಭಾಷೆಯು ಪೂರ್ವಕಾಲದಲ್ಲಿ ವಿಂಧ್ಯಪರ್ವತಕ್ಕೂ ಹಿಮವತ್ಪರ್ವತಕ್ಕೂ ಮಧ್ಯವಾದ ಆರ್ಯಾವರ್ತವೆಂಬ ದೇಶದ ಸಕಲವಾದ ಜನರೂ ಮಾತನಾಡುತ್ತಿದ್ದರು. ಬರಬರ ಅದು ಕೆಟ್ಟು ಕಾನೋಜಿ ಮೊದಲಾದ ಭಾಷೆಗಳಾಗೀಗಾದೇಶಗಳಲ್ಲವರಿಂದ ವ್ಯವಹಾರ ನಡೆದು ಬರುತ್ತದೆ. ವಿಂಧ್ಯ ಪರ್ವತಕ್ಕೆ ದಕ್ಷಿಣದಲ್ಲಿ ಕನ್ಯಾಕುಮಾರಿಯವರೆಗೂ ದ್ರವಿಡ ದೇಶವು; ಆದರಲ್ಲಿ ಪಾಂಡ್ಯ ಚೋಳ ತೊಂಡೀರವೆಂಬೀ ಮೂರು ದೇಶಗಳು ಮಾತ್ರ ಶುದ್ಧ ದ್ರವಿಡವಾಗಿ ನಿಂತವು; ಅವರಲ್ಲಿಯೂ ಅಗಸ್ತ್ಯಸೂತ್ರ ತೋಲುಕಾಪ್ಯ ಮೊದಲಾದ ವ್ಯಾಕರಣ ಗ್ರಂಥಗಳು ಹುಟ್ಟಿದ ಕಾಲಕ್ಕಿಂತಲೀಗದು ಕೆಟ್ಟು ಸಂಸ್ಕೃತಕ್ಕೆ ಕಾನೋಜಿ ಮುಂತಾದ್ದರ ಹಾಂಗೆ ಬಹಳ ಭೇದವನ್ನು ಹೊಂದಿಯದೆ. ಆ ದ್ರಮಿಡ ದೇಶಗಳಿಗೂ ವಿಂಧ್ಯಪರ್ವತಕ್ಕೂ ಮಧ್ಯದಲ್ಲಿ ದ್ರಮಿಡವೂ ಸಂಸ್ಕೃತವೂ ಸ್ವಭಾವದಿಂದಲೂ ವಿಕಾರವನ್ನೈದಿಯೂ ಶೇರಿ, ಕೇರಳ ತೌಳವ ಕರ್ಣಾಟಕಾಂಧ್ರಗಳೆಂಬ ನಾಲ್ಕು ಭಾಷೆಗಳಾದವು; ಇವು ದ್ರಮಿಡಾಭಾಸಗಳಾದ್ದರಿಂದಲೇ ಈ ಭಾಷೆಗಳೂ ದ್ರಮಿಡವೂ ಶೇರಿ ಪಂಚದ್ರಾವಿಡವೆಂಬ ಪ್ರಸಿದ್ಧಿಯನ್ನು ಹೊಂದಿದವು. ದ್ರಮಿಡದಲ್ಲವಯವಾರ್ಥವುಳ್ಳ ಪದಗಳು ಈ ನಾಲ್ಕು ಭಾಷೆಯಲ್ಲೂ ಅವಯವಾರ್ಥವಿಲ್ಲದೆ ಬಂದಿರುವದ್ದರಿಂದ ಈ ನಾಲ್ಕಕ್ಕೂ ಅದು ಮೂಲಭಾಷೆಯಾಯಿತು. ಆದರೆ ಕೇರಳದಲ್ಲಿ ಸಂಸ್ಕೃತ ದ್ರಮಿಡಗಳೆರಡೂ ತಮ್ಮ ವಿಭಕ್ತಿಪ್ರತ್ಯಯ ಲೋಪಿಸದೆಯೂ ಬಂದು ಶೇರುತ್ತವೆ; ಕಡಮೇ ಭಾಷೆಗಳಲ್ಲಿ ವಿಭಕ್ತಿ ಲೋಪಿಸೇ ಬಂದು ಶೇರುತ್ತವೆ; ಮತ್ತೂ ಕೇರಳ ತೌಳವಗಳಿಗೆ ಪ್ರಾಚೀನ ವ್ಯಾಕರಣವಿರುವದಾಗಿದುವರಿಗೂ ಕೇಳಲಿಲ್ಲ; ಆದ್ದರಿಂದದರಲ್ಲಿ ವ್ಯಾಕರಣಶಿಕ್ಷಿತ ಶಬ್ದಗಳೆಂತಲೂ ಅಲ್ಲವೆಂತಲೂ ಭೇದವಿಲ್ಲವು; ಮತ್ತೂ ಆ ಭಾಷೆಗಳಲ್ಲಿ ವಿಸ್ತಾರವಾಗಿ ಕಾವ್ಯಗಳೂ ಕಾಣ ಬರಲಿಲ್ಲ. ಆಂಧ್ರಕ್ಕೆ ನನ್ನಯಭಟ್ಟೀಯ ಅಪ್ಪಕವೀಯ ಆಂಧ್ರಕೌಮುದಿ ಮೊದಲಾದ

ವ್ಯಾಕರಣಗಳೂ ಛಂದಸ್ಸೂ ಅಲಂಕಾರ ಮೊದಲಾದ ಲಕ್ಷಣಗ್ರಂಥಗಳೂ ಅನೇಕ ಕಾವ್ಯಗಳೂ ಅವೆ. ಆ ಮೇರೆಗೆ ಕನ್ನಡಕ್ಕೂ ವ್ಯಾಕರಣ ಛಂದಸ್ಸು ಅಲಂಕಾರ ಮೊದಲಾದ ಲಕ್ಷಣಗ್ರಂಥಗಳೂ ವಿಸ್ತಾರವಾದ ಕಾವ್ಯಗಳೂ ಅವೆ; ಆದ್ದರಿಂದ ಕೇರಳ ತೌಳವವೆರಡಕ್ಕಿಂತಲೂ ಕನ್ನಡ ತೆಲುಗುಗಳೆರಡೂ ಹೆಚ್ಚಾದವು; ಅವರೊಳಗೆ ಕನ್ನಡ ಭಾಷೆಯೇ ಶ್ರೇಷ್ಠವು. ಏತರಿಂದೆಂದರೆ, ಹ್ಯಾಂಗೆ ವಿಶಿಷ್ಟಾದ್ವೈತಿಗಳು ದ್ರಮಿಡ ಭಾಷೆಯನ್ನು ಪೂಜ್ಯವಾದ ಭಾಷೆಯೆಂದಿಟ್ಟುಕೊಂಡರೋ ಆ ಮೇರೆಗೆ ದ್ವೈತಿಗಳಾದ ಮಾಧ್ವರು, ಕನ್ನಡವನ್ನುಳಿದ ಕಡಮೆ ಭಾಷೆಗಳೆಲ್ಲಾ ಅಶುದ್ಧ ಭಾಷೆಯೆಂತಲೂ, ಅವನ್ನು ಸ್ನಾನಜಪಾದಿ ಕಾಲಗಳಲ್ಲಿ ಹೇಳಬಾರದೆಂತಲೂ, ಸಂಸ್ಕೃತ ಬಾರದ ಪಕ್ಷದಲ್ಲಿ ಕನ್ನಡ ಭಾಷೆಯನ್ನು ಹೇಳ ಬಹುದೆಂತಲೂ, ಆದ್ದರಿಂದ ಕನ್ನಡ ಭಾಷೆ ಬಹಳ ಶ್ರೇಷ್ಠವೆಂತಲೂ ಸಮ್ಮತಿಸಿದ್ದಾರೆ; ಮತ್ತೂ ಲಿಂಗಧಾರಿ ಗಳಾದ ಕರ್ಣಾಟಕ ದೇಶದ ಶೂದ್ರರು ಬಸವನ ಪುರಾಣ ಮೊದಲಾದ್ದನ್ನು ಕನ್ನಡದಲ್ಲಿಟ್ಟುಕೊಂಡು, ಈ ಭಾಷೆಯಲ್ಲಿ ಬಹಳ ಗಣ್ಯವ ಮಾಡುತ್ತಾರೆ; ಮತ್ತೂ ಜೈನರು ಈ ಕನ್ನಡದಲ್ಲಿ ತಮ್ಮ ಮತಗ್ರಂಥಗಳನ್ನು ಮಾಡಿಟ್ಟುಕೊಂಡು, ಈ ಭಾಷೆಗೆ ಬಹಳ ಮರ್ಯಾದೆಯನ್ನು ಮಾಡುತ್ತಾರೆ; ಆದ್ದರಿಂದೀ ಮೇರೆಗೆ ಪಂಚ ದ್ರಾವಿಡಗಳಲ್ಲಿ ದ್ರಮಿಡವನ್ನುಳಿದ ಕಡಮೇ ಭಾಷೆಗಳಿಗಾಗಲಿ ಕಾನೋಜಿ ಮೊದಲಾದ ಭಾಷೆಗಳಿಗಾಗಲಿ ಯಾವ ಮತಸ್ಥರಾದರೂ ಕನ್ನಡಕ್ಕೆ ಮಾಡುವಷ್ಟು ಮರ್ಯಾದೆಯ ಮಾಡುವದಿಲ್ಲವಾದ್ದರಿಂದ ಕನ್ನಡವು ಅಪ್ರತಿಶಸ್ತವಾದ ಭಾಷೆ ಯೆಂದು ಹೇಳಲ್ಪಡುತ್ತದೆ. ಈ ಕನ್ನಡ ದೇಶದಲ್ಲಿ ಪೂರ್ವದಲ್ಲಿ ವ್ಯವಹರಿಸಲ್ಪಡು ತ್ತಿದ್ದಂಥಾ ಹಳಗನ್ನಡವನ್ನು ಅನುಸರಿಸಿ, ಶಬ್ದಾನುಶಾಸನವೆಂತಲೂ ಶಬ್ದಮಣಿ ದರ್ಪಣವೆಂತಲೂ ಎರಡು ವ್ಯಾಕರಣಗ್ರಂಥಗಳೂ ಅವುಗಳಿಗೆ ವ್ಯಾಖ್ಯಾನಗಳೂ ಹುಟ್ಟಿಯವೆ; ಅವರಲ್ಲಿ ಶಬ್ದಾನುಶಾಸನವೆಂಬುವದು ಸೂತ್ರರೂಪವಾಗಿ ಸಂಸ್ಕೃತ ಭಾಷಾಬದ್ಧವಾದ ಪಾಣಿನೀಯವಾದ ಸಂಸ್ಕೃತ ವ್ಯಾಕರಣಸೂತ್ರದಷ್ಟು ಗಂಭೀರ ವಾಗಿರುವದ್ದರಿಂದದೂ, ಅದರ ವ್ಯಾಖ್ಯಾನವು ಸಂಸ್ಕೃತವಾಗಿ ಕೌಮುದಿ ಮುಂತಾದ ಆ ವ್ಯಾಕರಣಗ್ರಂಥದ ಹಾಂಗಿರುವದ್ದರಿಂದದೂ ಸಂಸ್ಕೃತ ಭಾಷೆಯಲ್ಲಿ ವ್ಯುತ್ಪತ್ತಿ ಇಲ್ಲದವರಿಗೆ ಅರ್ಥವಾಗುವದಿಲ್ಲವು. ಶಬ್ದಮಣಿದರ್ಪಣವು ಕನ್ನಡ ಭಾಷೆಯಲ್ಲೇ ಮಾಡಲ್ಪಟ್ಟದ್ದಾಗ್ಯೂ ಕಂದಪದ್ಯರೂಪವಾಗಿರುವದ್ದರಿಂದ ವ್ಯಾಖ್ಯಾನ ಸಾಪೇಕ್ಷ ವಾಗಿಥೆ; ಆ ವ್ಯಾಖ್ಯಾನವೂ ಅದಕ್ಕೆ ತಕ್ಕಷ್ಟು ವಿಪುಲವಲ್ಲದ್ದರಿಂದ ಬಾಲಬೋಧೆ ಯಾಗುವದಿಲ್ಲವು; ಮತ್ತೂ ಶಬ್ದಾನುಶಾಸನ ಶಬ್ದಮಣಿದರ್ಪಣವೆಂಬೆರಡು ಗ್ರಂಥಗಳೂ ಈಗ ದೇಶದಲ್ಲಿ ವ್ಯವಹರಿಸಲ್ಪಡದಂಥಾದ್ದಾಗಿಯೂ, ಗ್ರಂಥಗಳಲ್ಲಿ ಮಾತ್ರವೇ ಪ್ರಯೋಗಿಸಲ್ಪಡುವ ಹಳಗನ್ನಡ ಭಾಷೆಯನ್ನು ಕುರಿತು ಮಾತ್ರವೆ ಉಪಯೋಗವಾಗುತ್ತವೆಯೇ ಹೊರ್ತು ಈಗಚ್ಚಗನ್ನಡ ದೇಶದಲ್ಲಿ ವ್ಯವಹರಿಸ ಲ್ಪಡುವ ಹೊಸಗನ್ನಡ ಭಾಷೆಯನ್ನು ಕುರಿತು ಬಹಳವಾಗುಪಯೋಗಿಸುವದಿಲ್ಲ. ಈ

ಹೊಸಗನ್ನಡವನ್ನು ಕುರಿತು ಪೂರ್ವದಲ್ಲಿ ಜಾನ್ ಮಕ್ಕರೆಲು ದೊರೆಯವರು ಗ್ರಾಮರೆಂಬೊಂದು ವ್ಯಾಕರಣ ಪುಸ್ತಕವ ಮಾಡಿದರು; ಆದರೆ ಅದರಲ್ಲಿ ಸೂತ್ರಗಳನ್ನು ಇಂಗಿಲೀಷು ಭಾಷೆಯಿಂದ ಹೇಳಿರುವದ್ದರಿಂದ ಅದು ಬಾರದವರು ಓದಲಿಕ್ಕದಶಕ್ಯವಾಗಿ ಹೋಯಿತು.

ಸಮಸ್ತವಾದ ದೇಶಭಾಷೆಗಳಲ್ಲೂ ಇದುವರಿಗೂ ಉಂಟಾಗಿರುವ ವ್ಯಾಕರಣಗಳಲ್ಲಿ ಸಂಸ್ಕೃತ ಶಬ್ದಗಳು ದೇಶಭಾಷೆಯಲ್ಲಿ ಬರುತ್ತದೆಯೆಂದು ಮಾತ್ರ ಹೇಳಿಯದೆಯೇ ಹೊರ್ತು ಅವಶ್ಯವಾಗಿ ತಿಳಿಯ ಬೇಕಾದ ಸಂಸ್ಕೃತದ ಕೆಲವು ವಿಷಯಗಳನ್ನು ಹೇಳಲಿಲ್ಲ. ಅವೇನೆಂದರೆ, ಸಂಸ್ಕೃತ ಶಬ್ದಗಳನ್ನು ದೇಶಭಾಷೆಯಲ್ಲಿ ಪ್ರಯೋಗಿಸುವಾಗ ಆ ಪದಗಳಿಗರ್ಥವನ್ನು ಅಮರ ಮೊದಲಾದ ನಿಘಂಟುಗಳಿಂದ ತಿಳಿದುಕ್ಕೊಂಡಾಗ್ಯೂ, ಆ ನಿಘಂಟುಗಳಲ್ಲಿ ಭಿನ್ನಪದವಾಗಿರುವದ್ದರಿಂದ ಆ ಪದಗಳಿಗೆ ಸಮಾಸವ ಮಾಡಿ, ಈ ಭಾಷೆಯಲ್ಲಿ ಪ್ರಯೋಗಿಸುವಾಗ ಆ ಪದಗಳಿಗೆ ಮಾಡಬೇಕಾದ ಸಂಧಿ ಮಾಡುವ ಕ್ರಮವೂ, ಅನೇಕ ಲಿಂಗವಾದ ಸಂಸ್ಕೃತ ಶಬ್ದನಿಘಂಟುವಿನಲ್ಲಿ ಪುನ್ನಪುಂಸಕಾನ್ಯತರಲಿಂಗವಾದ್ದರಿಂದ ಸ್ತ್ರೀಲಿಂಗದ್ಯೋತಕ ಪ್ರತ್ಯಯವಿಂಥಾವು ಬರುತ್ತದೆಯೆಂದು ತಿಳಿದುಕೊಳ್ಳಬೇಕಾದ್ದೂ, ದೇಶಭಾಷೆಯಲ್ಲಿ ಬರುವದಿಲ್ಲವೆಂದು ಹೇಳಲ್ಪಟ್ಟಿರುವ ಅವ್ಯಯ ಮೊದಲಾದವು ಇಂಥಾವೆಂಬುವದೂ, ಇವುಗಳೂ ಸಂಸ್ಕೃತ ಕೃತ್ತದ್ಧಿತ ಸಮಾಸಗಳೂ ಅವಶ್ಯವಾಗಿ ತಿಳಿಯ ಬೇಕು. ಅವು ತಿಳಿಯದೆ ಕನ್ನಡದಲ್ಲಾಗಲಿ ಇತರ ಭಾಷೆಗಳಲ್ಲಾಗಲಿ ವಿಶಿಷ್ಟ ಪದಗಳಿಗೆ ಅರ್ಥವಾಗಲಾರದು, ಅಂಥಾ ಪದಗಳ ಪ್ರಯೋಗಿಸಲಿಕ್ಕೂ ಆಗದು. ಆದ್ದರಿಂದ ಅವುಗಳಲ್ಲಿ ಅತ್ಯಾವಶ್ಯಕವಾದ ಸಂಧಿ ಸ್ತ್ರೀಪ್ರತ್ಯಯಾವ್ಯಯಗಳು ಮಾತ್ರ ಈ ಗ್ರಂಥದಲ್ಲಿ ಉಪಯುಕ್ತವಾದ ಮಟ್ಟಿಗೂ ಬರೆಯಲ್ಪಟ್ಟಿತು. ಕೃತ್ತದ್ಧಿತ ಸಮಾಸಗಳನ್ನು ಗ್ರಂಥ ವಿಸ್ತರ ಭಯದಿಂದಿಲ್ಲಿ ಬರೆಯಲಿಲ್ಲ; ಅವೆಲ್ಲಾ ವಿಸ್ತಾರವಾಗಿ ಹಳಗನ್ನಡ ವ್ಯಾಕರಣದಲ್ಲಿ ಹೇಳಲ್ಪಡುವದು.

ಈ ಗ್ರಂಥದಲ್ಲಿ ಶಬ್ದಾಖ್ಯಾತ ಪ್ರಕರಣಗಳು ಹೊರ್ತು ಕಡಮೇ ಪ್ರಕರಣಗಳೆಲ್ಲಾ ಹಳಗನ್ನಡಕ್ಕೂ ಉಪಯೋಗಿಸುತ್ತದೆ. ಕಡಮೇ ಪ್ರಕರಣಗಳಲ್ಲಿ ಇನ್ನೂ ಕೆಲವು ವಿಷಯುಗಳೂ ಶಬ್ದಾಖ್ಯಾತ ಪ್ರಕರಣಗಳು ವಿಶಿಷ್ಟವೂ ಹಳಗನ್ನಡ ವ್ಯಾಕರಣದಲ್ಲಿ ಹೇಳಲ್ಪಡುತ್ತದೆ.

ಮತ್ತೂ ಈ ಭಾಷೆಗಳಲ್ಲಿದುವರಿಗೂ ಹುಟ್ಟಿರುವ ವ್ಯಾಕರಣವಿಷಯವಾದ ಸಮಸ್ತ ಗ್ರಂಥಗಳಲ್ಲೂ ಸಂಸ್ಕೃತ ತತ್ಸಮ ತದ್ಭವಗಳು ಮಾತ್ರವೇ ಹೇಳಲ್ಪಟ್ಟಿದೆಯೇ ಹೊರ್ತು ದ್ರಮಿಡ ತತ್ಸಮ ತದ್ಭವಗಳಿಗೆ ಸೂತ್ರಗಳು ಹೇಳಲ್ಪಡಲಿಲ್ಲವು; ಪ್ರಯೋಗ ಪ್ರಕರಣದಲ್ಲಿ ಶಾಬ್ದಬೋಧಕ್ರಮವೂ ಹೇಳಲ್ಪಡಲಿಲ್ಲ; ಅವೆಲ್ಲಾ ಈ ಗ್ರಂಥದಲ್ಲಿ ಹೇಳಲ್ಪಟ್ಟಿವೆ. ಇನ್ನೂ ವ್ಯಾಕರಣದಲ್ಲೆ ಹೇಳಬೇಕಾದ ಸಕಲ ಶಬ್ದಗಳಿಗೂ ಉತ್ಪತ್ತಿಕ್ರಮವು ಇದುವರಿಗೂ ಹುಟ್ಟಿರುವ ವ್ಯಾಕರಣಗಳಲ್ಲಿಯೂ ನಿಘಂಟು

ಗಳಲ್ಲಿಯೂ ಈ ದೇಶಭಾಷೆಗಳಿಗೆ ಹೇಳಿರಲಿಲ್ಲವು. ಸಂಸ್ಕೃತ ಭಾಷೆಗೆ ಮಾತ್ರ ವ್ಯಾಕರಣದಲ್ಲಿಯೂ ನಿಘಂಟುಗಳ ವ್ಯಾಖ್ಯಾನಗಳಲ್ಲಿಯೂ ಹೇಳಿಯದೆ; ಅದನ್ನು ಗ್ರಂಥ ವಿಸ್ತರವಾಗುತ್ತದೆ ಎಂದು ಈ ಗ್ರಂಥದಲ್ಲಿಯೂ ಹೇಳಲಿಲ್ಲ; ಅವು ಶಬ್ದ ಮಂಜರಿ ಧಾತುಮಂಜರಿಯೆಂಬ ಗ್ರಂಥಗಳಲ್ಲಿ ಹೇಳಲ್ಪಡುವದು.

ಕನ್ನಡ ದೇಶದಲ್ಲಿಯೂ ಅಚ್ಚಗನ್ನಡ ಮೈಸೂರು ಪ್ರಾಂತ್ಯದ್ದೇ ಹೊರ್ತು ಕಡಮೆ ಎಲ್ಲಾ ಅಚ್ಚಗನ್ನಡವಲ್ಲವು. ಬೆಂಗಳೂರು ಬಳ್ಳಾರಿ ಮೊದಲಾದ ಶೀಮೆಯೂ ತೆಲುಗು ರಾಜ್ಯದ ಸಮೀಪದಲ್ಲಿರುವದ್ದರಿಂದ ಅಲ್ಲಿಯ ಕನ್ನಡವು ತೆಲುಗು ಕಲೆತು ಹೋಯಿತು. ಕೊಯಮತ್ತೂರು ಶೀಮೆಯು ತಿಗುಳು ರಾಜ್ಯದ ಸಮೀಪದಲ್ಲಿರುವದ್ದರಿಂದಲ್ಲಿ ತಿಗುಳು ಕಲೆತುಹೋಯಿತು. ಮಂಗಳೂರು ಜಿಲ್ಲಾ ಕನ್ನಡವು ಕೊಂಕಣ ಮಲಯಾಳ ತುಳುವ ಭಾಷೆಗಳು ಕಲೆತುಹೋಯಿತು. ಮತ್ತೂ ಆ ದೇಶಗಳಲ್ಲಿ ಪ್ರಬಲವಾದ ಕರ್ಣಾಟಕ ಸಂಸ್ಥಾನವಿಲ್ಲದ್ದರಿಂದ ವಿದ್ವಾಂಸರುಗಳೂ ದುರ್ಲಭವಾಗಿ ಹೋಯಿತು; ಆದ್ದರಿಂದ ಆ ದೇಶಗಳಲ್ಲಿ ಪರಿಶುದ್ಧವಾದ ಕನ್ನಡ ವಿಲ್ಲದೇ ಹೋಯಿತು. ಮೈಸೂರು ಬಹಳ ಕಾಲದಿಂದ ಕರ್ಣಾಟಕ ಸಂಸ್ಥಾನವಾಗಿ ಕರ್ಣಾಟಕ ಪ್ರಭುಗಳು ದೊರೆತನವ ಮಾಡುತ್ತಿದ್ದದ್ದರಿಂದಲ್ಲಿ ಬಹಳ ವಿದ್ವಾಂಸರು ಶೇರಿದ್ದರು; ಆ ಪ್ರಭುಗಳು ಹಣಗಳ ಕೊಟ್ಟು ಬಹಳ ಗ್ರಂಥಗಳ ಮಾಡಿಸ್ತರು. ಅದು ವಿದ್ವತ್ಪ್ರಚುರವಾದ ರಾಜ್ಯವಾದ್ದರಿಂದಲೂ, ಕನ್ನಡಕ್ಕೆ ಮಧ್ಯ ದೇಶವಾದ್ದರಿಂದಲೂ ಆ ರಾಜ್ಯದ ಕನ್ನಡವೇ ಅಚ್ಚಗನ್ನಡವು; ಅದನ್ನು ಅನುಸರಿಸಿದ್ದೇ ಹೊಸಗನ್ನಡವು; ಆ ಹೊಸಗನ್ನಡವನ್ನು ಅನುಸರಿಸಿದ್ದು ಈ ಹೊಸಗನ್ನಡ ನುಡಿಗನ್ನಡಿ ಎಂಬ ವ್ಯಾಕರಣವು. ಹೊಸಗನ್ನಡ ನುಡಿಗನ್ನಡಿಯೆಂದರೆ, ಹೊಸಗನ್ನಡ ಶಬ್ದಕ್ಕೆ ಕನ್ನಡಿ ಎಂದರ್ಥವು: ಹ್ಯಾಂಗೆ ಮುಖದ ಸ್ವರೂಪವು ಕನ್ನಡಿಯಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆಯೋ ಹಾಂಗೆ ಕನ್ನಡ ಶಬ್ದಗಳೆಲ್ಲಾ ಈ ಗ್ರಂಥವ ನೋಡಿದರೆ, ಸ್ಪಷ್ಟವಾಗಿ ತಿಳಿಯುತ್ತದೆ.

ಮತ್ತೂ ಕೆಲವು ಯಕ್ಷಗಾನಗಳು, ಪದಗಳು, ಕೀರ್ತನೆಗಳು ಮುಂತಾದವು ಹೊಸಗನ್ನಡ ಪದಗಳಿಂದ ಸಹಾ ಮಾಡಲ್ಪಟ್ಟಿರುವದ್ದರಿಂದ ಈ ವ್ಯಾಕರಣವು ಕೆಲವು ಗ್ರಂಥಗಳಿಗೆ ಕೂಡಾ ಉಪಯೋಗಿಸುತ್ತದೆ.

ಸಮಸ್ತವಾದ ಭಾಷೆಗಳೂ ಅನಾದಿಯಾದ ಲೋಕವ್ಯವಹಾರಸಿದ್ಧವೇ ಹೊರ್ತು ಅವುಗಳು ವ್ಯಾಕರಣದಿಂದ ಹುಟ್ಟುವದಿಲ್ಲವು; ಆದರೆ ವ್ಯಾಕರಣದಲ್ಲಿ ಪದಗಳಿಗೆ ಲೋಪಾಗಮಾದೇಶಗಳೂ ಪ್ರತ್ಯಯಗಳೂ ವಿಧಿಸಿರುವದ್ದರಿಂದ ಹುಟ್ಟುವದಾಗಿ ತೋರುವದಕ್ಕೆ ತಾತ್ಪರ್ಯವೇನೆಂದರೆ, ಯಾವ ಮೇರೆಗೆ ಸೂರ್ಯಗತಿಗೆ ಗಡಿಯಾರದ ಮುಳ್ಳು ನಡೆಯುವದು ಸೂಚಕವೋ, ಯಾವ ಮೇರೆಗೆ ಮನುಷ್ಯರ ಪುಣ್ಯಪಾಪರೂಪಕರ್ಮಾಧೀನವಾದ ಶುಭಾಶುಭ ಫಲಗಳಿಗೆ ಸೂಚಕವಾದ ಜನನ ಕಾಲದ ನವಗ್ರಹಸ್ಥಿತಿಯನ್ನು ಹಿಡಿದು, ಸೂರ್ಯನಿಂಥಾ ಫಲವನ್ನು ಕೊಡುತ್ತಾನೆ,

ಶನಿಯಿಂಥಾ ಫಲವ ಕೆಡಿಸುತ್ತಾನೆಯೆಂದು ಜ್ಯೋತಿಷಶಾಸ್ತ್ರದಲ್ಲಿ ವ್ಯವಹಾರವದೆಯೋ, ಯಾವ ಮೇರೆಗೆ ವನಮೃಗಗಳನರಿಯದ ನಾಗರಿಕನಿಗೆ ಅವುಗಳ ಬರೆದು ತೋರಿಸುವ ಕೆಲವು ಗೀಟುಗಳ ಬರೆದರೆ ಇಂಥಾ ಮೃಗವು, ಕೆಲವ ತೆಗದರೆ ಇಂಥಾ ಮೃಗವೆಂದು ವ್ಯವಹರಿಸಲ್ಪಡುತ್ತದೆಯೋ, ಆ ಮೇರೆಗೆ ವ್ಯಾಕರಣವು ಆಯಾ ಭಾಷೆಗಳಲ್ಲಿರುವ ಸಮಸ್ತ ಪದಗಳ ಸ್ವರೂಪವನ್ನೂ ಅವರಲ್ಲಿ ಅನಾದಿಯಾದ ಶಿಷ್ಟ ಪ್ರಯೋಗಗಳನ್ನೂ ಅವುಗಳಿಗನಾದಿಸಿದ್ಧವಾದ ಅರ್ಥವಿಶೇಷಗಳನ್ನೂ ಸುಲಭವಾಗಿ ತಿಳಿದುಕೊಳ್ಳಲಿಕ್ಕೆ ಹೇಳುವ ಮಾರ್ಗವಾದ್ದರಿಂದ, ಈ ವ್ಯಾಕರಣದಲ್ಲಿ ಬರುತ್ತದೆ ಹೋಗುತ್ತದೆ ಎಂಬ ವ್ಯವಹಾರವೂ ಅಂಥಾ ವ್ಯವಹಾರವಾದ್ದರಿಂದ ವ್ಯಾಕರಣದ ಶಬ್ದಗಳು ಹುಟ್ಟಿದ್ದಾಗಿ ನೆನೆಯಕೂಡದು ; ಆದ್ದರಿಂದಲೇ ಪ್ರಯೋಗಶರಣರು ವೈಯಾಕರಣರೆಂಬ ಶಿಷ್ಟವ್ಯವಹಾರವುಂಟಾಗಿಯದೆ.

ಇದು ಹೊರ್ತು ಒಂದು ಶಬ್ದವು ಚನ್ನಾಗಿ ತಿಳಿದು ಚನ್ನಾಗಿ ಪ್ರಯೋಗಿಸಲ್ಪಟ್ಟರೆ, ಸ್ವರ್ಗಲೋಕದಲ್ಲಿ ಅಭೀಷ್ಟಫಲವನ್ನು ಕೊಡುತ್ತದೆಯೆಂದು ಶಾಸ್ತ್ರ ಹೇಳುವದ್ದರಿಂದ, ಹಾಂಗೆ ಪ್ರಯೋಗಿಸುವದು ವ್ಯಾಕರಣವನ್ನೋದದವರಿಗಸಾಧ್ಯವಾದ್ದರಿಂದ ವ್ಯಾಕರಣ ಓದಬೇಕು. ಕೆಲವರು ಮೇಲೆ ಹೇಳಿದ ಫಲಪ್ರದತ್ವವು ಸಂಸ್ಕೃತ ಭಾಷೆಗೇ ಹೊರ್ತು ಅದಕ್ಕಪಭ್ರಂಶವಾದ ದೇಶಭಾಷೆಗಳಿಗೆ ಹೇಳಕೂಡದೆಂತಲೂ, ಅಪಭ್ರಂಶವನ್ನುಚ್ಚರಿಸಲೇ ಕೂಡದೆಂದು ಶ್ರುತಿ ಸ್ಮೃತಿಗಳಲ್ಲಿ ಹೇಳಿಯದೆಯೆಂತಲೂ, ಅಂಥಾ ಶಬ್ದಗಳ ಕಿವಿಗಳಿಂದ ಕೇಳ ಸಹ ಬಾರದೆಂತಲೂ ಹೇಳುತ್ತಾರೆ. ಅದು ನ್ಯಾಯವಲ್ಲ ; ಏಕೆಂದರೆ, ಸಂಸ್ಕೃತ ಭಾಷೆಗೆ ಪ್ರಾಶಸ್ತ್ಯ ಬರಲಿಕ್ಕೆ ಮೂಲವು ಆರ್ಯಾವರ್ತದೇಶದಲ್ಲಿ ಪೂರ್ವಕಾಲದಲ್ಲಿದ್ದ ಶಿಷ್ಟಪರಿಗ್ರಹವು ; ಹಾಂಗೆಯೇ ಈಗ ಆಯಾ ದೇಶದಲ್ಲಿರುವ ಭಾಷೆಗಳೂ ಅಲ್ಲಲ್ಲಿಯ ಶಿಷ್ಟಪರಿಗ್ರಹವಾಗಿರುವದ್ದರಿಂದ, ಇದು ಸಂಸ್ಕೃತದ ಹಾಂಗೆ ಶ್ಲಾಘ್ಯವೇ ಹೊರ್ತು ಬೇರಲ್ಲ ; ಇಲ್ಲದಿದ್ದರೆ ಈ ಭಾಷೆಗಳಲ್ಲಿ ವ್ಯಾಕರಣ ಹುಟ್ಟಲಿಕ್ಕೆ ಕಾರಣವೇಸು ? ಆದ್ದರಿಂದ ಯಾವ ಭಾಷೆ ಶಿಷ್ಟ ಪರಿಗೃಹೀತವೋ ಆ ಭಾಷೆಯುಪಾದೇಯವೆಂತಲೂ, ಅದನ್ನು ಶಿಷ್ಟವ್ಯವಹಾರಾನುಸಾರವಾಗಿಯೇ ಹೇಳ ಬೇಕಂತಲೂ, ಅದನ್ನು ತಿಳಿದು ಹೇಳಿದರೆ ಪುಣ್ಯವುಂಟೆಂತಲೂ ಶಾಸ್ತ್ರತಾತ್ಪರ್ಯವಾಗುವದ್ದರಿಂದ ಈ ದೇಶಭಾಷೆಗಳನ್ನು ಆ ಮೇರೆಗೆ ತಿಳಿದು ಪ್ರಯೋಗಿಸ್ತರೆ, ಪುಣ್ಯಕ್ಕೆ ಸಂದೇಹವಿಲ್ಲ.

ಮತ್ತೂ ಯಾವ ಭಾಷೆಯಾದರೇನು ? ದೇವರ ವಿಷಯವಾಗಿದ್ದರೆನೇ ಅದುಪಾದೇಯವೆಂತಲೂ, ಅಲ್ಲದಿದ್ದರೆ ಸಂಸ್ಕೃತ ಸಹಾ ಅನುಪಾದೇಯವೆಂತಲೂ ಶಾಸ್ತ್ರದಲ್ಲಿ ಹೇಳಿಯದೆಯಾದ್ದರಿಂದ ಈ ಭಾಷೆಗಳ ಹೇಳಕೂಡದೆಂಬುವದು ಎಷ್ಟು ಮಾತ್ರವೂ ನ್ಯಾಯವಲ್ಲ ; ಮತ್ತೂ ಪಾಮರರಿಂದ ಗ್ರಹಿಸಲಿಕ್ಕೆ ಶಕ್ಯವಲ್ಲದ ಸಂಸ್ಕೃತ ಭಾಷೆಯನ್ನೇ ಹೇಳ ಬೇಕೆಂತಲೂ, ಇತರ ಭಾಷೆಗಳ ಹೇಳಕೂಡದೆಂತಲೂ ಶಾಸ್ತ್ರಕ್ಕೆ ತಾತ್ಪರ್ಯವ ಮಾಡಿದರೆ, ಅದು ಬಾರದವರು ಮೂಗರ ಹಾಂಗೆ ಸಂಜ್ಞೆಯ ಮಾಡಬೇಕಾದೀತು.

ಅಪಭ್ರಂಶವನ್ನುಚ್ಚರಿಸ ಬಾರದೆಂಬುವದಕ್ಕೂ ಅಪಶಬ್ದಶ್ರವಣಕ್ಕೆ ಪ್ರಾಯಶ್ಚಿತ್ತ ವಿಧಾನಕ್ಕೂ ವಿಷಯವೇನೆಂದರೆ, ಶಿಷ್ಟವ್ಯವಹಾರದಲ್ಲೂ ತದನುಸಾರಿಯಾದ ವ್ಯಾಕರಣದಲ್ಲೂ ಇಲ್ಲದ ಸಂಸ್ಕೃತಾಪಭ್ರಂಶಗಳೂ, ಶಿಷ್ಟವ್ಯವಹಾರಕ್ಕೂ ಆಯಾ ವ್ಯಾಕರಣಗಳಿಗೂ ವಿರೋಧವಾದ ದೇಶಭಾಷಾಪಭ್ರಂಶಗಳೂ ವಿಮತಸ್ಥರ ಭಾಷೆಗಳೂ ಉಚ್ಚರಿಸ ಬಾರದೆಂಬುವದಕ್ಕೂ ಕೇಳ ಬಾರದೆಂಬುವದಕ್ಕೂ ವಿಷಯವು.

ಆದ್ದರಿಂದ ಶಿಷ್ಟಪರಿಗೃಹೀತವಾದ ದೇಶಭಾಷೆಗಳು ವಿಶಿಷ್ಟವೂ ಉಚ್ಚರಿಸಲಿಕ್ಕೂ ಕೇಳಲಿಕ್ಕೂ ಯೋಗ್ಯವಾದ್ದರಿಂದ ಅವುಗಳನ್ನು ಸಹಾ ಶಿಷ್ಟಪ್ರಯೋಗವನ್ನು ಅನುಸರಿಸಿಯೇ ಸುಶಬ್ದಾಪಶಬ್ದವಿಭಾಗವ ಮಾಡಿ, ಅಪಶಬ್ದವ ಬಿಟ್ಟು ಸುಶಬ್ದವನ್ನು ತಿಳಿದು ಪ್ರಯೋಗವ ಮಾಡಿದರೆ, ಇಹದಲ್ಲಿ ಸುಲಭವಾಗಿ ಭಾಷಾಪರಿಜ್ಞಾನವೂ ತತ್ಪ್ರಯುಕ್ತವಾದ ಖ್ಯಾತಲಾಭ ಪೂಜೆಗಳೂ, ಪರದಲ್ಲಿ ಶಾಸ್ತ್ರೋಕ್ತವಾದ ಫಲವೂ ದೊರಕುವದಾದ್ದರಿಂದ ಶಿಷ್ಟಪರಿಗೃಹೀತವಾದ ಸಕಲ ಭಾಷೆಗಳಲ್ಲೂ ಸುಶಬ್ದಾಪಶಬ್ದವಿಭಾಗವನ್ನು ತಿಳಿಯಲಿಕ್ಕುಪಯೋಗವಾದಾಯಾ ಭಾಷಾ ವ್ಯಾಕರಣಗಳನ್ನು ಕಲಿಯುವದು ಆವಶ್ಯಕವೆಂದು ನಾನು ನೆನೆದು, ಅಚ್ಚಗನ್ನಡ ದೇಶದಲ್ಲಿರುವ ಈಗಿನ ಹಿರಿಯವರು ಮಾತನಾಡುವ ಹೊಸಗನ್ನಡವನ್ನು ಅನುಸರಿಸೀ ಹೊಸಗನ್ನಡನುಡಿಗನ್ನಡಿ ಎಂಬ ವ್ಯಾಕರಣವ ಮಾಡಿದೆನು. ಇದನ್ನು ಕಲಿತವರಿಗೂ ಮೇಲೆ ಹೇಳಿದ ಐಹಿಕಾ ಮುಷ್ಮಿಕ ಫಲವನ್ನು ದೇವರು ದಯಮಾಡಬೇಕೆಂದು ನಾನು ದೇವರನ್ನು ಸದಾ ಪ್ರಾರ್ಥಿಸುತ್ತಾ ಇದ್ದೇನೆ.

ಈ ವ್ಯಾಕರಣವು ತತ್ಕಾಲದಲ್ಲಿ ಚನ್ನಪಟ್ಟಣದಲ್ಲಿ ಸದರದಾಲತ್ತು ಕೋರ್ಟಿನಲ್ಲಿ ವಕೀಲಾಗಿಯೂ ಪಂಡಿತೋದ್ಯೋಗಕ್ಕೆ ಯೋಗ್ಯತಾಪತ್ರಿಕೆಯನ್ನು ಪಡೆದವನಾಗಿಯೂ ಇರುವಂಥಾ ಶ್ರೀರಂಗಪಟ್ಣದ ಕೃಷ್ಣಮಾಚಾರ್ಯನೆಂಬ ನನ್ನಿಂದ ಮಾಡಲ್ಪಟ್ಟಿತು. ಆದರೆ ನಾನು ಕಾಲೀಜಿನಲ್ಲಿ ಪಂಡಿತವಿದ್ಯಾರ್ಥಿಯುದ್ಯೋಗದಲ್ಲಿರುವಾಗ ಕಾಲೀಜು ಬೋರ್ಡಿಗೆ ಸಿಕ್ರಿಟೇರಿಯಾಗಿದ್ದ ಕೆಪ್ಟನ್ ಹಾರ್ಕಿನನು ದೊರೆಯವರು, ಇಂಗಲೀಷೂ ಸಂಸ್ಕೃತವೂ ತಿಳಿಯದ ವಿದ್ಯಾರ್ಥಿಗಳಿಗೆ ಸುಲಭವಾಗಿ ತಿಳಿಯುವ ಹಾಂಗೆ ಕನ್ನಡದಲ್ಲಿ ಪ್ರಶ್ನೋತ್ತರರೂಪವಾಗೊಂದು ವ್ಯಾಕರಣವ ಮಾಡ ಹೇಳಿದ್ದರಿಂದ ಈ ಗ್ರಂಥವನ್ನು ನಾನು ಮಾಡಿದೆನು. ಅವರು ತ್ವರೆಯಾಗಿ ತಮ್ಮ ಸ್ವದೇಶಕ್ಕೆ ಹೊರಟು ಹೋದದ್ದರಿಂದಲೂ, ಆದು ಮೊದಲು ಕನ್ನಡ ಭಾಷೆಯಲ್ಲಭಿಮಾನವುಳ್ಳ ದೊರೆಗಳು ಯಾರೂ ಶಿಕ್ಕದ್ದರಿಂದಲೂ ಇದು ಪ್ರಸಿದ್ಧಿಯನ್ನು ಹೊಂದದೇ ಇತ್ತು.

ಈಗ ಸಿವಿಲುದ್ಯೋಗಸ್ಥರಾದ ಮಹಾರಾಜಶ್ರೀ ಜಾನ್ ವಾಕರು ದೊರೆಯವರು ಸಂಸ್ಕೃತ ಕರ್ಣಾಟಕ ದ್ರಾವಿಡ ಹಿಂದುಸ್ಥಾನಿ ಮೊದಲಾದ ಈ ದೇಶ ಭಾಷೆಗಳಲ್ಲೆಲ್ಲಾ ಅತಿ ಶ್ರಮಪಟ್ಟವರಾಗಿಯೂ, ಪರೋಪಕಾರಾರ್ಥವಾಗಿ ಈ ಭಾಷೆಗಳಲ್ಲಿ ಸ್ವದೇಹಾಯಾಸದಿಂದಲೂ ಅರ್ಥವ್ಯಯದಿಂದಲೂ, ಅನೇಕೋಪಯುಕ್ತ

ಗ್ರಂಥಗಳನ್ನು ಮಾಡಿಯೂ ಮಾಡಿಸಿಯೂ, ಮತ್ತೂ ಈ ಭಾಷೆಗಳಲ್ಲಿ ಉಪಯುಕ್ತವಾದ ಗ್ರಂಥಗಳನ್ನು ಹುಡುಕುವವರಾಗಿಯೂ ಇರುವದ್ದರಿಂದ ಅವರು ಈ ಗ್ರಂಥದ ಕೈಬರಹದ ಪುಸ್ತಕವನ್ನು ಸಮಗ್ರವಾಗೋದಿ, ಇದರಲ್ಲಿ ಜನಗಳಿಗಿರುವ ಪ್ರಯೋಜನವನ್ನು ನೋಡಿ, ಇದನ್ನು ಲೋಕೋಪಕಾರಾರ್ಥವಾಗಿ ನನಗೆ ದ್ರವ್ಯವ್ಯಯವಿಲ್ಲದೆ ಅಚ್ಚು ಹಾಕಿಸಿ ಪ್ರಸಿದ್ಧಿ ಮಾಡಿಸುತ್ತೇವೆಂದು ಹೇಳಿದ್ದರಿಂದಲೂ, ಕಡಮೇ ಭಾಷೆಗಳ ಹಾಂಗೆ ಅಭಿಮಾನಿ ದುರ್ಲಭವಾದ್ದರಿಂದಲೂ ಈ ಗ್ರಂಥವನ್ನು ಅವರ ಹೆಸರಿಗೆ ಅಂಕಿತವ ಕೊಟ್ಟು, ಗ್ರಂಥವನ್ನು ಸಹಾ ಅವರಿಗೆ ಕೊಟ್ಟುಬಿಟ್ಟೆನು.

ಸಮಸ್ತವಾದ ಕರ್ಣಾಟಕ ಭಾಷಾಪಂಡಿತರನ್ನು ನಾನು ವಿನಯಪೂರ್ವಕವಾಗಿ ಬೇಡಿಕೊಳ್ಳುವದೇನೆಂದರೆ: ನಾನು ಕನ್ನಡಕ್ಕೆ ಪ್ರಾಚೀನವಾದ ಶಬ್ದಾನುಶಾಸನ ಶಬ್ದಮಣಿದರ್ಪಣಗಳೆಂಬ ವ್ಯಾಕರಣಗಳನ್ನೂ ಅವುಗಳ ವ್ಯಾಖ್ಯಾನಗಳನ್ನೂ, ಸಂಸ್ಕೃತ ಪ್ರಾಕೃತ ದ್ರಮಿಡಾಂಧ್ರ ಭಾಷಾವ್ಯಾಕರಣಗಳನ್ನೂ, ಇನ್ನೂ ವ್ಯಾಕರಣವಿಲ್ಲದ ಮಲಯಾಳ ಮುಂತಾದ ಭಾಷೆಗಳ ಸಂಪ್ರದಾಯಗಳನ್ನೂ ಈ ಭಾಷೆಗಳಲ್ಲಿರುವ ಕಾವ್ಯಗಳನ್ನೂ ನೋಡಿ ಅತಿ ಜಾಗ್ರತೆಯೊಂದಿಗೆ ಈ ಗ್ರಂಥವ ಮಾಡಿದ್ದಾಗ್ಯೂ, ಮತ್ತೊಬ್ಬರ ಸಹಾಯವಿಲ್ಲದೆ ಒಬ್ಬನೇ ಮಾಡಿದ್ದರಿಂದಲೂ, ಇದು ಹೊಸ ಕೃತಿಯಾದ್ದರಿಂದಲೂ, ಅಜ್ಞಾನಾನ್ಯಥಾಜ್ಞಾನ ವಿಪರೀತಜ್ಞಾನಗಳು ಮನುಷ್ಯ ಮಾತ್ರ ಸಾಧಾರಣವಾದ್ದರಿಂದಲೂ, ನಾನು ಸರ್ವಜ್ಞನಲ್ಲವಾದ್ದರಿಂದಲೂ, ಈ ಗ್ರಂಥದಲ್ಲಿ ಪುನರುಕ್ತಿ ದುರುಕ್ತ್ಯನುಕ್ತಿಗಳೂ ಅಕ್ಷರತಪ್ಪುಗಳೂ ಅಪಶಬ್ದಗಳೂ ಇದ್ದಾವು.

ಸ್ವಯೋಗಮಹಿಮೆಯಿಂದ ಸಾಕ್ಷಾತ್ಕೃತವಾದ ಸಮಸ್ತ ಪದಪದಾರ್ಥಜ್ಞಾನವುಳ್ಳ ಪಾಣಿನಿಯೆಂಬ ಋಷಿಯು ಸಂಸ್ಕೃತಕ್ಕೆ ಮಾಡಿದ ವ್ಯಾಕರಣಸೂತ್ರಗಳಲ್ಲಿ ಪುನರುಕ್ತಿ ದುರುಕ್ತ್ಯನುಕ್ತಿಗಳು ಸಂಭವಿಸಿ, ಅದನ್ನು ಹೋಗಲಾಡಿಸಲಿಕ್ಕೆ ಅಂಥಾ ಜ್ಞಾನವುಳ್ಳ ಕಾತ್ಯಾಯನರೆಂಬ ಋಷಿಯು ವಾರ್ತಿಕವೆಂಬ ಗ್ರಂಥವ ಮಾಡಿದರು; ಅದರಲ್ಲಿಯೂ ಆ ಮೇರೆಗೇ ಪುನರುಕ್ತಿ ದುರುಕ್ತ್ಯನುಕ್ತಿಗಳು ಸಂಭವಿಸಿ, ಸಾಕ್ಷಾತ್ ಶ್ರೀಮನ್ನಾರಾಯಣಾಂಶವಾದ ಪತಂಜಲಿಯು ಅದನ್ನು ತಿದ್ದಿ ಮಹಾ ಭಾಷ್ಯವನ್ನು ಮಾಡಿದರು.

ಆದ್ದರಿಂದ ಮಹರ್ಷಿಪ್ರಣೀತವಾದ ಗ್ರಂಥಗಳಲ್ಲಿಯೇ ಈ ಮೇರೆಗಿರುವಾಗ, ಅಲ್ಪಜ್ಞನಾಗಿಯೂ ಪ್ರಾಕೃತ ಮನುಷ್ಯನಾಗಿಯೂ ಇರುವ ನಾನು ಮಾಡಿದ ಗ್ರಂಥದಲ್ಲಿ ಅಂಥಾ ದೋಷಗಳು ಬಾರದೆ ಇರುವದೇ? ಈ ಗ್ರಂಥವನ್ನು ನನಗಿಂತಲೂ ಅಲ್ಪಜ್ಞರಾದವರು ಮಾತ್ಸರ್ಯದಿಂದಲೂ ಸ್ವಪಾಂಡಿತ್ಯಪ್ರಕಾಶನಾರ್ಥವಾಗಿಯೂ ದೂಷಿಸಿದರೆ, ಅವರಿಗೆ ನಾನು ಹೆದರುವದಿಲ್ಲ. ಅಭಿಜ್ಞರಾಗಿಯೂ ವಿವೇಕಿಗಳಾಗಿಯೂ ಇರುವವರು ಗುಣವನ್ನು ಪ್ರಕಟನೇ ಮಾಡಿ ದೋಷವನ್ನು ಹೊರಗೆ ಹಾಕದೆ ಇರುವ ಸ್ವಭಾವವುಳ್ಳವರಾದ್ದರಿಂದ ನಾನು ನಿರ್ಭಯವಾಗೀ

ಗ್ರಂಥವ ಮಾಡಿದೆನು; ಮತ್ತೂ ಈ ಗ್ರಂಥವು ಅರ್ಥಾಪೇಕ್ಷೆಯಿಂದಾಗಲಿ ಪ್ರತಿಷ್ಠಾರ್ಥವಾಗಿಯಾಗಲಿ ಮಾಡಿದ್ದಲ್ಲ; ಲೋಕೋಪಕಾರಾರ್ಥವಾಗಿ ನನಗೆ ದೇವರು ಬುದ್ಧಿಯ ಕೊಟ್ಟ ಮಟ್ಟಿಗೂ ಬರೆದಿದ್ದೇನೆ. ಇದರಲ್ಲಿ ಮನುಷ್ಯ ಮಾತ್ರ ಸಾಧಾರಣವಾದ ಭ್ರಮಪ್ರಮಾದವಿಪ್ರಲಿಪ್ಸಾಕರಣಾ ಪಾಟವಗಳಿಂದ ಸಂಭವಿಸಿರುವ ಪುನರುಕ್ತಿ ದುರುಕ್ತ್ಯನುಕ್ತಿಗಳನ್ನು ಕ್ಷಮಿಸಿ, ಗುಣಗ್ರಹಣವ ಮಾಡಿ ಸ್ವಬಾಲಕ ಶುಕಶಾರಿಕಾದಿ ವಾಕ್ಯಗಳ ಹಾಂಗಾದರೂ ನೆನೆದು ನನ್ನಲ್ಲಿ ದಯೆ ಇಟ್ಟು ನಿರ್ಮಾತ್ಸರ್ಯದಿಂದೆಲ್ಲರೂ ಸಂತೋಷದೊಂದಿಗೆ ಈ ಗ್ರಂಥವನ್ನು ಪರಿಗ್ರಹಿಸ ಬೇಕೆಂದು ಪ್ರಾರ್ಥಿಸುತ್ತೇನೆ.

— ಶ್ರೀರಂಗಪಟ್ಟಣಂ ಕೃಷ್ಣಮಾಚಾರ್ಯ

## ಜ್ಞಾನಯೋಗದ ಹೆಚ್ಚುಗಾರಿಕೆ

ಭಗವಂತನು ತನ್ನನ್ನು ಯಾವಾಗಲೂ ಭಜಿಸಿದವರಿಗೆ ಬುದ್ಧಿಯೋಗವನ್ನು ಕೊಟ್ಟು ಅವರನ್ನು ತನ್ನ ಬಳಿಗೆ ಬರಮಾಡಿಕೊಳ್ಳುವನೆಂದು ಹೇಳಿದ ವಿಚಾರವು ಭಕ್ತಿಯೋಗದ ಕೊನೆಯಲ್ಲಿ ಬಂದಿದೆಯಷ್ಟೆ ? ಆ ಬುದ್ಧಿಯೋಗವೇ ಈ ಪ್ರಕರಣದ ವಿಷಯವಾಗಿರುವ ಜ್ಞಾನಯೋಗವು. ಭಕ್ತಿಯೋಗದಂಥ ಪವಿತ್ರವಾದ ಸಾಧನ ವಾದ ಮೇಲೆ ಕೂಡ ತನ್ನ ಪ್ರಾಶಸ್ತ್ಯವನ್ನು ಮೆರೆಸುವಂಥ ಯೋಗ್ಯತಾವಿಶೇಷವು ಜ್ಞಾನಯೋಗದಲ್ಲೇನಿರುವದೆಂದು ತಿಳಿಯಲಿಚ್ಛೆಯಾಗಬಹುದು. ಅದು ಈಗ ವ್ಯಕ್ತವಾಗುವದು. ಎಲ್ಲ ಯೋಗಗಳಲ್ಲಿಯೂ ಯೋಗ ಎಂಬ ಶಬ್ದವು ಸಾಧನ ವೆಂಬ ತಾತ್ಪರ್ಯದಲ್ಲಿ ಪ್ರಯೋಗವಾಗಿರುವದು. ಯುಜ್ ಎಂಬ ಧಾತುವಿನಿಂದ ಹುಟ್ಟಿದ ಈ ಯೋಗಶಬ್ದವು ಬೇರೆ ಬೇರೆ ಅನೇಕಾರ್ಥಗಳನ್ನು ಕೊಡುತ್ತದೆ. ಅಮರಕೋಶದಲ್ಲಿ ಇದಕ್ಕೆ ಸನ್ನಹನ, ಉಪಾಯ, ಧ್ಯಾನ, ಸಂಗತಿ ಮತ್ತು ಯುಕ್ತಿ—ಎಂಬ ಐದರ್ಥಗಳಿವೆ. ಇವುಗಳಲ್ಲಿ ಸನ್ನಹನವೆಂಬ ಅರ್ಥವನ್ನು ತೆಗೆದುಕೊಂಡರೆ ಸಾಧನವೆಂಬ ತಾತ್ಪರ್ಯವು ಹೊರಡುತ್ತದೆ. ಯೋಗಗಳೆಲ್ಲಾ ಆತ್ಮಜ್ಞಾನಕ್ಕೆ ಸಾಧನಗಳಾದ್ದರಿಂದ ಇವುಗಳಿಗೆ ಯೋಗಗಳೆಂಬ ಹೆಸರು ಒಪ್ಪುತ್ತದೆ. ಯೋಗಗಳು ಎಷ್ಟೋ ಇವೆ. ಈಗ ಇಲ್ಲಿ ಯೋಗಗಳು ಕರ್ಮಯೋಗ, ರಾಜಯೋಗ, ಭಕ್ತಿಯೋಗ, ಜ್ಞಾನಯೋಗ—ಎಂದು ನಾಲ್ಕು ಬಗೆಯಾಗಿ ಲೆಕ್ಕಕ್ಕೆ ಬಂದಿವೆ. 'ಆತ್ಮಜ್ಞಾನಕ್ಕೆ ಈ ನಾಲ್ಕು ಯೋಗಗಳೂ ಸ್ವತಂತ್ರವಾಗಿ ಬೇರೆ ಬೇರೆ ದಾರಿಗಳಾಗಿದ್ದು ಅವುಗಳಲ್ಲಿ ಜ್ಞಾನಯೋಗವು ಶ್ರೇಷ್ಠವೋ, ಅಥವಾ ಉಳಿದವುಗಳೆಲ್ಲ ತನಗೆ ನೆರವಾಗಿರತಕ್ಕವುಗಳಾದ್ದರಿಂದ ಜ್ಞಾನಯೋಗವು

ಶ್ರೇಷ್ಠವೋ—ಎಂಬುದು ಈಗಿನ ಪ್ರಶ್ನೆ. ಈ ವಿಷಯವನ್ನು ಮನಗಾಣಿಸುವದಕ್ಕೆ ಮೊದಲು ಆತ್ಮಜ್ಞಾನಕ್ಕೆ ನಮಗೆ ಅಡ್ಡಬಂದಿರುವದೆಂಬದನ್ನು ತಿಳಿಯುವದಗತ್ಯ ವಾಗುವದು. ಏಕೆಂದರೆ ನಮಗೆ ಅಡ್ಡಬಂದಿರುವದರ ಸ್ವಭಾವವು ಗೊತ್ತಾದರೆ ಅದನ್ನು ಪ್ರತಿಯೊಂದು ಯೋಗವೂ ಸ್ವತಂತ್ರವಾಗಿ ಕಳೆಯಲಾದೀತೋ ಅಥವಾ ಉಳಿದವುಗಳನ್ನು ನೆರವಾಗಿಟ್ಟುಕೊಂಡು ಮುಖ್ಯವಾಗಿ ಜ್ಞಾನಯೋಗವೇ ಕಳೆಯುವದೋ—ಎಂಬುದನ್ನು ನಿಶ್ಚಯಿಸಲಾದೀತು. ಇಲ್ಲಿ ಇನ್ನೊಂದು ವಿಷಯ ವೇನೆಂದರೆ ಆತ್ಮಜ್ಞಾನಕ್ಕೆ ನಮಗೆ ಏನು ಅಡ್ಡಿಬಂದಿರುವದೆಂಬದನ್ನು ವಿಚಾರ ಮಾಡುವದಕ್ಕೂ ಮುಂಚೆ ಆತ್ಮಜ್ಞಾನವೆಂದರೇನೆಂಬದನ್ನೂ ವಿಚಾರಮಾಡಬೇಕು. ಏಕೆಂದರೆ ಆತ್ಮ ಎಂಬ ಶಬ್ದಕ್ಕೂ ಬೇರೆ ಬೇರೆ ಅರ್ಥಗಳಿವೆ. ಆದ್ದರಿಂದ ಇನ್ನು ಒಂದೊಂದಾಗಿ ಈ ತೊಡಕುಗಳನ್ನು ಬಿಡಿಸೋಣ.

ಮೊದಲು ಆತ್ಮವೆಂದರೇನೆಂಬುದನ್ನು ವಿಚಾರಮಾಡೋಣ. ಆತ್ಮ ಎಂಬ ಶಬ್ದಕ್ಕೆ ನಿಘಂಟಿನಲ್ಲಿ ಬೇಕಾದಷ್ಟು ಅರ್ಥಗಳಿದ್ದರೂ ಇಲ್ಲಿ ನಮಗೆ ಸಂಶಯವು ಬರುವದು ಎರಡೇ ಅರ್ಥಗಳಲ್ಲಿ. ಜೀವಾತ್ಮನಿಗೂ ಆತ್ಮನೆಂದು ಹೆಸರಿದೆ; ಪರ ಮಾತ್ಮನಿಗೂ ಆತ್ಮನೆಂದು ಹೆಸರಿದೆ. ಈ ಎರಡರಲ್ಲಿ ನಾವು ಯಾವದನ್ನು ತೆಗೆದು ಕೊಳ್ಳಬೇಕು? ನಮಗೆ ಶಾಂತಿಯು ಸಿಕ್ಕುವದು ಪರಮಾತ್ಮನ ಜ್ಞಾನದಿಂದಲೇ ಹೊರತು ಜೀವಾತ್ಮನ ಜ್ಞಾನದಿಂದಲ್ಲ. ಆದ್ದರಿಂದ ನಮ್ಮ ಮುಖ್ಯ ಧ್ಯೇಯವು ಪರಮಾತ್ಮನ ಜ್ಞಾನವೇ. ಆದರೆ ಆ ಪರಮಾತ್ಮನ ಜ್ಞಾನವನ್ನು ಮಾಡಿಕೊಳ್ಳು ವದಕ್ಕೆ ಮೊದಲು ಜೀವಾತ್ಮನ ಜ್ಞಾನವೂ ಅಗತ್ಯವೆ. ಏಕೆಂದರೆ 'ಅಟ್ಟಕ್ಕೆ ಹಾರ ದವನು ಬೆಟ್ಟಕ್ಕೆ ಹಾರ‍್ಯಾನೆ' ಎಂಬಂತೆ ಯಾವನಿಗೆ ತನ್ನ ಸ್ವರೂಪದ ಜ್ಞಾನವೇ ಇಲ್ಲವೋ ಅವನಿಗೆ ಪರಮಾತ್ಮಜ್ಞಾನವಾಗುವದು ಹೇಗೆ? ಆದ್ದರಿಂದ ಪರಮಾತ್ಮ ಜ್ಞಾನಕ್ಕೆ ಸಾಧನವಾಗಿ ಜೀವಾತ್ಮಜ್ಞಾನವೂ ಬೇಕು. 'ನಾನು ನಾನೆಂದು ಎಲ್ಲರಿಗೂ ಜೀವಾತ್ಮನ ಅರಿವು ಇರುವದಲ್ಲ?', ಎಂದರೆ ನಿಜ; ಆ ಅರಿವಿಗೆ ವಿಷಯ ವಾದ ವಸ್ತು ಯಾವದು? ಬಹುಮಟ್ಟಿಗೆ ಎಲ್ಲರೂ ನಾನು ನಾನೆಂಬ ಅರಿವಿಗೆ ದೇಹವನ್ನೇ ವಿಷಯವಾಗಿ ತಿಳಿದಿರುವರು. ಹೀಗೆ ದೇಹವೇ ನಾನೆಂಬ ಜ್ಞಾನವು ನಮಗೆ ಪರಂಪರೆಯಿಂದ ಬಂದಿರುವದು. ನಾವು ಹುಟ್ಟಿದೊಡನೆ ನಮಗೆ ನಾನು ನಾನೆಂಬ ಮಾತಿಗೆ ದೇಹವನ್ನೇ ವಿಷಯವಾಗಿ ಮಾಡಿ ತಾಯಿ ಮೊದಲಾದವರು ಮಂಕುಬೂದಿಯನ್ನು ತಳೆಯುವರು. ಎಲ್ಲರ ವ್ಯವಹಾರವೂ ಹೀಗೆಯೇ ಇರುವದು. ಇದರಲ್ಲಿ ಅವರ ಉದ್ದೇಶವೇನೂ ಕೆಟ್ಟದ್ದಲ್ಲ. ಅವರ ತಿಳಿವಳಿಕೆಯೇ ಹಾಗಿರುವದು. ಅವರು ವಿಚಾರವಿಲ್ಲದೆ ಹಾಗೆ ಹೇಳುತ್ತಿರುವರು. ಅದು ಹೇಗೆಂದರೆ ಎಷ್ಟೋ ವೇಳೆ ಅವರ ಮಾತುಗಳಲ್ಲಿ ಈ ಅಭಿಪ್ರಾಯಕ್ಕೆ ವಿರುದ್ಧವಾದ ಕಲ್ಪನೆಗಳು ಬರುತ್ತಿರು ತ್ತವೆ. ಅವುಗಳನ್ನೆಲ್ಲ ಅವರು ತೂಕಕ್ಕೆ ಹಾಕಿ ನೋಡುವದೇ ಇಲ್ಲ. ಉದಾಹರಣೆಗೆ ನೋಡಿರಿ—ಒಮ್ಮೊಮ್ಮೆ ಜನರು "ಇದು ನನ್ನ ಹಿಂದಿನ ಜನ್ಮದ ಕರ್ಮಫಲ"

ಎನ್ನುತ್ತಾರೆ. ಇದರಿಂದ ನಾವು ಹಿಂದಿನ ಜನ್ಮದಲ್ಲಿದ್ದೆವೆಂದು ಸ್ಪಷ್ಟವಾಗುವದಷ್ಟೆ? ನಾವು ಎಂಬ ಮಾತಿನ ಅರ್ಥಕ್ಕೆ ದೇಹವು ವಿಷಯವಾದರೆ ಆ ದೇಹವೇ ಹಿಂದಿನ ಜನ್ಮದಲ್ಲಿತ್ತೆಂದು ಹೇಳುವದಕ್ಕಾದೀತೇನು? ಒಂದು ದೇಹವು ಸತ್ತಾಗ ಅದನ್ನು ಸುಟ್ಟೋ ಹೂಳಿಯೋ ನಾಶಮಾಡಿಬಿಡುತ್ತಾರೆ. ಅದರ ಕಣಗಳೆಲ್ಲ ದಿಕ್ಕುದಿಕ್ಕಿಗೆ ಹಾರಿಹೋಗುತ್ತವೆ. ಅದೇ ದೇಹವೇ ಮತ್ತೆ ಹೇಗೆ ಹುಟ್ಟೀತು? ಒಂದು ಜನ್ಮದಲ್ಲಿಯೇ ಹನ್ನೆರಡು ವರ್ಷಗಳಲ್ಲಿ ಒಂದು ಶರೀರದ ಕಣಗಳೆಲ್ಲ ಬದಲಾಗುವವೆಂದು ಭೌತಿಕಶಾಸ್ತ್ರಜ್ಞರು ಹೇಳುತ್ತಾರೆ. ಅವರ ಅಭಿಪ್ರಾಯವನ್ನು ಹಿಡಿದುಕೊಂಡರೆ ಇವತ್ತಿನ ನಾನು ಹನ್ನೆರಡು ವರುಷಗಳ ಹಿಂದೆ ಇದೇ ದೇಹದಲ್ಲಿದ್ದರೂ ನಾನು ನಾನೆಂಬ ಮಾತಿನ ಅರ್ಥಕ್ಕೆ ನನ್ನ ದೇಹವನ್ನು ವಿಷಯವಾಗಿ ಮಾಡುವದಕ್ಕೆ ಬರುವದಿಲ್ಲ. ಏಕೆಂದರೆ ಇವತ್ತು ನನ್ನ ದೇಹದಲ್ಲಿರುವ ಕಣಗಳೇ ಬೇರೆ; ಹನ್ನೆರಡು ವರ್ಷಗಳ ಹಿಂದೆ ನನ್ನ ದೇಹದಲ್ಲಿದ್ದ ಕಣಗಳೇ ಬೇರೆ. ಎಂದರೆ ಇವತ್ತಿನ ದೇಹವೇ ಬೇರೆ; ಹನ್ನೆರಡು ವರುಷಗಳ ಹಿಂದಿನ ದೇಹವೇ ಬೇರೆ. ಇವೆರಡೂ ಒಂದೇ ಹೇಗೆ ಆದಾವು? ಆದರೆ ಹನ್ನೆರಡು ವರ್ಷಗಳ ಹಿಂದಿದ್ದ ನಾನೇ ಇಂದು ಇರುವೆನೆಂಬ ನನ್ನ ಅನುಭವವನ್ನು ಕಳೆಯುವದಕ್ಕೆ ಮಾತ್ರ ಯಾರಿಗೂ ಶಕ್ಯವಿಲ್ಲ. ಆದ್ದರಿಂದ ನಾನು ಎಂಬ ವಸ್ತು ದೇಹಕ್ಕಿಂತ ಭಿನ್ನವಾಗಿರಲೇಬೇಕು. ದೇಹಕ್ಕಿಂತ ಭಿನ್ನವಾದಂಥ ಆ ಜೀವಸ್ವರೂಪವೆಂಥದ್ದೊ ಅದರ ವಿಚಾರವೂ ಕೂಡ ಈಗ ಬೇಕಾಗಿಲ್ಲ. ಜೀವಸ್ವರೂಪವು ದೇಹಕ್ಕಿಂತ ಭಿನ್ನವೆಂಬಿಷ್ಟು ತಿಳಿವಳಿಕೆ ಸಾಕು. ಜೀವಸ್ವರೂಪದ ಜ್ಞಾನವೂ ನಮಗೆ ಎಷ್ಟೋ ಸಹಾಯಕವಾಗುವದೂ ನಿಜ; ಆದರೆ ಅದನ್ನು ತಿಳಿಯುವದಕ್ಕಿಂತ ಮೊದಲು ನಶ್ವರವಾದ ದೇಹವನ್ನೇ ನಾನೆಂಬ ತಪ್ಪು ತಿಳಿವಳಿಕೆಯನ್ನು ಕಳೆದುಕೊಳ್ಳುವದಗತ್ಯ. ಒಳ್ಳೆಯದನ್ನು ಹಿಡಿಯುವದಕ್ಕಿಂತ ಮೊದಲು ಕೆಟ್ಟದನ್ನು ಬಿಡುವದು ಅವಶ್ಯಕವೆಂಬ ವಿಚಾರವು ಹಿಂದೆ ಅನೇಕ ವೇಳೆ ಬಂದಿದೆ. ಆದ್ದರಿಂದ ಜೀವನ ನಿಜಸ್ವರೂಪವನ್ನು ತಿಳಿಯುವದಕ್ಕಿಂತ ಮೊದಲು ಯಾವ ಯಾವದನ್ನೊ ಜೀವನೆಂದು ನಾವು ಭ್ರಾಂತಿಗೊಂಡು ವ್ಯವಹರಿಸುತ್ತಿರುವದನ್ನು ಬಿಡಬೇಕು. ಇಷ್ಟಾದರೆ ಎಷ್ಟೋ ಕೆಲಸವಾಯಿತು. ಅಡ್ಡದಾರಿಯನ್ನು ಹಿಡಿದು ಹೋಗುತ್ತಿದ್ದವನು ತಾನು ಹಿಡಿದಿರುವದು ಅಡ್ಡದಾರಿಯೆಂದು ತಿಳಿದು ಮುಂದೆ ಹೋಗುವದನ್ನು ಬಿಟ್ಟರೆ ಎಷ್ಟೋ ಆಯಾಸವನ್ನು ಉಳಿಸಿಕೊಂಡ ಹಾಗಾಯಿತು. ನಾವು ಈಗ ನಾನು ನಾನೆಂಬ ಮಾತಿನ ಅರ್ಥಕ್ಕೆ ಶರೀರ, ಪ್ರಾಣ, ಮನಸ್ಸು, ಮತ್ತು ಬುದ್ಧಿ—ಮೊದಲಾದವುಗಳನ್ನು ವಿಷಯವಾಗಿ ಭ್ರಮಿಸಿ ಮೋಸಹೋಗುತ್ತಿದ್ದೇವೆ. ಇದು ಭ್ರಾಂತಿಯೆಂದು ತಿಳಿದು ಇನ್ನು ನಾವೆ ಅಂಥ ಕಲ್ಪನೆಗಳನ್ನು ದೂರಮಾಡಿದರೆ ಆಮೇಲೆ ಇದಕ್ಕೆಲ್ಲ ಸಾಮರ್ಥ್ಯವನ್ನು ಕೊಡತಕ್ಕದ್ದಾಗಿ ಇವೆಲ್ಲಕ್ಕಿಂತ ಭಿನ್ನವಾಗಿರುವ ಜೀವಸ್ವರೂಪವನ್ನೂ ಅದಕ್ಕೂ ಆಧಾರವಾದ ಪರಮಾತ್ಮಸ್ವರೂಪವನ್ನೂ ಮನಗಾಣುವೆವು.

ಈಗ ನಮಗೆ ಆತ್ಮಜ್ಞಾನಕ್ಕೆ ಅಡ್ಡಿಯಾಗಿರುವದೇನೆಂದು ವ್ಯಕ್ತವಾಯಿತು. ದೇಹ ಮೊದಲಾದವುಗಳೇ ನಾನೆಂಬ ತಪ್ಪು ತಿಳಿವಳಿಕೆಯೇ ಆತ್ಮಜ್ಞಾನಕ್ಕೆ ಅಡ್ಡಿಯಾಗಿರುವದು. ಹೀಗೆ ನಮ್ಮ ಆತ್ಮಜ್ಞಾನಕ್ಕಿರುವ ಪ್ರತಿಬಂಧಕದ ಸ್ವಭಾವವು ಗೊತ್ತಾದ ಮೇಲೆ ಇದನ್ನು ಪ್ರತಿಯೊಂದು ಯೋಗವೂ ಸ್ವತಂತ್ರವಾಗಿ ಕಳೆಯಲಾದೀತೊ ಅಥವಾ ಉಳಿದವುಗಳನ್ನು ನೆರವಾಗಿಟ್ಟುಕೊಂಡು ಮುಖ್ಯವಾಗಿ ಜ್ಞಾನಯೋಗವೇ ಕಳೆಯುವದೋ—ಎಂಬುದನ್ನು ಸುಲಭವಾಗಿ ನಿಶ್ಚಯಿಸಬಹುದು. ದೇಹವೇ ನಾನೆಂಬ ಮೊದಲಾದ ತಪ್ಪು ತಿಳಿವಳಿಕೆಗಳನ್ನು ಕರ್ಮಯೋಗ ಮೊದಲಾದವು ಹೋಗಲಾಡಿಸಬಲ್ಲವೊ ಇಲ್ಲವೊ ಎಂಬುದನ್ನು ನೋಡುವದಕ್ಕೆ ಮೊದಲು ನಮ್ಮ ಪ್ರತಿದಿನದ ವ್ಯವಹಾರದ ಒಂದುದಾಹರಣೆಯನ್ನು ತೆಗೆದುಕೊಳ್ಳೋಣ. ಏಕೆಂದರೆ ಪ್ರತ್ಯಕ್ಷವಾದ ಉದಾಹರಣೆಯಿಂದ ಪರೋಕ್ಷವಾದ ವಿಚಾರಗಳನ್ನು ನಿರ್ಣಯಿಸುವದಕ್ಕೆ ಸುಲಭವಾಗುತ್ತದೆ. ಆದ್ದರಿಂದ ಉದಾಹರಣೆಗಾಗಿ ನಾವು ನಮ್ಮ ಒಂದು ದಿನದ ಆದಾಯ ವ್ಯಯಗಳನ್ನು ಬರೆದೆವೆಂದು ತಿಳಿಯೋಣ. ಅದರಲ್ಲಿ ಕೂಡಿ ಕಳೆಯುವದರಲ್ಲಿ ನಡೆದ ಪ್ರಮಾದದಿಂದ ಲೆಕ್ಕದಲ್ಲಿ ಉಳಿಯುವ ಹಣಕ್ಕೂ ನಮ್ಮ ಚೀಲದಲ್ಲಿ ಉಳಿದಿರುವ ಹಣಕ್ಕೂ ಹೆಚ್ಚು ಕಡಿಮೆ ಬರುತ್ತದೆ. ಆಗ ಎಲ್ಲಿ ತಪ್ಪಿರುವದೆಂಬದನ್ನು ತಿಳಿದು ತಿದ್ದಿಕೊಳ್ಳಬೇಕಾಗಿರುತ್ತದೆ. ನಾವು ಸುಮ್ಮನೆ ಬೇಕಾದಷ್ಟು ಸ್ನಾನಸಂಧ್ಯಾದಿಕರ್ಮಗಳನ್ನು ಮಾಡಿದರಾಗಲಿ, ಸುಮ್ಮನೆ ಉಸಿರುಕಟ್ಟಿ ಆ ಲೆಕ್ಕದ ಅಂಕೆಗಳನ್ನೇ ಬಿರಿಬಿರಿ ನಿಟ್ಟಿಸಿದರಾಗಲಿ ಅಥವಾ ಪ್ರಾಮಾಣಿಕತೆಯ ಮೇಲೆ ಪ್ರೇಮವನ್ನು ತೋರಿಸಿದರಾಗಲಿ ಆ ತಪ್ಪು ಹೊರಬೀಳುವದೋ? ಎಂದಿಗೂ ಇಲ್ಲ. ಅವಿಚಾರದಿಂದ ಬಿದ್ದಿದ್ದ ಆ ತಪ್ಪು ಹೊರಬೀಳಬೇಕಾದರೆ ನಮ್ಮ ಲೆಕ್ಕವನ್ನು ಮುಂದಿಟ್ಟುಕೊಂಡು ಬಹು ಎಚ್ಚರಿಕೆಯಿಂದ ಎಲ್ಲಾ ಕಡೆಯಲ್ಲಿಯೂ ತಾಳೆಯನ್ನು ಹಾಕುತ್ತ ವಿಚಾರಮಾಡಬೇಕು. ವಿಚಾರದಿಂದ ಆ ತಪ್ಪು ಹೊರಬಿದ್ದೇ ತೀರುವದು. ವಿಚಾರದ ಹೊರತು ಅದಕ್ಕೆ ಯಾವದೂ ತಕ್ಕ ಸಾಧನವಲ್ಲ. ಈ ಅನುಭವವನ್ನು ದೇಹಾತ್ಮ ಬುದ್ಧಿಯ ಕಡೆಗೆ ತಿರುಗಿಸಿಕೊಂಡರಾಯಿತು. ಅವಿಚಾರದಿಂದ ಆದ ತಪ್ಪು ವಿಚಾರದ ಹೊರತು ಬೇರೆ ಏತರಿಂದ ಹೋದೀತು! ನಮಗೆ ಅವಿಚಾರದಿಂದ ದೇಹಾತ್ಮಬುದ್ಧಿಯುಂಟಾಗಿದೆ. ಅದನ್ನು ವಿಚಾರದಿಂದಲೇ ಹಿಮ್ಮೆಟ್ಟಿಸಬೇಕು. ವಿಚಾರಪ್ರಧಾನವಾದದ್ದು ಜ್ಞಾನಯೋಗ. ಆದ್ದರಿಂದ ಕರ್ಮಯೋಗವೂ ರಾಜಯೋಗವೂ ಭಕ್ತಿಯೋಗವೂ ಆ ತಪ್ಪು ತಿಳಿವಳಿಕೆಯನ್ನು ಕಳೆಯಲಾರವೆಂದೂ ಜ್ಞಾನಯೋಗ ಒಂದು ಮಾತ್ರ ಅದನ್ನು ಕಳೆಯಬಲ್ಲದೆಂದೂ ಸಿದ್ಧವಾಯಿತು.

ಇನ್ನು ಆ ಜ್ಞಾನಯೋಗವಾದರೂ ಸ್ವತಂತ್ರವಾಗಿ ತಾನೊಂದೇ ಆ ಅಜ್ಞಾನವನ್ನು ಕಳೆಯಬಲ್ಲದೋ? ಇದಕ್ಕೂ ಹೂಗುಟ್ಟುವದಕ್ಕಾಗುವದಿಲ್ಲ. ಏಕೆಂದರೆ ವ್ಯವಹಾರದಲ್ಲಿ ನೋಡಿದರೂ ಕೂಡ ತೀಕ್ಷ್ಣಬುದ್ಧಿಯವರ ವಿಚಾರಕ್ಕೂ ಮಂದಬುದ್ಧಿಯವರ ವಿಚಾರಕ್ಕೂ ಎಷ್ಟೋ ಅಂತರವು ಕಾಣಬರುತ್ತದೆ. ವ್ಯವಹಾರದ

ವಿಚಾರಕ್ಕಿಂತ ಬಹು ಮೇಲಿನ ಮೆಟ್ಟಿಲಾಗಿರುವ ದೇಹಾತ್ಮಬುದ್ಧಿಯ ವಿಚಾರವನ್ನು ಎಲ್ಲರೂ ಮಾಡಹೋದರೆ ಹೇಗೆ ದಕ್ಕೀತು? ದೇಹಾತ್ಮಬುದ್ಧಿಯನ್ನು ಕಳೆಯುವದಕ್ಕೆ ತೀಕ್ಷ್ಣವಾದ ಬುದ್ಧಿಯಲ್ಲದೆ ವಿಶೇಷವಾಗಿ ಶುದ್ಧವಾದ ಮತ್ತು ಸ್ಥಿರವಾದ ಬುದ್ಧಿಯು ಬೇಕಾಗಿರುವದು. ಏಕೆಂದರೆ ಬೇಕಾದಷ್ಟು ಮಳೆ ಬಂದು ಆ ನೀರು ಕಂಡಕಂಡ ಕಡೆಗಳಲೆಲ್ಲ ಹರಿದು ಹೊಲಸಿನಿಂದ ಕೂಡಿ ಒಂದಾಗಿ ಹರಿಯುವಾಗ ಅದರಲ್ಲಿ ಪ್ರತಿಬಿಂಬವು ಕಾಣುವದೇನು? ಅದರಂತೆಯೇ ಮನಸ್ಸಿನಲ್ಲಿ ಸಮೃದ್ಧಿಯಾಗಿ ವ್ಯಾವಹಾರಿಕವಾದ ಕಲ್ಪನೆಗಳು ತುಂಬಿ ಅವು ನಾಲ್ಕು ದಿಕ್ಕಿಗೂ ಹರಡಿಕೊಳ್ಳುತ್ತ ರಾಗದ್ವೇಷಾದಿಗಳಿಂದ ಕೂಡಿ ಅಶುದ್ಧವಾಗಿ ಪ್ರವಹಿಸುವಾಗ ಅದರಲ್ಲಿ ಪ್ರತಿಬಿಂಬವು ಸರಿಯಾಗಿ ಹೇಗೆ ಮೂಡೀತು? ಆದ್ದರಿಂದ ಆತ್ಮನು ದೇಹಕ್ಕಿಂತ ಭಿನ್ನನೆಂಬ ಪ್ರೌಢವಿಚಾರವು ಪ್ರವೇಶಿಸಬೇಕಾದರೆ ಬುದ್ಧಿಯು ಶುದ್ಧವಾಗಿರಬೇಕು. ಈ ಶುದ್ಧಿಗಾಗಿಯೇ ಕರ್ಮಯೋಗವು ಗೊತ್ತಾಗಿರುವದು. ಇನ್ನು ಒಂದು ಬುದ್ಧಿಯು ಶುದ್ಧವಾಗಿತ್ತೆಂದು ಇಟ್ಟುಕೊಳ್ಳೋಣ. ನೀರು ತಿಳಿಯಾಗಿದ್ದರೂ ಅದರ ಪ್ರವಾಹವು ಎಲ್ಲಾ ಕಡೆಗೂ ವೇಗವಾಗಿ ಹೊರಳುತ್ತಿದ್ದರೆ ಅದರಲ್ಲಾದರೂ ಪ್ರತಿಬಿಂಬವು ಹೇಗೆ ಮೂಡೀತು? ಹಾಗೆಯೇ ಶುದ್ಧಚಿತ್ತವಾದರೂ ಅದು ನಾಲ್ಕುಕಡೆಗೂ ಹರಿಯುತ್ತಿದ್ದರೆ ಅದರಲ್ಲಿ ದೇಹಾತ್ಮಬುದ್ಧಿಯ ವಿಚಾರವು ಮೂಡಲಾರದು. ನೀರು ತನ್ನ ಚಲನೆಯನ್ನು ಬಿಟ್ಟು ಸುಮ್ಮನೆ ಒಂದು ಕಡೆ ನಿಲ್ಲಬೇಕು. ಆಗ ಅದರಲ್ಲಿ ಪ್ರತಿಬಿಂಬವು ಮೂಡುವದು. ಅದರಂತೆ ಮನಸ್ಸು ತನ್ನ ಹರಿದಾಟವನ್ನು ಬಿಟ್ಟು ಒಂದು ಕಡೆ ನಿಲ್ಲಬೇಕು. ಆಗ ಅದರಲ್ಲಿ ದೇಹಾತ್ಮಬುದ್ಧಿಯ ವಿಚಾರವು ಇಳಿಯುವದು. ಈ ಸ್ಥಿರತೆಯು ರಾಜಯೋಗದಿಂದಲೂ ಭಕ್ತಿಯೋಗದಿಂದಲೂ ಮೈಯ್ಗೂಡುವದು. ಹೀಗೆ ಜ್ಞಾನಯೋಗವನ್ನು ನಡೆಸಬೇಕಾದರೆ ಕರ್ಮಯೋಗದಿಂದ ಚಿತ್ತಶುದ್ಧಿಯನ್ನೂ ರಾಜಯೋಗ ಭಕ್ತಿಯೋಗಗಳಿಂದ ಚಿತ್ತಸ್ಥೈರ್ಯವನ್ನೂ ಪಡೆದ ಬುದ್ಧಿಯಾಗಬೇಕು. ಶುದ್ಧವೂ ಸ್ಥಿರವೂ ಅಲ್ಲದ ಬುದ್ಧಿಯ ವಿಚಾರವು ಜ್ಞಾನಯೋಗವೆನಿಸಿಕೊಳ್ಳುವದೇ ಇಲ್ಲ. ಅದನ್ನು ಜ್ಞಾನವೆನ್ನಬಹುದು. ಯೋಗವೆಂಬ ಪವಿತ್ರನಾಮವನ್ನು ಪಡೆಯಬೇಕಾದರೆ ಆ ವಿಚಾರವು ಶುದ್ಧವೂ ಸ್ಥಿರವೂ ಆದ ಬುದ್ಧಿಯಲ್ಲಿಯೇ ಹುಟ್ಟಬೇಕು. ಆದ್ದರಿಂದ ತಪ್ಪು ತಿಳಿವಳಿಕೆಯನ್ನು ಕಳೆಯುವದಕ್ಕೆ ಸ್ವತಂತ್ರವಾದ ಜ್ಞಾನಯೋಗಕ್ಕೆ ಸಾಮರ್ಥ್ಯವಿಲ್ಲವೆಂದಾಯಿತು. ಹೀಗಾಗಿ ಯಾವ ಯೋಗವೂ ತಾನೊಂದೇ ಸ್ವತಂತ್ರವಾಗಿ ತಪ್ಪು ತಿಳಿವಳಿಕೆಯನ್ನು ಕಳೆಯಲಾರದೆಂದಾಯಿತು. ಆದ್ದರಿಂದ ಉಳಿದವುಗಳನ್ನು ನೆರವಾಗಿಟ್ಟುಕೊಂಡು ಮುಖ್ಯವಾಗಿ ಜ್ಞಾನಯೋಗವೇ ಅದನ್ನು ಕಳೆಯುವದೆನ್ನಬೇಕು. ಈ ಯೋಗಗಳು ಒಂದಕ್ಕೊಂದು ನೆರವಾಗಿರುವ ಸ್ಥಿತಿಯು ಪ್ರತಿ ಯೋಗದಲ್ಲಿಯೂ ಕಾಣುವದು. ಹೇಗೆಂದರೆ ಕರ್ಮಯೋಗದಲ್ಲಿಯೂ ಅಲ್ಪಸ್ವಲ್ಪವಾದರೂ ಮನಸ್ಸಿನ ಏಕಾಗ್ರತೆಯೂ ಪ್ರೇಮಸ್ವಭಾವವೂ ವಿಚಾರವೂ ಇದ್ದೇ ಇರುವವು. ಅದರಂತೆಯೇ ರಾಜಯೋಗದಲ್ಲಿ ಕರ್ಮವೂ ಪ್ರೇಮವೂ

ವಿಚಾರವೂ ಭಕ್ತಿಯೋಗದಲ್ಲಿ ಕರ್ಮವೂ ಚಿತ್ತೈಕಾಗ್ರತೆಯೂ ವಿಚಾರವೂ ಮತ್ತು ಜ್ಞಾನಯೋಗದಲ್ಲಿ ಕರ್ಮವೂ ಚಿತ್ತೈಕಾಗ್ರತೆಯೂ ಪ್ರೇಮವೂ ಹಾಸುಹೊಕ್ಕು ಗಳಾಗಿ ನೆಯ್ದುಕೊಂಡಿರುವವು. ಆದರೆ ಕರ್ಮವು ಬಹಳವಾಗಿರುವ ಭಾಗವು ರಾಜಯೋಗವೆಂದೂ ಚಿತ್ತೈಕಾಗ್ರತೆಯ ಕಡೆಗೆ ಹೆಚ್ಚು ಲಕ್ಷ್ಯವಿರುವ ಭಾಗವು ಕರ್ಮಯೋಗವೆಂದೂ ಪ್ರೇಮಕ್ಕೆ ಪ್ರಾಶಸ್ತ್ಯವಿರುವ ಭಾಗವು ಭಕ್ತಿಯೋಗವೆಂದೂ ವಿಚಾರಪ್ರಧಾನವಾದ ಭಾಗವು ಜ್ಞಾನಯೋಗವೆಂದೂ ಹೆಸರುಗೊಂಡಿರುವವು. ಈ ಪ್ರತಿಯೊಂದು ಬೇರೆ ಬೇರೆ ಭಾಗಕ್ಕೂ ತನ್ನಲ್ಲಿರುವ ವಿಚಾರಭಾಗವನ್ನು ಪರಿಪಕ್ವ ಸ್ಥಿತಿಗೆ ತರುವದೇ ಧ್ಯೇಯವಾಗಿರುವದು. ಹೀಗೆ ಹಣ್ಣಾಗಿ ಬಂದ ವಿಚಾರವು ದೇಹಾತ್ಮಬುದ್ಧಿಯನ್ನು ಕಳೆಯುವದಕ್ಕೆ ಸಮರ್ಥವಾಗುವದು. ಜ್ಞಾನಯೋಗದಲ್ಲಿ ಇಂಥ ವಿಚಾರಕ್ಕೆ ಪ್ರಾಧಾನ್ಯವಿರುವದರಿಂದ ಎಲ್ಲ ಯೋಗಗಳಲ್ಲಿ ಅದಕ್ಕೇ ಶ್ರೇಷ್ಠತೆಯು ಒಪ್ಪುವದು. ದೇಹಾತ್ಮಬುದ್ಧಿಯನ್ನು ಹೋಗಲಾಡಿಸುವದೇ ಜ್ಞಾನ ಯೋಗದ ಹೆಚ್ಚುಗಾರಿಕೆ.

—ಹೊಸಕೆರೆ ಚಿದಂಬರಯ್ಯ

## ಮನುಷ್ಯನ ಉದಯ ಮತ್ತು ವಿಕಸನ

ದೇವರು ಮನುಷ್ಯನನ್ನು ಮೊದಲು ಸೃಷ್ಟಿಮಾಡಿ ಅವನ ಉಪಯೋಗ ಕ್ಕಾಗಿಯೇ ಇತರ ಪ್ರಾಣಿಗಳನ್ನೂ ಸಸ್ಯಗಳನ್ನೂ ಸೃಷ್ಟಿಮಾಡಿದನೆಂಬುದು ಬಹು ಕಾಲದಿಂದಲೂ ಬಂದಿರುವ ಜನರ ಅಭಿಪ್ರಾಯ. ಆದರೆ ಮನುಷ್ಯ ದೇಹದ ರಚನೆಯು ಇತರ ಮೃಗಗಳ ದೇಹದ ರಚನೆಯನ್ನೇ ಹೋಲುತ್ತಿರುವುದರಿಂದಲೂ, ಮನುಷ್ಯನು ಹುಟ್ಟುವುದೂ ಬೆಳೆಯುವುದೂ ಜೀವಿಸುವುದೂ ಇತರ ಪ್ರಾಣಿ ಗಳಂತೆಯೇ ಇರುವುದರಿಂದಲೂ, ಸಾಮಾನ್ಯ ಪ್ರಾಣಿಯ ರಚನಾ ಕ್ರಮದಲ್ಲಿ ಯಾವ ನಿಯಮಗಳು ಕಾಣಬರುವುವೊ ಅವೇ ನಿಯಮಗಳು ಮನುಷ್ಯಪ್ರಾಣಿಯಲ್ಲೂ ಕಂಡುಬರಬೇಕು: ಎಂದರೆ, ಈಗಿನ ಮನುಷ್ಯರೂಪವು ಆದಿಯಿಂದಲೂ ಹೀಗೆಯೇ ಇರದೆ, ಪ್ರಾಚೀನ ರೂಪದಿಂದ ಕ್ರಮಕ್ರಮವಾಗಿ ರಚನಾಭಿವೃದ್ಧಿ ಪಡೆದು ಈಗಿನ ರೂಪಕ್ಕೆ ಬಂದಿರಬೇಕು.

ಪ್ರಾಮುಖಿಗಳು :—ಸಸ್ಯಕೋಟಿಯಲ್ಲೂ ಪ್ರಾಣಿಕೋಟಿಯಲ್ಲೂ ಹತ್ತಿರ ಹತ್ತಿರದ ಸಂಬಂಧವುಳ್ಳ ತರಗತಿಗಳೂ ಜಾತಿಗಳೂ ವರ್ಗಗಳೂ ವಂಶಗಳೂ ಅನೇಕ ವಿರುವುವು. ಉದಾಹರಣೆಗಾಗಿ, ಬದನೆ, ಗುಳ್ಳ, ಕಾಚಿ, ಸೌಡಂಗಿ, ಉರುಳುಗಡ್ಡೆ– ಇವೆಲ್ಲವೂ ಒಂದೇ ಜಾತಿಗೆ ಸೇರಿದ ಗಿಡಗಳು. ಇವುಗಳ ಹತ್ತಿರದ ಬಂಧುಗಳು

ಮೆಣಸಿನ ಗಿಡ, ಚಪ್ಪರಬದನೆಯ ಗಿಡ, ಉಮ್ಮತ್ತಿಯ ಗಿಡ, ಹೊಗೆಯ ಸೊಪ್ಪಿನ ಗಿಡ ಮೊದಲಾದ ಜಾತಿಗಳವು. ಈ ಜಾತಿಗಳ ಸಸ್ಯಗಳೆಲ್ಲವೂ ಒಂದೇ ವರ್ಗಕ್ಕೆ ಸೇರಿದವು. ಹೀಗೆಯೇ, ಪ್ರಾಣಿಗಳಲ್ಲಿ ನಾಯಿ, ನರಿ, ತೋಳ ಮೊದಲಾದವು ಒಂದೇ ಜಾತಿಗೆ ಸೇರಿದವು. ಬೆಕ್ಕು, ಹುಲಿ, ಚಿರತೆ, ಸಿಂಹ ಮೊದಲಾದವು ಮತ್ತೊಂದು ಜಾತಿಗೆ ಸೇರಿದವು. ಈ ಎರಡು ಜಾತಿಗಳೂ ಮಾಂಸಾಹಾರಿ ಪ್ರಾಣಿವರ್ಗಕ್ಕೆ ಸೇರಿದವು. ಹೀಗೆ ಸಸ್ಯಕೋಟಿಯನ್ನೂ ಪ್ರಾಣಿಕೋಟಿಯನ್ನೂ ಅನೇಕ ತರಗತಿಗಳಾಗಿಯೂ ವರ್ಗಗಳಾಗಿಯೂ ಜಾತಿಗಳಾಗಿಯೂ ವಂಶಗಳಾಗಿಯೂ ಶಾಸ್ತ್ರಜ್ಞರು ವಿಭಾಗಿಸಿರುತ್ತಾರೆ. ಹಾಗೆ ವಿಭಾಗಮಾಡುವುದರಲ್ಲಿ ಶಾಸ್ತ್ರಜ್ಞರಲ್ಲಿಯೇ ಕೆಲವು ಸಂದರ್ಭಗಳಲ್ಲಿ ಭಿನ್ನಾಭಿಪ್ರಾಯಗಳು ಬರಬಹುದು ; ಆದರೆ ಅಂತಹ ಸಂದರ್ಭಗಳು ಹೆಚ್ಚಾಗಿಲ್ಲ. ಈ ರೀತಿಯನ್ನನುಸರಿಸಿ ಮನುಷ್ಯಪ್ರಾಣಿಯಲ್ಲೂ ಬೇರೆ ಬೇರೆ 'ಜಾತಿ'ಗಳು ಕಂಡುಬರುವುವೆ? ಈ ಜಾತಿಗಳ ಹತ್ತಿರ ಸಂಬಂಧಿ ಜಾತಿಗಳು ಯಾವುವಿರುವುವು ? ಈ ವಿಚಾರವನ್ನು ಕೇವಲ ಶಾಸ್ತ್ರದೃಷ್ಟಿಯಿಂದಲೇ ಮಾಡಿದಲ್ಲಿ ಅನೇಕ ವಿಷಯಗಳು ತಿಳಿಯಬರುವುವು. ಪ್ರಾಣಿಕೋಟಿಯಲ್ಲಿ ಮನುಷ್ಯಜಾತಿಯನ್ನು ಕೇವಲ ಹೆಚ್ಚಾಗಿ ಹೋಲುವ ಪ್ರಾಣಿಜಾತಿಗಳು ಕಪಿಜಾತಿಗಳೆಂದು ಎಲ್ಲರೂ ಒಪ್ಪಬೇಕು. ಈ ಕಪಿಜಾತಿಗಳ ದೇಹರಚನೆಯಲ್ಲೂ ಬುದ್ಧಿಶಕ್ತಿಯಲ್ಲೂ ವ್ಯತ್ಯಾಸಗಳು ಕಂಡುಬರುವುವು. ಕಾಡುಪಾಪ (Lemur) ಎಂಬ ಪ್ರಾಣಿ ಈ ಕಪಿಜಾತಿಯಲ್ಲಿ ಕಡೆಯದರ್ಜೆಗೆ ಸೇರಿದುದು. ಇದಕ್ಕಿಂತಲೂ ರಚನೆಯಲ್ಲೂ ಬುದ್ಧಿಶಕ್ತಿಯಲ್ಲೂ ಮುಂದುವರಿದಿರುವ ಅನೇಕ ಕಪಿಜಾತಿಗಳನ್ನು ಎಂಗಡಿಸಬಹುದು. ಈಗ ಜೀವಿಸಿರುವ ಕಪಿಜಾತಿಗಳಲ್ಲಿ ಮನುಷ್ಯನಿಗೆ ಕೇವಲ ಹತ್ತಿರ ಸಂಬಂಧವುಳ್ಳವುಗಳು ಬಾಲವಿಲ್ಲದ ಕೋತಿಗಳು. ಇದನ್ನು ನರವಾನರಗಳೆಂದು ಕರೆಯುವೆವು. ಇವು ಗಿಬನ್, ವರಾಂಗೊಟಾನ್, ಚಿಂಪಂಜೀ, ಗೊರಿಲಾ ಎಂಬ ನಾಲ್ಕು ಜಾತಿಗಳು. ಈ ಎಲ್ಲ ಕಪಿಜಾತಿಗಳೂ ಮನುಷ್ಯಜಾತಿಯೂ ಸೇರಿದ ವರ್ಗವು ಪ್ರಕೃತಿರಚನೆಯಲ್ಲಿ ಅತ್ಯಂತ ಮುಂದುವರಿದದ್ದು. ಆದಕಾರಣ ಈ ವರ್ಗವನ್ನು ಪ್ರಾಮುಖಿ ವರ್ಗ (Primates) ಎಂದು ಕರೆಯುವೆವು. ಮನುಷ್ಯನಿಗೂ ಕಪಿಜಾತಿಗಳಿಗೂ ಅತ್ಯಂತ ನಿಕಟ ಸಂಬಂಧವಿರುವುದೆಂದೂ, ಇವೆರಡೂ ಒಂದೇ ಪೂರ್ವಜ ಕುಲದಲ್ಲಿ ಹುಟ್ಟಿ ವಿಕಸಿತವಾದ ಪ್ರಾಣಿಗಳಾಗಿರಬೇಕೆಂದೂ, ಅನೇಕ ನಿದರ್ಶನಗಳನ್ನು ಕೊಟ್ಟು ಮಾಡಿರುವ ಸಿದ್ಧಾಂತವನ್ನೂ ಅಂತಹ ಶಾಸ್ತ್ರಜ್ಞರನ್ನೂ ಅಲ್ಲಗಳೆದು ಹಾಸ್ಯ ಮಾಡುವ ಪಂಡಿತರು ಈ ಕಾಲದಲ್ಲೂ ಪಾಶ್ಚಾತ್ಯದೇಶಗಳಲ್ಲಿ ಸಹ ಇಲ್ಲದೆ ಇಲ್ಲ.

ಪ್ರಾಮುಖಿಗಳ ರಚನಾ ಸಾದೃಶ್ಯ :—ದೇಹರಚನೆಯನ್ನು ಪರೀಕ್ಷೆಮಾಡಿದಲ್ಲಿ ಮನುಷ್ಯಪ್ರಾಣಿಗೂ ಕಪಿಪ್ರಾಣಿಗೂ ಅತ್ಯಂತ ಹತ್ತಿರಸಂಬಂಧವಿರುವ ವಿಷಯವು ತಿಳಿಯದೆಹೋಗದು. ಮಿದುಳಿನ ರಚನಾ ಸಂಕೀರ್ಣತೆ, ಐದು ಬೆರಳುಗಳುಳ್ಳ ನೆಲಮೆಟ್ಟುವ ಪಾದ ಮತ್ತು ಅಂಗೈ, ಬೆರಳುಗಳಲ್ಲಿಯ ಉಗುರುಗಳು (ಮಾಂಸಾ

ಹಾರಿಗಳ ನಖರಗಳಲ್ಲ), ಹಿಡಿತವುಳ್ಳ ಕೈ, ಇತರ ಬೆರಳುಗಳ ಎದುರಿಗೆ ಬಗ್ಗಿಸಲಾಗುವ ಹೆಬ್ಬೆಟ್ಟು, ವಿಶಿಷ್ಟತೆಯಿಲ್ಲದೆ ಸಾಮಾನ್ಯರಚನೆಯುಳ್ಳ ಹಲ್ಲುಗಳು (ಎಂದರೆ, ಹುಲ್ಲುಮೇಯುವ ಪ್ರಾಣಿಗಳಂತಾಗಲಿ, ಮಾಂಸಾಹಾರಿ ಪ್ರಾಣಿಗಳಂತಾಗಲಿ ಕಾರ್ಯಕ್ಕೆ ತಕ್ಕಂತಹ ರಚನೆಯಿಲ್ಲದವು ; ಈ ಹಲ್ಲುಗಳ ಸಂಖ್ಯೆ ಸಾಮಾನ್ಯವಾಗಿ ೩೨), ಎದೆಯ ಮೇಲ್ಭಾಗದಲ್ಲಿ ಕತ್ತಿನ ತಳಗಡೆಯಿರುವ 'ಕ್ಲಾವಿಕಲ್' (Clavicle) ಎಂಬ ಉದ್ದನೆಯ ಎಲುಬು, ಒಂದೇ ಕೋಶವುಳ್ಳ ಸುಲಭವಾದ ಜಠರ, ಎದೆಯ ಮೇಲ್ಭಾಗದಲ್ಲಿ ಒಂದೇ ಜೊತೆಯ ಸ್ತನಗಳು, ಒಂದು ಪ್ರಸವದಲ್ಲಿ ಸಾಮಾನ್ಯವಾಗಿ ಒಂದೇ ಮರಿ ಹುಟ್ಟುವುದು, ಅದು ಶೈಶವದಲ್ಲಿ ತೀರ ನಿಸ್ಸಹಾಯವಾಗಿದ್ದು ತಾಯಿ ಅದರ ಸಂಪೂರ್ಣ ಭಾರವನ್ನು ವಹಿಸಬೇಕಾಗಿರುವುದು, ಸಾಮಾನ್ಯವಾಗಿ ಸಸ್ಯಾಹಾರವೇ ಮುಖ್ಯಾಹಾರವಾಗಿರುವುದು—ಇವೆಲ್ಲವೂ ಪ್ರಾಮುಖಿಗಳ ಮುಖ್ಯ ಲಕ್ಷಣಗಳು.

ಈ ಪ್ರಾಮುಖಿಗಳನ್ನು ಶಾಸ್ತ್ರಜ್ಞರು ಆರು ಜಾತಿಗಳಾಗಿ ವಿಂಗಡಿಸಿರುತ್ತಾರೆ: ಮೊದಲನೆಯದು ಕಾಡುಪಾಪ; ಎರಡು, ಮೂರು ಮತ್ತು ನಾಲ್ಕನೆಯ ಜಾತಿಗಳು ಭೂಮಿಯ ಹಲವು ಭಾಗಗಳಲ್ಲಿ ದೊರೆಯುವ ಕೆಲವು ಕಪಿ ಕುಲಗಳು ; ಐದನೆಯದು ಬಾಲವಿಲ್ಲದ ಕಪಿಜಾತಿ (ನರವಾನರಗಳು) ; ಆರನೆಯದು ಮನುಷ್ಯಜಾತಿ. ನರವಾನರಗಳಿಗೂ ಮನುಷ್ಯಜಾತಿಗೂ ಇರುವ ಕೇವಲ ನಿಕಟಸಂಬಂಧವು, ಕಾಡುಪಾಪಗಳಿಗೂ ಇತರ ಕಪಿಗಳಿಗೂ ಇರುವುದಿಲ್ಲ. ಈಗ ಪ್ರಪಂಚದ ನಾನಾ ಭಾಗಗಳಲ್ಲಿ ವಾಸವಾಗಿರುವ ಮನುಷ್ಯಪ್ರಾಣಿಗಳೆಲ್ಲವೂ ಒಂದೇ ವಂಶಕ್ಕೆ ಸೇರಿದುವೆಂದು ಶಾಸ್ತ್ರಜ್ಞರು ನಿರ್ಣಯಿಸಿರುತ್ತಾರೆ: ಎಂದರೆ, ಈ ಬೇರೆಬೇರೆ ಪ್ರಭೇದಗಳ ಮನುಷ್ಯಪ್ರಾಣಿಗಳು ಪರಸ್ಪರ ಸಂಪರ್ಕ ಮಾಡಿ, ಇದರ ಫಲವಾಗಿ ಸಂತತಿ ಪಡೆಯಬಹುದು. ಈಗಿನ ಮನುಷ್ಯವಂಶವನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ: 'ಈಥಿಯೋಪಿಯನ್' (Ethiopian) (ಆಫ್ರಿಕದ ಕಪ್ಪು ಮನುಷ್ಯರು), 'ಮಾಂಗೋಲಿಯನ್' (Mongolian) (ಮಾಂಗೋಲಿಯ, ಚೀನ, ಮೊದಲಾದ ಏಷ್ಯದ ಬಹುಭಾಗದ ಜನರು), 'ಕಾಕೇಸಿಯನ್' (Caucasian) (ಏಷ್ಯದ ನೈರುತ್ಯಭಾಗ ವಾಸಿಗಳೂ ಮತ್ತು ಯೂರೋಪ್ ಮೊದಲಾದ ಇತರ ಕೆಲವು ಪ್ರಾಂತವಾಸಿಗಳು).

ನರವಾನರಗಳು :—ನರವಾನರಗಳಿಗೂ ಇತರ ಕಪಿಗಳಿಗೂ ಅನೇಕ ವ್ಯತ್ಯಾಸಗಳಿರುವುವು : (೧) ನರವಾನರಗಳಿಗೆ ಬಾಲವಿಲ್ಲ ; (೨) ಇವುಗಳ ಹಲ್ಲುಗಳ ಸಂಖ್ಯೆ, ಮನುಷ್ಯನಲ್ಲಿರುವಂತೆಯೇ, ೩೨ ; (೩) ಕಾಲುಗಳಿಗಿಂತಲೂ ಕೈಗಳ ಉದ್ದ ಹೆಚ್ಚು; (೪) ನೆಲದಮೇಲಿರುವಾಗ ಸಾಮಾನ್ಯವಾಗಿ ಮನುಷ್ಯನಂತೆಯೇ ನೆಟ್ಟಗೆ ನಿಂತು ತಿರುಗಾಡುವುವು ; (೫) ಕೈಯ ಹೆಬ್ಬೆಟ್ಟು ಮೊಟಕು ; (೬) ಮಿದುಳು ಹೆಚ್ಚು ವಿಕಾಸ ಪಡೆದುದಾಗಿ, ಈ ಪ್ರಾಣಿಗಳ ಬುದ್ಧಿಶಕ್ತಿ ಕೀಳುದರ್ಜೆಯ ಕೋತಿಗಳ

ಗಿಂತಲೂ ಮುಂದುವರಿದಿರುವುದು. ಗಿಬನ್ ಮತ್ತು ಒರಾಂಗೊಟಾನ್ ವಾನರಗಳು ದಕ್ಷಿಣ ಏಷ್ಯದಲ್ಲೂ, ಚಿಂಪಂಜೀ ಮತ್ತು ಗೊರಿಲಾ ವಾನರಗಳು ಆಫ್ರಿಕದ ಉಷ್ಣ ಪ್ರದೇಶಗಳಲ್ಲೂ ವಾಸವಾಗಿರುವುವು. ಇವುಗಳಲ್ಲಿ ಗಿಬನ್ ವಾನರವು ಬಹಳ ಸಣ್ಣದು : ಮೂರಡಿ ಎತ್ತರಕ್ಕೆ ಮೀರಿದುವುದಿಲ್ಲ ; ಗೊರಿಲಾ ಎಂಬುದು ಬಹಳ ದೊಡ್ಡದು ಮತ್ತು ಹೆಚ್ಚು ಶಕ್ತಿಯುಳ್ಳದ್ದು : ಇದರ ಎತ್ತರ ಸಾಮಾನ್ಯವಾಗಿ ಐದೂವರೆ ಅಡಿ, ತೂಕ ಸರಾಸರಿ ೪೦೦ ಪೌಂಡು. ತಲೆಬುರುಡೆಯ ಆಕಾರದಲ್ಲೂ ರಚನೆಯಲ್ಲೂ ಅವವಕ್ಕೆ ಕೆಲಕೆಲವು ವ್ಯತ್ಯಾಸಗಳಿರುವುವು.

ಮನುಷ್ಯಪ್ರಾಣಿಯ ರಚನೆ :—ಮನುಷ್ಯಪ್ರಾಣಿಗೂ ನರವಾನರಗಳಿಗೂ ಇರುವ ಮುಖ್ಯ ವ್ಯತ್ಯಾಸಗಳು : (೧) ಮಿದುಳು (ಮುಖ್ಯವಾಗಿ, ಉತ್ತಮ ಮಸ್ತಿಷ್ಕ) ಹೆಚ್ಚು ವಿಸ್ತಾರವಾಗಿಯೂ ಹೆಚ್ಚು ತೊಡಕಿನ ರಚನೆಯುಳ್ಳದ್ದಾಗಿಯೂ ಇರುವುದು; (೨) ಮುಖವು ಹ್ರಸ್ವ ಪ್ರಮಾಣವುಳ್ಳದ್ದಾಗಿಯೂ ಉದ್ದದಲ್ಲಿ ಸರಿಸುಮಾರು ನೇರ ವಾಗಿಯೂ ಇರುವುದು ; (೩) ಕೆಳದವಡೆಯಲ್ಲಿ ಸ್ಪಷ್ಟವಾದ ಗಲ್ಲವಿರುವುದು; (೪) ಹಲ್ಲುಗಳೆಲ್ಲವೂ ಗಾತ್ರದಲ್ಲಿ ಸಣ್ಣವು ; ಕೋರೆಹಲ್ಲುಗಳು ಕೂಡ ಉದ್ದ ವಾಗಿಲ್ಲ ; (೫) ಬೆನ್ನುಹುರಿ ನೆಟ್ಟಗೆ ನಿಲ್ಲುವ ಸ್ಥಿತಿಗೆ ಅನುಕೂಲಿಸುವಂತೆ ನಾಲ್ಕು ಪ್ರತ್ಯೇಕವಾದ ವಕ್ರಭಾಗಗಳನ್ನುಳ್ಳದ್ದಾಗಿರುವುದು ; (೬) ತೋಳುಗಳು ಕಾಲು ಗಳಷ್ಟು ಉದ್ದವಾಗಿಲ್ಲ ; (೭) ಹೆಬ್ಬೆಟ್ಟು ಇತರ ಬೆರಳುಗಳ ಮುಂದೆ ಸಲೀಸಾಗಿ ಬಗ್ಗಿ ಚಲಿಸಬಲ್ಲುದು ; ಆದರೆ ಕಾಲಿನ ಹೆಬ್ಬೆಟ್ಟಿಗೆ ಈ ಶಕ್ತಿಯಿಲ್ಲ ; (೮) (ಇತರರಿಗೆ ತಿಳಿಯುವಂತೆ) ಮಾತನಾಡುವ ಶಕ್ತಿ ಕೇವಲ ಅಭಿವೃದ್ಧಿ ಹೊಂದಿರುವುದು.

ಮನುಷ್ಯಪ್ರಾಣಿಯ ಪೂರ್ವರೂಪಿಗಳು ಮರಗಳಮೇಲೆಯೇ ವಾಸಿಸು ತ್ತಿದ್ದಿರಬೇಕು ; ಕಾರಣಾಂತರಗಳಿಂದ ವೃಕ್ಷಾವಾಸ ತಪ್ಪಿ ನೆಲದಮೇಲೆ ತಿರುಗಾಡಲು ಆರಂಭಿಸಿರಬೇಕು ; ಇದಕ್ಕನುಕೂಲಿಸುವಂತೆ ದೇಹರಚನೆಯೂ ಮಾರ್ಪಟ್ಟಿರಬೇಕು. ಆಹಾರ ಸಂಪಾದನೆಗಾಗಿ ಕೈಗಳನ್ನು ಹೆಚ್ಚಾಗಿ ಉಪ ಯೋಗಿಸಬೇಕಾಗಿಬಂದು, ಅದರ ರಚನೆಯೂ ವ್ಯತ್ಯಾಸ ಹೊಂದಿರಬೇಕು. ಕೈಗೆ ಹೆಚ್ಚು ಶಕ್ತಿ ಬಂದಂತೆಲ್ಲ ಆಹಾರ ಸಂಪಾದನೆಗಾಗಿ ಬೇಕಾಗುವ ಆಯುಧಗಳನ್ನು ತಯಾರಿಸುತ್ತ ಬಂದಿರಬೇಕು ; ಈ ಸಂದರ್ಭದಲ್ಲಿ ಮಿದುಳಿನ ಶಕ್ತಿಯೂ ಹೆಚ್ಚುತ್ತ ಹೋಗಿರಬೇಕು. ಈ ಕಾರಣಗಳಿಂದ, ಕೇವಲ ದೇಹಶಕ್ತಿಗಿಂತಲೂ ಮಿದುಳಿನ ಶಕ್ತಿ ಹೆಚ್ಚು ಉಪಯೋಗಕ್ಕೆ ಬಂದು, ತನ್ನ ಶಕ್ತಿಗಿಂತಲೂ ಬಹಳ ಹೆಚ್ಚಾದ ಶಕ್ತಿಯುಳ್ಳ ಮೃಗಗಳನ್ನೂ ಅಧೀನಮಾಡಿಕೊಳ್ಳುವ ಸಾಮರ್ಥ್ಯ ಬಂದಿರಬೇಕು. ಮಿದುಳಿನ ಶಕ್ತಿ ಹೆಚ್ಚಿದಂತೆಲ್ಲ ಮಾತಿನ ಉಪಯೋಗವೂ ಹೆಚ್ಚು ಫಲಕಾರಿ ಯಾಗುತ್ತ ಬಂದಿರಬೇಕು.

ಪ್ರಾಮುಖಿಗಳ ಪೂರ್ವಜರು :—ಸಸ್ತನಿಗಳು ಆಧುನಿಕ ಜೀವಕಲ್ಪದ ಆರಂಭ ದಲ್ಲಿಯೇ ಉದಯಿಸಿ ಬಹುಬೇಗನೆ ವಿಕಸನಹೊಂದಿದುವೆಂದು ಹಿಂದೆಯೇ ತಿಳಿಸಿದೆ.

ಬಹುಮಂದಿ ಶಾಸ್ತ್ರಜ್ಞರ ಅಭಿಪ್ರಾಯದ ಮೇರೆಗೆ, ಮಾಂಸಾಹಾರಿ ಪ್ರಾಣಿಗಳೂ ಪ್ರಾಮುಖಿಗಳೂ ಒಂದೇ ಪೂರ್ವಕುಲದಿಂದ ಉದಯಿಸಿದುವು. ಇದಕ್ಕೆ ನಿದರ್ಶನ ಗಳನ್ನು ತೃತೀಯ ಯುಗದಲ್ಲಿದ್ದ ಕೆಲವು ಪ್ರಾಣಿಗಳ ಅವಶೇಷಗಳಲ್ಲಿ ನೋಡ ಬಹುದು. ಈ ಪೂರ್ವಕುಲವೇ ಪ್ರಾಮುಖಿಗಳ ಎಲ್ಲ ಪ್ರಾಣಿಜಾತಿಗಳಿಗೂ ಆಕರ ವಾಗಿದ್ದಿರಬೇಕು. ಭೂಮಿಯ ದಫ್ತರದಲ್ಲಿ ಈ ಪ್ರಾಮುಖಿಗಳ ಕ್ರಮವಾದ ರಚನಾಭಿವೃದ್ಧಿಯನ್ನು ಸವಿಸ್ತಾರವಾಗಿ ತೃತೀಯ ಯುಗದ ಉದ್ದಕ್ಕೂ ಚತುರ್ಥ ಯುಗದ ಆದಿಭಾಗದಲ್ಲಿಯೂ ಕಾಣಬಹುದು. ಮನುಷ್ಯಪ್ರಾಣಿಯು ಯಾವ ಆದಿ ಪ್ರಾಮುಖಿಯಿಂದ ಹುಟ್ಟಿದುದೆಂಬ ವಿಷಯವಾಗಿ ಶಾಸ್ತ್ರಜ್ಞರಲ್ಲಿ ಇನ್ನೂ ಭಿನ್ನಾಭಿಪ್ರಾಯಗಳಿರುವುವು. ತೃತೀಯ ಯುಗದ ಕೊನೆಯ ಅಂತರಗಳಲ್ಲಿ ಭೂಭಾಗದ ಅನೇಕ ಪ್ರಾಂತಗಳಲ್ಲಿ ನೀರು ಬತ್ತಿಹೋಗಿ, ಮರಗಾಡುಗಳು ಕ್ರಮೇಣ ನಷ್ಟವಾದುವು. ಈ ಕಾರಣದಿಂದ, ವೃಕ್ಷವಾಸಿಗಳಾದ ಪ್ರಾಮುಖಿಗಳು ಭೂವಾಸಿಗ ಳಾಗಬೇಕಾದ ಸಂದರ್ಭವೊದಗಿ, ಕ್ರಮೇಣ ಮನುಷ್ಯ ರೂಪಕ್ಕೆ ತಿರುಗಿರ ಬೇಕೆಂಬುದೇ ಶಾಸ್ತ್ರಜ್ಞರ ಅಭಿಪ್ರಾಯ. ಚತುರ್ಥ ಯುಗವನ್ನು ಮನುಷ್ಯಯುಗ ವೆಂದು ಕರೆಯುತ್ತಾರೆ: ಎಂದರೆ, ಮನುಷ್ಯಪ್ರಾಣಿಯ ಉದಯವಾಗಿ ಈಗ ಸುಮಾರು ಹತ್ತೂಕಾಲು ಲಕ್ಷ ವರ್ಷಗಳಾಗಿರಬೇಕೆಂದು ಊಹಿಸಲಾಗಿದೆ ಈ ಯುಗದ ಆದಿಕಾಲದಲ್ಲಿ ಭೂಮಿಯ ವಾಯುಸ್ಥಿತಿ ಬಹಳ ಬದಲಾವಣೆಗಳನ್ನು ಹೊಂದಿ ಅನೇಕ ಭಾಗಗಳಲ್ಲಿ ಹಿಮರಾಶಿಯ ಚಲನೆ ನಡೆಯುತ್ತಿದ್ದಂತೆ ತೋರು ವುದು. ಮಧ್ಯೆ ಮಧ್ಯೆ ವಾಯುಸ್ಥಿತಿ ವ್ಯತ್ಯಾಸಹೊಂದಿ ಶಾಖ ಹೆಚ್ಚಿ ಹಿಮರಾಶಿ ಮಾಯವಾಗುತ್ತಲೂ, ಮರಳಿ ಶೀತ ಹೆಚ್ಚಿ ಹಿಮರಾಶಿ ಪ್ರತ್ಯಕ್ಷವಾಗುತ್ತಲೂ ಹೋದಂತೆ ತಿಳಿಯಬರುತ್ತದೆ. ಯೂರೋಪಿನಲ್ಲಿ ಈ ಯುಗದಲ್ಲಿ ನಾಲ್ಕು ಪ್ರತ್ಯೇಕವಾದ ಹಿಮರಾಶಿ ಕಾಲಗಳೂ ಮಧ್ಯೆ ಮೂರು ಉಷ್ಣಕಾಲಗಳೂ ಸಂಭವಿಸಿದುವೆಂದು ತೋರುವುದು.

ಈಗ ಮನುಷ್ಯಪ್ರಾಣಿಯ ವಿಕಸನ ಚರಿತ್ರೆಯನ್ನು ನಮಗೆ ತಿಳಿದಿರುವ ಮಟ್ಟಿಗೆ ರಚಿಸಲು ಯತ್ನಿಸೋಣ. ನಮ್ಮ ಆಧಾರಗಳೆಲ್ಲವೂ ಇದುವರೆಗೆ ಅಲ್ಲಲ್ಲಿ ದೊರೆ ತಿರುವ ಅವಶೇಷಗಳಿಂದ ತಿಳಿದುಬಂದಿರುವವುಗಳೇ. ಮನುಷ್ಯನ ತಲೆಬುರುಡೆಗಳೂ ದೇಹದ ಇತರ ಭಾಗಗಳ ಎಲುಬುಗಳೂ ಹಲ್ಲುಗಳೂ ನದೀಪ್ರಾಂತಗಳ ಕಣಿವೆ ಗಳಲ್ಲಿಯೂ ಕೆಲವು ಗುಹೆಗಳಲ್ಲಿಯೂ ದೊರೆಯುವುವು. ತಲೆಬುರುಡೆಗಳಾಗಲಿ ಇತರ ಭಾಗಗಳ ಎಲುಬುಗಳಾಗಲಿ ಹಲ್ಲುಗಳಾಗಲಿ ಎಲ್ಲ ಪ್ರಾಣಿಗಳಲ್ಲಿಯೂ ಒಂದೇ ತೆರನಾಗಿರದೆ ಸ್ವಲ್ಪ ಸ್ವಲ್ಪ ವ್ಯತ್ಯಾಸಗಳಿರುವುದರಿಂದಲೂ, ಒಂದೇ ಪ್ರಾಣಿಯ ಅಸ್ಥಿಗಳಲ್ಲಿ ಯುಗಯುಗಕ್ಕೂ ವ್ಯತ್ಯಾಸಗಳು ಕಾಣಬರುವುದರಿಂದಲೂ ಶಾಸ್ತ್ರಜ್ಞರು ಯಾವುದಾದರೂ ತಲೆಬುರುಡೆಯನ್ನೋ ಇತರ ಅಸ್ಥಿಯನ್ನೋ ಪರೀಕ್ಷಿಸಿ, ಅದು ಇಂತಹ ಪ್ರಾಣಿಯದೆಂದು ಹೇಳಬಲ್ಲರಲ್ಲದೆ, ಆ ಎಲುಬಿನ ಜೊತೆಯಲ್ಲಿ

ಸಿಕ್ಕುವ ಇತರ ಪದಾರ್ಥಗಳಿಂದಲೂ, ಅದು ದೊರೆಯುವ ಸ್ಥಾನದಿಂದಲೂ, ಆ ಎಲುಬು ಪಡೆದಿದ್ದ ಪ್ರಾಣಿ ಯಾವ ಯುಗದಲ್ಲಿದ್ದಿರಬಹುದೆಂಬುದನ್ನೂ ಸು ಸುಮಾರಾಗಿ ಹೇಳಬಲ್ಲರು.

## ಇದುವರೆಗೆ ದೊರೆತಿರುವ ಮನುಷ್ಯಪ್ರಾಣಿಯ ಮುಖ್ಯಾವಶೇಷಗಳು

(೧) ಜಾವಾದ್ವೀಪದ ಕಪಿಮನುಷ್ಯ:—ಜಾವಾ ಮಧ್ಯಪ್ರದೇಶದ ಒಂದು ನದೀ ಸ್ಥಾಪಿತ ಭೂಪ್ರದೇಶದಲ್ಲಿ, ೧೮೯೧ನೆಯ ಇಸವಿಯಲ್ಲಿ ಮನುಷ್ಯಪ್ರಾಣಿಯ ತಲೆ ಬುರುಡೆಯ ಒಂದು ಚಿಪ್ಪೂ ಎರಡು ದವಡೆ ಹಲ್ಲುಗಳೂ ಒಂದು ತೊಡೆಯ ಎಲುಬೂ ದೊರೆತುವು. ಇವುಗಳ ಜೊತೆಯಲ್ಲಿಯೇ ವಂಶನಷ್ಟವಾದ ಕೆಲವು ಸಸ್ತನಿಗಳ ಎಲುಬುಗಳೂ ಸಿಕ್ಕಿದುವು. ಇವುಗಳ ಕಾಲ ಚತುರ್ಥ ಯುಗದ ಆದಿ ಭಾಗವೆಂದು ಶಾಸ್ತ್ರಜ್ಞರು ಊಹಿಸುತ್ತಾರೆ: ಎಂದರೆ, ಈಗ ಸುಮಾರು ಹತ್ತೂಕಾಲು ಲಕ್ಷ ವರ್ಷಗಳ ಹಿಂದೆ. ಮನುಷ್ಯಪ್ರಾಣಿಯ ಈ ಬುರುಡೆಯ ಚಿಪ್ಪನ್ನು ಪರೀಕ್ಷೆಮಾಡು ವುದರಲ್ಲಿ ಇದಕ್ಕೂ ಚಿಂಪಂಜೀ ವಾನರದ ತಲೆಬುರುಡೆಗೂ ಸಾಮ್ಯ ಕಾಣುವುದು. ಮಿದುಳುಪೆಟ್ಟಿಗೆಯ ಒಳ ಅಳತೆ ಸುಮಾರು ೯೦೦ ಘನ ಸೆಂಟಿಮೀಟರುಗಳು (ಒಂದು ಅಂಗುಲ=ಸುಮಾರು ಎರಡೂವರೆ ಸೆಂಟಿಮೀಟರುಗಳು) ಇದ್ದಿರಬಹುದೆಂದು ಅಂದಾಜು ಮಾಡಲಾಗಿದೆ. ಗಂಡು ಗೊರಿಲಾ ವಾನರದ್ದು ೬೦೦ಕ್ಕೆ ಮೀರಿರು ವುದಿಲ್ಲ. ಬುದ್ಧಿಶಕ್ತಿಯಲ್ಲಿ ಆಧುನಿಕ ಮನುಷ್ಯ ವಂಶಗಳಲ್ಲಿ ಕೇವಲ ಕೀಳ್ತರದವ ರಾದ ಆಸ್ಟ್ರೇಲಿಯದ ನಾಡಿಗರ ಮಿದುಳಳತೆ ಸುಮಾರು ೧,೩೦೦. ಬುದ್ಧಿಶಕ್ತಿ ಯಲ್ಲಿ ಮೇಲ್ತರಗತಿಯ ವಂಶದವರದು ಸರಾಸರಿ ೧,೫೦೦; ಇದರ ಮಹತ್ತಮ ಸಂಖ್ಯೆ ೨,೦೦೦. ಹಲ್ಲುಗಳ ರಚನೆ ಆಧುನಿಕ ಮನುಷ್ಯನದವಕ್ಕೂ ವಾನರ ದವಕ್ಕೂ ಮಧ್ಯಸ್ಥವಾಗಿದೆ. ತೊಡೆಯೆಲುಬಿನ ಅಳತೆಯನ್ನು ನೋಡಿದರೆ ಈ ಮನುಷ್ಯನ ಎತ್ತರ ಸುಮಾರು ೫ ಅಡಿ ೭ ಅಂಗುಲವಿದ್ದಿರಬೇಕೆಂದೂ, ಇವನು ನೆಟ್ಟಗೆ ನಡೆಯುತ್ತಿದ್ದನೆಂದೂ ತಿಳಿಯಬರುವುದು. ಈ ಮನುಷ್ಯನು ನಮಗೆ ನೇರವಾದ ಪೂರ್ವಜನಾಗಿರಲಾರನೆಂದೂ, ಪಕ್ಕದ ಶಾಖೆಯವನಾಗಿದ್ದಿರಬೇಕೆಂದೂ, ಇವನು ಮರಗಾಡುಗಳಲ್ಲಿ ವಾಸಿಸುತ್ತಿದ್ದವನೆಂದೂ, ಅಲ್ಲಿ ಜೀವನವು ಸುಲಭ ವಾಗಿದ್ದುದರಿಂದಲೂ ಇತರರ ಕಾಟವಿಲ್ಲದ್ದರಿಂದಲೂ ಹೆಚ್ಚು ಕಷ್ಟಪಡಬೇಕಾದ ಸಂದರ್ಭಗಳು ಒದಗದೆ, ವಿಕಸನಕ್ಕೆ ಅವಕಾಶ ದೊರೆಯದೆ ಹೋಗಿ ಪೂರ್ವ ರೀತಿ ಯಲ್ಲೇ ಇದ್ದಿರಬೇಕೆಂದೂ ಊಹಿಸಲಾಗಿದೆ.

(೨) ಪಿಕಿಂಗ್ ಮನುಷ್ಯ:—೧೯೨೯ನೆಯ ಇಸವಿಯಲ್ಲಿ ಚೀನದ ಪಿಕಿಂಗ್ ಪಟ್ಟಣದ ಬಳಿಯ ಒಂದು ಗವಿಯಲ್ಲಿ ಹತ್ತು ತಲೆಬುರುಡೆಗಳ ಭಾಗಗಳೂ ಹಲ್ಲು ಗಳೂ ಸಂಪೂರ್ಣವಾಗಿದ್ದ ಒಂದು ತಲೆಬುರುಡೆಯೂ ಇವುಗಳೊಂದಿಗೆ ಐವತ್ತು ಸಸ್ತನಿಜಾತಿಗಳ ಎಲುಬುಗಳೂ ಇತರ ಕಶೇರುಕ ಪ್ರಾಣಿಗಳ ಅವಶೇಷಗಳೂ

ದೊರೆತುವು. ಇಷ್ಟು ನಿದರ್ಶನಗಳು ಒಟ್ಟಿಗೆ ದೊರೆತುದರಿಂದ ಈ ಮನುಷ್ಯನು ಯಾವ ಕಾಲದಲ್ಲಿ ಜೀವಿಸಿದ್ದನೆಂದು ಹೇಳಲು ಕಷ್ಟವಿಲ್ಲ. ಇವನು ಹತ್ತು ಲಕ್ಷ ವರ್ಷದ ಹಿಂದಿನವನು. ಈ ಮನುಷ್ಯನು ಹಿಂದೆ ಹೇಳಿದ ರೂಪಿನವನಿಗಿಂತಲೂ ಹೆಚ್ಚು ಮುಂದುವರಿದಿರುವನೆಂದು ಸಾಧಿಸಲಾಗಿದೆ. ಇವನ ಮಿದುಳಳತೆ ೧,೦೦೦ ಘನ ಸೆಂಟಿಮಿಾಟರುಗಳು.

(೩) ಪಿಲ್ಟ್‌ಡೌನ್ ಮನುಷ್ಯ :— ೧೯೧೧ನೆಯ ಇಸವಿಯಲ್ಲಿ ಇಂಗ್ಲೆಂಡಿನ ಸಸೆಕ್ಸ್ ಪ್ರಾಂತದ ಪಿಲ್ಟ್‌ಡೌನ್ ಎಂಬ ಪ್ರದೇಶದಲ್ಲಿ, ಒಡೆದುಹೋದ ಒಂದು ತಲೆಬುರುಡೆ ದೊರೆಯಿತು. ಇದು ತೃತೀಯ ಯುಗದ ಕೊನೆಯ ಅಂತರದ ಅಂತ್ಯಭಾಗದ್ದೆಂದು ಊಹಿಸಲಾಗಿದೆ. ಮನುಷ್ಯನ ತಲೆಬುರುಡೆಯ ಎಲುಬಿನ ದಪ್ಪ ಆದಿಯಿಂದಲೂ ಕ್ರಮೇಣ ಕಡಮೆಯಾಗುತ್ತ ಬಂದಿರುವುದು. ಪಿಲ್ಟ್‌ಡೌನ್ ಮನುಷ್ಯನದು ೧೧–೧೨ ಮಿಲಿಮಿಾಟರುಗಳ (ಎಂದರೆ ಸುಮಾರು ಅರ್ಧಂಗುಲ) ದಪ್ಪವಿರುವುದು. ಈಗ ಜೀವಿಸಿರುವ ಕೀಳ್ತರದ ಮನುಷ್ಯವಂಶದವನದು ೬ರಿಂದ ೮ ಮಿಲಿಮಿಾಟರುಗಳು; ಕೇವಲ ಮೇಲ್ತರದವರದು ೫–೬ ಮಿಲಿಮಿಾಟರುಗಳು ಮಾತ್ರ. ತಲೆಬುರುಡೆಯ ರಚನೆಯ ವ್ಯತ್ಯಾಸಗಳೂ (ಎಂದರೆ, ಹಣೆಯ ಎತ್ತರ, ಕಣ್ಣುಗೂಡಿನ ಎಲುಬುಗಳ ಚೌಚು, ಗಲ್ಲ) ಇತರ ಕುರುಹುಗಳೂ ಮನುಷ್ಯಪ್ರಾಣಿಯ ಕಾಲವನ್ನು ಗೊತ್ತುಮಾಡಲು ಸಹಾಯಕವಾಗುವುವು. ಪಿಲ್ಟ್‌ಡೌನ್ ಮನುಷ್ಯನಿಗೆ ಗಲ್ಲವೇ ಇಲ್ಲ; ಈ ವಿಷಯದಲ್ಲಿ ಇವನು ಚಿಂಪಂಜಿಯನ್ನು ಹೋಲುವನು. ಆದರೆ ಹಲ್ಲುಗಳು ಮನುಷ್ಯ ಪ್ರಾಣಿಯವು; ಮಿದುಳಿನ ಅಳತೆ ೧,೦೦೦ ದಿಂದ ೧,೩೦೦.

(೪) ಹೀಡಲ್‌ಬರ್ಗ್ ಮನುಷ್ಯ :— ೧೯೦೭ರಲ್ಲಿ ದಕ್ಷಿಣ ಜರ್ಮನಿಯ ಹೀಡಲ್‌ಬರ್ಗ್ ಪ್ರಾಂತದಲ್ಲಿ ಮನುಷ್ಯಪ್ರಾಣಿಯ ಒಂದು ತಳದವಡೆಯ ಎಲುಬು ದೊರೆಯಿತು. ಇದು ನದೀಸ್ಥಾಪಿತ ಭೂಮಿಯಲ್ಲಿ ನೆಲಮಟ್ಟದಿಂದ ೭೯ ಅಡಿಯ ತಳಗಡೆ ಸಿಕ್ಕಿತು. ಈ ಎಲುಬು ಬಹಳ ದೊಡ್ಡದಾಗಿಯೂ ಭಾರವಾಗಿಯೂ ಇದ್ದಿತು. ಇದರಲ್ಲಿ ಆಧುನಿಕ ಮನುಷ್ಯನ ಗಲ್ಲದ ಭಾಗವಿಲ್ಲ; ಹಲ್ಲುಗಳೆಲ್ಲವೂ ಮನುಷ್ಯನವೇ; ಆದರೂ ಕೇವಲ ಆದಿ ರಚನೆಯವು. ಈ ಮನುಷ್ಯನು ನರವಾನರಗಳಿಗೆ ಸಮಿಾಪ ಸಂಬಂಧಿ.

(೫) ನೀಯಾಂಡರ್ತಾಲ್ ಮನುಷ್ಯ :— ಯೂರೋಪಿನ ಸುಮಾರು ೨೦ ಬೇರೆ ಬೇರೆ ಪ್ರಾಂತಗಳಲ್ಲಿರುವ ಗವಿಗಳಲ್ಲಿ ಈ ಮನುಷ್ಯಪ್ರಾಣಿಯ ತಲೆಬುರುಡೆಗಳು ದೊರೆತಿರುವುವು. ೧೮೫೬ನೆಯ ಇಸವಿಯಲ್ಲಿ ಜರ್ಮನಿಯ 'ನೀಯಾಂಡರ್ತಾಲ್' ಎಂಬ ಕಣಿವೆಯಲ್ಲಿ ಮೊದಲನೆಯದು ದೊರೆಯಿತು. ಈಚೆಗೆ, ಯೂರೋಪಿನ ಇತರ ಪ್ರಾಂತಗಳಲ್ಲೂ ಅನೇಕ ಅಸ್ಥಿಪಂಜರಗಳೂ ಸಂಪೂರ್ಣವಾದ ತಲೆಬುರುಡೆಗಳೂ ದೊರೆತಿವೆ. ಈ ಮನುಷ್ಯನು ಮೂರನೆಯ ಮತ್ತು ನಾಲ್ಕನೆಯ ಹಿಮಾನೀ ಕಾಲಗಳ ಮಧ್ಯೆ ಯೂರೋಪಿನಲ್ಲಿ ವಾಸಿಸುತ್ತಿದ್ದಂತೆಯೂ, ಅರ್ಧ ಲಕ್ಷ ವರ್ಷಗಳಿಗೆ

ಕಡಮೆಯಿಲ್ಲದ ಕಾಲ ಭೂವಾಸಿಯಾಗಿದ್ದಿರಬೇಕೆಂದೂ ಊಹಿಸಲಾಗಿದೆ. ಇವನ ಮಿದುಳಿನ ಅಳತೆ ೧,೫೦೦. ಚಳಿ ತಡೆಯಲಾರದೆ ಇವನು ಗುಹಾವಾಸಿಯಾಗಿದ್ದಿರಬೇಕು; ಮೃಗಗಳ ಚರ್ಮವನ್ನು ಒರಟು ಒರಟಾಗಿ ನಯಮಾಡಿ ಹೊದೆದುಕೊಳ್ಳುತ್ತಿದ್ದಂತೆ ತೋರುತ್ತದೆ; ಶಿಲಾಯುಧಗಳನ್ನು ಹೆಚ್ಚಾಗಿ ಉಪಯೋಗಿಸುತ್ತ, ಕಾಡುಕುದುರೆ, ದನ, ಜಿಂಕೆ, ಕರಡಿ ಮೊದಲಾದ ಮೃಗಗಳನ್ನು ಬೇಟೆಯಾಡುತ್ತಿದ್ದನು. ಇವನು ಬೆಂಕಿಯನ್ನುಪಯೋಗಿಸುತ್ತಿದ್ದಂತೆ ತೋರುವುದು; ಆದರೆ, ಇವನ ದವಡೆಯೆಲುಬುಗಳು ನಮ್ಮಂತೆ ಇಲ್ಲದುದರಿಂದ ಮಾತನಾಡಲು ತಕ್ಕಷ್ಟು ಶಕ್ತಿಯುಳ್ಳವನಾಗಿದ್ದಂತೆ ತೋರುವುದಿಲ್ಲ. ಇವನ ಮೈಯಲ್ಲಿ ಉದ್ದವಾದ ಕೂದಲಿದ್ದು, ನೋಡುವುದಕ್ಕೆ ಇವನು ಬಹಳ ಭಯಂಕರಾಕಾರನಾಗಿದ್ದಿರಬೇಕು. ಈ ಮನುಷ್ಯ ವಂಶವು ಪೂರ್ಣವಾಗಿ ನಷ್ಟವಾಯಿತೊ ಮುಂದಕ್ಕೆ ವಿಕಸನಹೊಂದಿತೊ ಹೇಳಲಾಗುವುದಿಲ್ಲ. ಈ ಮನುಷ್ಯನ ಕಾಲ ಮುಗಿದಮೇಲೆ, ಈಗ ಸುಮಾರು ೩೫ ಸಾವಿರ ವರ್ಷಗಳ ಹಿಂದೆ, ಇವನಿಗಿಂತಲೂ ಹೆಚ್ಚು ಬುದ್ಧಿಶಕ್ತಿಯುಳ್ಳವನೂ ಮಾತನಾಡುವ ಶಕ್ತಿಯುಳ್ಳವನೂ ಆದ ಮನುಷ್ಯನು ಬಂದಂತೆ ತಿಳಿಯಬರುವುದು.

(೬) ಕ್ರೋಮ್ಯಾಗ್ನಾನ್ ಮನುಷ್ಯ :— ಮನುಷ್ಯರೂಪವು ವಿಕಸನ ಹೊಂದುತ್ತ ಬಂದು ಆಧುನಿಕ ರೂಪವನ್ನು ತಾಳಿರಬೇಕು. ಆಧುನಿಕ ಆದಿರೂಪದವರು ಏಷ್ಯಾ ಖಂಡದಲ್ಲಿ ಹುಟ್ಟಿ ಬೆಳೆದಂತೆ ತೋರುತ್ತದೆ. ಇವರು ಯೂರೋಪ್ ಮೊದಲಾದ ಪ್ರಾಂತಗಳಿಗೆ ವಲಸೆ ಹೋಗಿ, ಅಲ್ಲಿದ್ದ ನೀಯಾಂಡರ್ತಾಲರನ್ನು ಉರುಳಿಸಿಬಿಟ್ಟಿರಬೇಕು. ಇವರ ಪೂರ್ಣ ಅಸ್ಥಿಪಂಜರಗಳು ಯೂರೋಪಿನ ಅನೇಕ ಭಾಗಗಳಲ್ಲಿ, ಸಾಮಾನ್ಯವಾಗಿ ಗವಿಗಳಲ್ಲಿ, ದೊರೆಯುವುವು. ಮೊದಲನೆಯದು ಫ್ರಾನ್ಸ್ ದೇಶದ 'ಕ್ರೋಮ್ಯಾಗ್ನಾನ್' ಎಂಬ ಪ್ರಾಂತದಲ್ಲಿ ದೊರೆಯಿತು. ಈ ಮನುಷ್ಯನು ದೇಹರಚನೆಯಲ್ಲಿ ಬಹಳ ಮುಂದುವರಿದು ಉತ್ತಮ ತರಗತಿಗೆ ಸೇರಿದವನು. ಗಂಡಸು ೬ ಅಡಿಗೆ ಮೀರಿದ ಎತ್ತರವುಳ್ಳವನಾಗಿಯೂ ದೊಡ್ಡ ತಲೆಬುರುಡೆಯುಳ್ಳವನಾಗಿಯೂ ವಿಶಾಲಮುಖಿಯಾಗಿಯೂ ಕಣ್ಣುಗೂಡಿನ ಎಲುಬುಗಳು ಚಾಚಿಕೊಂಡಿರದೆಯೂ ಇದ್ದನು. ಕೆಳ ದವಡೆ ಭಾರವಾಗಿದ್ದರೂ ಗಲ್ಲವಿದ್ದಿತು; ಮಿದುಳು ಆಧುನಿಕ ಮನುಷ್ಯನಂತಹದೇ; ಆದರೆ ವಿಸ್ತಾರದಲ್ಲಿ ಈಗಿನವರದಕ್ಕಿಂತಲೂ ದೊಡ್ಡದು. ಕೆಲವು ಮಾದರಿಗಳಲ್ಲಿ ಮಿದುಳಿನ ಅಳತೆ ಸುಮಾರು ೧,೮೦೦. ಈ ಮನುಷ್ಯನು ಗುಹಾವಾಸಿ, ಬೇಟೆಗಾರ, ಬುದ್ಧಿಶಕ್ತಿಯಲ್ಲಿ ನೀಯಾಂಡರ್ತಾಲನಿಗಿಂತಲೂ ಬಹಳ ಮುಂದುವರಿದವನು, ಕಲಾಪ್ರೇಮಿ. ಇವನು ವಾಸಿಸುತ್ತಿದ್ದ ಗುಹೆಯ ಗೋಡೆಗಳ ಮೇಲೆ ಕೆತ್ತನೆಯ ಮತ್ತು ಬಣ್ಣದ ಚಿತ್ರಗಳು ರಚಿಸಿರುವುದು ಕಾಣಬರುವುದು. ಈ ಮನುಷ್ಯನು ಯೂರೋಪಿನಲ್ಲಿ ಹತ್ತು ಸಾವಿರ ವರ್ಷಗಳ ಮೇಲೆ ವಾಸಿಸುತ್ತಿದ್ದಿರಬೇಕೆಂದು ಊಹೆ. ಕಡೆಗೆ, ಈ ಕುಲವೂ ಕ್ರಮೇಣ ನಷ್ಟವಾಗಿಹೋಯಿತು. ಇದಾದಮೇಲೆ, ಬುದ್ಧಿಶಕ್ತಿಯಲ್ಲಿ ಇವನನ್ನು ಮೀರಿಸಿದ

ಕುಲದವರು ಏಷ್ಯದಿಂದ ಹೊರಟು ಯೂರೋಪ್ ಮೊದಲಾದ ಪ್ರಾಂತಗಳನ್ನು ಆಕ್ರಮಿಸಿಕೊಂಡರು. ಇವರ ವಂಶಜರೇ ಈಗಿರುವ ಆಧುನಿಕ ಪ್ರಮುಖ ವಂಶಗಳವರು. ಕ್ರೋಮ್ಯಾಗ್ನಾನ್ ಜನರ ಕಾಲದಿಂದೀಚೆಗೆ ಮನುಷ್ಯದೇಹದ ರಚನೆಯಲ್ಲಿ ವ್ಯತ್ಯಾಸಗಳೇನೂ ಕಾಣಬರುವುದಿಲ್ಲ; ಇರಬಹುದಾದ ವ್ಯತ್ಯಾಸಗಳೆಲ್ಲವೂ ಬುದ್ಧಿಶಕ್ತಿಯಲ್ಲಿಯೇ. ದೇಹರಚನೆಯ ಮಾರ್ಪಾಡುಗಳು ನಿಂತುಹೋದಂತೆ ಕಾಣುವುದು. ಇಷ್ಟೇ ಅಲ್ಲ; ರಚನೆಯ ಮಾರ್ಪಾಡುಗಳು ಮುಂದುವರಿಯುವುದಕ್ಕೆ ಬದಲಾಗಿ ಹಿಂದು ಹಿಂದಕ್ಕೆ ಸರಿಯುತ್ತಿರುವಂತೆ ತೋರುವುದು; ಕೂದಲೂ ಹಲ್ಲೂ ಹ್ರಸ್ವವಾಗುತ್ತಿರುವುವು; ಕೈಚಳಕ ಕಡಮೆಯಾಗುತ್ತಿರುವುದು; ಕಣ್ಣು, ಕಿವಿ, ಮೂಗು—ಇವು ಮಾಂದ್ಯಹೊಂದುತ್ತಿರುವುವು, ಮುಖ್ಯವಾಗಿ, ಇತರ ಪ್ರಾಣಿಗಳನ್ನು ಬಲಿಹಾಕುವ ದೇಹಶಕ್ತಿಯುಳ್ಳವನಾಗಿ ತಾನೇತಾನಾಗಿರಬೇಕೆಂಬ ಆಶೆ ದಿನೇ ದಿನೇ ಕ್ಷಯಿಸುತ್ತಿರುವುದು. ಆದಕಾರಣ, ಮನುಷ್ಯಪ್ರಾಣಿಯ ವಿಕಸನವು ಮುಂದಕ್ಕೆ ಬುದ್ಧಿಶಕ್ತಿಯ ಮಾರ್ಗವಾಗಿ ಹರಿಯುವಂತೆ ತೋರುವುದೇ ಹೊರತು ಕಾಯಶಕ್ತಿಯ ಮಾರ್ಗವಾಗಿ ಹೋಗುವಂತೆ ತೋರುವುದಿಲ್ಲ.

—ಬೆಳ್ಳಾವೆ ವೆಂಕಟನಾರಾಯಣಪ್ಪ

# ಗೀತೆಯೂ ರಾಷ್ಟ್ರೀಯತ್ವವೂ

ಮಣಿಗಳೊಳಗಿಹ ಸೂತ್ರದಂದದಿ। ಪ್ರಣವಪಾದ್ಯನು
ಚೇತನಾಚೇ। ತನ ಜಗತ್ತಿನೊಳನುದಿನದಲಾಡುವನು ಸುಖಪೂರ್ಣ

— ಹರಿಕಥಾಮೃತಸಾರ

ರಾಷ್ಟ್ರೀಯತ್ವವೆಂಬುದು ಅರ್ವಾಚೀನ ಕಲ್ಪನೆಗಳಲ್ಲಿ ಅತ್ಯಂತ ಪ್ರಬಲವಾದ ಕಲ್ಪನೆ. ಇದು ಈಗ ಹಿಂದೀ ಜನರ ಮನಗಳನ್ನು ಬಲವಾಗಿ ಆಕರ್ಷಿಸುತ್ತಿದೆ. ಇಂಥ ಪ್ರಾಮುಖ್ಯವಾದ ಕಲ್ಪನೆಯ ವಿಷಯವಾಗಿ ಗೀತೆಯ ಅಭಿಪ್ರಾಯವೇನಿರುತ್ತದೆಂಬುದನ್ನು ತಿಳಿದುಕೊಳ್ಳುವ ಕುತೂಹಲವು ವಾಚಕರಿಗೆ ಉಂಟಾಗಿರುವದು ಸಹಜವಿದೆ. ಆದಕಾರಣ ನಾವು ಈ ಪ್ರಕರಣದಲ್ಲಿ, ಗೀತೆಯ ಆಧಾರದಿಂದ ರಾಷ್ಟ್ರೀಯತ್ವದ ಬಗ್ಗೆ ಇರುವ ನಮ್ಮ ವಿಚಾರಗಳನ್ನು ವಾಚಕರ ಮುಂದೆ ಇಡುವೆವು.

ರಾಷ್ಟ್ರೀಯತ್ವದ ಈಗಿನ ಕಲ್ಪನೆಯ ವಿಷಯವಾಗಿ, ಗೀತೆಯಲ್ಲಿ ಚಕಾರ ಶಬ್ದವಿಲ್ಲವೆಂಬುದನ್ನು ಮೊದಲಿಗೇ ಹೇಳಿಬಿಡುತ್ತೇವೆ. ಅಂದ ಬಳಿಕ ನೀವು ಆ

ವಿಷಯವನ್ನು ಕುರಿತು ಹೇಗೆ ಹೇಳುವಿರಿ ಎಂದು ಕೇಳಬಹುದು. ಮತ್ತು ಈಗಿನ ಕಾಲದ ಹೊಸ ವಿಚಾರಗಳನ್ನು ಹಿಂದಿನ ಕಾಲದ ಗ್ರಂಥಗಳಲ್ಲಿ ಹುಡುಕಹೋಗುವುದು ತೀರ ಹಾಸ್ಯಾಸ್ಪದವಾದುದೆಂದು ಅವರು ಅನ್ನಬಹುದು. ಪ್ರತಿಯೊಂದನ್ನೂ ವೇದಗಳಲ್ಲಿ ಹುಡುಕಿ ತೆಗೆಯುವ, ಆರ್ಯಸಮಾಜದವರ ಪ್ರಯತ್ನದಂತೆ ಇದು ಕೃತ್ರಿಮ ಪ್ರಯತ್ನವೆಂದು ಮೊದಲಿಗೆ ಭಾವನೆಯಾಗುವುದು ಸಹಜವಿದೆ. ಆದರೆ ಈ ಪ್ರಕರಣವನ್ನು ಪೂರಾ ಓದಿದಮೇಲೆ ಅವರ ಅಭಿಪ್ರಾಯವು ಬಲುಮಟ್ಟಿಗೆ ಬದಲಾಗಬಹುದೆಂದು ನಮಗೆ ಆಶೆಯಿದೆ.

ಗೀತೆಯು ಸಾರ್ವಕಾಲಿಕ, ಸಾರ್ವದೇಶಿಕ, ಸಾರ್ವಜನಿಕ ಗ್ರಂಥವು. ಅದು ಇಡೀ ಜಗತ್ತು ಒಂದು ಆಗಬೇಕು ಎಂಬ ಭಾವನೆಯಿಂದ ಹೊರಟಿರುವುದು. ಇಂಥ ದೇಶಕಾಲಾತೀತವಾದ ಗ್ರಂಥವು ಕೇವಲ ನಿತ್ಯತತ್ವಗಳನ್ನು ಮಾತ್ರವೇ ಹೇಳುವುದು ಸ್ವಾಭಾವಿಕವು. ಆದರೆ, ಗೀತೆಯು ನಿತ್ಯ ತತ್ವಗಳನ್ನು ನಿತ್ಯವ್ಯವಹಾರಕ್ಕೆ ಹೇಗೆ ಹಚ್ಚಬೇಕೆಂಬುದನ್ನೂ ಹೇಳಿರುತ್ತದೆ. ಆದಕಾರಣವೇ, ಅದರೊಳಗಿನ ಕೆಲವು ವಿಶ್ವವ್ಯಾಪಕ ತತ್ವಗಳು, ರಾಷ್ಟ್ರೀಯತ್ವದ ಕಲ್ಪನೆಯು ನಿಜವಾಗಿ ಹೇಗಿರಬೇಕೆಂಬುದನ್ನು ತಿಳಿದುಕೊಳ್ಳುವುದಕ್ಕೆ ಸಹಾಯವಾಗಬಹುದೆಂದು ನಮಗೆ ವಿಶ್ವಾಸವುಂಟು. ಗೀತೆಯ ಭಾಷೆಯಲ್ಲಿ ಹೇಳುವುದಾದಲ್ಲಿ, ಗೀತೆಯು ಸಮುದ್ರವಿದ್ದಂತೆ. ಯಾರಿಗೆ ಎಷ್ಟು ನೀರು ಬೇಕೋ ಅಷ್ಟು ನೀರನ್ನು ಅವರು ತುಂಬಿಕೊಳ್ಳಬಹುದು. ಒಮ್ಮೆ ಗೀತೆಯ ತತ್ವಗಳನ್ನು ಚೆನ್ನಾಗಿ ಆಕಲನ ಮಾಡಿಕೊಂಡರೆ ತೀರಿತು. ಆ ತತ್ವಗಳನ್ನು ಆಯಾ ಪ್ರಸಂಗಗಳಿಗೆ, ಆಯಾ ಕಾಲಗಳಲ್ಲಿ ಆಯಾ ದೇಶಮಾನಗಳಿಗೆ ತಕ್ಕಂತೆ ಅನ್ವಯಿಸಿಕೊಳ್ಳುವುದಕ್ಕೆ ವಿಶೇಷ ಶ್ರಮಬೀಳುವುದಿಲ್ಲ. ಹೀಗೆ ಅನ್ವಯಿಸಿಕೊಳ್ಳುವುದರಿಂದ ಈಗಿನ ಕಾಲದ ರಾಷ್ಟ್ರೀಯತ್ವದ ಕಲ್ಪನೆಯಲ್ಲಿಯ ಗುಣದೋಷಗಳು ವಾಚಕರ ಲಕ್ಷಕ್ಕೆ ಬರಲು ಅನುಕೂಲವಾಗುತ್ತದೆ.

ರಾಷ್ಟ್ರೀಯತ್ವವೆಂದರೇನು ? ಯಾವುದೊಂದು ಭೂಭಾಗದಲ್ಲಿ ವಾಸಿಸುವ ಜನರ ಗುಂಪುಗಳಲ್ಲಿ ಆ ಭೂಭಾಗದ ಬಗ್ಗೆ ಸಂಪೂರ್ಣ ಅಭಿಮಾನವಿರುವುದು ; ಅದರೊಡನೆ ಅಂತಃಕರಣದಲ್ಲಿ ತಾದಾತ್ಮ್ಯವನ್ನು ಹೊಂದುವುದು. ಎಲ್ಲಿಯವರೆಗೆ, ಜನರು ತಂಡತಂಡವಾಗಿ ಅಲೆದಾಡುತ್ತಿದ್ದರೋ ಅಲ್ಲಿಯವರೆಗೆ ರಾಷ್ಟ್ರೀಯತ್ವದ ವಿಚಾರಕ್ಕೆ ಅವಕಾಶವಾಗಿರಲಿಲ್ಲ. ಜ್ಯೂಜನಾಂಗವು ಹೀಗೆ ರಾಷ್ಟ್ರವಿಲ್ಲದೆ ಅಲೆದಾಡುವ ಜನಾಂಗವು. ಇಂದು ಅವರ ಸ್ಥಿತಿ ಏನಾಗಿದೆ ನೋಡಿರಿ! ಅವರಿಗೆ ಕಾಲೂರಿ ನಿಲ್ಲಲಿಕ್ಕೆ ಎಲ್ಲಿಯೂ ಸ್ಥಳ ದೊರೆಯದಾಗಿದೆ. ಈ ಸ್ಥಿತಿಯು ಪ್ರಾಪ್ತವಾಯಿತೆಂದರೆ, ಆ ಜನಾಂಗದ ಅಭಿವೃದ್ಧಿಯು ಎಲ್ಲ ರೀತಿಯಿಂದಲೂ ಕುಂಠಿತವಾಗುತ್ತದೆ. ಆದುದರಿಂದ, ಪ್ರತಿಯೊಂದು ಜನಾಂಗಕ್ಕೆ ತನ್ನದೆಂಬುದೊಂದು ರಾಷ್ಟ್ರವು ಬೇಕು. ರಾಷ್ಟ್ರವು ಜನಾಂಗದ ದೇಹವು. ವಿಶ್ವವು

ಪರಮಾತ್ಮನ ದೇಹವು. ಹಿಂದುಸ್ತಾನವು ಏಕರಾಷ್ಟ್ರವೆಂಬ ಭಾವನೆಯು ನಮ್ಮ ಜನರಲ್ಲಿ ಎಂದಿನಿಂದಲೂ ಬೇರೂರಿದೆ. ಅದನ್ನು ಈಗಿನವರು ಹೊಸದಾಗಿ ಹೇಳಿಕೊಡಲಿಕ್ಕೆಬೇಡ. ವೇದಗಳಲ್ಲಿ ರಾಷ್ಟ್ರಕಲ್ಪನೆಯ ಬೀಜಗಳಿವೆ. ಉದಾ: ಅಂಭ್ರಣೀ ಸೂಕ್ತದಲ್ಲಿ "ಅಹಂ ರಾಷ್ಟ್ರೀಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ ಯಜ್ಞಿಯಾನಾಂ" ಎಂದು ಲಕ್ಷ್ಮಿದೇವಿಯು ಹೇಳುತ್ತಿರುವಳು. ಈ ಸಂಬಂಧದ ಮಂತ್ರಗಳನ್ನೆಲ್ಲ ಸಂಶೋಧಕ ದೃಷ್ಟಿಯಿಂದ ಓದಿದರೆ, ನಮ್ಮ ಜನರಲ್ಲಿ ರಾಷ್ಟ್ರೀಯತ್ವದ ಭಾವನೆಯ ಉಗಮವು ಎಂದಿಗೆ ಆಯಿತೆಂಬುದು ಗೊತ್ತಾಗುವುದಲ್ಲದೆ, ನಮ್ಮ ಮೂಲ ಸ್ಥಾನವು ಯಾವುದು ಮತ್ತು ವೇದಗಳ ಕಾಲವಾವುದು ಇವೇ ಮುಂತಾದ ವಿಷಯಗಳನ್ನೂ ಅದರಿಂದ ನಿರ್ಣಯಿಸಲಿಕ್ಕೆ ಸಹಾಯವಾಗಬಹುದು. ಇರಲಿ. ಅದು ಪ್ರಕೃತವಿಷಯವಲ್ಲ. ರಾಷ್ಟ್ರೀಯತ್ವವು ಅಂದರೆ ಹಿಂದುಸ್ಥಾನವು ಒಂದು ಎಂಬ ಕಲ್ಪನೆಯು ನಮ್ಮ ಜನರಲ್ಲಿ ಚೆನ್ನಾಗಿಯೇ ಹುಟ್ಟಿತೆಂಬುದಕ್ಕೆ ಅನೇಕ ಆಧಾರಗಳಿವೆ. ಆದರೆ, ಅದು ಧಾರ್ಮಿಕ ಕ್ಷೇತ್ರದಲ್ಲಿ ಮಾತ್ರ ಪರಿಪಕ್ವತೆಯನ್ನು ಹೊಂದಿತ್ತಲ್ಲದೆ, ಮಿಕ್ಕ ಕ್ಷೇತ್ರಗಳಲ್ಲಿ ಅದು ಪರಿಪಕ್ವವಾಗಿರಲಿಲ್ಲ.

'ನನ್ನದು' ಎಂಬ ಕಲ್ಪನೆಯೇ ರಾಷ್ಟ್ರೀಯತ್ವದ ಬೀಜವು. ಇದಕ್ಕೆ ವೇದಾಂತದಲ್ಲಿ ಅಹಂಕಾರವೆನ್ನುತ್ತಾರೆ. ಅಹಂಕಾರವೆಂಬ ಶಬ್ದಕ್ಕೆ ರೂಢಿಯಲ್ಲಿ ಕೆಟ್ಟ ಅರ್ಥವು ಬಂದಿರುವುದರಿಂದ ಆ ಶಬ್ದವನ್ನು ನಾವು ಬಿಟ್ಟುಕೊಟ್ಟು ಅಹಂಭಾವ ಅಹಂಪ್ರತೀತಿ ಮುಂತಾದ ಶಬ್ದಗಳನ್ನು ಉಪಯೋಗಿಸಬೇಕು. ಗೀತೆಯಲ್ಲಿ ಅಹಂಕಾರವು ನಿಂದಿಸಲ್ಪಟ್ಟಿರುವುದು. ಮಾಡುವವನು ತಾನಲ್ಲವೆಂಬ ಭಾವನೆಯಿರಬೇಕಲ್ಲದೆ, ಅಹಂಕಾರ ಭಾವನೆ ಅಂದರೆ ಮಾಡುವವನು ತಾನು ಎಂಬ ಭಾವನೆ ಇರಬಾರದೆಂದು ಗೀತೆಯು ಹೇಳುತ್ತದೆ. ಅಂದಬಳಿಕ, ಗೀತೆಯು ರಾಷ್ಟ್ರೀಯತ್ವಕ್ಕೆ ವಿರುದ್ಧವಾದ ಕಲ್ಪನೆಯಾಗಲಿಲ್ಲವೇ ಎಂದು ಕೇಳಬಹುದು. ನಿಜವಾಗಿ, ಗೀತೆಯು ರಾಷ್ಟ್ರೀಯತ್ವಕ್ಕೆ ವಿರುದ್ಧವಾಗಿರುವುದಿಲ್ಲ. ಅದು ಯಾವ ಬಗೆಯ ಅಹಂ-ಭಾವಕ್ಕೂ ವಿರುದ್ಧವಾಗಿರುವುದಿಲ್ಲ. ಅದು ಅಹಂವೆಂಬುದನ್ನು ಹಿಗ್ಗಿಸಿ ಹಿಗ್ಗಿಸಿ ವಿಶ್ವವ್ಯಾಪಿಯಾಗಿ ಮಾಡಲು ಹೇಳುತ್ತದೆ. ಗೀತೆಯನ್ನು ಸೂಕ್ಷ್ಮವಾಗಿ ಓದಿದರೆ, ನಾವು ಹೇಳಿದುದರ ಮನವರಿಕೆಯಾಗದಿರದು. ಅಹಂಭಾವದಿಂದಲೇ ಜಗತ್ತಿನ ವಿವಿಧ ಸೃಷ್ಟಿಗೆ ಮೊದಲು. ಮೂಲ ಪ್ರಕೃತಿಗೆ 'ಮಹತ್' ಎಂಬ ತತ್ವದ ಸ್ವರೂಪವು ಮುಂಚೆ ಉಂಟಾಗುತ್ತದೆ. ಮುಂದೆ ಅದರಿಂದ ಅಹಂಕಾರತತ್ವವು ಹುಟ್ಟುತ್ತದೆ. ಮಹತ್ ಎಂದರೆ ಸರ್ವವ್ಯಾಪಕ ಬುದ್ಧಿ; ಅಹಂಕಾರವೆಂದರೆ ಸಂಕುಚಿತ ಬುದ್ಧಿ. ಮಹತ್ ಎಂದರೆ ಸಮಷ್ಟಿ, ಅಹಂಕಾರವೆಂದರೆ ವ್ಯಷ್ಟಿ. ಮಹತ್ತು ಒಡೆದು ಚೂರುಚೂರಾಗಿ ವಿವಿಧಜೀವಿಗಳು ಹುಟ್ಟುತ್ತವೆಯೆಂದು ಒಂದು ರೀತಿಯಿಂದ ಹೇಳಬಹುದು. ಆಗ, ನಿಜವಾಗಿ ವ್ಯವಹಾರಕ್ಕೆ ಪ್ರಾರಂಭ

ವಾಗುತ್ತದೆ. ಜೀವಸಿಗೆ ದೇಹದ ಹೊರತು ಸ್ವತಂತ್ರ ಅಸ್ತಿತ್ವವು ಈ ಜಗತ್ತಿನಲ್ಲಿ ಇಲ್ಲ. ಇದು ನನ್ನ ದೇಹವೆಂಬ ಅಹಂಭಾವವು ಮುಂಚೆ ಹುಟ್ಟುತ್ತದೆ. ಜಡವಸ್ತುಗಳಲ್ಲಿ ಈ ಅಹಂಭಾವವಿರುವುದಿಲ್ಲ. ಚೇತನವಸ್ತುಗಳಲ್ಲಿ ಇರುತ್ತದೆ. ಹೀಗೆ ಅಹಂ-ಭಾವ ಹುಟ್ಟುವುದೇ ಚೇತನ ವಸ್ತುಗಳ ಲಕ್ಷಣವೆಂದೂ ಹೇಳಬಹುದು. ಆದರೆ, ಮನುಷ್ಯನಿಗಿಂತ ಕಡಿಮೆತರಹದ ಪ್ರಾಣಿಗಳಲ್ಲಿ ಅದಕ್ಕೆ ಮನಸ್ಸಿನ ಅಥವಾ ಬುದ್ಧಿಯ ವಿಕಾಸದ ಸಹಾಯವು ಸಿಕ್ಕಿರುವುದಿಲ್ಲ. ಮನುಷ್ಯಪ್ರಾಣಿಯಲ್ಲಿ ಅಹಂಕಾರವೂ ಮನಸ್ಸಿನ ವಿಕಾಸವೂ ಪಕ್ವವಾಗಿರುತ್ತವೆ. ಮನುಷ್ಯನಲ್ಲಿ ಹುಟ್ಟಿದ್ದ ಈ ಅಹಂಭಾವಕ್ಕೆ ಸಹಸ್ರಾರು ಪುಟಗಳನ್ನು ಕೊಟ್ಟು ಶುದ್ಧಗೊಳಿಸಿ, ಅದಕ್ಕೆ ಅದರ ಮೂಲ ವ್ಯಾಪಕ ಸ್ವರೂಪವನ್ನು ಕೊಡುವುದೇ ಮನುಷ್ಯನ ಈ ಜಗತ್ತಿನಲ್ಲಿಯ ಮುಖ್ಯ ಕರ್ತವ್ಯ. ಗೀತೆಯು ಅಹಂ-ಕಾರವನ್ನು ನಿಂದಿಸಿದುದರ ಮರ್ಮವು ಇದು. ಅದು ಮನುಷ್ಯನಿಗೆ ಹೇಳುವುದೇನೆಂದರೆ "ನಿನ್ನ ಹುಟ್ಟೇನೋ ಅಹಂಕಾರದಿಂದಲೇ ಸರಿ. ಆದರೆ, ಅದು ನಿನ್ನ ಕೊನೆಯ ಸ್ಥಾನವಲ್ಲ. ಕೊನೆಯ ಸ್ಥಾನವು ಸರ್ವ ಭೂತಹಿತವು. ಸ್ವಹಿತದಿಂದ ಪ್ರಾರಂಭಮಾಡಿಕೊಂಡು ಹಿಗ್ಗುತ್ತ ಹಿಗ್ಗುತ್ತ ಸರ್ವ ಭೂತ ಹಿತಕ್ಕೆ ತಲುಪಬೇಕು. ಹೀಗೆ ಹಿಗ್ಗುತ್ತಿರುವಾಗ ಮನಸ್ಸಿನಲ್ಲಿ ಹಿಗ್ಗು ಉಂಟಾಗಬೇಕು. ಅದೇ ನಿನ್ನ ಮೂಲಧರ್ಮವು ಅಂದರೆ ಸ್ವಧರ್ಮ, ನಿನ್ನ ಮೂಲ ಸ್ವಭಾವ ಧರ್ಮ. ಸ್ವ ಎಂದರೆ ನೀನು ಎಂಬುದಷ್ಟೇ ಅರ್ಥವಲ್ಲ. ನೀನು ವಿಶ್ವವ್ಯಾಪಕನಾದ ಪರಮಾತ್ಮನ ಅಂಶನಾಗಿರುವುದರಿಂದ, ನಿನ್ನ 'ಸ್ವ'ವೆಂದರೇನೇ ಪರಮಾತ್ಮನ 'ಸ್ವ'. ಇದು ಗೀತೆಯ ಮುಖ್ಯ ಉಪದೇಶವು. ವ್ಯಷ್ಟಿ ಜೀವಿಗಳಂತೆ ಅನೇಕ ಸಮಷ್ಟಿ ಜೀವಿಗಳು ಇರುವವೆಂಬ ಬಗ್ಗೆ, ನಮ್ಮ ಪುರಾತನ ಶಾಸ್ತ್ರಗಳಲ್ಲಿ ವಿಶೇಷ ವಿಮರ್ಶೆ ಕಂಡುಬರುವುದಿಲ್ಲ. ಆ ಬಗೆಯಾದ ವಿಮರ್ಶೆಯು ಮಾಡಲ್ಪಟ್ಟು ಅದರದೊಂದು ವ್ಯವಸ್ಥಿತವಾದ ಶಾಸ್ತ್ರಗ್ರಂಥವು ಹೊರಡುವುದು ಅವಶ್ಯವೆಂದು ನಮಗೆ ತೋರುತ್ತದೆ.

ರಾಷ್ಟ್ರೀಯತ್ವವೆಂದರೆ, ಹೀಗೆ ಹಿಗ್ಗಿಸುವಾಗ ಮನುಷ್ಯನಿಗೆ ಉಂಟಾಗುವ ಒಂದು ತಾತ್ಕಾಲಿಕ ಮಧ್ಯಮ ಸ್ಥಿತಿ. ನನ್ನ ದೇಹ, ನನ್ನ ಮನೆ, ನನ್ನ ದೇಶ, ನನ್ನ ಭಾಷೆ, ನನ್ನ ಧರ್ಮ ಇವೇ ಮುಂತಾದವುಗಳು ಈ ಅಹಂಭಾವದ ವಿವಿಧ ರೂಪಗಳು. ಈ ಅಹಂಭಾವಗಳ ಮತ್ತೊಂದು ವಿಶೇಷವೇನೆಂದರೆ, ಅವು ಒಂದನ್ನೊಂದು ಕೊಂದು ಬದುಕುವುದಿಲ್ಲ. ಒಂದಕ್ಕೊಂದು ಪೋಷಕವಾಗಿ ಬಾಳುತ್ತವೆ. ನನ್ನ ದೇಶವೆಂಬ ಭಾವನೆ ಹುಟ್ಟಿದಾಗ, ನನ್ನ ಹೆಂಡತಿ ನನ್ನ ಮಕ್ಕಳು ಎಂಬ ಭಾವನೆಯು ಸತ್ತುಹೋಗುವುದಿಲ್ಲ. ಅವೆರಡೂ ಒಂದಕ್ಕೊಂದು ಬೆಂಬಲವಾಗಿ, ತಮ್ಮ ತಮ್ಮ ಕ್ಷೇತ್ರಗಳಲ್ಲಿ ವಿಹರಿಸುತ್ತವೆ. ಈ ಅಹಂಭಾವದ ಮತ್ತೊಂದು ತತ್ವವೇನೆಂದರೆ, ಅನ್ಯಾಕ್ರಮಣವು ಅದರ ಸ್ವಭಾವವಲ್ಲ; ಅನ್ಯರ ಸೇವೆಯು ಅದರ ಸ್ವಭಾವಧರ್ಮವು. ಅನ್ಯರ ಉತ್ಕ್ರಾಂತಿಗೆ ಸಹಾಯಮಾಡುವುದು ಅದರ

ಕರ್ತವ್ಯವು. ಅದು ತನ್ನ ಕ್ಷೇತ್ರದಲ್ಲಿ ಅನ್ಯರನ್ನು ಬರಗೊಡುವುದಿಲ್ಲ; ಅನ್ಯರ ಕ್ಷೇತ್ರದಲ್ಲಿ ತಾನು ಕಾಲಿಡುವುದಿಲ್ಲ, ಅನ್ಯರ ವಿಕಾಸಕ್ಕೆ ಶಕ್ಯವಿದ್ದಷ್ಟು ಸಹಾಯ ಮಾಡುತ್ತದೆ. ಸಾರಾಂಶ (೧) ವ್ಯಾಪಕವಾಗುವ ಬುದ್ಧಿ (೨) ತನ್ನತನವನ್ನು ಬಿಡದಿರುವ ಬುದ್ಧಿ (೩) ಅನ್ಯರನ್ನು ಆಕ್ರಮಿಸದಿರುವ ಬುದ್ಧಿ ಮತ್ತು (೪) ಅನ್ಯರ ವಿಕಾಸಕ್ಕೆ ಸಹಾಯವಾಗುವ ಬುದ್ಧಿ. ಇವು ನಮ್ಮ ವಿಕಾಸವಾದದ ಮುಖ್ಯ ಕಲ್ಪನೆಗಳು. ಇದರಿಂದ ಡಾರ್ವಿನ್ ಸ್ಪೆನ್ಸರ್ ಮುಂತಾದವರ ವಿಕಾಸವಾದಕ್ಕೂ ನಮ್ಮ ವಿಕಾಸವಾದಕ್ಕೂ ಯಾವ ಸಾಮಾನ್ಯ ವಿಶೇಷಗಳು ಇರುವವೆಂಬುದು ಗೊತ್ತಾಗುವುದು. ಸ್ವಲ್ಪದರಲ್ಲಿ ಹೇಳುವುದಾದಲ್ಲಿ, ಸಮರ್ಥ ಜೀವಿಗೆ ಮಾತ್ರ ಬದುಕುವುದಕ್ಕೆ ಅಧಿಕಾರ (survival of the fittest) ಎಂಬುದು ಅವರ ತತ್ವ; ಎಲ್ಲ ಜೀವಿಗಳಿಗೂ ಬದುಕುವುದಕ್ಕೆ ಅಧಿಕಾರ (survival of all) ಎಂಬುದು ನಮ್ಮ ತತ್ವ. ಜಡ ಪ್ರಕೃತಿಯ ಆಳಿಕೆಯು ಕ್ಷುದ್ರಜೀವಿಗಳಿಂದ ಮೊದಲ್ಗೊಂಡು ಮನುಷ್ಯಜೀವಿಯವರೆಗೆ ಮಾತ್ರ. ಆ ಮುಂದೆ, ಮನುಷ್ಯನ ರಾಜ್ಯಕ್ಕೆ ಪ್ರಾರಂಭ ವಾಗುತ್ತದೆ. ಆತನು ಪರಮಾತ್ಮನ ಮಾಂಡಲಿಕನಾಗಿ, ತನಗೆ ಬೇಕಾದಂಥ ವಿವಿಧ ಜೀವಿಗಳನ್ನು (ಸಮಾಜ) ಹುಟ್ಟಿಸುತ್ತಾನೆ. ಮನುಷ್ಯನು ಸ್ವತಃ ಅನೇಕ ಅಣು ಜೀವಿಗಳ ಪುಂಜನು; ಸಮಾಜವು ಮನುಷ್ಯಜೀವಿಗಳ ಪುಂಜ; ರಾಷ್ಟ್ರವು ಅನೇಕ ಸಮಾಜಗಳ ಪುಂಜ; ವಿಶ್ವವು ಅನೇಕ ರಾಷ್ಟ್ರಗಳ ಪುಂಜ. ಇವೆಲ್ಲವುಗಳಲ್ಲಿಯೂ ಪರಮಾತ್ಮನು ಓತಪ್ರೋತನಾಗಿದ್ದಾನೆ. ಆತನು ಅಂತರ್ಯಾಮಿಯಾಗಿದ್ದಾನೆ. ಈ ವಿವಿಧ ಮಣಿಗಳಲ್ಲಿ ಆತನು ಸೂತ್ರರೂಪನಾಗಿರುವನು. ಸಾರಾಂಶ, ಜೀವ–ದೇಹಗಳ ಸಂಬಂಧವೇ ಸಂಸಾರ, ಜೀವ–ಪರಮಾತ್ಮರ ಸಂಬಂಧವೇ ಸಂಸಾರ ನಿವೃತ್ತಿ. ಅಹಂ-ಭಾವದಿಂದ ಪ್ರಪಂಚಕ್ಕೆ ಪ್ರಾರಂಭ. ಪರಮಾತ್ಮ-ಭಾವದಿಂದ ಪ್ರಪಂಚಕ್ಕೆ ಪರ್ಯವಸಾನ. ಅಹಂಭಾವವನ್ನು ತೊಲಗಿ ಪರಮಾತ್ಮಭಾವವನ್ನು ತಾಳುವುದೇ ಜೀವನ್ಮುಕ್ತಿ.

ಇದು ನಮ್ಮ ಸನಾತನ ರಾಷ್ಟ್ರೀಯತ್ವದ ಕಲ್ಪನೆಯು. ಇದರ ಮುಖ್ಯ ಅಂಗಗಳು ಎರಡು. (೧) ಧಾರ್ಮಿಕ ರಾಷ್ಟ್ರೀಯತ್ವ (೨) ಪ್ರಾದೇಶಿಕ ರಾಷ್ಟ್ರೀಯತ್ವ. ಧಾರ್ಮಿಕ ರಾಷ್ಟ್ರೀಯತ್ವವೆಂದರೆ ಧರ್ಮದ ವಿಷಯದಲ್ಲಿ ಹಿಂದುಸ್ಥಾನವು ಒಂದು ರಾಷ್ಟ್ರವೆಂಬ ಭಾವನೆಯು. ಈ ಕ್ಷೇತ್ರದಲ್ಲಿ, ಹಿಂದುಸ್ಥಾನವು ಏಕರಾಷ್ಟ್ರತೆಯ ಭಾವನೆಯನ್ನು ಸಿದ್ಧಮಾಡಿಕೊಂಡಿತ್ತು. ಮತ್ತು ಎಷ್ಟೇ ವಿಕೃತರೂಪದಲ್ಲಿ ಏಕಾಗಲೊಲ್ಲದು, ಆ ಭಾವನೆಯು ಇಂದಿನವರೆಗೆ ಸ್ಥಿರವಾಗಿ ಉಳಿದಿದೆ ಅಂದರೆ, ಧರ್ಮದ ದೃಷ್ಟಿಯಿಂದ ಹಿಂದುಸ್ಥಾನವು ಒಂದು ರಾಷ್ಟ್ರವು ಎಂಬ ವಿಚಾರವು ನಮ್ಮ ಜನರಲ್ಲಿ ಈಗಲೂ ಅಲ್ಪಾಂಶದಿಂದಲಾದರೂ ಉಳಿದಿರುವುದು ಕಂಡುಬರುತ್ತದೆ. ಇದನ್ನು ವಿಕಾಸಗೊಳಿಸುವಾಗ ನಾವು ಏಕರೂಪತೆಯ ತತ್ವವನ್ನು ಅವಲಂಬಿಸಿರು ವುದಿಲ್ಲ, ಏಕಸೂತ್ರತೆಯ ದೃಷ್ಟಿಯನ್ನು ಅವಲಂಬಿಸಿದ್ದೇವು. ದುರ್ದೈವದಿಂದ,

ಈಗ ಆ ಏಕಸೂತ್ರವು ಹರಿದುಹೋಗಿದೆ. ಹಿಂದುಸ್ಥಾನದ ಅಧಃಪತನಕ್ಕೆ ಅದೇ ಕಾರಣ. ವಿವಿಧ ಧರ್ಮಗಳು ಅಥವಾ ಪಂಥಗಳು ಕಾರಣವಲ್ಲ. ಅವುಗಳಲ್ಲಿ ಪೋಣಿಸಲ್ಪಟ್ಟ ಆ ಸೂತ್ರವು ಹೋಗಿರುವುದೇ ಕಾರಣ. ಆದುದರಿಂದ, ವಿವಿಧತೆಯನ್ನು ಹೋಗಗೊಡದೆ ಏಕತ್ವವನ್ನು ಹುಟ್ಟಿಸುವ ಉಪಾಯಗಳನ್ನು ನಾವು ಈಗ ಕೈಕೊಳ್ಳಬೇಕಾಗಿದೆ. ನಮ್ಮ ಜನರ ಲಕ್ಷವು ಭೇದಗಳಿಗಿಂತಲೂ ಐಕ್ಯದ ಕಡೆಗೆ ಹೋಗಬೇಕೆಂದು ನಾವು ಪದೇ ಪದೇ ಹೇಳುತ್ತಲೇ ಬಂದಿರುವೆವು. ಅದೇ ಮೇರೆಗೆ, ನಾವು ಮತ್ತೂ ಒಂದು ಮಾತನ್ನು ಮರೆಯಲಾಗದು. ಅದೇನೆಂದರೆ, ನಾವು ಸ್ವಧರ್ಮ ರಕ್ಷಣೆಯ ಕಡೆಗೆ ಗಮನಕೊಟ್ಟಿರುವುದಿಲ್ಲ. ಅನ್ಯಧರ್ಮಗಳು ನಮ್ಮ ಸನಾತನಧರ್ಮವನ್ನು ಆಕ್ರಮಣಮಾಡುತ್ತಿರುವುದನ್ನು ನೋಡಿ, ಸುಮ್ಮನೆ ಕುಳಿತುಕೊಳ್ಳುವುದು ಪಾತಕವು. ಸನಾತನಧರ್ಮವು ಈ ಅಳುಬುರುಕ ವೇದಾಂತವನ್ನು ಉಪದೇಶಿಸಿರುವುದಿಲ್ಲ. ಶಿಷ್ಟರ ಸಂರಕ್ಷಣೆಯು ಹೇಗೆ ನಮ್ಮ ಧರ್ಮವೋ ಹಾಗೆ ದುಷ್ಟನಿಗ್ರಹವೂ ನಮ್ಮ ಧರ್ಮವೇ. ಸನಾತನಧರ್ಮತತ್ವಗಳು ಹಿಂದುಸ್ಥಾನದ ಸೊತ್ತು ಮಾತ್ರವಲ್ಲ. ಅವು ಇಡೀ ಮಾನವಜಾತಿಯ ಸೊತ್ತುಗಳು. ಆ ತತ್ವಗಳನ್ನು ಯಾರು ಬೇಕವರು ಸ್ವೀಕರಿಸಬಹುದು. ಆ ತತ್ವಗಳನ್ನು ಜಗತ್ತಿನಲ್ಲೆಲ್ಲ ಪ್ರಸೃತಮಾಡುವ ಭಾಗ್ಯವು ಮಾತ್ರ ಹಿಂದೂದೇಶಕ್ಕೊಂದೇ ಬಂದಿರುತ್ತದೆ. ಹಿಂದೂ ಧರ್ಮದ ಅರ್ಥವೆಂದರೆ ಇಷ್ಟೇ. ಅನ್ಯಧರ್ಮಗಳನ್ನು ಮುರಿದು ತನ್ನ ಧರ್ಮವನ್ನು ಸ್ಥಾಪಿಸುವುದು ಅದರ ಸ್ವಭಾವವಲ್ಲ; ಆದರೆ, ಅನ್ಯಧರ್ಮಗಳು ತಮ್ಮ ಸಂಕುಚಿತ ಧರ್ಮಗಳನ್ನು ನಮ್ಮಮೇಲೆ ಹೇರುತ್ತಿರುವುದನ್ನು ತಡೆಯುವ ಕಾರ್ಯವನ್ನು ನಾವು ಮಾಡಲಿಲ್ಲ. ಆದಕಾರಣ ಈಗ ನಾವು ನಮ್ಮ ಧರ್ಮವನ್ನು ಉಳಿಸಿಕೊಳ್ಳುವ ಕಾರ್ಯವನ್ನು ಕೈಕೊಳ್ಳಲೇಬೇಕು. ಪರಕೀಯ ಧರ್ಮಗಳು ಇಂದಿಗೆ ನಮ್ಮ ಹೊಟ್ಟೆಯೊಳಗೆ ಗಂಟುಗಳಾಗಿ ಉಳಿದಿವೆ. ಇತ್ತ ಅವು ಅರುಗುವುದೂ ಇಲ್ಲ, ಇತ್ತ ಕರಗುವುದೂ ಇಲ್ಲ. ನಮ್ಮ ಸಹಿಷ್ಣುತೆಯೇ ನಮಗೆ ಇಂದು ಕುತ್ತಾಗಿದೆ.

ಇನ್ನು, ಪ್ರಾದೇಶಿಕ ರಾಷ್ಟ್ರೀಯತ್ವದ ಸಂಬಂಧವಾಗಿ ವಿಚಾರ ಮಾಡುವ. ರಾಜಕಾರಣಕ್ಷೇತ್ರದಲ್ಲಿ ಅದು ಈಗ ವಿಶೇಷವಾಗಿ ರೂಢಿಯಲ್ಲಿ ಬಂದಿದೆ. ಹಿಂದುಸ್ಥಾನವು ಪರಕೀಯರ ಆಳುಕಿನಲ್ಲಿ ಈಗ ಸಿಲ್ಕಿರುವುದರಿಂದ, ಆ ವಿಚಾರಕ್ಕೆ ಬಹಳ ಪುಷ್ಟಿ ದೊರೆತಿದೆ. ಪ್ರಾದೇಶಿಕ ರಾಷ್ಟ್ರೀಯತ್ವವು ನಮ್ಮ ರಾಷ್ಟ್ರದಲ್ಲಿ ಈಗ ನೆಲೆಗೊಂಡಿರುವುದಿಲ್ಲ. ಹಿಂದುಸ್ಥಾನದ ಅಧಃಪತನಕ್ಕೆ ಇದೂ ಒಂದು ಮುಖ್ಯ ಕಾರಣವು. ಇದೀಗ ಆ ವಿಚಾರಗಳು ನಮ್ಮ ಜನರಲ್ಲಿ ಹಬ್ಬಹತ್ತಿವೆ. ನಾವು ಹಿಂದಕ್ಕೆ ಗ್ರಾಮದೇವತೆಗಳನ್ನಷ್ಟೇ ಕಲ್ಪಿಸಿಕೊಂಡಿದ್ದೆವು. ಆದರ ಮುಂದೆ ಹೆಜ್ಜೆ ಇಟ್ಟಿರಲಿಲ್ಲ. ಈಗ ನಾವು ಉಪರಾಷ್ಟ್ರದೇವತೆ ರಾಷ್ಟ್ರದೇವತೆಗಳನ್ನೂ ಕಲ್ಪಿಸಿಕೊಳ್ಳುತ್ತಿರುವೆವು. ಮತ್ತು ನಮ್ಮ ೩೩ ಕೋಟಿ ದೇವತೆಗಳಲ್ಲಿ ಇನ್ನೂ ಅನೇಕ ದೇವತೆ

ಗಳನ್ನು ಕೂಡಿಸುತ್ತಿರುವೆವು. ಇದು ವಿಹಿತವೇ ಆಗಿದೆ. ರಾಜಕೀಯ ರಾಷ್ಟ್ರೀಯತ್ವದ ಬುಡಕ್ಕೆ ಮುಖ್ಯವಾಗಿ ಎರಡು ತತ್ವಗಳಿರುತ್ತವೆ. ಅವು ಯಾವುವೆಂದರೆ, (೧) ನಮ್ಮ ರಾಜಕೀಯ ಹಿತಸಂಬಂಧಗಳೆಲ್ಲವೂ ಒಂದು ಎಂಬುದು. (೨) ಆ ಹಿತಸಂಬಂಧಗಳನ್ನು ಸಂರಕ್ಷಿಸಿಕೊಳ್ಳುವುದಕ್ಕಾಗಿ, ನಾವು ಮಿಕ್ಕ ರಾಷ್ಟ್ರಗಳಿಂದ ಭಿನ್ನವಾಗಿರುವವೆಂಬುದು. ಈ ತರಹದ ರಾಷ್ಟ್ರೀಯತ್ವದ ಕಲ್ಪನೆಯು ರಾಷ್ಟ್ರದಲ್ಲಿ ಸಹಸಾ ಉತ್ಪನ್ನವಾಗುವುದಿಲ್ಲ. ಅನ್ಯರು ನಮ್ಮ ಮೇಲೆ ದಾಳೀಮಾಡಿದಾಗ ಈ ವಿಚಾರವು ಹುಟ್ಟುತ್ತದೆ. ಹಿಂದಕ್ಕೆ ಈ ರಾಷ್ಟ್ರೀಯತ್ವದ ಕಲ್ಪನೆಯು ಹುಟ್ಟದಿರುವುದಕ್ಕೆ ಕಾರಣವೇನೆಂದರೆ ಆಗ ನಮ್ಮ ದೇಶದ ಜನರಿಗೆ ಮೇಲ್ಕಾಣಿಸಿದ ಎರಡೂ ತತ್ವಗಳ ಆವಶ್ಯಕತೆಯಿರಲಿಲ್ಲ. ಇಡೀ ಹಿಂದುಸ್ಥಾನದ ಹಿತಸಂಬಂಧಗಳು ಒಂದಾಗಿದ್ದಿಲ್ಲ. ಆದಕಾರಣ, ಪರಕೀಯರು ಮಾಡಿದ ದಾಳಿಗಳಿಂದ ನಮ್ಮೆಲ್ಲರ ಹಿತಗಳಿಗೂ ಬಾಧೆ ಉಂಟಾಗುತ್ತದೆಂಬ ಕಲ್ಪನೆಯು ಸಾಕಷ್ಟು ಇರಲಿಲ್ಲ. ಹೀಗಾಗುವುದು ಸ್ವಾಭಾವಿಕವು. ನಾವು ಹಿಂದೆ ಹೇಳಿದಂತೆ, ಮಾನವನು ಈ ಹೊಸ ಹೊಸ ರಾಷ್ಟ್ರಗಳನ್ನು ತಾನು ಕಟ್ಟಬೇಕಾಗುತ್ತದೆ. ಆ ತರಹದ ಆವಶ್ಯಕತೆಯುಂಟಾಗುವ ತನಕ ಆತನು ಅವನ್ನು ಕಟ್ಟುತ್ತಿರುವುದಿಲ್ಲ. ನಮ್ಮ ದೇಶದಲ್ಲಿ ಒಬ್ಬರ ರಾಜ್ಯಗಳನ್ನು ಒಬ್ಬರು ಕಸಿದುಕೊಳ್ಳುವ ಕಾರ್ಯವೇನೋ ನಡೆದೇ ಇತ್ತು. ಆದರೆ, ಸನಾತನ ರಾಷ್ಟ್ರೀಯತ್ವದ ಹಲವು ಮೂಲಭೂತ ಕಲ್ಪನೆಗಳು ಇನ್ನೂ ನಿರ್ಮೂಲವಾಗಿದ್ದಿಲ್ಲವಾದುದರಿಂದ, ಒಬ್ಬ ಅರಸನು ಮತ್ತೊಬ್ಬ ಅರಸನನ್ನು ಪಾದಾಕ್ರಾಂತ ಮಾಡಿಕೊಂಡರೂ ಆ ಅರಸನ ವಂಶದವನನ್ನೇ ಪಟ್ಟಕ್ಕೆ ಕುಳ್ಳಿರಿಸಿ ಆತನನ್ನು ಬರೀ ಮಾಂಡಲಿಕನನ್ನಾಗಿ ಮಾಡಿಕೊಳ್ಳುತ್ತಿದ್ದನು. ಆದಕಾರಣ, ಜನತೆಯ ಹಿತಕ್ಕೆ ಮತ್ತಾವ ತೊಂದರೆಯೂ ಆಗುತ್ತಿರಲಿಲ್ಲ. ಹಿಂದಕ್ಕೆ ನಮ್ಮಲ್ಲಿ ಈಗಿನ ರಾಷ್ಟ್ರೀಯತ್ವದ ಕಲ್ಪನೆ ಉದಯವಾಗದಿರುವುದಕ್ಕೆ ಇದೂ ಒಂದು ಕಾರಣ.

ರಾಷ್ಟ್ರಹಿತದ ದೃಷ್ಟಿಯಿಂದ ವಿಚಾರಮಾಡುವಾಗ, ಎಲ್ಲರೂ ಕೂಡಿಮಾಡುವ ಕೆಲಸಗಳು ಕೆಲವು, ಒಬ್ಬೊಬ್ಬರೆ, ಅಥವಾ ಕೆಲಕೆಲವರು ಗುಂಪುಗೊಂಡು ಮಾಡುವ ಕೆಲಸಗಳು ಕೆಲವು. ಅವರವರು ಅವರವರ ಕರ್ತವ್ಯಗಳನ್ನು ಮಾಡುತ್ತಿದ್ದರೆ, ಏಕರಾಷ್ಟ್ರೀಯತ್ವಕ್ಕೆ ಭಂಗವುಂಟಾಗುವ ಕಾರಣವಿಲ್ಲ. ರಾಜಕಾರಣದಲ್ಲಿ ಹಿಂದುಸ್ಥಾನವನ್ನು ಏಕರಾಷ್ಟ್ರವಾಗಲು ಪ್ರಯತ್ನಮಾಡುವವರು ಮೇಲ್ಕಾಣಿಸಿದ ತತ್ವಗಳನ್ನು ಮರೆಯಬಾರದು. ರಾಜಕಾರಣದಲ್ಲಿ ಒಂದಾಗುವುದೆಂದರೆ, ರಾಜ್ಯಸಂಬಂಧದ ವ್ಯವಹಾರದಲ್ಲಿ ಒಂದಾಗುವುದು. ಮಿಕ್ಕ ಕ್ಷೇತ್ರಗಳಲ್ಲಿ ಕಾಲಿಡಲು ರಾಜಕಾರಣ ಪುರುಷರಿಗೆ ಅಧಿಕಾರವಿಲ್ಲ. ಹಿಂದುಸ್ಥಾನವು ಅನೇಕ ಉಪರಾಷ್ಟ್ರಗಳ ಗುಂಪು. ಪ್ರತಿಯೊಂದು ಉಪರಾಷ್ಟ್ರವೂ ತನ್ನದೊಂದು ಜೀವವನ್ನು ಈಗಾಗಲೇ ಸಿದ್ಧಮಾಡಿಕೊಂಡಿದೆ. ಭಾಷೆ, ಇತಿಹಾಸ, ಸಂಸ್ಕೃತಿ ಮುಂತಾದವುಗಳಲ್ಲಿ ತನ್ನ ವಿಶಿಷ್ಟತೆಯನ್ನು ಸಂಪಾದಿಸಿಕೊಂಡಿದೆ. ಹುಟ್ಟಿದ ಯಾವ ಜೀವವನ್ನೂ ಕೊಲ್ಲಲಿಕ್ಕೆ

ಯಾರಿಗೂ ಅಧಿಕಾರವಿಲ್ಲ. ವಿವಿಧತೆಯನ್ನು ಮುರಿದು ಅಥವಾ ಕೊಂದು ಏಕಜೀವವನ್ನು ಹುಟ್ಟಿಸುವುದು ಸನಾತನ ರಾಷ್ಟ್ರೀಯತ್ವದ ತತ್ವವಲ್ಲ. ನಮ್ಮ ದೇಶದಲ್ಲಿ, ಭಾಷೆ, ಧರ್ಮ, ಸಂಸ್ಕೃತಿ ಮುಂತಾದ ಅನೇಕ ವಿಷಯಗಳಲ್ಲಿ ವೈವಿಧ್ಯವುಂಟು. ಅವುಗಳನ್ನೆಲ್ಲ ನೆಲಸಮಮಾಡುವುದು ಸನಾತನ ರಾಷ್ಟ್ರೀಯತ್ವಕ್ಕೆ ವಿರುದ್ಧವಾದ ಕಾರ್ಯವು. ರಾಜ್ಯ ವ್ಯವಹಾರವು ಸುರಕ್ಷಿತವಾಗಿ ನಡೆಯುವುದಕ್ಕೆ ಎಷ್ಟರ ಮಟ್ಟಿಗೆ ಆವಶ್ಯಕವೋ ಅಷ್ಟರ ಮಟ್ಟಿಗೆ ಮಾತ್ರವೇ ಸಡಿಲುಮಾಡಲಿಕ್ಕೆ ರಾಜಕಾರಣ ಪುರುಷರಿಗೆ ಅಧಿಕಾರವಿರುತ್ತದೆ. ಈ ದೃಷ್ಟಿಯಿಂದ, ಪ್ರಾಮಾಣಿಕವಾದ ಅಂತಃಕರಣದಿಂದ ವಿಚಾರಮಾಡಿ ನೋಡಿದರೆ, ಇಂದು ಜನತೆಯ ಮನಗಳನ್ನು ಪ್ರಕ್ಷುಬ್ಧಗೊಳಿಸುವ ಅನೇಕ ಪ್ರಶ್ನೆಗಳು ಸಹಜವಾಗಿ ಬಿಟ್ಟುಹೋಗುತ್ತವೆ. ಪ್ರತಿಯೊಂದರಲ್ಲಿಯೂ ನಾವು ಏಕಸೂತ್ರತೆಯ ತತ್ವವನ್ನವಲಂಬಿಸಬೇಕಲ್ಲದೆ ಏಕರೂಪತೆಯ ತತ್ವವನ್ನು ಅವಲಂಬಿಸಬಾರದೆಂಬ ಬಗ್ಗೆ ಎಚ್ಚರಿಕೆಯನ್ನು ತಾಳುವುದೇ ಗೀತೆಯ ಅಭ್ಯಾಸದಿಂದ ನಾವು ಕಲಿಯಬಹುದಾದ ಮುಖ್ಯ ಉಪದೇಶವು.

ಹಿಂದಿನ ಕಾಲದಲ್ಲಿ, ಸಂಸ್ಕೃತ ಭಾಷೆಯು ಏಕಭಾಷೆಯ ಮಾನವನ್ನು ಹೊಂದಿತ್ತು. ವಿದ್ವಜ್ಜನರ ಮತ್ತು ಧರ್ಮದ ಸಂಬಂಧವಾಗಿ ಯಾವುದೊಂದು ಭಾಷೆಯು ಏಕಭಾಷೆಯಾಗಬೇಕಾಗಿದ್ದರೆ, ಕೆಲವು ಹೊಸ ಸಂಸ್ಕಾರಗಳನ್ನು ಕೊಟ್ಟು, ಸಂಸ್ಕೃತ ಭಾಷೆಯನ್ನೆ ರಾಷ್ಟ್ರಭಾಷೆಯನ್ನಾಗಿ ಮಾಡುವುದು ಶಕ್ಯವಿದೆ, ಮತ್ತು ಹೆಚ್ಚು ಸುಲಭವಿದೆ. ಆದರ ಹೊರ್ತು ಮಿಕ್ಕ ಯಾವ ಭಾಷೆಯೂ ಆ ಮಾನಕ್ಕೆ ಈಗ ಅರ್ಹವಾಗಲಾರದೆಂದು ನಮ್ಮ ಮತ. ಆದರೆ, ಇಂದು ಬರೀ ಸಂಸ್ಕೃತದಿಂದ ಇಡೀ ಹಿಂದುಸ್ಥಾನದ ಏಕಭಾಷೆಯ ಹಸಿವು ತಣಿಯಲಾರದು. ಪ್ರಾಂತ ಪ್ರಾಂತಗಳಲ್ಲಿ ಬಳಕೆಯು ದಿನದಿನಕ್ಕೆ ಹೆಚ್ಚಾಗುತ್ತ ನಡೆದಿದೆ. ಅದಕಾರಣ ಮತ್ತೊಂದು ಜನಭಾಷೆಯ ಆವಶ್ಯಕತೆ ಎನಿಸಹತ್ತಿದೆ. ಹಿಂದೀ ಭಾಷೆಗೆ ಆ ಮಾನವು ದೊರೆಯುವುದು ವಿಹಿತವೇ ಆದೆ. ಆದರೆ, ಈ ಕಾರಣವನ್ನು ಮುಂದೆ ಚಾಚಿ ಕೆಲವರು ಹಿಂದೀ ಭಾಷೆಯನ್ನು ತಮ್ಮ ತಲೆಯಮೇಲೆ ಎತ್ತಿಕೊಂಡು ಕುಣಿಯಲು ಆರಂಭಿಸಿರುವರು. ಇದು ನಮ್ಮ ರಾಷ್ಟ್ರೀಯತ್ವಕ್ಕೆ ಅತ್ಯಂತ ವಿರುದ್ಧವಾದ ಕಲ್ಪನೆಯು, ಘಾತಕವಾದ ಕಲ್ಪನೆಯು. ಹಿಂದೀ ಭಾಷೆಯ ಪ್ರವೇಶವು ಮರ್ಯಾದಿತ ಕ್ಷೇತ್ರದಲ್ಲಿ ಮಾತ್ರ ಆಗತಕ್ಕದ್ದು. ಯಾವ ಉದ್ದೇಶದ ಮೂಲಕ, ಆ ಕಲ್ಪನೆಯು ಹೊರಟಿರುವುದೋ ಆ ಉದ್ದೇಶವನ್ನು ಸಾಧಿಸುವ ಮಟ್ಟಿಗೆ ಮಾತ್ರ ಅದರ ಉಪಯೋಗ. ಬಹುಜನರ ಬಳಕೆಬರುವ ಸಂದರ್ಭಗಳಲ್ಲಿ ಮಾತ್ರ ಆ ಭಾಷೆ ಬೇಕು. ಹಾಗೆಯೇ ಜನತೆಯ ಮನಸ್ಸಿನ ವಿರುದ್ಧವಾಗಿ ಅದನ್ನು ಜನರ ಮೇಲೆ ಹೇರುವುದು ಆಕ್ರಮಣಶೀಲವೃತ್ತಿಯು, ಅಧಿಕಾರದ ಮದವು. ಜೀವಿಗಳನ್ನು ಕೊಲ್ಲುವುದು ಅಥವಾ ಸಾಯುವಂತೆ

ಕುಯುಕ್ತಿಗಳನ್ನು ಕೈಕೊಳ್ಳುವುದು ನಮ್ಮ ಕರ್ತವ್ಯವಲ್ಲ. ತಾವಾಗಿಯೇ ಸತ್ತರೆ ಯಾರಿಗೂ ದುಃಖವಿಲ್ಲ. ಇದೇ ಮಾರ್ಗದಿಂದ ವಿಚಾರಮಾಡುತ್ತ ಹೋದರೆ, ಅಂದರೆ, ಅಹಂಕಾರಭಾವನೆಯ ಬೆಳವಣಿಗೆಗೆ ಗೀತೆಯು ಹಾಕಿಕೊಟ್ಟ ಮೂಲ ತತ್ವಗಳನ್ನು ಇಟ್ಟುಕೊಂಡು ವಿಚಾರಮಾಡುತ್ತ ಹೋದರೆ ನಮ್ಮ ಅನೇಕ ತಪ್ಪುಗಳು ನಮಗೆ ಗೊತ್ತಾಗುವುವು.

ಕೊನೆಗೆ ಹೇಳುವುದೇನೆಂದರೆ, ಗೀತೆಯಲ್ಲಿ ಪ್ರತ್ಯಕ್ಷವಾಗಿ ಈ ಪ್ರಶ್ನೆಯ ಚರ್ಚೆಯಾಗಿರದಿದ್ದರೂ ಸ್ವಧರ್ಮ ಮತ್ತು ಸರ್ವಭೂತಹಿತ ಧರ್ಮ ಇವುಗಳನ್ನು ಒಂದುಗೂಡಿಸಿ ಹೇಗೆ ಸಾಧಿಸಬೇಕೆಂಬ ಬಗ್ಗೆ ಗೀತೆಯು ಹಲವು ತತ್ವಗಳನ್ನು ಹೇಳಿದೆ. ಅವುಗಳನ್ನು ನಾವು ಯಥಾಯೋಗ್ಯವಾಗಿ ರಾಷ್ಟ್ರೀಯತ್ವಕ್ಕೆ ಅನ್ವಯಿಸಿ ಕೊಳ್ಳಬಹುದು.

— ಆಲೂರ ವೆಂಕಟರಾಯ

# ಪಾರ್ತಿ ಸುಬ್ಬ

ನನ್ನ ಪರಮಾಪ್ತರಾಗಿದ್ದ ವೈಕುಂಠವಾಸಿ (ವೈ. ವಾ.) ಕುಂಬಳೆಯ ಕವಿರತ್ನ ನರಸಿಂಹ ಲಕ್ಷ್ಮಣನಾಯಕರೊಂದಿಗೆ (ಕ್ರಿಸ್ತಶಕ ೧೮೭೪–೧೯೪೫) ಪಾರ್ತಿ ಸುಬ್ಬನು ಯಾವಂದಿನವನಾಗಿರಬಹುದು ಎಂದು ನಾನೊಮ್ಮೆ (೧೯೩೯) ವಿಚಾರಿಸಿದ್ದಲ್ಲಿ ಅವರು ಹೀಗೆ ತಿಳಿಸಿದರು–

ಆ ನಾಯಕರ ಸಾಕಷ್ಟು ಹಿರಿಯ ಮಿತ್ರರಾದ ಹಾಗೂ ೯೦ ವರ್ಷಗಳಿಗೆ ದೀರ್ಘಾಯುಷಿಯಾಗಿ ಬಾಳಿದ ಕುಂಬಳೆಯ ಶ್ರೀ ಶ್ರೀ ಅನಂತ ಶಾನುಭಾಗ (೧೮೬೦–೧೯೫೦) ಎಂಬ ಪ್ರಸಿದ್ಧ ಅಡಿಕೆಯ ಹರದರೊಬ್ಬರು, ಅಡಿಕೆಯನ್ನು ಕೊಂಡುಕೊಳ್ಳಲಿಕ್ಕೆ ಕುಂಬಳೆಯ ನೆರೆಗ್ರಾಮಗಳಿಗೆ ಆಗಾಗ್ಗೆ ಹೋಗುತ್ತಲಿದ್ದವರು ಕುಂಬಳೆಯಿಂದ ೨–೩ ಮೈಲುಗಳೊಳಗೆ ಉಳ್ಳ ಕೋಟಕುಂಜಿಯ ಬಳಿಯ ದೇಶಮಂಗಲ ಎಂಬ ಹಳ್ಳಿಗೆ ಹೋಗುತಿದ್ದಾಗ, ಅಲ್ಲಿದ್ದ ಸುಬ್ಬಿ ಎಂಬೊಬ್ಬ ಮುದುಕಿಯ ಮನೆಯಲ್ಲಿ ತಂಗಿ, ಅಲ್ಲಿ ತಮ್ಮ ಕೈಯಡಿಗೆಯನ್ನು ಮಾಡುತ್ತಿದ್ದರಂತೆ. ಇದು ಸುಮಾರು ೧೮೭೯ನೆಯ ಇಸವಿಯ ಕಥೆ. ಆ ಸುಬ್ಬಿ ದೇಶಮಂಗಲ ದೇವಸ್ಥಾನದ ಪಾಟಾಳಿಯೊ ಪಾಟಾಳಿಗಳ ಮನೆತನದವನೊ ಆದ ಪಾರ್ತಿ ಸುಬ್ಬನ ಪ್ರಾಯಶಃ ಒಬ್ಬಳೇ ಮಗಳ ಮಗಳು. ಆತನಿಗೆ ಗಂಡು ಸಂತತಿ ಇದ್ದಿಲ್ಲ, ಸುಬ್ಬಿಗೆ ಮಕ್ಕಳಿರಲಿಲ್ಲ. ಆಗ್ಗೆ ಆಕೆಗೆ ಸುಮಾರು ೬೦ ವರ್ಷ ಪ್ರಾಯ, ಅಂದರೆ ಆಕೆ ಹೆಚ್ಚು ಕಡಿಮೆ ೧೮೧೯ನೆಯ ಇಸವಿಯಲ್ಲಿ ಹುಟ್ಟಿರಬೇಕು.

ಹಾಗಾದರೆ ಸುಭಾನುಸಂವತ್ಸರದಲ್ಲಿ ರಚಿತವಾಯಿತೆಂದಿರುವ "ರಾವಣೋದ್ಭವ" ಎಂಬ ಯಕ್ಷಗಾನ ಪ್ರಬಂಧದ ಕೊನೆಯ

ರಸಿಕಂ ರಸಾರ್ದ್ರಚಿತ್ತಂ
ಪೊಸದೇಸಿಯ ಕಬ್ಬಿಗಮೊವಜಂ ಪಾರ್ವತಿಜಂ
ಕುಶಲಿಗ ಯಕ್ಷರ ಸಾಹಿತಿ
ಯಸುವಳಿಸಿದ ದುರ್ಮತಿ ಪೆಸರಿರದಿರ್ಕೆಂದುಂ

ಎಂಬೀ ಕಂದ ಪದ್ಯದಲ್ಲಿ "ಪೊಸ ದೇಸಿಯ ಕಬ್ಬಿಗ" ಎಂದೂ "ಓವಜ" ಎಂದೂ "ಯಕ್ಷರ ಸಾಹಿತಿ" ಎಂದೂ "ಪಾರ್ವತಿಜ" ಎಂದೂ ಮಿಕ್ಕವರಿಗೆ ಸಲ್ಲದ ಗುಣವಾಚಿಗಳಿಂದ ಇಷ್ಟು ಸ್ಪಷ್ಟವಾಗಿ ಬಣ್ಣಿಸಲ್ಪಟ್ಟಾತನು, ಹೊಸತಾದ ದೇಶಿಯ ಅಂದರೆ ಜಾನಪದ ಸಾಹಿತ್ಯದ ಕಬ್ಬಿಗನು ಅಂದರೆ ಕವಿಯೂ, "ಓವಜ"ನು ಅಂದರೆ, ಆ ಸಾಹಿತ್ಯದ ಆಚಾರ್ಯನೂ ಗುರುವೂ, "ಯಕ್ಷರ ಸಾಹಿತಿ ಕುಶಲಿಗ" ಎಂದರೆ ಯಕ್ಷರ ಗಾನ ಸಾಹಿತ್ಯದಲ್ಲಿ ನಿಪುಣನೂ, ಆದ ಪಾರ್ವತಿಯ ಮಗನಾದ ಸುಬ್ಬನೇ ಅಂದರೆ ಪಾರ್ತಿ ಸುಬ್ಬನೇ ವಿನಾ ಅನ್ಯನಲ್ಲ ಎಂದು ಬೇಕಾದಷ್ಟು ನಿಸ್ಸಂಶಯವಿರುವುದರಿಂದ, ಮೇಲೆ ಕಂಡಿರುವಂತೆ ಸುಮಾರು ೧೬೮೧ನೆಯ ಇಸವಿಯಲ್ಲಿ ಹುಟ್ಟಿದ ಸುಬ್ಬಿಯ ಮಾತಾಮಹನಾದ ಆತನ "ಅಸುವಳಿಸಿದ" ಅಂದರೆ ಆತನು ಮರಣಪಟ್ಟ ದುರ್ಮತಿ ಸಂವತ್ಸರವೆಂದರೆ ೧೬೮೧-೧೬೮೨ ನೇಯ ಇಸವಿ ತಾನೆ. ಆತ ಏವ ಆತನು ಕ್ರಿ. ಶ. ೧೬೩೦ರಿಂದ ೧೬೫೦ ರೊಳಗೆ ಹುಟ್ಟಿರಬೇಕು, ಹಾಗೂ ಆ "ರಾವಣೋದ್ಭವ" ರಚಿತವಾದ ಸುಭಾನು ಸಂವತ್ಸರವೆಂದರೆ ಕ್ರಿ. ಶ. ೧೬೬೩-೬೪ನೆಯ ಇಸವಿಯಾಗಿರಬೇಕು.

ಇದೇ ಬಗ್ಗೆ ಮತ್ತೊಂದು ಆಧಾರವೂ ಇದೆ. ಪಾರ್ತಿ ಸುಬ್ಬನ ಸಮಸಾಮಯಿಕನಾಗಿ ಕೆಂಗಣ್ಣನಾಯಕ ಎಂಬ ಪ್ರಸಿದ್ಧ ವೇಷಧಾರಿಯೊಬ್ಬನು ಪ್ರಾಯಶಃ ಪಾರ್ತಿ ಸುಬ್ಬನು ಭಾಗವತನಾಗಿದ್ದ ಮೇಳದಲ್ಲೇನೋ ಇದ್ದನೆಂದು ಇತ್ತ ಕಡೆ ಕರ್ಣಾಕರ್ಣಿಕೆಯಾಗಿದೆ. ಆ ಕಾಲದಲ್ಲಿ ಈ ಕಡೆ ಹಬ್ಬಿದ ರಾಜಕೀಯ ಅನಾಯಕತ್ವಕ್ಕೆ ಸರಿಯಾಗಿ ಆ ಕೆಂಗಣ್ಣನಾಯಕನು ಟಿಪ್ಪುಸುಲ್ತಾನನ ಸೈನಿಕರೊಂದಿಗೂ, ಕ್ರಿ.ಶ. ೧೭೯೯ರಲ್ಲಿ ಟಿಪ್ಪು ಮಡಿದ (೪-೫-೧೭೯೯) ಬಳಿಕ ತುಳುನಾಡಿನ ಆಡಳಿತವನ್ನು ಆಂಗ್ಲರು ಕೈಯ್ಕೊಳ್ಳುತ್ತಲೆ ಅವರ ಸೈನಿಕರೊಂದಿಗೂ ಕಾದಾಡಿ ಅವರನ್ನು ದಿಕ್ಕಾಪಾಲಾಗಿ ಓಡಿಸಿದ್ದ ಕಾರಣ ಆತನಿಗೆ ಲೋಕರೂಢಿಯಲ್ಲಿ ಸಿಡಿಲಮರಿ ಕೆಂಗಣನಾಯಕ ಎಂದು ಮೇಲು ಹೆಸರಾಯಿತಂತೆ. ಇಲ್ಲಿ "ಸಿಡಿಲಮರಿ" ಎಂದರೆ ಮಿಂಚು. ಆದರೆ ಅದೊಂದು ತೀರ ಅಪೂರ್ವವಾದ ಹೆಸರು. ಕನ್ನಡ ಸಾಹಿತ್ಯದಲ್ಲಿ (ನಾನು ಬಲ್ಲಷ್ಟರ ಮಟ್ಟಿಗೆ) ಹೇಗೂ ಆ ಅರ್ಥದಲ್ಲಿ ಇಲ್ಲವಷ್ಟೆ;

ಕನ್ನಡನಾಡಿನಲ್ಲಾದರೂ ಪ್ರಾಯಶಃ ಅವರಿಗೆ ಇದ್ದಿಲ್ಲದ ಹೆಸರು.* ಆ ಹೆಸರನ್ನು ಪಾರ್ತಿ ಸುಬ್ಬನು ತನ್ನ "ಅಂಗದ ಸಂಧಾನ" ಎಂಬ ಯಕ್ಷಗಾನ ಪ್ರಸಂಗದಲ್ಲಿ ಬಳಸಿರುತ್ತಾನೆ—

ಬಲು ಬಿಂಕವೆಸೆಯೆ ಸಿ
ಡಿಲ ಮರಿಯಂತಿರ್ಪ
ಕಲಹವಿಕ್ರಮಸಂಗಡ

ಈ ಕಾರಣವೂ ಆತನು ಕ್ರಿ.ಶ. ೧೮೦೦ರ ವರೆಗಾದರೂ ಜೀವಿಸಿದ್ದನೆಂದು ಕಂಡಿತವಾಗಿ ಸಿದ್ಧವಾಗುತ್ತದೆ.

ಇವಲ್ಲದೆ ಕವಿರತ್ನ ನರಸಿಂಹನಾಯಕರ ತಂದೆ ವೈ. ವಾ. ಕುಂಬಳೆಯ ಲಕ್ಷ್ಮಣನಾಯಕರು (ಕ್ರಿ.ಶ. ೧೮೧೨–೧೯೦೭) ಹುಟ್ಟುವ ಕೆಲವು ವರ್ಷಗಳ ಹಿಂದೆ ಪಾರ್ತಿ ಸುಬ್ಬನು ಗತಿಸಿದ್ದನೆಂದೂ ಆತನು ಕುಂಬಳೆಯ ದೊಡ್ಡ ರಾಯಪ್ಪ ನಾಯಕರು ಕಟ್ಟಿದ ಕುಂಬಳೆಯ ದಶಾವತಾರದ ಮೇಳದಲ್ಲಿ ಭಾಗವತನಾಗಿ ಇದ್ದನೆಂದೂ ಅವರು ಹುಟ್ಟುವ ಕೆಲವರ್ಷಗಳ ಮುಂಚಿನ ಅವರು ಕೇಳಿಬಲ್ಲ ಸುದ್ದಿಯನ್ನು ಹೇಳಿರುವ ನೆನಪೂ ನನಗಿದೆ.

ಪಾರ್ತಿ ಸುಬ್ಬನ ಯಾವುದೋ ಒಂದು ಯಕ್ಷಗಾನ ಪ್ರಸಂಗದಲ್ಲಿ (ಪ್ರಾಯಶಃ ಬಹುಮಂದಿ ಆತನ ಕೃತಿ ಎಂಬ "ಬಾಲಲೀಲೆ"ಯಲ್ಲೇನೋ) ತಾನು "ವೆಂಕಣಾರ್ಯನ ಸತಿ ಸುಗುಣೆ ಪಾರ್ತಿ ಎಂಬಳ ಮಗಂ" ಎಂದು ಆತನು ಹೇಳಿಕೊಂಡಿರುತ್ತಾನೆಂದು ಆ ಹಾಡನ್ನು ಮೇಲೆ ಹೆಸರಿಸಿರುವ ಅನಂತ ಶಾನುಭಾಗರು ತನಗೆ ಕೇಳಿಸಿರುತ್ತಾರೆಂದು ಕವಿರತ್ನ ನರಸಿಂಹ ನಾಯಕರು ನನಗೆ ತಿಳಿಸಿರುತ್ತಾರೆ. ಅದನ್ನು ಒಪ್ಪಿದರೆ ಪಾರ್ತಿ ಸುಬ್ಬನ ತಂದೆಯ ಹೆಸರು ವೆಂಕಣಾರ್ಯ, ಅಂದರೆ ಬಹುಶಃ ವೆಂಕಣ್ಣಯ ಎಂದೂ, ತಾಯಿಯ ಹೆಸರು ಪಾರ್ತಿ, ಅಂದರೆ (ಮುಂದೆ ತಿಳಿವಂತೆ) ಪಾರ್ವತಿ ಎಂದೂ ಗೊತ್ತಾಗುತ್ತದೆ. ಹೇಗೂ ಪಾರ್ತಿ ಸುಬ್ಬನದೇ ಎಂದು ಕಂಡಿತ ಉಳ್ಳ "ಪಟ್ಟಾಭಿಷೇಕ" ಎಂಬ ಯಕ್ಷಗಾನ ಪ್ರಬಂಧದ ಈ ಆದಿಮ ಶಾರ್ದೂಲವಿಕ್ರೀಡಿತ ವೃತ್ತದಿಂದ—

ಧಾತ್ರೀಮಂಡನ ಕಣ್ವನಾಮ ಪುರ
ದೊಳ್ ಮೆಯ್ದೋರಿ ಭಕ್ತಾಳಿಯಂ
ಸತ್ಪಾದಾಬ್ಜ ಮರಂದದಿಂ ತಣಿಯಿಸುತ್ತಾ
ರಯ್ವ ಶ್ರೀಕೃಷ್ಣನಾ

---

* ಮುಂದಿಯ ಮಾತಿನಲ್ಲಿ "ಸಿಡಿಲ ಮರಿ" ಎಂದರೆ ಅಣಬೆ (ಅಳಂಬೆ)=mushroom ಎಂದು ಅರ್ಥವಾಗುತ್ತದೆ (ಅದು ಸಿಡಿಲಿನ ವೊಳಗಿಗೆ ಹುಟ್ಟುತ್ತದೆಂದು ನಂಬುವ ಕಾರಣ).

ಭಕ್ತಿಸ್ತ್ರೋತದೊಳೊಂದುಗೂಡಿ ಹರಿ
ಯುಕ್ತೀ ಪಾರ್ವತೀ ನಂದನಂ
ಬತ್ತೀಸಂಕೆಯ ರಾಗತಾಳಗಳೊಳೀ
ರಾಮಾಯಣಂ ಪಾಡಿದಂ

(ಈ ವೃತ್ತದಲ್ಲಿಯ ಪ್ರಾಸಾಕ್ಷರಗಳನ್ನು ಗಮನಿಸಿರಿ)

ಆತನು "ಕಣ್ವನಾಮ ಪುರದ" ಅಂದರೆ ತುಳುನಾಡಿನ ಕುಂಬಳೆಯ ಶ್ರೀ ಕೃಷ್ಣ ದೇವರ ಆರಾಧಕನೆಂದೂ, "ಪಾರ್ವತೀ ನಂದನಂ" ಅಂದರೆ ಆತನ ತಾಯಿಯ ಹೆಸರು ಪಾರ್ವತಿ ಎಂದೂ ವ್ಯಕ್ತವಾಗುತ್ತದೆ. ರಾವಣೋದ್ಭವದಿಂದ ಮೇಲೆ ಉದ್ಧರಿಸುವ ಆ ಕಂದಪದ್ಯದಲ್ಲೂ ಆತನನ್ನು "ಪಾರ್ವತಿಜಂ" ಎಂದದೆ. ಆ ಪಾರ್ವತಿಯೇ ಜನವಾಣಿಯಲ್ಲಿ ಪ್ರಾಯಶಃ ಆಕೆಯ ಮನೆಹೆಸರಾದ ಪಾರ್ತಿ ಆಯಿತು.

ಪಾರ್ತಿ ಸುಬ್ಬನು ದೇಶಮಂಗಲದ ದೇವಸ್ಥಾನದ ಪಾಟಾಳಿಯೊ ಪಾಟಾಳಿಗಳ ಮನೆತನದವನೊ ಎಂದೆವಲ್ಲ? ಪಾಟಾಳಿ ಎಂದರೇನು? ಪಾಟಾಳಿ ಎಂದರೆ ಪ್ರಾಯಶಃ ಪಾಡಾಳಿ (ಕನ್ನಡ ಶಬ್ದಮಣಿದರ್ಪಣ ಸೂತ್ರ ೨೦೨), ಪಾಡಾಳಿ ಎಂದರೆ ಹಾಡುಗಾರ, ಅಂದರೆ ಆಯಾ ದೇವಸ್ಥಾನಗಳಲ್ಲಿ, ನಾನು ಬಲ್ಲಷ್ಟರ ಮಟ್ಟಿಗೆ ಮುಖ್ಯತಃ ತುಳುನಾಡಿನ ದ್ರಾವಿಡ ಸಂಪ್ರದಾಯದ ದೇವಸ್ಥಾನಗಳಲ್ಲಿ, ದೇವರ ಮುಂದೆ ಆಯಾಹೊತ್ತುಗಳಲ್ಲಿ ದಿನಾಲೂ ಹಾಡುವಾತ ಎಂದು ಆ ಪದದ ಮೂಲಾರ್ಥವೆಂದು ತೋರುತ್ತದೆ. ಕ್ರಮೇಣ ಆ ವೃತ್ತಿಯಿಂದ ಮೇಲೇರಿ ಈಗ ಪಾಟಾಳಿ ಹೆಚ್ಚಾಗಿ ದೇವಸ್ಥಾನಗಳಲ್ಲಿ ಪಾರುಪತ್ಯಗಾರನಾಗಿರುತ್ತಾನೆ: ಪಾರ್ತಿ ಸುಬ್ಬನು ತನ್ನ ಕೃತಿಗಳಲ್ಲಿ ದೇಶಮಂಗಲದ ದೇವರ ಹೆಸರೆತ್ತದೆ ಕಣ್ವಪುರದ ಅಂದರೆ ಕುಂಬಳೆಯ ಶ್ರೀ ಕೃಷ್ಣನನ್ನೇ ಸ್ಮರಿಸಿರುವುದರಿಂದ, ಆತನು ದೇಶಮಂಗಲದ ದೇವಸ್ಥಾನದಲ್ಲಿ ತಾನೇ ಪಾಟಾಳಿಯಾಗಿದ್ದನೆಂಬುದಕ್ಕಿಂತ ಆ ಪಾಟಾಳಿಕೆ ಪ್ರಾಯಶಃ ಆತನ ಮನೆತನದ ವೃತ್ತಿಯಾಗಿರಬೇಕೇ ಹೊರತು ಆತನ ಸ್ವಂತ ಉದ್ಯೋಗವಾಗಿರಲಿಲ್ಲ. ಆ ಕಾರಣ ಅದನ್ನು ಆತನು ತಾನೇ ಅಲ್ಲ ಆತನ ಕುಟುಂಬದ ಬೇರೆ ಯಾರೊ ಅಲ್ಲಿ ನಿರ್ವಹಿಸುತ್ತಿರಬೇಕು ಎಂದು ನಿಶ್ಚಯಿಸಬಹುದು.

ಆತನು ಕುಂಬಳೆಯ ಬಯಲಾಟದ ಮೇಳದಲ್ಲಿ ಭಾಗವತನಾಗಿದ್ದನೆಂದು ಲೋಕವಾದವಿದೆ. ಆತನ ಎಲ್ಲವೆಂಬಂತೆ ಕೃತಿಗಳಲ್ಲಿ ಕೊನೆಯ ಮಂಗಲಪದವಾಗಿರುವ "ಎದೆಯಾರತಿ ಎತ್ತಿರೆ" ಎಂದು ಪ್ರತಿ ಚರಣವೂ ಮುಗಿವ ಆ ಹಾಡಿನಲ್ಲಿ "ಕಣ್ವಪುರಪತಿಗೆ ಮೇಳದೊಳೊಪ್ಪಿಸುವೆನು" (—ಕುಂಬಳೆಯ ಶ್ರೀ ಕೃಷ್ಣದೇವರಿಗೆ ಮೇಳದೊಂದಿಗೆ ಒಪ್ಪಿಸುವೆನು) ಎಂದಿರುವಲ್ಲಿಂದ ಆ ಜನಶ್ರುತಿ ಸಾಕಷ್ಟು ಪುಷ್ಟವಾಗುತ್ತದೆ. ೧೮೦೦ನೆಯ ಇಸವಿಯಲ್ಲಿ ವೈಕುಂಠವಾಸಿಯಾದ ಕುಂಬಳೆಯ

ದೊಡ್ಡರಾಯಪ್ಪ ನಾಯಕರೆಂಬ ಶ್ರೀಮಂತರು ಕುಂಬಳೆಯಲ್ಲಿ ಒಂದು ದಶಾವತಾರದ ಆಟದ, ಅಂದರೆ ಬಯಲಾಟದ ಮೇಳವನ್ನು ನೆರಸಿ ಅದನ್ನು ಬಂಟವಾಳ ದತ್ತಣ ವೇಂಕಟೇಶ ಭಾಗವತ ಎಂಬವನಿಗೆ ಒಪ್ಪಿಸಿದ್ದರು. ಪಾರ್ತಿ ಸುಬ್ಬನು ಆ ಮೇಳದಲ್ಲಿ ವೇಂಕಟೇಶ ಭಾಗವತನಿಗಿಂತ ಮುಂಚೆ ಭಾಗವತನಾಗಿ ಇದ್ದಿರಬಹುದು. ಹಾಗೆಯೇ ಭಾಗವತಿಕೆಯಲ್ಲಿ "ನ ಭೂತೋ ನ ಭವಿಷ್ಯತಿ" ಎಂಬಷ್ಟರ ಪರಾಕಾಷ್ಠೆಗೆ ಅಯ್ದಿ ಕೀರ್ತಿಗೊಂಡ ವೈ.ವಾ.ಮೂಲಿಕೆಯ ಮಂಜುನಾಥ ಭಾಗವತರೂ, ಅವರಂದಿನ ಹಾಗೂ ಅವರ ಹಿಂದಿನ ಭಾಗವತರೂ, ಎಲ್ಲರೆಂಬಂತೆ ಮೊತ್ತಮೊದಲು ವೇಷಧಾರಿಗಳಾಗಿ ರಂಗಾವತರಣ ಮಾಡಿ ತಾನೇ ಆಮೇಲೆ ಭಾಗವತಿಕೆಯ ಜಾಗಟೆ ಹಿಡಕೊಂಡ ಐತಿಹ್ಯಕ್ಕೆ ಅನುಗುಣವಾಗಿ ಪಾರ್ತಿ ಸುಬ್ಬನೂ ವೇಷಧಾರಿಕೆಯಿಂದ ತಾನೆ ಭಾಗವತಿಕೆಗೆ ಹೋಗಿದ್ದನೆಂದು ಊಹಿಸ ಬಹುದು.

ಪಾರ್ತಿ ಸುಬ್ಬನು ತಿರುವಾಂಕೋಡು ರಾಜ್ಯಕ್ಕೆ (Travancore State) ಹೋಗಿ ಅಲ್ಲಿ ಕೊಂಚ ಸಂಸ್ಕೃತವನ್ನು ಕಲಿತಿದ್ದನೆಂದೂ ತಾನು ಅಲ್ಲಿ ಕಂಡ "ಕೂತ್ತುಕ್ಕಳಿ"ಗಳ ("ಕೂತ್ತುಕ್ಕಳಿ" ಅಂದರೆ ಕುಣಿದಾಡುವ ಆಟ) ಬಗೆಯುವೇ ವೇಷಗಳನ್ನು ಇಲ್ಲಿ ನಮ್ಮ ತುಳುನಾಡಿನಲ್ಲಿಯೂ ಬರೆಯಿಸಿದನೆಂದೂ ಒಂದು ಪ್ರವಾದವಿದೆ. ಈ ಜನಶ್ರುತಿಯಲ್ಲಿ ಅಲ್ಲಿಯ ವೇಷಗಳನ್ನು ಇಲ್ಲಿ ಆಚರಣೆಗೆ ತಂದ ನೆಂಬುದನ್ನು ಒಂದು ವೇಳೆ ಒಪ್ಪಬಹುದಲ್ಲದೆ, ಆತನು ಅಲ್ಲಿ ಸಂಸ್ಕೃತವನ್ನೂ ಕಲಿತನೆಂಬುದನ್ನು ಅಷ್ಟು ನಂಬಲಾಗುವುದಿಲ್ಲ. ಏಕೆಂದರೆ ಆತನಿಗೆ ಸಂಸ್ಕೃತದ ಪರಿಜ್ಞಾನ ಅಷ್ಟರಮಟ್ಟಿಗೆ ಇದ್ದಂತೆ ಆತನ ಕೃತಿಗಳಿಂದ ಬಯಲಾಗುವುದಿಲ್ಲ.

ದಶಾವತಾರದ ಆಟಗಳ ಲಕ್ಷಣಗಳನ್ನೂ ಕ್ರಮಗಳನ್ನೂ ಸೂತ್ರಕಲ್ಪವಾಗಿ ವಿವರಿಸಿದ್ದು, ಸಂಸ್ಕೃತ ಸಾಹಿತ್ಯಕ್ಕೆ ಪಾಣಿನಿಯ ಅಷ್ಟಾಧ್ಯಾಯಿ ಹೇಗೋ ಹಾಗೆ ಯಕ್ಷಗಾನದ ಆಟಗಳಿಗೆ ಮೂಲಾಧಾರವಾಗಿರುವ "ಸಭಾಲಕ್ಷಣ" ಎಂಬ ಆ ಉತ್ತಮವಾದ ಗ್ರಂಥದ ರಚಕನು ಪಾರ್ತಿ ಸುಬ್ಬನೆಂದು ಒಂದು ಮತ, ಆತನಲ್ಲ, ಆತನಿಗಿಂತ ಹಿಂದಣ ಹಾಗೂ ಕಾಸರಗೋಡಿನ ಕೆಲದ ಮದೂರು ಎಂಬಲ್ಲಿಯ ಶ್ರೀ ವಿಘ್ನೇಶ ದೇವರ ಆರಾಧಕನಾದ ಬೆನಕಯ್ಯ ಭಾಗವತನೆಂದು ಮತ್ತೊಂದು ಮತ. ಹೀಗೆ ಆ ಕುರಿತು ಬಲ್ಲವರಲ್ಲಿ ದ್ವೈಧವಿರುವುದರಿಂದ ಆ ಪ್ರಶ್ನೆಯನ್ನು ಒತ್ತಟ್ಟಿಗಿಟ್ಟರೆ, ಪಾರ್ತಿ ಸುಬ್ಬನಿಂದ ರಚಿತವಾದುವೆಂದು ನಿಶ್ಚಯವಿರುವ ಇವು ಎಂಟಾದರೂ ಯಕ್ಷಗಾನ ಪ್ರಸಂಗಗಳಿವೆ—(೧) ಪಟ್ಟಾಭಿಷೇಕ, (೨) ಪಂಚವಟಿ, (೩) ವಾಲಿ-ಸುಗ್ರೀವರ ಕಾಳಗ, (೪) ಉಂಗುರ ಸಂಧಿ ಅಥವಾ ಚೂಡಾಮಣಿ, (೫) ಸೇತುಬಂಧನ, (೬) ಅಂಗದ ಸಂಧಾನ, (೭) ಕುಂಭಕರ್ಣನ ಕಾಳಗ ಮತ್ತು (೮) ಇಂದ್ರಜಿತುವಿನ ಕಾಳಗ, ಇವೆಲ್ಲವೂ ರಾಮಾಯಣದಿಂದ ತಾನೇ ಎತ್ತಿಕೊಂಡ ಕಥಾಪ್ರಸಂಗಗಳು. ಇವನ್ನು ರಚಿಸುವಲ್ಲಿ ಆತನು ಕನ್ನಡ ತೊರವೆಯ ರಾಮಾಯಣದಿಂದ ಎರ

ಕೊಂಡಿರುತ್ತಾನೆ. ಪಟ್ಟಾಭಿಷೇಕದಿಂದ ಸರಾಗವಾಗಿ ಮುಂದೆ ಸಾಗುವ ಈ ರಾಮಾಯಣದ ಕಥೆಗಳ ಓಳಿಯಲ್ಲಿ ನಡುವಣ ಭರತಸಮಾಗಮವೂ ಕೊನೆಯ ರಾವಣನ ಕಾಳಗವೂ ಇಲ್ಲವೆಂಬುದು ಸೋಜಿಗ. ಈ ಪ್ರಸಂಗಗಳಲ್ಲಿ ಯಾವುದೂ ಉದ್ದವಾಗಿಲ್ಲ; ವಾಲಿ-ಸುಗ್ರೀವರ ಕಾಳಗ, ಕುಂಭಕರ್ಣನ ಕಾಳಗ, ಇಂದ್ರಜಿತ್ತುವಿನ ಕಾಳಗ, ಇವಂತೂ ಬಲು ಚಿಕ್ಕವು.

ಕನ್ನಡ ಸಾಹಿತ್ಯ ದೇಸಿ ಎಂದೂ ಮಾರ್ಗಿ ಎಂದು. ಎರಡು ವಿಧವಾಗಿದೆ. ಅವಲ್ಲಿ ಮಾರ್ಗಿಗಿಂತ ದೇಸಿ ಹಳದು, ಅದೇ ಮೂಲ ಸಾಹಿತ್ಯ, ಅದೇ ಸ್ವಭಾವಸಿದ್ಧವಾದ ಕನ್ನಡ ಸಾಹಿತ್ಯ. ದೇಸಿ ಎಂದರೆ ಊರ ಬಾವಿಯಂತೆ; ನೀರು ತಿಳಿದಾಗಿದೆ, ತಣ್ಣಗಾಗಿದೆ. ಮಾತ್ರವಲ್ಲ, ಸೇದಿದಷ್ಟು ಇದೆ, ಊರಿನ ಎಲ್ಲರಿಗೂ ಸಾಲುತ್ತದೆ. ಮಾರ್ಗಿಯಾದರೆ ಹೊಳೆಯಂತೆ; ಎಲ್ಲಿಯೋ ಹುಟ್ಟಿ ಅನೇಕ ಊರುಗಳ ದಾರಿಯಾಗಿ ಹರಿದು ಬರುತ್ತದೆ; ಅದೆಷ್ಟೋ ಬಗೆಯ ಜಲಜಂತುಗಳನ್ನು ಒಳಕೊಂಡಿದೆ, ಎಷ್ಟೋ ಜಲಯಾನಗಳನ್ನು ತಳಕೊಂಡಿದೆ, ಎಷ್ಟೋ ಬಗೆಯ ಧಾತುಗಳ ಪದರುಗಳನ್ನು ಅದ್ದಯಿಸುತ್ತದೆ, ಎಷ್ಟೋ ಮಂದಿ ತೀರ್ಥವೆಂದು ಮಿಂದವರನ್ನು ಶುದ್ಧಯಿಸುತ್ತದೆ, ತನ್ನ ದಂಡೆಯ ಆಯಾ ಊರವರಿಗೆಲ್ಲ ತನ್ನ ನೀರನ್ನು ಉಣಿಸುತ್ತದೆ, ತಣಿಸುತ್ತದೆ. ದೇಸಿ ಸಾಮಾನ್ಯ ಜನರ, ಮುಖ್ಯತಃ ಹಳ್ಳಿಯವರ ಜೀವನವನ್ನು ಬಿಂಬಿಸುವುದಾದರೆ, ಮಾರ್ಗಿ ಮಹಾ ಜನರ, ವಿಶೇಷತಃ ಪಟ್ಟಣಿಗರ ನಾಗರಿಕರ ಜೀವನವನ್ನು ಚಿತ್ರಿಸುತ್ತದೆ. ಆ ಕಾರಣ ಅವುಗಳ ಆ ಕೃತಿಯಲ್ಲೂ ಪ್ರಕೃತಿಯಲ್ಲೂ ತುಂಬ ಅಂತರವೂ ಇದೆ. ವೃತ್ತಕಂದಗಳಲ್ಲೂ, ಚಂಪುವಿನಲ್ಲೂ, ಷಟ್ಪದಿಗಳಲ್ಲೂ, ರಗಳೆಗಳಲ್ಲೂ ರಚಿಸಿದ ಕಾವ್ಯಗಳು ಹೇಗೆ ಮಾರ್ಗಿಯಲ್ಲಿ ಸೇರುತ್ತವೊ ಹಾಗೆ ಯಕ್ಷಗಾನ ಪ್ರಸಂಗಗಳೂ, ಲಾವಣಿಗಳೂ, ಜಾವಳಿಗಳೂ, ಕೀರ್ತನೆಗಳೂ, ಮದುವೆಯ ಹಾಡುಗಳೂ, ತೊಟ್ಟಿಲ ಹಾಡುಗಳೂ ಮೊದಲಾದುವೆಲ್ಲವೂ ದೇಸಿಯಲ್ಲಿ ಕೂಡುತ್ತವೆ. ಅವುಗಳಲ್ಲಿ ಯಕ್ಷಗಾನವೆಂದರೆ ದೇಸಿಯ ಕಣ್ಣು. ಯಕ್ಷಗಾನಗಳಲ್ಲಿ ಬರೀ ಹಳ್ಳಿಗರನ್ನಲ್ಲ, ರಾಮಾಯಣ–ಭಾರತಗಳ ಮಹಾವೀರರನ್ನೇ ಚಿತ್ರಿಸಿದೆಯಾದರೂ, ಆ ಚಿತ್ರಣದ ಹೊರಿಗೆ ದೇಸಿಯ ಸಾಮಾನ್ಯರ ದೃಷ್ಟಿಯಿಂದಲೇ ಹೊರತು ಮಾರ್ಗಿಯ ವಿದ್ವಜ್ಜನರ ದೃಷ್ಟಿಯಿಂದಲ್ಲ.

ಪಾರ್ತಿ ಸುಬ್ಬನ ಪ್ರಸಂಗಗಳಲ್ಲಿ ದೇಸಿಗೆ ತಕ್ಕಂತೆ ಸಂಭಾಷಣೆಯೆಂದರೆ ನಾವು ನೀವು ಪಡಸಾಲೆಯಲ್ಲಿ ಕೂತು ಪಟ್ಟಾಂಗ ಹೊಡೆಯುವಷ್ಟರ ಸಲುಗೆಯ ಮಾತಿನಲ್ಲಿ, ಉದಾ: ಆತನ " ಪಂಚವಟಿ "ಯಲ್ಲಿ ಶೂರ್ಪಣಖೆಗೂ ರಾವಣನಿಗೂ ರಾವಣನಿಗೂ ಮಂಡೋದರಿಗೂ, " ವಾಲಿಸಂಹಾರ "ದಲ್ಲಿ ವಾಲಿಗೂ ಶ್ರೀರಾಮನಿಗೂ, " ಅಂಗದ ಸಂಧಾನ "ದಲ್ಲಿ ಅಂಗದನಿಗೂ ರಾವಣನಿಗೂ ನಡೆದ ಸಂಭಾಷಣೆ ಇತ್ಯಾದಿ. ಆತನ ಅಲಂಕಾರಗಳೆಂದರೆ ಗೋಧಿಯನ್ನು, ಹದವಾಗಿ ಬೀಸುವಲ್ಲಿ ಹಿಟ್ಟಿನೊಂದಿಗೆ ಸಹಜವಾಗಿ ಉದುರುವ ಸಜ್ಜಿಗೆಯಂತೆ, ಉದಾ: " ಅಳಲಿನ

ಮಳಲೊಳೂಬಾರದು ಮನವ" ("ಪಟ್ಟಾಭಿಷೇಕ") "ಅರಸಿನದ ಪುಡಿಗೆಮರಿ ದಂತಿಹುದು" ("ಪಂಚವಟಿ") "ಬೆಕ್ಕುಗಳಿಗು ಕೋಡು ಬಂದರೂ....ಸೊನ್ನೆಯೆ ತಾನಂಕೆಯೊದರೂ" (ಉಂಗುರಸಂಧಿ) "ಬೇರೆ ಬಲ್ಲವರಿಗೆ ಮರದೆಲೆಯನು ತಂದು ತೋರಲೇತಕೆ?" ("ಅಂಗದ ಸಂಧಾನ") "ಅನ್ನ ಹೋಗಿ ಬೀತು ತಂಗುಳಾಯ್ತು.... ಎಂದಿಗಾದರೆ ಈ ಶರೀರವೆರವಿನ ಹಾರ" ("ಕುಂಬಕರ್ಣನ ಕಾಳಗ") ಇತ್ಯಾದಿ. ಆತನ ಭಾಷೆ ಪುಸ್ತಕದ ಭಾಷೆಯಲ್ಲ, ಸಂತೆಯ ಭಾಷೆ; ಆತನ ಕೃತಿಗಳಲ್ಲಿ ಅಲ್ಲಲ್ಲಿ ಪ್ರಾಂತಿಯ ಪ್ರಯೋಗಗಳೂ ಇವೆ, ಉದಾ: "ಕರಕೊಣಕು"—ಕರಕೊಳ್ಳ ಲಕ್ಕು, "ಎನಕು"—ಎನಲಕ್ಕು, "ಮುಂದೆ ಗಟ್ಟಿಯೆನುತ್ತ ಮರಕೆ ಜೆಪುವು ದುಂಟೆ?"—("ತುಳು: ಜೆಪು"—ತಟ್ಟು, ತಟ್ಟಾಡು)—ತಟ್ಟುವುದುಂಟೆ?; "ಏನ್ಮ್ಯಾರಾವಣ?" "ಕಾಣ್ಮ್ಯಾ", "ಕೇಳ್ಮ್ಯಾ" "ಬಾಳ್ಮ್ಯಾ"— ಏನೋ?, ಕಾಣೋ, ಕೇಳೋ, ಬಾಳೋ ಎಂಬ ಅರ್ಥದಲ್ಲಿ ಇತ್ಯಾದಿ. ಆತನ ಕಂದಗಳು, ನಾನು ಕಂಡಿರುವ ಪ್ರತಿಗಳಲ್ಲಾದರೂ, ಕಂದ ಪದ್ಯಗಳ ಲಕ್ಷಣಗಳಿಗೆ ನೇರಾಗಿಲ್ಲ, ಉದಾ: "ಪಂಚವಟಿ"—

ದುರುಳಂ ಪಾಯುದಿ ಸೀತಾ
ತರುಣಿಯನೆತ್ತಿಕೊಂಡು ತಾನಂಬರ ಮಾರ್ಗದೊಳಂ
ಶರಧಿಯ ದಾಂಟುತ ಲಂಕಾ
ಪುರಕೆಯ್ತರೆ ಲಕ್ಷ್ಮಣ ರಾಮಸೊಳಿಂತೆಂಪಂ*

ಆತನ ಪ್ರಾಸಗಳು ಅಲ್ಲಲ್ಲಾದರೂ ಬಲುಬಡವಾಗಿವೆ. ನ್ಯೂನವಾಗಿವೆ, ಉದಾ: ಮೇಲೆ ಉದ್ಧರಿಸಿರುವ ಶಾರ್ದೂಲವಿಕ್ರೀಡಿತ ವೃತ್ತದಲ್ಲಿ, "ಧಾತ್ರೀ-ಸತ್ಪಾದ-ಭಕ್ತಿ-ಬತ್ತೀಸ," ಇತ್ಯಾದಿ. ಆದರೂ ಒಟ್ಟಿನ ಮೇಲೆ ಯಕ್ಷಗಾನ ಪ್ರಪಂಚದಲ್ಲಿ ಯಾವ ಸಾಧನವಿದೆಯೊ ಅದನ್ನು ಪಾರ್ತಿ ಸುಬ್ಬನು ತೀವೆ ಬಳಸಿದ್ದಾನೆ, ಯಕ್ಷಗಾನದ ಪ್ರತ್ಯೇಕ ತಂತಿಯನ್ನು ಬಾರಿಸಿದ್ದಾನೆ, ಆ ಬಾರಿಸುಹದಲ್ಲಿ ತುಂಬ ಯಶಸ್ವಿಯೂ ಆಗಿದ್ದಾನೆ. ಯಕ್ಷಗಾನದಲ್ಲಿ ವರಿಷ್ಠ ಕವಿಯೂ ಆಗಿದ್ದಾನೆ. ಆತನ ಪ್ರಸಂಗಗಳು ಹಳ್ಳಿಯವರನ್ನೇ ಅಲ್ಲ, ಹೊಳಲಿನವರನ್ನೂ ಮೆಚ್ಚಿಸಲಾಪವು, ಅವರನ್ನು ಎಷ್ಟೋ ಅಷ್ಟೇ ಮುಟ್ಟಿಗೆ ಇವರನ್ನೂ ಸೈ ಸೈ ಎಂದು ತಲೆದೂಗಿಸಲಾಪವು.

---

* ಈ ಕಂದಪದ್ಯದ ೨ನೆಯ ಚರಣದಲ್ಲಿ ಪ್ರಸ್ತಾರಕ್ಕೆ ಸರಿಯಾಗಿ ೨೦ ಮಾತ್ರೆಗಳು ಇರಬೇಕಾಗಿದ್ದಲ್ಲಿ ಇಲ್ಲಿ ೨೨ ಮಾತ್ರೆಗಳಿವೆ. ಒಂದು ವೇಳೆ "ಎತ್ತಿಕೊಂಡು" ಎಂಬುದನ್ನು "ಎತ್ತುತ" ಎಂದು ಮಾರ್ಪಡಿಸಿಕೊಂಡರೆ ೨೦ ಮಾತ್ರೆಗಳು ಆಗುತ್ತವಾದರೆ, ಆ ಚರಣದಲ್ಲಿ ೩ನೆಯ ಗಣವು ಕಂದಪದ್ಯದ ಲಕ್ಷಣಕ್ಕೆ ಬೇಕಾಗಿರುವಂತೆ ಜ-ಗಣವಾಗಲಿ ೪ ಲಘುಗಳ ಗಣವಾಗಲಿ ಆಗದೆ, "ತಾನಂ" ಎಂದು ಅಲ್ಲಿ ಸರ್ವದಾ ಸಲ್ಲದ ೨ ಗುರುಗಳ ಗಣವಾಗುತ್ತದೆ, ಮಾತ್ರವಲ್ಲ, ೪ನೆಯ ಚರಣದ ೩ನೆಯ ಗಣವೂ "ಕ್ಷ್ಮಣರಾ" ಎಂದು ೨ ಲಘು ಮತ್ತು ೧ ಗುರುವಿನ ಗಣವಾಗುತ್ತದೆ.

ನಮ್ಮತ್ರಣ ಮಂದಿಗಾದರೆ ಪಾರ್ತಿ ಸುಬ್ಬನ ಪ್ರಸಂಗಗಳನ್ನು ಆಡಿಸುವು ದೆಂದರೆ ಅಷ್ಟು ಇಷ್ಟ, ಅವರಿಗೆ ಇದೊಂದು ಅಮುಗ ಕಾರಣವಿಷ್ಟೇ. ಅವುಗಳಲ್ಲಿ ಯುದ್ಧಕ್ಕೆ ಮೇಲುಗೈ; ಬಣ್ಣದ ವೇಷಗಳು ತುಂಬಾ ತಿರುಗುತ್ತಾವೆ. ಕಾಳಗಗಳು ಯಥೇಚ್ಛ ಜರುಗುತ್ತಾವೆ. (ಬೆಳಗಾನಾ ನಿದ್ದೆಗೆ ತಾತ್ಸಾರ! ಮಂದಿಗೆ ಬೇಕು ಗುಲ್ಲು, ಗಲಬೆ, ಗದ್ದಲ). ಅದಷ್ಟೂ ಆತನ ಪ್ರಸಂಗಗಳಲ್ಲಿ ಉದ್ದಕ್ಕೂ ಇದೆ. ಆದರೆ ರಾಮಾಯಣದಿಂದ ವನವಾಸಕ್ಕೆ ಈಚೆಯ ಕಥಾವಸ್ತುಗಳನ್ನು ಆಯ್ದುಕೊಂಡ ಕಾರಣ ಆತನ ಕೃತಿಗಳಲ್ಲಿ ಹೀಗೆ ಆಗಬೇಕಾಯಿತಲ್ಲದೆ, ಅದೇನೂ ಹೀನಾಯವಲ್ಲ. ಏಕೆಂದರೆ ಆತನ ಪ್ರಸಂಗಗಳು ಓದಲಿಕ್ಕೆ ಬಹಳ ಮೇಲಾಗಿವೆ. ಆಡಲಿಕ್ಕೆ ಬಹಳ ಚಲೋದಾಗಿವೆ. ಅವುಗಳ ಓದೂ ಆಡೂಮಂದಿಯನ್ನೇ ಅಲ್ಲ ರಸಿಕರನ್ನೂ ಬುಲ್ಲವಿಸುತ್ತದೆ. ಹಾಗಾಗಿ ಅವು ಎಲ್ಲರಿಗೂ ಓದಲಿಕ್ಕೂ ಆಡಿಸಲಿಕ್ಕೂ ಅಷ್ಟು ಇಷ್ಟವಾಗಿರುವಲ್ಲಿ ಆಶ್ಚರ್ಯವೇನೂ ಇಲ್ಲ.

—ಎಂ. ಗೋವಿಂದ ಪೈ

# ರುದ್ರನಾಟಕ

ರುದ್ರನಾಟಕವೆನ್ನುವುದು ಗ್ರೀಕ್ ಭಾಷೆಯಲ್ಲಿ ಆರಂಭವಾಗಿ ಇಂಗ್ಲಿಷ್ ಭಾಷೆ ಯಲ್ಲಿಯೂ ಪ್ರಸಿದ್ಧವಾಗಿರುವ ಟ್ರಾಜೆಡಿ ಎಂಬ ನಾಟಕ ರೂಪ. ಸಾಮಾನ್ಯವಾಗಿ ಇದು ನಾಯಕನ ಸಾವಿನಲ್ಲಿ ಕೊನೆಗಾಣುವುದರಿಂದ ಇದಕ್ಕೆ ದುರಂತ ನಾಟಕ ವೆಂದೂ, ವಿಷಾದಾಂತ ನಾಟಕವೆಂದೂ ಹೇಳುವುದುಂಟು. ಸಂಸ್ಕೃತದಲ್ಲಿ, ಕನ್ನಡದಲ್ಲಿ ಇದು ಅಪೂರ್ವ; ರಂಗಸ್ಥಳದಲ್ಲಿ ಸಾವನ್ನು ತೋರಬಾರದೆಂದೂ, ಅಮಂಗಳದಲ್ಲಿ ನಾಟಕ ಮುಗಿಯಬಾರದೆಂದೂ ನಮ್ಮವರ ಅಭಿಪ್ರಾಯ. ಆದರೂ ಈ ಬಗೆಯ ನಾಟಕ ಹೊಸದಾಗಿ ನಮ್ಮ ಸಾಹಿತ್ಯಕ್ಕೆ ಭಾಷಾಂತರವಾಗಿಯೂ, ಸ್ವಕಲ್ಪಿತವಾಗಿಯೂ ಈಗ ಸೇರುತ್ತಿದೆ. ಇದರ ಚರಿತ್ರೆಯನ್ನೂ ಲಕ್ಷಣವನ್ನೂ ಹೆಗ್ಗುರುತಾಗಿ ತಿಳಿಯಬಹುದಾಗಿದೆ.

ಟ್ರಾಜೆಡಿ ಎಂದರೆ ಗ್ರೀಕಿನಲ್ಲಿ ಆಡಿನ ಹಾಡು ಎಂದು ಅರ್ಥ; ಅಜಗೀತೆ ಎಂದು ಬೇಕಾದರೆ ಹೇಳಬಹುದು. ಗ್ರೀಕರ ವನಸ್ಪತಿ ವರ್ಗದ, ಮುಖ್ಯವಾಗಿ ದ್ರಾಕ್ಷಾರಸದ ಅಧಿದೇವತೆಯಾದ ಡೈಯೊನಿಸಸ್ (ದೇವಪುತ್ರ) ಎಂಬಾತನ ಸ್ತೋತ್ರರೂಪವಾದ ಗೀತೆಯನ್ನು (—ಡಿಥಿರ್‍ಯಾಂಬ್) ಆಡಿನ ವೇಷವನ್ನು ಧರಿಸಿದ ಅವನ ಭಕ್ತರು ಹಾಡಿಕೊಂಡು ಕುಣಿಯುತ್ತಿದ್ದರು. ಆತನ ಹುಟ್ಟು, ಬೆಳವಣಿಗೆ, ವೀರಕಾರ್ಯಗಳು, ವೈರಿಗಳ ಮರಣ ಮುಂತಾದುವನ್ನು ಈ ಸ್ತುತಿ ವಿವರಿಸುತ್ತಿತ್ತು.

ಸಾಮಾನ್ಯವಾಗಿ ಪೂರ್ವಿಕರಲ್ಲಿ ದೇವಾಂಶ ಪುರುಷರ ಹುಟ್ಟು, ಮದುವೆ, ಸಾವು—ಇವು ಸಂಸ್ಕಾರ ಕ್ರಿಯೆಗಳಾಗಿ ಪ್ರದರ್ಶನವಾಗುತ್ತಿದ್ದುವು: ಸಮಾಧಿಯ ಬಳಿ ಪಿತೃಗಳ ಪೂಜೆ ನಾಟ್ಯರೂಪವಾಗಿ ನಡೆಯುತ್ತಿತ್ತು. ಸೂರ್ಯನು ಹುಟ್ಟಿ, ಬೆಳೆದು, ಮರೆಯಾಗಿ ಮತ್ತೆ ಕಾಣುವುದು; ಗಿಡಗಳು ವಸಂತಕಾಲದಲ್ಲಿ ಚಿಗುರಿ, ಚಳಿಗಾಲದಲ್ಲಿ ಎಲೆಯುದುರಿ ನಿರ್ಜೀವವಾಗಿ, ಮತ್ತೆ ಚಿಗುರಿ ಜೀವಕಳೆ ಕೂಡುವುದು:—ಈ ಪ್ರಕೃತಿ ವ್ಯಾಪಾರವನ್ನು ನೋಡಿ, ಮನುಷ್ಯನೂ ಹುಟ್ಟಿ, ಬೆಳೆದು, ಪ್ರಾಯ ಅರಳಿ, ಮುಪ್ಪಾಗಿ, ಸತ್ತು ಪುನರ್ಜನ್ಮ ತಾಳುವನೆಂದು ನಂಬಿ, ಈ ರಹಸ್ಯವನ್ನು ಟ್ರಾಜೆಡಿಗಳಲ್ಲಿ ತೋರುವುದು ವಾಡಿಕೆಯಾಗಿತ್ತು. ಡೈಯೊನಿಸಸ್ ಈ ಜನನ, ಮೃತಿ, ಅಮೃತತ್ವದ ಅಭಿಮಾನದೇವತೆಯೆಂಬ ನಂಬಿಕೆಯಿಂದ ಆತನ ಭಕ್ತರು ಆತನ ಸ್ತೋತ್ರಗಳನ್ನು ಹಾಡಿ, ತಾವೂ ಅಮೃತತ್ವವನ್ನು ಪಡೆಯುತ್ತಿದ್ದೆವೆಂದು ನಂಬಿದ್ದರು. ಡೈಯೊನಿಸಸ್ಸಿಗೆ ಹಲವು ರೀತಿಯಲ್ಲಿ ಸಾದೃಶ್ಯವುಳ್ಳ, ರುದ್ರಭೂಮಿಗೆ ಅಧಿನಾಯಕನಾದ, ಆದರೂ ಮಂಗಳದಾಯಕನಾಗಿ ಭವರೋಗಕ್ಕೆ ಭಿಷಜನಾದ ನಾಟ್ಯನಾಟಕಪ್ರದರ್ಶಕನಾದ ರುದ್ರನ ಹೆಸರಿಂದ ಈ ಬಗೆಯ ನಾಟಕವನ್ನು ಕರೆಯಬಹುದೆಂದು ಭಾವಿಸಿ ರುದ್ರನಾಟಕವೆಂದು ನಾನು ಗದಾಯುದ್ಧ ನಾಟಕ, ಅಶ್ವತ್ಥಾಮನ್, ಮುಂತಾದ ನಾಟಕಗಳಿಗೆ ಈ ಹೆಸರನ್ನಿಟ್ಟೆನು. ಸಂತೋಷದಲ್ಲಿ, 'ವಿಜಯ' 'ಪರಿಣಯ'ಗಳಲ್ಲಿ ಮುಗಿಯುವುವು ಹರ್ಷ ನಾಟಕಗಳು; ಹಾಸ್ಯ ತುಂಬಿರುವುವು ಪ್ರಹಸನಗಳು. ಇವು ಸಾವು ನೋವುಗಳನ್ನು ಬಿಟ್ಟು ಬಾಳಿನ ಮತ್ತೊಂದು ಭಾಗವನ್ನು ತೋರಿಸುವುವು.

ಕ್ರಿ. ಪೂ. ೬–೫ನೆಯ ಶತಮಾನಗಳಲ್ಲಿ ಅಥೆನ್ಸಿನಲ್ಲಿ ಈ ರುದ್ರನಾಟಕಗಳು ಪ್ರಬಲಿಸಿದುವು. ವಸಂತಕಾಲದಲ್ಲಿ, ಬೆಟ್ಟದ ತಪ್ಪಲಲ್ಲಿ ಕೊರೆದ ಮೆಟ್ಟಲುಗಳ ಮೇಲೆ ಸುಮಾರು ೨೦–೩೦ ಸಾವಿರ ಜನ ಸೇರಿ, ನಾಲ್ಕುದಿನ, ದೇವತಾ ಸನ್ನಿಧಿಯಲ್ಲಿ ಮತಕಾರ್ಯವಾಗಿ ಈ ನಾಟಕಗಳನ್ನು ಆಡಿಸಿ ನೋಡುತ್ತಿದ್ದರು. ಸ್ತುತಿಗೀತೆ ಸಂಭಾಷಣೆಯಿಂದ ಕೂಡಿ ನಾಟಕರೂಪಕ್ಕೆ ತಿರುಗಿತು. ಮೊದಮೊದಲು ಅರ್ಧಕ್ಕೂ ಹೆಚ್ಚಾಗಿ ಮೇಳದ ಗೀತೆಗಳು, ನಾಟ್ಯ; ಸ್ವಲ್ಪ ಸಂಭಾಷಣೆ: ಬರುಬರುತ, ಮೇಳ ಕಡಮೆಯಾಗುತ್ತ, ನಿಜವಾದ ಸಂಭಾಷಣಾರೂಪವಾದ ನಾಟಕ ಹೆಚ್ಚಾಗುತ್ತ ಬಂತು. ಮೊದಲು ಡೈಯೊನಿಸಸ್ಸಿನ ಕಥೆಗಳು—ಆ ಬಳಿಕ ಪ್ರಸಿದ್ಧ ವೀರರಾಗಿದ್ದು, ದುಃಖಕ್ಕೀಡಾಗಿ ದೈವಹತರಾಗಿ ಅಮರಗಣಕ್ಕೆ ಸೇರಿದ ಇತರ ಮಹಾಪುರುಷರ ಕಥೆಗಳು ನಾಟಕದ ವಸ್ತುಗಳಾದುವು. ಈ ನಾಟಕದಲ್ಲಿ ಅಂಕಗಳ ವಿಭಾಗವಿಲ್ಲ: ತೆರೆಯಿಲ್ಲ; ಸಂಭಾಷಣೆ, ನಾಟ್ಯ (ಮೇಳ), ಸುಮಾರು ೧೫೦೦ ಸಾಲು ಛಂದೋಬದ್ಧವಾದ ಕಾವ್ಯ; ಮೊಗವಾಡವನ್ನು ಹಾಕಿದ ವೇಷಧಾರಿಗಳು: ಆಕಾಶದ ಕೆಳಗೆ ಬಯಲಾಟ; ಕಾವ್ಯಾನಂದ, ಪುರಾಣವೀರರ ತಾದಾತ್ಮ್ಯಭಾವ, ಅವರು ದೇವತೆಗಳಾದ ಅನುಭವಸಿದ್ಧಿ—ಇವು ರುದ್ರನಾಟಕದ ಲಕ್ಷಣಗಳು. ಮಹಾಕವಿಗಳು

ಬೆಳಸಿ, ಅರಿಸ್ಟಾಟಲ್ ಎಂಬ ತತ್ವಜ್ಞನು ವಿವರಿಸಿರುವಂತೆ: ಟ್ರಾಜೆಡಿಯೆಂದ ಒಬ್ಬ ಮಹಾಪುರುಷನ ಕಥೆಯನ್ನು ಕಾರ್ಯರೂಪದಲ್ಲಿ (ಅಂದರೆ ಪಾತ್ರಧಾರಣ, ನಾಟ್ಯ, ಅಭಿನಯ, ಸಂಗೀತ, ದೃಶ್ಯಗಳು ಈ ರೀತಿಯಲ್ಲಿ, ಕಣ್ಣು ಮುಂದೆ ನಡೆದಂತೆ; ಆಖ್ಯಾನ ರೂಪದಲ್ಲಲ್ಲ) "ಅನುಕರಣ" ಮಾಡತಕ್ಕದ್ದು: ಗಂಭೀರಭಾವವುಳ್ಳದ್ದು, ವೀರ್ಯವುಳ್ಳದ್ದು; ಭಯ ಮತ್ತು ಕರುಣರಸಗಳನ್ನು ಹೊಮ್ಮಿಸತಕ್ಕದ್ದು; ಅವನ್ನು ಉದ್ರೇಕಿಸಿ ಶಮನಗೊಳಿಸತಕ್ಕದ್ದು. ಅಂದರೆ ಒಟ್ಟಿನ ಮೇಲೆ ಒಬ್ಬ ಪುರಾಣ ಪುರುಷನ ದುಃಖಮಯವಾದ ಚರಿತ್ರೆ ಆತನ ಮದದಿಂದಲೋ, ಕರ್ಮದಿಂದಲೋ, ಕ್ರೂರ ವಿಧಿವಿಲಾಸದಿಂದಲೋ, ತತ್ವಗಳ ಅಥವಾ ನಾಯಕ, ಪ್ರತಿನಾಯಕ ಹೋರಾಟದಿಂದಲೋ, ಒಬ್ಬ ವ್ಯಕ್ತಿಯ ಒಳಹೋರಾಟದಿಂದಲೋ ಭಾವೋದ್ರೇಕ ದಿಂದಲೋ ಯಾವುದೋ ಒಂದು ಬಗೆಯ ಅವಿವೇಕವೋ, ಅಚಾತುರ್ಯವೋ, ಅನ್ಯಾಯವೋ ಉಂಟಾಗಿ, ಸಾವಿನಲ್ಲಿ ಪರ್ಯವಸಾನವಾಗಬೇಕು. ಆದರೂ ಮಾನವನ ಗುಣಗಾಂಭೀರ್ಯಗಳೂ, ಆತನ ಉದಾತ್ತಧ್ಯೇಯಗಳೂ, ಸರಳ ನಿಷ್ಕಾಪಟ್ಯಗಳೂ, ಧೈರ್ಯ ಸ್ಥೈರ್ಯಗಳೂ, ಛಲಾಭಿಮಾನಗಳೂ ಪ್ರೇಕ್ಷಕರಲ್ಲಿ ಸಹಾನುಭೂತಿಯನ್ನು, ಮೆಚ್ಚುಗೆಯನ್ನು ಉಂಟುಮಾಡಿ ಸತ್ತರೂ ಒಳ್ಳೆಯ ಸಾವು; ಇದೂ ಸಂಸಾರದ ಸತ್ಯ; ದಿಟವಾದ ಜೀವನದ ಚಿತ್ರ; ಈ ಮರಣದ ಧ್ಯಾನಮಾಡಿ ಸ್ಥೈರ್ಯಗೊಳ್ಳೋಣ; ಸ್ಥಿತಪ್ರಜ್ಞರಾಗೋಣ; ಹೀಗೆ ಸತ್ತು ಅಮರ ನಾದ ಈ ನಾಯಕ; ಇಂತಹ ಗುಣ "ಮೃತ್ಯುಮುಖಾತ್ ಪ್ರಮುಚ್ಯತೇ"— ಎಂಬ ಗಾಢಾನುಭವದ ಶಾಂತಿ ರುದ್ರನಾಟಕದ ಫಲ. ಕಾರ್ಯವೀರರ, ಪಿತೃಗಳ, ದೇವತೆಗಳ ಆರಾಧನೆ: ಪ್ರಯೋಜನ—ದುಃಖಾಂತ, ಮನಶ್ಶಾಂತಿ, ಮೋಕ್ಷ.

ಭರತಭೂಮಿಯ ಸಂಸ್ಕೃತಿಯಲ್ಲಿ ಈ ಕನಿಕರದ ಉದಾತ್ತ ಜೀವಚಿತ್ರ, ಈ ಜೀವನದ ಗಾಢ ಸಮಸ್ಯೆಗಳ ಆರಯ್ಕೆ, ಈ ಶ್ರೇಷ್ಠ ಸಾಹಿತ್ಯ ಸೃಷ್ಟಿ ಏಕೆ ಇಲ್ಲ? ಲಾಕ್ಷಣಿಕರು ಏಕೆ ಇದನ್ನು ವರ್ಣಿಸಿದ್ದಾರೆ? ನಮ್ಮ ಕವಿಗಳು ಇದನ್ನು ಬಿಟ್ಟೇ ಬಿಟ್ಟರೆ? ಈಗ ನಾವು ಇದನ್ನು ಆಡಿದರೆ, ಬರೆದರೆ, ಭಾಷಾಂತರಿಸಿದರೆ ತಪ್ಪೆ? ಒಂದು ಹೊಸ ಕಾಂತಿ, ಹೊಸ ಅನುಭವ, ಹೊಸ ಆನಂದ ಈ ರುದ್ರನಾಟಕದಿಂದ ಉದಯಿಸುವುದಿಲ್ಲವೆ? ಎಂಬ ಪ್ರಶ್ನೆಗಳು ಏಳುತ್ತವೆ. ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ನಮ್ಮಲ್ಲಿ ದುಃಖಾನುಭವವಾಗಲಿ, ಮೃತ್ಯುವಿನಲ್ಲಿ ಅಮೃತತತ್ವವೂ ದುಃಖಿಮಾನವನಲ್ಲಿ ಆನಂದಮಯ ದೇವತಾಂಶವೂ ಇರುವುವೆಂಬ ಜ್ಞಾನವಾಗಲಿ ಇಲ್ಲವೆಂದಲ್ಲ. ಬೇಕಾದ ಹಾಗೆ, ಹೊರ ಪ್ರಪಂಚಕ್ಕೆ ಸಾಲ ಕೊಡುವಷ್ಟು ಇವೆ. ಕವಿಗಳೂ ಕಾವ್ಯದಲ್ಲಿ ಈ ದುಃಖರಹಸ್ಯವನ್ನು ಪ್ರತಿಬಿಂಬಿಸಿಯೇ ಇದ್ದಾರೆ. ಸೀತೆಯ ಜನ್ಮ ಸುಖವಾಗಿತ್ತೆ? ಪತಿಯಿಂದ ಅಗ್ನಿಪರೀಕ್ಷೆಗೊಳಗಾದಾಗ, ಭೂಮಿಯನ್ನು ಬಾಯಿ ತೆರೆ ಎಂದು ಪ್ರಾರ್ಥಿಸಿದಾಗ, ಆಕೆಯ ಮನೋಭಾವ ಸನ್ನಿವೇಶ ಮಂಗಳವೇ, ಅಮಂಗಳವೇ, ರುದ್ರನಾಟಕವೇ, ಭದ್ರನಾಟಕವೇ? ಮಹಾಭಾರತ ದುಃಖಪೂರ್ಣ

ವಲ್ಲವೇ? "ಅಂತೂ ಇಂತೂ ಕುಂತಿಯ ಮಕ್ಕಳಿಗೆ ರಾಜ್ಯವಿಲ್ಲ"—ಇದು ದುರಂತ ವಲ್ಲವೇ? ದುರ್ಯೋಧನ ಕರ್ಣರು ಬರಿಯ ನೀಚರೇ, ಪಾಪಿಗಳೇ—ಇವರ ಛಲ ಇವರ ಅಭಿಮಾನ, ಇವರ ಸಾವು ರುದ್ರನಾಟಕವಲ್ಲವೆ? ಪಂಪರನ್ನರನ್ನು ಕೇಳಿ, ರಾವಣನೂ, ಕರ್ಮವಶದಿಂದ ಕೆಟ್ಟ—ಆದರೂ ಶಲಾಕಾಪುರುಷ, ಮುಂದೆ ಮೋಕ್ಷ ಗಾಮಿ ಎನ್ನುವ ನಾಗಚಂದ್ರನನ್ನು ಕೇಳಿ. ನಾಯಕನನ್ನು ಬೆನ್ನುಹತ್ತಿ "ಜಯ" ವನ್ನು ಬಯಸುವವರು ಪ್ರತಿನಾಯಕನ ದೃಷ್ಟಿಯಿಂದ ಅವನ ಅಪಜಯವನ್ನು ನೋಡಬಾರದೇಕೆ? ಗಾಂಧಾರಿ ದುರ್ಯೋಧನನು ಎಲ್ಲಾ ಸರಿ ಎಂದು ತಿಳಿಯಲಿಲ್ಲ; ಆದರೆ ತಾಯಿಯ ಕಣ್ಣಿನಿಂದ, ಬಸಿರಿನಿಂದ, ನೋಡಿ ಕೃಷ್ಣನನ್ನು ಶಪಿಸಿದಳಲ್ಲವೇ? ಅಸುರರು ಸತ್ತರೆ–ಅವರ ಆತ್ಮಜ್ಯೋತಿ ಪರಂಜ್ಯೋತಿಯನ್ನು ಬಂದು ಕೂಡಿ ಕೊಳ್ಳುವುದಲ್ಲವೇ?—ಮರ್ತ್ಯವಾದದ್ದು ಸತ್ತು, ಅಮರ್ತ್ಯವಾದದ್ದು ಬಿಡುಗಡೆ ಹೊಂದುವುದಿಲ್ಲವೇ? ಹರಿಶ್ಚಂದ್ರನ ಕಥೆ ಗೋಳಿನ ನಾಟಕವಲ್ಲವೇ? ಭಾಸನ ಊರುಭಂಗದಲ್ಲಿ ದುರ್ಯೋಧನನಿಗಾಗಿ ನಮ್ಮ ಮೆಚ್ಚುಗೆ ಉಕ್ಕುವುದಲ್ಲವೇ? ವ್ಯಾಸನ ಶಕುಂತಲೋಪಾಖ್ಯಾನವನ್ನು ಕಾಳಿದಾಸನು ಒಂದು ರೀತಿ ಮಾರ್ಪಡಿ ಸಿದನು. ಹಳದರಲ್ಲಿ ಹೊಸದನ್ನು ಕಂಡನು, ಆದರೆ ದುಃಖ ನಡುವೆ ಬಂದರೂ ಕೊನೆಗೆ ಮಂಗಳ ಮಾಡಿದನು; ರುದ್ರನಾಟಕವಾಗಿಯೇ ಪರಿಣಮಿಸಬಹುದಾಗಿತ್ತಲ್ಲವೇ, ರಂಗಸ್ಥಳದಲ್ಲಿ ಸಾವು ನೋಡದಿದ್ದರೆ ದೂತನ ಮೂಲಕ ಕೇಳಿದರೂ, ಅಮಂಗಳವೇ ಅಲ್ಲವೇ? ರಾಮವರ್ಮ ಲೀಲಾವತಿಯಲ್ಲಿ ಸತ್ತ ನಾಯಕ ನಾಯಕಿಯರನ್ನು ತೀರ್ಥ ಚಿಮುಕಿಸಿ ಎಬ್ಬಿಸಿದ ಮಾತ್ರಕ್ಕೇ ಮಂಗಳವೇ? ಅಮಂಗಳದೊಳಗೇ ಮಂಗಳ ದೃಷ್ಟಿ ಇದಕ್ಕೂ ದೊಡ್ಡದಲ್ಲವೇ! ಈ ರಹಸ್ಯವನ್ನು ನಮ್ಮವರು ಅರಿಯರೇ? ರಂಗ ಸ್ಥಳದಲ್ಲಿ ಸಾವನ್ನು ನೋಡಲು ಹೆದರಿದರೆ—ಬೇಯದ ಒಲೆಯಾವುದು? ಸಾಯದ ಮನೆಯಾವುದು? ಗೌತಮಬುದ್ಧನು ಕಿಸಾಗೌತಮಿಗೆ ಕಲಿಸಿದ ಬುದ್ಧಿಯನ್ನು ನಮ್ಮ ಹಳದ ಲಾಕ್ಷಣಿಕರು ಕಲಿಯಬೇಕು. ಸಾವನ್ನೂ, ಅಳಲನ್ನೂ, ಆಖ್ಯಾನ ಕಾವ್ಯದಲ್ಲಿ ಓದಿ ಮರುಗುವಂತೆಯೇ ಕಣ್ಣೆದುರಿಗೆ ಕಟ್ಟಿದ್ದನ್ನು ನೋಡಿ ಮರುಗಿ, ಧೀರರಾಗಬೇಕು. ಸಾಹಿತ್ಯವೆಲ್ಲಾ ಮಿಠಾಯಿಯಲ್ಲ; ಕಹಿ ಔಷಧವೂ ಉಂಟು. ರುದ್ರನಾಟಕದ ಭಯ ಮಕ್ಕಳ ಭಯ: ಅವು ಕತ್ತಲೆಗೆ ಹೆದರಿದಂತೆ—ಮೇಲೆ ಮಿನುಗುವುವು ಧ್ರುವತಾರೆಗಳು: ಕತ್ತಲೆಯಲ್ಲೇ ಅವನ್ನು ದೃಷ್ಟಿಸಬೇಕು.

ನಮ್ಮ ಸಂಸಾರ ಅನೇಕ ರೀತಿಯಲ್ಲಿ ಟ್ರಾಜೆಡಿ; ನಮ್ಮ ಜನಾಂಗಜೀವನ ಅನೇಕ ರೀತಿಯಲ್ಲಿ ಟ್ರಾಜೆಡಿ; ಟ್ರಾಜೆಡಿಯನ್ನು ಲೋಕದಲ್ಲಿ ಅನುಭವಿಸಿದವರು ಸಾಹಿತ್ಯದಲ್ಲಿ ಆಳವಾದ ದೂರದೃಷ್ಟಿಯುಳ್ಳ ಕವಿಗಳ ಕಣ್ಣಿನಿಂದ ನೋಡೋಣ; ಅನುಭವಿಸೋಣ. ಹೊರಗಿನಿಂದ ಭಾಷಾಂತರ ಮಾಡಿ ನಮ್ಮ ಕೊರತೆಯನ್ನು ತುಂಬಿಕೊಳ್ಳೋಣ. ದೈವೀಪ್ರಸಾದವುಳ್ಳವರು ತಮ್ಮ ಸ್ವಪ್ರತಿಭೆಯಿಂದಲೇ ತುಂಬಲಿ. "ದುಃಖಾಂತ"ವನ್ನು ಕೊಡಲಿ.

—ಶ್ರೀ

# ಗೃಹಶಿಕ್ಷಣ

ಮನುಷ್ಯನಿಗೆ ಮನುಷ್ಯತ್ವವು ಪ್ರಾಪ್ತವಾಗಬೇಕಾದರೆ ಶಿಕ್ಷಣವು ಅತ್ಯಾವಶ್ಯಕವಾಗಿ ಬೇಕು. ಶಿಕ್ಷಣವೆಂದರೆ ಮನಸ್ಸು, ಬುದ್ಧಿ ಮತ್ತು ದೇಹಗಳಿಗೆ ದೊರೆಯುವ ಸುಸಂಸ್ಕಾರವು. ಇಂಥ ಸಂಸ್ಕಾರವು ಮನುಷ್ಯನಿಗೆ ಸಕಾಲದಲ್ಲಿ ದೊರೆಯದಿದ್ದರೆ ಆತನು ಸುಖ-ಶಾಂತಿಗಳನ್ನನುಭವಿಸುವುದು ಸಾಧ್ಯವೇ ಇಲ್ಲ. ಏಕೆಂದರೆ ಮನುಷ್ಯನು ಪಶುಪಕ್ಷ್ಯಾದಿಗಳಂತೆ ಕೇವಲ ಜಾತಿವಿಶಿಷ್ಟವಾದ ಬುದ್ಧಿ-ಸ್ವಭಾವಗಳಿಗನುಸರಿಸಿ ನಡೆಯತಕ್ಕವನಲ್ಲ. ಮೀನವು ಗೀಜಗಪಕ್ಷಿಯಂತೆ ಗೂಡು ಕಟ್ಟುವುದನ್ನು ಕಲಿಯಲಾರದು. ಗೀಜಗಪಕ್ಷಿಯಾದರೋ ಮೀನಿನಂತೆ ಈಜುವುದನ್ನು ಕಲಿಯಲಾರದು. ಆದರೆ ಮನುಷ್ಯನು ಗೀಜಗದಂತೆ ಗೂಡುಕಟ್ಟುವುದನ್ನೂ, ಮೀನಿನಂತೆ ಈಜುವುದನ್ನೂ ಕಲಿಯಬಲ್ಲನು. ಆಕಳು ಹುಲಿಯಂತೆ ಕ್ರೂರಪ್ರಾಣಿಯಾಗಲಾರದು. ಹುಲಿಯಾದರೋ ಗೋವಿನಹಾಗೆ ಸಾಧುಜೀವಿಯಾಗಲಾರದು. ಆದರೆ ಮನುಷ್ಯನು ಮಾತ್ರ ಹುಲಿಗಿಂತ ಕ್ರೂರವಾಗಿಯೂ, ಗೋವಿಗಿಂತ ಸಾಧುವಾಗಿಯೂ ಇರಬಲ್ಲನು. ಆದಕಾರಣ ಮನುಷ್ಯೇತರ ಪ್ರಾಣಿಗಳಂತೆ ಮನುಷ್ಯನ ಬುದ್ಧಿ-ಗುಣ- ಸಾಮರ್ಥ್ಯಗಳು ಕ್ಲುಪ್ತವಾದುವುಗಳಲ್ಲ.

ಮನುಷ್ಯನು ತನ್ನಲ್ಲಿರತಕ್ಕ ಬುದ್ಧಿ-ಗುಣ-ಸಾಮರ್ಥ್ಯಗಳನ್ನು ಸಕಾಲದಲ್ಲಿ ಸರಿಯಾಗಿ ತಿದ್ದಿ ಹೆಚ್ಚಿಸಿಕೊಂಡು ಲೋಕಪೂಜ್ಯನಾಗಬಹುದು. ಅಥವಾ ಇವುಗಳನ್ನುಪೇಕ್ಷಿಸಿ ತಪ್ಪುದಾರಿಯಲ್ಲಿ ನಡೆದು ಕ್ರೂರ ಪಶುಗಳಿಗಿಂತಲೂ ಕ್ರೂರನಾಗಿಯೂ ಮಂದಮತಿ ಪ್ರಾಣಿಗಳಿಗಿಂತಲೂ ಜಡಮತಿಯಾಗಿಯೂ ಜೀವಿಸಬಹುದು. ಈ ಉಭಯ ಸ್ಥಿತಿಗಳಲ್ಲಿ ಯಾವುದನ್ನು ಹೊಂದುವುದಕ್ಕಾದರೂ ಈ ಮನುಷ್ಯಪ್ರಾಣಿಯು ಪಾತ್ರವಾದುದಾಗಿಯೇ ಇದೆ. ಆದಕಾರಣ ಮನುಷ್ಯನ ಮಾನಸಿಕ, ಬೌದ್ಧಿಕ ಮತ್ತು ಶಾರೀರಿಕ ಉನ್ನತಿಗಳಿಗೋಸ್ಕರ ಸಕಾಲದಲ್ಲಿ ಸರಿಯಾದ ಶಿಕ್ಷಣ ದೊರೆಯುವುದು ಅತ್ಯಾವಶ್ಯಕವಾಗಿಯೇ ಇದೆ.

ಈ ತ್ರಿವಿಧ ಶಿಕ್ಷಣಗಳಲ್ಲಿ ಮಾನಸಿಕ ಶಿಕ್ಷಣವೇ ಮನುಷ್ಯನಿಗೆ ಪ್ರಾಮುಖ್ಯವಾದುದಾಗಿದೆ. ಇದರ ವಿನಾ ಮನುಷ್ಯನಿಗೆ ಮನುಷ್ಯತ್ವವು ಪ್ರಾಪ್ತವಾಗುವುದಿಲ್ಲ. ಯಾವ ಶಿಕ್ಷಣದಿಂದ ಮನಸ್ಸಿಗೆ ಪಾವಿತ್ರ್ಯತೆ ಮತ್ತು ಬಲಗಳು ಪ್ರಾಪ್ತವಾಗಿ ಅದು ಸದ್ವಿಷಯಗಳಲ್ಲಿ ಕುಸುಮಕ್ಕಿಂತಲೂ ಮೃದುವಾಗಿಯೂ ದುರ್ವಿಷಯಗಳಲ್ಲಿ ವಜ್ರಕ್ಕಿಂತಲೂ ಕಠಿಣವಾಗಿಯೂ ಪರಿಣಮಿಸುತ್ತದೆಯೋ ಅದೇ ಮಾನಸಿಕ ಶಿಕ್ಷಣವು. ಇಂಥ ಮಾನಸಿಕ ಶಿಕ್ಷಣವನ್ನು ಹೊಂದುವಾಗ ಬುದ್ಧಿಶಕ್ತಿ ಮತ್ತು ದೇಹಬಲಗಳ ಕಡೆಗೆ ಗಮನಿಸಲೇ ಬಾರದೆಂದು ತಿಳಿಯಕೂಡದು. ಈ ಉಭಯ ಸಾಮರ್ಥ್ಯಗಳುಂಟಾಗುವಂತಹ ಸಂಸ್ಕಾರಗಳು ಮಾನಸಿಕ ಶಿಕ್ಷಣಕ್ಕೆ ಸಂಬಂಧಪಟ್ಟವುಗಳೇ ಆಗಿದೆ. ಈ ಬೌದ್ಧಿಕ ಮತ್ತು ಶಾರೀರಿಕ ಸಾಮರ್ಥ್ಯಗಳಿಲ್ಲದಿದ್ದರೆ ಕಣ್ಣು-ಕಾಲು

ಗಳಿಲ್ಲದ ಮನುಷ್ಯನಂತೆ ಆ ಮಾನಸಿಕ ಶಿಕ್ಷಣವು ನಿರ್ಬಲವಾದುದಾಗುವುದು. ಆದುದರಿಂದ ಮಾನಸಿಕ ಶಿಕ್ಷಣವನ್ನೇ ಪ್ರಾಮುಖ್ಯವಾಗಿಟ್ಟುಕೊಂಡು ಅದರ ಪೋಷಣಾರ್ಥವಾಗಿ ಬುದ್ಧಿ ಮತ್ತು ದೇಹಬಲಗಳನ್ನು ಹೆಚ್ಚಿಸಲು ಸಕಾಲದಲ್ಲಿ ಸರಿಯಾದ ಸಂಸ್ಕಾರಗಳನ್ನು ಮಾಡುವುದೇ ಸಾತ್ವಿಕ ಶಿಕ್ಷಣವು. ಇದೇ ಪ್ರಾಚೀನ ಭಾರತೀಯರು ಹೊಂದುತ್ತಿದ್ದ ಶಿಕ್ಷಣವಾಗಿದ್ದಿತು.

ಯಾವ ಶಿಕ್ಷಣದಲ್ಲಿ ಮನುಷ್ಯನ ಬುದ್ಧಿಗೇನೇ ಪ್ರಾಮುಖ್ಯತೆಯನ್ನೂ ಆತನ ಮಾನಸಿಕ ಮತ್ತು ಶಾರೀರಕ ಉನ್ನತಿಗಳಿಗೆ ಗೌಣತ್ವವನ್ನೂ ಕೊಟ್ಟಿದೆಯೋ ಅಂಥ ಶಿಕ್ಷಣಕ್ಕೆ ರಾಜಸ ಶಿಕ್ಷಣವೆನ್ನಬೇಕು. ಈ ಕಾಲದಲ್ಲಿ ಎಲ್ಲ ಭಾಗಗಳಲ್ಲಿಯೂ ಮನುಷ್ಯನ ಬುದ್ಧಿಗೇನೇ ಮಹತ್ವವುಂಟಾಗಿದೆ. ಯಾರು ಬುದ್ಧಿಶಾಲಿಗಳೋ ಅವರೇ ಶ್ರೇಷ್ಠರು; ಅವರೇ ಸುಶಿಕ್ಷಿತರು; ಅವರ ಮನಸ್ಸು ಎಷ್ಟೇ ಹೀನವಾದುದಿರಲಿ, ಅವರು ಎಂಥ ದುರಾಚಾರ ದುರ್ಗುಣಗಳುಳ್ಳವರೇ ಆಗಿರಲಿ, ಅವರಲ್ಲಿ ಅದ್ವಿತೀಯವಾದ ಬುದ್ಧಿ ಸಾಮರ್ಥ್ಯವೊಂದಿದ್ದರೆ ಸಾಕೆಂದು ತಿಳಿಯುತ್ತಿರುವ ಈಗಿನ ಶಿಕ್ಷಣವು ಮನುಷ್ಯತ್ವಪ್ರಾಪ್ತಿಗೆ ಪ್ರಬಲವಾದ ಪ್ರತಿಬಂಧವನ್ನುಂಟುಮಾಡುತ್ತಲಿದೆ.

ಮನುಷ್ಯನ ಮಾನಸಿಕ ಮತ್ತು ಬೌದ್ಧಿಕ ಉನ್ನತಿಗಳನ್ನಪೇಕ್ಷಿಸಿ ಕೇವಲ ದೇಹಬಲವನ್ನೇ ಹೆಚ್ಚಿಸಬೇಕೆಂಬ ಕಲ್ಪನೆಯು ಇತ್ತೀಚೆಗೆ ಅನೇಕರಲ್ಲುಂಟಾದುದರಿಂದ ಅವರಿಗೆ ದೇಹಬಲವೇ ಶಿಕ್ಷಣದ ಮುಖ್ಯಾಂಗವಾಗಿ ಪರಿಣಮಿಸಿದೆ. ಯಾರಲ್ಲಿ ವಿಶೇಷವಾದ ದೇಹಸಾಮರ್ಥ್ಯವಿಲ್ಲವೋ ಅವರು ಎಷ್ಟೇ ಬುದ್ಧಿಶಾಲಿಗಳಿರಲಿ, ಅಥವಾ ಎಂಥ ಪವಿತ್ರ ಹೃದಯದವರೇ ಇರಲಿ, ಅವರು ನಿಷ್ಪ್ರಯೋಜಕರೆಂತಲೂ, ಅಂತಹರಿಂದ ರಾಷ್ಟ್ರವು ಪಾರತಂತ್ರ್ಯದಲ್ಲಿ ಸಿಲುಕಿ ನಾನಾ ದುಃಖಗಳಿಗೀಡಾಗುತ್ತದೆಂತಲೂ ಮನುಷ್ಯನ ಸಕಲ ಸುಖಗಳಿಗೂ ಆತನಲ್ಲಿರತಕ್ಕ ದೇಹಬಲವೇ ಮುಖ್ಯ ಸಾಧನವಾಗಿದೆಯೆಂತಲೂ ಈ ತಾಮಸ ಶಿಕ್ಷಣವಾದಿಗಳು ತಿಳಿದಿದ್ದಾರೆ.

ಯಾವ ಶಿಕ್ಷಣದಿಂದ ಮಾನಸಿಕ ಉನ್ನತಿಯಾಗುವುದಿಲ್ಲವೋ ಅದು ರಾಕ್ಷಸೀ ಶಿಕ್ಷಣವೆಂದು ತಿಳಿಯಬೇಕು. ಅಂಥ ಶಿಕ್ಷಣವು ಯಾವ ಜನಾಂಗದಲ್ಲಿ ಪ್ರಸಾರವಾಗುವುದೋ ಆ ಜನಾಂಗದಲ್ಲಿ ಹುಲಿ ಮೊದಲಾದ ಕ್ರೂರ ಪಶುಗಳಿಗಿಂತಲೂ ಹೆಚ್ಚಾದ ಹಿಂಸೆ-ದುಃಖಗಳನ್ನುಂಟುಮಾಡುವ ನರಪಶುಗಳು ಹುಟ್ಟುವುದು ಆಶ್ಚರ್ಯವಲ್ಲ. ಈಗ ನಾನಾ ಹಿಂಸೆ ಮತ್ತು ಅಶಾಂತತೆಗಳಿಂದ ಮನುಷ್ಯ ಜಾತಿಯೂ ಬಳಲುತ್ತಿರುವುದಕ್ಕೆ ಪ್ರಾಚೀನ ಭಾರತೀಯರ ಸಾತ್ವಿಕ ಶಿಕ್ಷಣವು ನಷ್ಟವಾಗಿ ರಾಜಸ ಮತ್ತು ತಾಮಸ ಶಿಕ್ಷಣಗಳು ಎಲ್ಲೆಲ್ಲಿಯೂ ವ್ಯಾಪಿಸಿರುವುದೇ ಮುಖ್ಯ ಕಾರಣವಾಗಿದೆ.

ಈ ಪ್ರಕಾರ ಶಿಕ್ಷಣದಲ್ಲಿ ಮೂರು ವಿಧಗಳಿರುವಂತೆ ಶಿಕ್ಷಣವನ್ನು ಹೊಂದುವುದಕ್ಕೂ ಗೃಹ, ಗುರುಕುಲ ಮತ್ತು ಮಾನವ ಕುಟುಂಬಗಳೆಂಬ ಮೂರು ಶಿಕ್ಷಣಾಲಯಗಳಿವೆ. ಈ ತ್ರಿವಿಧ ವಿದ್ಯಾಲಯಗಳಲ್ಲಿ ಯಾರ ಶಿಕ್ಷಣವು ಸಕಾಲದಲ್ಲಿ ಸರಿ

ಯಾಗಿ ನಡೆಯುವುದಿಲ್ಲವೋ ಅವರ ಶಿಕ್ಷಣವು ಸಂಪೂರ್ಣ ಸ್ಥಿತಿಯನ್ನು ಹೊಂದು ವುದು ಸಾಧ್ಯವಿಲ್ಲ. ಶಿಕ್ಷಣಗಳಲ್ಲಿ ಮಾನಸಿಕ ಶಿಕ್ಷಣವು ಹೇಗೆ ಪ್ರಾಮುಖ್ಯವೋ ಹಾಗೆಯೇ ಶಿಕ್ಷಣಾಲಯಗಳಲ್ಲಿ ಗೃಹವೇ ಮುಖ್ಯವಾದುದಾಗಿದೆ. ಎಂದರೆ ಗೃಹ ಶಿಕ್ಷಣವೇ ಮೊದಲನೆಯದಾಗಿದೆ.

ಶಿಕ್ಷಣವು ಮನುಷ್ಯನಿಗೆ ತೊಟ್ಟಿಲಲ್ಲಿಯೇ ಪ್ರಾರಂಭವಾಗಬೇಕೆಂದು ಕೆಲವರು ಹೇಳುತ್ತಾರೆ. ಶಿಕ್ಷಣಕ್ಕೆ ತಾಯಿಯ ತೊಡೆಯೇ ಪ್ರಥಮಸ್ಥಾನವೆಂದು ಮತ್ತೆ ಕೆಲವರು ಹೇಳುತ್ತಾರೆ. ಆದರೆ ಪ್ರಾಚೀನ ಭಾರತೀಯರಾದರೋ ಶಿಶುವು ಗರ್ಭ ದಲ್ಲಿರುವಾಗಲೇ ಅದಕ್ಕೆ ಶಿಕ್ಷಣವನ್ನು ಕೊಡಲುಪಕ್ರಮಿಸಬೇಕೆಂದು ನಿರ್ಧ ಸಿದ್ದಾರೆ. ಆದುದರಿಂದ ಗರ್ಭವತಿಯಾದ ಸ್ತ್ರೀಯಳಿಗೆ ೮ನೆಯ ತಿಂಗಳಲ್ಲಿಯೇ ಶುಭಸಂಸ್ಕಾರಗಳು ಪ್ರಾರಂಭವಾಗುತ್ತವೆ. ಆಗ ಆ ತಾಯಿಗೆ ಮಾಡಲ್ಪಡುವ ಮಾನಸಿಕ ಬೌದ್ಧಿಕ ಮತ್ತು ಶಾರೀರಕ ಸಂಸ್ಕಾರಗಳೆಲ್ಲವೂ ಗರ್ಭದಲ್ಲಿರುವ ಶಿಶುವಿನ ಮೇಲೆಯೂ ಆಗುತ್ತವೆ.

ವೀರಶೈವರಿಗಂತೂ ಈ ತತ್ವವು ಅತ್ಯಂತ ಮಹತ್ವದ್ದಾಗಿ ತೋರಿದೆ. ಆದು ರಿಂದಲೇ ಗರ್ಭದಲ್ಲಿರುವ ಶಿಶುವಿಗೇನೇ ಲಿಂಗವನ್ನು ಧರಿಸುವ ಸಂಸ್ಕಾರವು ತಾಯಿಯ ಮೇಲೆ ಮಾಡಲ್ಪಡಬೇಕೆಂದು ಈ ಮತದಲ್ಲಿ ಹೇಳಿದೆ. ಆಗ ತಾಯಿಗೆ ಲಿಂಗಸಂಬಂಧವಾಗಿ ಮಾಡುವ ಸಂಸ್ಕಾರವು ಗರ್ಭದಲ್ಲಿರುವ ಶಿಶುವಿನ ಮೇಲೆಯೂ ಆಗುವುದರಲ್ಲಿ ಸಂದೇಹವೇ ಇಲ್ಲ. ಏಕೆಂದರೆ, ಆಗ ತಾಯಿಯ ಮನೋಭೂಮಿಕೆ ಯಲ್ಲುಂಟಾಗುವ ಯೋಚನೆ ಮತ್ತು ಭಾವನೆಗಳೆಲ್ಲಾ ಹಸಿಯ ಗೋಡೆಯಲ್ಲಿ ಹರಳು ನಾಟುವಂತೆ ಕೂಸಿನ ಅಂತಃಕರಣದಲ್ಲಿ ಮೂಡುತ್ತವೆ. ಆದುದರಿಂದಲೇ ಮದಾಲಸ ರಾಣಿಯು ತಾನು ಬ್ರಹ್ಮಜ್ಞಾನಿಗಳನ್ನೇ ಹೆರಬೇಕೆಂದು ಸಂಕಲ್ಪಿಸಿ ಆತ್ಮಜ್ಞಾನಿಗಳಾದ ಮೂರು ಮಕ್ಕಳನ್ನು ಹೆತ್ತು ಆಮೇಲೆ ತನ್ನ ಪತಿಯ ಇಚ್ಛೆ ಯಂತೆ ಒಬ್ಬ ಕ್ಷತ್ರಿಯ ವೀರನನ್ನೂ ಹೆರಲಿಲ್ಲವೇ? ಅಭಿಮನ್ಯು ಗರ್ಭದಲ್ಲಿರು ವಾಗಲೇ ಚಕ್ರವ್ಯೂಹ ಪ್ರವೇಶದ ಜ್ಞಾನವನ್ನು ಹೊಂದಿದ್ದನೆಂಬುದರಲ್ಲಿ ನಿಶ್ಚಯ ವಾಗಿಯೂ ಸತ್ಯಾಂಶವಿದೆ. ಶಿವಾಜಿಯಲ್ಲಿ ಅಂಥ ಪರಾಕ್ರಮವುಂಟಾಗಲು ಗರ್ಭವತಿಯಾದ ಆತನ ತಾಯಿಯು ಮಹಾಭಾರತ–ರಾಮಾಯಣಗಳಲ್ಲಿಯ ಕಥೆಗಳನ್ನು ಕೇಳಿದುದು ಕಾರಣವಾಯಿತೆಂತಲೂ ನೆಪೋಲಿಯನ್ನನು ಅಷ್ಟು ವೀರನಾಗಲು ಆತನ ತಾಯಿಯು ಆತನನ್ನು ಗರ್ಭದಲ್ಲಿಟ್ಟುಕೊಂಡಾಗ ರಣರಂಗದ ವೀರಧ್ವನಿಯನ್ನು ಆಗಾಗ್ಗೆ ಕೇಳುತ್ತಿದ್ದುದೇ ಕಾರಣವಾಯಿತೆಂದು ಹೇಳುತ್ತಿರು ವುದರಲ್ಲಿ ಅತಿಶಯೋಕ್ತಿಯೇನೂ ಇಲ್ಲ.

ತಾಯಿಯ ಮೇಲಾಗತಕ್ಕ ಸಂಸ್ಕಾರಗಳು ಗರ್ಭದಲ್ಲಿರುವ ಶಿಶುವಿಗು ಶಟ್ಟುತ್ತವೆಂಬ ಈ ತತ್ವವು ಆಧುನಿಕ ವಿದ್ವಾಂಸರಿಗೂ ಮಾನ್ಯವಾದುದಾಗಿದೆ. ಆದುದರಿಂದಲೇ ಅಮೇರಿಕದಲ್ಲಿ ಈ ಸುಪ್ರಜಾನಿರ್ಮಾಣಶಾಸ್ತ್ರವು ಬಹು ಪ್ರಸಾ

ವಾಗುತ್ತಲಿದೆ. ತಮ್ಮ ಮಕ್ಕಳು ಒಳ್ಳೆಯವರು, ಬುದ್ಧಿವಂತರು ಮತ್ತು ದೃಢ ಕಾಯರು ಆಗಬೇಕೆಂದಪೇಕ್ಷಿಸುವ ತಾಯಿಯರು ಆ ಮಕ್ಕಳು ಗರ್ಭದಲ್ಲಿರು ವಾಗಲೇ ಅವರ ಹಿತಾರ್ಥವಾಗಿ ತಾವು ಒಳ್ಳೆಯ ಆಹಾರ-ವಿಹಾರ-ಯೋಜನೆ-ಸಂಕಲ್ಪಗಳುಳ್ಳವರಾಗಬೇಕಾದುದು ಅತ್ಯಾವಶ್ಯಕವಾಗಿದೆ.

ಗರ್ಭವತಿಯು ದುಷ್ಟ ಆಹಾರ-ಯೋಜನೆ-ಸಂಕಲ್ಪಗಳುಳ್ಳವಳಾದರೆ ಅವಳು ಮನುಷ್ಯರೂಪದ ರಾಕ್ಷಸರನ್ನೇ ಹೆತ್ತ ತಾಯಿಯಾಗುವಳು. ಅಂಥ ಮಕ್ಕಳನ್ನು ಹೆರುವುದಕ್ಕಿಂತ ಬಂಜೆಯಾಗಿರುವುದು ಲೇಸು. ಏಕೆಂದರೆ, ಆ ಮಕ್ಕಳಿಂದ ಲೋಕಕ್ಕೆ ಕ್ಷೇಮವಿಲ್ಲ. ತಾಯಿಗೆ ಸುಖವಿಲ್ಲ. ಆ ಮಗನಿಗೆ ದುಃಖವು ತಪ್ಪುವುದಿಲ್ಲ. ಆದಕಾರಣ ಬಹು ನಿರ್ಲಕ್ಷಿಸಲ್ಪಟ್ಟಿರುವ ಅತ್ಯಂತ ಮಹತ್ವವಾದ ಈ ಸಂತಾನೋತ್ಪತ್ತಿಯ ಕಡೆಗೆ ಶಿಕ್ಷಣಾಭಿಮಾನಿಗಳು ಸಂಪೂರ್ಣ ಗಮನಿಸಬೇಕು.

ಮಗುವು ಈ ಪ್ರಪಂಚಕ್ಕೆ ಬಂದೊಡನೆ ಮೊದಲು ಪರಿಚಯವಾಗುವ ತಾಯಿಯೇ ಆ ಶಿಶುವಿಗೆ ಮೊದಲನೆಯ ಗುರು. ಹೊಟ್ಟೆಯಲ್ಲಿಟ್ಟುಕೊಂಡು ಜೋಪಾನ ಮಾಡಿದ್ದಕ್ಕಿಂತಲೂ ಅನಂತರ ಆ ಶಿಶುವನ್ನು ಸರಿಯಾಗಿ ಸಂರಕ್ಷಿಸುವುದು ಹೆಚ್ಚು ಶ್ರಮದ ಮತ್ತು ಬಹು ಹೊಣೆಗಾರಿಕೆಯ ಕೆಲಸವಾಗಿದೆ. ಆ ಶಿಶುವು ಬೆಳೆದಂತೆ ತಾಯಿಯು ಅದರ ಆಹಾರ—ವಿಹಾರ, ನಡೆ—ನುಡಿಗಳ ಕಡೆಗೆ ತುಂಬಾ ಲಕ್ಷಿಸಿ ಸಕಾಲದಲ್ಲಿ ಸರಿಯಾಗಿ ತಿದ್ದಬೇಕು. ಇಷ್ಟೇ ಅಲ್ಲ; ತಾನು ಸರಿಯಾದ ನಡೆ-ನುಡಿಗಳುಳ್ಳವಳಾಗಿಯೂ ಇರಬೇಕು. ಏಕೆಂದರೆ, ಆ ಕೂಸು ತಾಯಿಯ ಆಚಾರ-ವಿಚಾರಗಳನ್ನೇ ಅನುಕರಿಸುತ್ತಿರುತ್ತದೆ. ಕೋಮಲವಾದ ಆ ಮಗುವಿನ ಅಂತಃಕರಣದ ಮೇಲೆ ತಾಯಿಯ ನಡೆನುಡಿಗಳೇ ಪ್ರತಿಬಿಂಬಿಸುತ್ತವೆ. ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವಂತೆ ಸತ್ಯಕಾಮನೆಂಬ ಬಾಲಕನು ಗೌತುಮಋಷಿಯಲ್ಲಿ ಸತ್ಯವನ್ನೇ ನುಡಿಯಲು ತಾಯಿಯಾದ ಜಾಬಾಲಿಯು ಸತ್ಯವತಿಯಾಗಿದ್ದುದೇ ಕಾರಣವು.

ಒಂದು ಬೀಜವನ್ನು ಬಿತ್ತುವುದು ಸುಲಭ. ಆದರೆ ಅದು ಸಸಿಯಾದನಂತರ ಫಲಕ್ಕೆ ಬರುವವರೆಗೂ ಸಕಾಲದಲ್ಲಿ ಸರಿಯಾಗಿ ನೀರು ಗೊಬ್ಬರಗಳನ್ನು ಹಾಕಿ ಕಸಕಡ್ಡಿಗಳನ್ನು ತೆಗೆದು ಅನ್ಯಪ್ರಾಣಿಗಳ ಉಪದ್ರವವಾಗದಂತೆ ಸಂರಕ್ಷಿಸುವುದು ಮಾತ್ರ ಬಹು ಕಷ್ಟವಲ್ಲವೇ ? ಹಾಗೆಯೇ ಮಕ್ಕಳನ್ನು ಹೆರುವುದು ಸುಲಭ. ಆದರೆ ಅವರು ಪ್ರೌಢರಾಗುವವರೆಗೆ ಅವರ ಆಹಾರ-ವಿಹಾರ, ಗುಣ-ಕರ್ಮ, ಸ್ವಭಾವ-ವಿದ್ಯೆಗಳ ಕಡೆಗೆ ಸಂಪೂರ್ಣ ಲಕ್ಷಿಸಿ ಅವರು ನಿಜವಾದ ಮನುಷ್ಯರಾಗುವಂತೆ ಪ್ರಯತ್ನಿಸುವುದು ಮಾತ್ರ ತಾಯಿ-ತಂದೆಗಳಿಗೆ ಅತ್ಯಂತ ಶ್ರಮದ ಕೆಲಸವಾಗಿದೆ.

ಅಸಂಖ್ಯ ದಂಪತಿಗಳಿಗೆ ಮಕ್ಕಳನ್ನು ಹೆರುವ ವಿಷಯದಲ್ಲಿ ತಮ್ಮ ಮೇಲಿರುವ ಹೊಣೆಗಾರಿಕೆಯ ಕಲ್ಪನೆಯೇ ಇಲ್ಲದಿರುವುದರಿಂದ ಮಾನವಕುಟುಂಬವು ಈ ಪ್ರಕಾರ ನಾನಾ ದುಃಖಗಳಿಗೀಡಾಗಿದೆ. ಅಸಂಖ್ಯ ತಾಯಿ-ತಂದೆಗಳು ಮಕ್ಕಳನ್ನು

ಹೆರುವ ಮುಂಚೆ ಮಕ್ಕಳು ಬೇಕೆಂಬ ವಿಷಯದಲ್ಲಿ ಎಷ್ಟು ಪ್ರೇಮಾಭಿಲಾಷೆಗಳುಳ್ಳವ ರಾಗಿರುತ್ತಾರೆಯೋ ಅಷ್ಟು ಆ ಮಕ್ಕಳು ಹುಟ್ಟಿದನಂತರ ಅವರ ವಿಷಯದಲ್ಲಿ ಪ್ರೇಮ-ವಿಶ್ವಾಸಗಳುಳ್ಳವರಾಗಿರುವುದಿಲ್ಲ. ಒಂದೆರಡು ಮಕ್ಕಳಿರುವವರೆಗೆ ದಂಪತಿಗಳು ಅವರನ್ನು ಯಾವ ರೀತಿಯಲ್ಲಿ ಸಂರಕ್ಷಿಸುತ್ತಾರೆಯೋ ಅದೇ ಪ್ರಕಾರ ನಾಲ್ಕಾರು ಮಕ್ಕಳುಗಳಾದ ನಂತರ ಅವರನ್ನು ಪೋಷಿಸುವುದಿಲ್ಲ. ಹತ್ತೆಂಟು ಮಕ್ಕಳಾದರಂತೂ ತೀರಿತು. ತಾವು ಸಾಕಿದ ದನ-ಕರು, ಗಿಡ-ಬಳ್ಳಿಗಳಿಗಿಂತಲೂ ಮಕ್ಕಳ ಕಡೆಗೆ ಕಡಿಮೆ ಲಕ್ಷಿಸುತ್ತಾರೆ. ಗೃಹಶಿಕ್ಷಣದಲ್ಲಿರುವ ಈ ಶೋಚನೀಯ ಸ್ಥಿತಿಯ ನಿವಾರಣೆ ಯಾಗುವವರೆಗೂ ಮನುಷ್ಯಜಾತಿಯು ನಿಜವಾದ ಸುಖ-ಶಾಂತಿಗಳಿಂದ ಜೀವಿಸು ವುದು ಸಾಧ್ಯವಿಲ್ಲ. ಆದುದರಿಂದಲೇ ಅಮೇರಿಕದಲ್ಲಿ ಈ ಗೃಹಶಿಕ್ಷಣದ ಪ್ರಸಾರ ಕ್ಕೋಸ್ಕರ ಬಹು ಪ್ರಯತ್ನಿಸುತ್ತಿದ್ದಾರೆ.

ಮಕ್ಕಳ ಪೋಷಣೆಯ ವಿಷಯದಲ್ಲಿರತಕ್ಕ ಈ ತಮ್ಮ ಅತ್ಯಂತ ಮಹತ್ವವಾದ ಕರ್ತವ್ಯವನ್ನು ಅಸಂಖ್ಯ ತಾಯಿ-ತಂದೆಗಳು ತೃಪ್ತಿಕರವಾಗಿ ಮಾಡುವುದು ಹಾಗಿರಲಿ, ಇವರು ಮಕ್ಕಳ ಮೇಲಣ ಮೋಹದಿಂದ ಚಿಕ್ಕಂದಿನಲ್ಲಿಯೇ ಅವರ ಊಟ-ಉಡಿಗೆ, ನಡೆ-ನುಡಿಗಳ ವಿಷಯದಲ್ಲಿ ನಾನಾ ದುರಭ್ಯಾಸಗಳನ್ನು ಕಲಿಸಿ ಅವರಿಗೆ ಜನ್ಮವೈರಿಗಳಾಗಿ ಪರಿಣಮಿಸುತ್ತಾರೆ. ಯಾವ ಮಕ್ಕಳ ದುರ್ದೈವದಿಂದ ಅವರಿಗೆ ಚಿಕ್ಕಂದಿನಲ್ಲಿಯೇ ಇಂಥ ಗೃಹಶಿಕ್ಷಣವು ದೊರೆಯುತ್ತದೆಯೋ ಅವರು ಮುಂದೆ ಎಂಥ ವಿದ್ಯಾಲಯದಲ್ಲಿದ್ದರೂ ಅವರ ನಡತೆಯು ಮಾತ್ರ ತಿದ್ದುವಡೆ ಯಾಗುವುದು ಸಾಧ್ಯವಿಲ್ಲ.

ಆದುದರಿಂದ ತಾಯಿ-ತಂದೆಗಳು ಮಕ್ಕಳಿಗೆ ಅಹಿತಕರವಾದ ಊಟ-ಉಡಿಗೆ, ನಡೆ-ನುಡಿಗಳನ್ನು ಯಾವ ಕಾರಣದಿಂದಲೂ ಕಲಿಸದಂತೆ ಬಹು ಎಚ್ಚರಿಕೆಯುಳ್ಳವ ರಾಗಿರಬೇಕು. ಮಕ್ಕಳ ಮನಸ್ಸು ಪವಿತ್ರವಾಗಿರುವಂತೆ ಮೊದಲು ಪ್ರಯತ್ನಿಸಬೇಕು. ಅವರು ಸದ್ಗುಣಿಗಳೂ ಸದಾಚಾರಿಗಳೂ ಆಗುವಂತೆ ಆಯಾಯ ಪ್ರಸಂಗಗಳಲ್ಲಿ ಪ್ರೇಮದಿಂದಲೇ ದೃಷ್ಟಾಂತ ಮೂಲಕ ಹಿತೋಪದೇಶಗಳನ್ನು ಮಾಡುವುದರಲ್ಲಿ ಸ್ವಲ್ಪವೂ ಉಪೇಕ್ಷಿಸಬಾರದು. ಅವರ ಒಳ್ಳೆಯ ಗುಣ-ಸ್ವಭಾವಗಳಿಗೇನೇ ಮಹತ್ವ ವನ್ನು ಕೊಡಬೇಕು. ಅವರ ಬುದ್ಧಿಶಕ್ತಿಯು ಯಾವ ಸದ್ವಿಷಯದಲ್ಲಿ ಹೋಗು ತ್ತದೆಯೋ ಅದೇ ವಿಷಯದಲ್ಲಿ ಅವರು ಪಾರಂಗತರಾಗುವಂತೆ ಅವರ ಬುದ್ಧಿ ಸಾಮರ್ಥ್ಯವನ್ನು ವೃದ್ಧಿಗೊಳಿಸಬೇಕು. ತಾಯಿ-ತಂದೆಗಳಿಗೆ ಇಷ್ಟವಿದ್ದ ವಿದ್ಯೆ ಯನ್ನು ಕಲಿಯುವ ಭಾರವು ಮಕ್ಕಳ ಮೇಲೆ ಬೀಳಬಾರದು. ಮಕ್ಕಳಿಗೆ ಯಾವುದರಲ್ಲಿ ಗತಿಯುಂಟೋ ಆ ವಿದ್ಯೆಯನ್ನೇ ಅವರು ಕಲಿಯಲವಕಾಶವಿರಬೇಕು. ಒಂದೇ ವಿಧವಾದ ಆಹಾರವು ಹೇಗೆ ಎಲ್ಲರಿಗೂ ಆರೋಗ್ಯಕರವಾದುದಾಗಿರುವುದು ಶಕ್ಯವಿಲ್ಲವೋ ಹಾಗೆಯೇ ಒಂದೇ ವಿಧವಾದ ವಿದ್ಯೆಯು ಎಲ್ಲರ ಬುದ್ಧಿಶಕ್ತಿಯನ್ನೂ ಬೆಳೆಯಿಸಲು ಸಾಧನವಾಗುವುದು ಸಾಧ್ಯವಿಲ್ಲ.

ಬಹುಜನರು ತಮ್ಮ ಮಕ್ಕಳಿಗೆ ಮೋಹದಿಂದ ಅಹಿತಕರವಾದ ಆಂದರೆ ರುಚಿಯಾಗಿ ತೋರುವ ಆಹಾರವನ್ನು ಅಕ್ರಮವಾಗಿಯೂ ಮಿತಿಮೀರಿಯೂ ಕೊಟ್ಟು ಅವರ ಆರೋಗ್ಯಭಾಗ್ಯವನ್ನೇ ಹಾಳುಮಾಡುತ್ತಾರೆ. ರುಚಿಯಾದ ಆಹಾರವನ್ನು ಹೆಚ್ಚು ಸೇವಿಸುವುದರಿಂದ ಮಕ್ಕಳ ದೇಹವು ಬಲವಾಗುವುದಿಲ್ಲ. ಸೇವಿಸಿದ ಶುದ್ಧ ಆಹಾರವೆಲ್ಲಾ ಸರಿಯಾಗಿ ಜೀರ್ಣವಾದಾಗಲೇ ದೇಹಸಾಮರ್ಥ್ಯ ವುಂಟಾಗುತ್ತದೆಂಬುದನ್ನು ತಾಯಿ—ತಂದೆಗಳು—ಮುಖ್ಯವಾಗಿ ತಾಯಿಯು ಚೆನ್ನಾಗಿ ನೆನಪಿನಲ್ಲಿಟ್ಟುಕೊಳ್ಳಬೇಕು.

ಈ ಪ್ರಕಾರ ಚಿಕ್ಕಂದಿನಲ್ಲಿಯೇ ತಾಯಿ—ತಂದೆಗಳಿಂದ ಮಕ್ಕಳ ಮಾನಸಿಕ, ಬೌದ್ಧಿಕ ಮತ್ತು ಶಾರೀರಿಕ ಉನ್ನತಿಗಳಿಗೋಸ್ಕರ ಸರಿಯಾದ ಶಿಕ್ಷಣ ದೊರೆಯು ವುದೇ ಗೃಹಶಿಕ್ಷಣವು. ಮನುಷ್ಯನಿಗೆ ಮನುಷ್ಯತ್ವವನ್ನುಂಟುಮಾಡಲು ಮೂಲ ಸಾಧನವಾದ ಈ ಗೃಹಶಿಕ್ಷಣವನ್ನು ಕೊಡುವ ತಾಯಿ-ತಂದೆಗಳೇ ತೈತ್ತರೀಯೋಪ ನಿಷತ್ತಿನಲ್ಲಿ ಹೇಳಿದ ಪ್ರಕಾರ "ಮಾತೃದೇವೋ ಭವ" "ಪಿತೃದೇವೋ ಭವ" ಎಂಬಂತೆ ದೇವತ್ವಕ್ಕೆ ಪಾತ್ರರಾಗುವರು. ಇಲ್ಲದಿದ್ದರೆ ಮನುಸ್ಮೃತಿಯಲ್ಲಿ ಹೇಳಿರುವಂತೆ 'ಮಾತಾ ಶತ್ರುಃ ಪಿತಾ ವೈರೀ ಯೇನ ಬಾಲೋ ನ ಪಾಠಿತಃ' ಆ ತಾಯಿಯೇ ಮಕ್ಕಳಿಗೆ ಶತ್ರು ಆ ತಂದೆಯೇ ವೈರಿಯು. ಈಗಿರತಕ್ಕ ಈ ಶೋಚನೀಯ ಸ್ಥಿತಿಯು ಜಾಗ್ರತೆ ನಿವಾರಣೆಯಾಗಿ ಉಪನಿಷತ್ಕಾಲದ ಆ ಶ್ರೇಷ್ಠಾ ವಸ್ಥೆಯು ಗೃಹಶಿಕ್ಷಣಕ್ಕೆ ಪಾತ್ರವಾಗಲಿ.

— ಹರ್ಡೇಕರ ಮಂಜಪ್ಪ

## ವೃತ್ತಪತ್ರಿಕಾಸ್ವಾತಂತ್ರ್ಯ

ವೃತ್ತಪತ್ರಿಕೆಗಳಿಗೆ ಎಷ್ಟು ಮಾತ್ರ ಸ್ವಾತಂತ್ರ್ಯವಿರಬೇಕು—ಎಂಬ ವಿಚಾರ ದಲ್ಲಿ ಬಹುಕಾಲದಿಂದ ಚರ್ಚೆ ನಡೆದಿದೆ. ಪಾಶ್ಚಾತ್ಯ ದೇಶಗಳಲ್ಲೆಲ್ಲ ಸಾಮಾನ್ಯವಾಗಿ ಆ ಚರ್ಚೆ ಈಗ ಸಿದ್ಧಾಂತಕ್ಕೆ ಬಂದಿದೆಯೆಂದು ಹೇಳಬಹುದು. ಪತ್ರಿಕಾಸ್ವಾತಂತ್ರ್ಯ, ಅಥವಾ ವಚನಸ್ವಾತಂತ್ರ್ಯ, ಅಥವಾ ವಾದಸ್ವಾತಂತ್ರ್ಯ ಎಂಬುದು ಅನೇಕ ಪಾಶ್ಚಾತ್ಯ ರಾಷ್ಟ್ರಗಳ ಮೂಲನಿಬಂಧನೆ (ಕಾನ್‌ಸ್ಟಿಟ್ಯೂಷನ್)ಗಳಿಗೆ ಸೇರಿದ ಒಂದು ಮುಖ್ಯಾಂಶವಾಗಿದೆ. ಸಾಮಾನ್ಯವಾಗಿ ವ್ಯಕ್ತಿಜನರ ಸ್ವಂತಮಾನ, ಪ್ರಜಾಸಮು ದಾಯದ ಕ್ಷೇಮ—ಇವುಗಳಿಗೆ ಭಂಗತಾರದ ರೀತಿಯಲ್ಲಿ ಎಂಥಾ ಬರವಣಿಗೆಯ ನ್ನಾದರೂ ಪ್ರಕಟಿಸಲು ಪತ್ರಿಕೆಗಳಿಗೆ ಅಧಿಕಾರವಿರಲೇಬೇಕೆಂದು ಆ ದೇಶಗಳು ಈಗ ಅಂಗೀಕರಿಸಿವೆ. ಜನರ ಮಾನಕ್ಷೇಮಗಳಿಗೆ ಪತ್ರಿಕೆಗಳು ಅಪಾಯ ತಂದಿವೆಯೆಂಬ ಸಂದರ್ಭದಲ್ಲಿಯೂ ಸಹ, ಅವುಗಳನ್ನು ಸಾಮಾನ್ಯವಾದ (ಕೋರ್ಟು) ನ್ಯಾಯ

ಸ್ಥಾನಗಳ ಮೂಲಕವೇ,—ವಿಚಾರಣಾ ಪೂರ್ವಕವಾಗಿಯೇ,—ಶಿಕ್ಷೆಗೆ ಗುರಿಪಡಿಸ ಬೇಕೆಂದೂ, ಸರಕಾರದ ಎಕ್ಸಿಕ್ಯೂಟಿವ್ (ಕಾರ್ಯಕಾರಿಶಾಖೆಯ) ಅಧಿಕಾರಿ ವರ್ಗದ ಸ್ವೇಚ್ಛೆದರ್ಪಗಳಿಗೆ ಪತ್ರಿಕೆಗಳನ್ನು ಬಿಟ್ಟುಕೊಡಕೊಡದೆಂದೂ ಅಲ್ಲಿ ನಿಶ್ಚಯವಾಗಿದೆ. ಇಷ್ಟುಮಟ್ಟಿನ ಸ್ವಾತಂತ್ರ್ಯವನ್ನು ಸಂಪಾದಿಸಲು ಪಾಶ್ಚಾತ್ಯ ದೇಶಗಳ ಪತ್ರಕರ್ತರು ಅನೇಕ ತಲೆಮೊರೆಗಳ ಕಾಲ ನಾನಾ ಕಷ್ಟಗಳನ್ನು ಅನುಭವಿಸಬೇಕಾಯಿತು. ಹಿಂದೆ ಅನೇಕ ಮಂದಿ ಧೈರ್ಯದಿಂದ ಬರೆವಣಿಗೆಗಳನ್ನು ಬರೆದು, ಸೆರೆಮನೆಗೆ ಹೋಗಿ, ಆ ಮೂಲಕ ಪ್ರಜಾಸೇವೆಯಲ್ಲಿ ತಮಗಿರತಕ್ಕ ಉತ್ಸಾಹ ಆತುರಗಳೆಂಥ ವೆಂಬುದನ್ನು ತೋರಿಸಿ, ಪ್ರಜಾಜನರ ಅಭಿಮಾನ ಸಹಾನುಭೂತಿಗಳನ್ನು ಸಂಪಾದಿ ಸಿದ ಕಾರಣ, ಈಗಿನವರು ಅಲ್ಲಿ ನಿರ್ಭಯರಾಗಿ ಪತ್ರಿಕಾಕಾರ್ಯವನ್ನು ನಡೆಯಿಸ ಬಹುದಾಗಿದೆ.

ಇಂಡಿಯಾದೇಶದಲ್ಲಿ ಪತ್ರಿಕೆಗಳಿಗೆ ಇನ್ನೂ ಅಷ್ಟು ನಿರ್ಭಯ ಸ್ಥಿತಿ ಬಂದಿಲ್ಲ. ಈ ದೇಶದಲ್ಲಿಯೂ ಅನೇಕ ಮಂದಿ ಪತ್ರಕರ್ತರು ಸರಕಾರದ ಮೇಲೆ ತಾವು ಮಾಡಿದ ಟೀಕೆಗಳಿಗಾಗಿ ಕಾರಾಗೃಹವನ್ನು ಸೇರಿ ಕಷ್ಟಪಟ್ಟಿದ್ದಾರೆ. ಸ್ವರಾಜ್ಯ ಸಮಾರಂಭ ವಾದಮೇಲಂತೂ ಅನೇಕ ಹೊಸ ನಿರ್ಬಂಧಗಳು ಕಲ್ಪಿತವಾಗಿದ್ದು, ಈಚೀಚೆಗೆ ಆ ನಿರ್ಬಂಧಗಳು ಅಷ್ಟಿಷ್ಟು ತೊಲಗಿವೆ. ಆದರೂ ಸರಕಾರದ ಮನಸ್ಸು ಇನ್ನೂ ಶಂಕೆ ಅಸಹನೆಗಳಿಂದ ಕೂಡಿದ್ದಾಗಿಯೇ ಇದೆ. ಎಂಥಾ ಸಂದರ್ಭದಲ್ಲಿ, ಯಾವ ಹೊಸ ನೆವದಿಂದ ಎಂಥಾ ಹೊಸ ಅಪಾಯ ಬಂದೀತೋ ಎಂಬ ಭಯ ಪತ್ರಿಕೆಗಳಿಗೆ ಸಂಪೂರ್ಣವಾಗಿ ಹೋಗಿಲ್ಲ.

ಮೈಸೂರಿನಲ್ಲಿಯೂ ಇತರ ದೇಶೀಯ ಸಂಸ್ಥಾನಗಳಲ್ಲಿಯೂ ಪತ್ರಿಕೆಗಳಿಗೆ ಸ್ವಾತಂತ್ರ್ಯವು ಮತ್ತಷ್ಟು ಹೀನವಾಗಿದೆ. ಇಲ್ಲಿ ಸರಕಾರದ ಅಪ್ಪಣೆಯಿಲ್ಲದೆ ಪತ್ರಿಕೆ ಯನ್ನು ಹೊರಡಿಸಲಾಗದು: ಮತ್ತು ಕೊಟ್ಟ ಅಪ್ಪಣೆಯನ್ನು ಸರಕಾರವು ವಿಚಾರಣೆ ವಿವರಣೆಗಳಿಲ್ಲದೆ ಇಷ್ಟಬಂದಾಗ ಕಿತ್ತುಕೊಳ್ಳಬಹುದಾಗಿದೆ; ಎಂದರೆ, ಪತ್ರಿಕೆ ನಡಸುವವನು ಸರ್ವದಾ ಸರಕಾರಕ್ಕೆ ಎಲ್ಲಿ ಕೋಪಬಂದೀತೋ—ಎಂಬ ಹೆದರಿಕೆ ಯಿಂದ ನಡೆದುಕೊಳ್ಳುತ್ತಿರಬೇಕಾಗಿದೆ. ಆ ಹೆದರಿಕೆಯನ್ನು ಬಿಟ್ಟು ಅವನು ನಡೆದರೆ, ಆಗ ಅವನಿಗಿರುವ ಅಪ್ಪಣೆ ರದ್ದಾಗಿ, ಪತ್ರಿಕೆ ನಿಂತುಹೋಗಬೇಕಾದೀತು. ಇದು ಸರಿಯಾದ ಸ್ಥಿತಿಯಲ್ಲವೆಂದೂ, ಇತರ ನಾಗರಿಕ ದೇಶಗಳಲ್ಲಿರುವಂತೆ ಮೈಸೂರಿನಲ್ಲಿಯೂ ಪತ್ರಿಕೆಗಳು ನಿರುಪಾಧಿಕವಾಗಿರಬೇಕೆಂದೂ ಈ ಸಂಸ್ಥಾನದ ಪ್ರಜಾಪ್ರಮುಖರನೇಕರು ವಾದಿಸುತ್ತಿರುವವರು.[1]

---

[1] ಇದು ಹಿಂದಿನ ಮಾತು; ಇಂಡಿಯವು ಸ್ವತಂತ್ರವಾಗಿ ಪ್ರಜಾರಾಜ್ಯವನ್ನು ಸ್ಥಾಪಿಸಿಕೊಂಡ ಮೇಲೆ, ಮೈಸೂರು ಅದರಲ್ಲಿ ಮಿಳಿತವಾದ ಬಳಿಕ, ಇಲ್ಲಿ ಪತ್ರಿಕಾ ಸ್ವಾತಂತ್ರ್ಯವು ಇಂಡಿಯದ ಮಿಕ್ಕೆಲ್ಲ ಭಾಗಗಳಲ್ಲಿರುವ ಮಟ್ಟಿಗೆ ಇದೆ. ಇಂಡಿಯದ ಸರ್ವಜಾನಪದ ರಾಜ್ಯ ನಿಬಂಧನೆಯು ಮಿಕ್ಕೆಲ್ಲ ಪ್ರಜಾ ಸ್ವಾತಂತ್ರ್ಯಗಳಿಗೆ ಹೇಗೋ ಪತ್ರಿಕಾ ಸ್ವಾತಂತ್ರ್ಯಕ್ಕೂ ಹಾಗೆಯೇ ಆಧಾರ ವಾಗಿದೆ.

## ಸ್ವಾತಂತ್ರ್ಯವೇಕೆ?

ಪತ್ರಿಕಾಕರ್ತನ ಸ್ವಾತಂತ್ರ್ಯವು ನಿಜವಾಗಿ ಪ್ರಜಾಜನರೆಲ್ಲರಿಗೂ ಸೇರಿದ ಒಂದು ಅಧಿಕಾರವೇ ಹೊರತು, ಅದು ಅವನೊಬ್ಬನಿಗೆ ಮಾತ್ರ ಸಂಬಂಧಪಟ್ಟ ಹಕ್ಕೇನೂ ಅಲ್ಲವೆಂಬುದನ್ನು ಯಾರೂ ಮರೆಯಬಾರದು. ಅವನು ಪರಾಧೀನನಾಗದೆ ಇದ್ದರೆ ಅದರ ಪ್ರಯೋಜನವು ಎಲ್ಲ ಪ್ರಜೆಗಳಿಗೂ ಇರುವುದು. ಅವನಿಗೆ ಹಿಂಗಟ್ಟು ಮುರಿ ಕಟ್ಟಿಸಿದರೆ ಅದರ ಬಾಧೆಯು ಎಲ್ಲರ ಪಾಲಿಗೂ ತಗಲುವುದು. ಪತ್ರಕರ್ತನು ನಡೆಯಿಸುವ ಎಲ್ಲ ಕಾರ್ಯಗಳೂ ಪ್ರಜೆಯಃ ಪರವಾದುವಾಗಿರುತ್ತವೆ. ಅವನು ಅವರ "ಏಜೆಂಟ್" ಅಥವಾ ಪ್ರತಿನಿಧಿ ಮಾತ್ರವಾಗಿರುತ್ತಾನೆ. ಅವನಿಗೆ ರಾಜ್ಯವು ವಹಿಸಿಕೊಡುವ ಅಧಿಕಾರ ಮರ್ಯಾದೆಗಳೆಲ್ಲವೂ ವಸ್ತುತಃ ಪ್ರಜಾವರ್ಗಕ್ಕೆ ಸಲ್ಲ ತಕ್ಕುವು. ಅವುಗಳಲ್ಲಿ ಯಾವುದನ್ನಾದರೂ ಅವನಿಗೆ ತಪ್ಪಿಸಿದರೆ ಆ ನಷ್ಟಕ್ಕೆ ಪ್ರಜೆಗಳೆಲ್ಲರೂ ಗುರಿಯಾಗುವರು. ಈ ತತ್ತ್ವವನ್ನು ನಮ್ಮ ಜನರು ಜ್ಞಾಪಕದಲ್ಲಿರಿಸಿಕೊಳ್ಳಬೇಕು.

ನಮ್ಮ ರಾಜಕೀಯದ, ಅಥವಾ ಸಾಮಾಜಿಕದ, ಅಥವಾ ಇತರ ಜಾತಿಯ ಎಲ್ಲ ಸಂಸ್ಥೆಗಳಲ್ಲಿಯೂ ಎರಡು ಭಾಗ ಅಥವಾ ಪಕ್ಷಗಳಿರುತ್ತವೆ. ಒಂದು ಅಧಿಕಾರವುಳ್ಳವರ ಪಕ್ಷ, ಇನ್ನೊಂದು ಅಧೀನರಾದವರ ಪಕ್ಷ; ಒಂದು ಬಲಾಢ್ಯರ ಭಾಗ, ಇನ್ನೊಂದು ಬಲವಶರಾದವರ ಭಾಗ. ರಾಜ್ಯವ್ಯವಸ್ಥೆಯಲ್ಲಿ ಸರಕಾರವೆಂಬುದು ಅಧಿಕಾರಸ್ಥಪಕ್ಷ, ಪ್ರಜಾಮಂಡಲವು ಅಧೀನಪಕ್ಷ. ಮತ ಕುಲಾಚಾರ ವ್ಯವಸ್ಥೆಯಲ್ಲಿ ಮಠಪುರೋಹಿತರುಗಳು ಅಧಿಕಾರ ಭಾಗ, ಶಿಷ್ಯವರ್ಗವು ಅಧೀನ ಭಾಗ. ಕೃಷಿ, ಕಾರ್ಖಾನೆ ಮೊದಲಾದ ಸಂಪದ್ವ್ಯವಸ್ಥೆಗಳಲ್ಲಿ ಮಾಲೀಕ ಧಣಿಗಳು ಅಧಿಕಾರ ಭಾಗ, ಚಾಕರರೂ ಕೂಲಿಯವರೂ ಅಧೀನಭಾಗ. ಹೀಗೆ ನಮ್ಮ ಎಲ್ಲ ಏರ್ಪಾಟುಗಳಲ್ಲಿಯೂ ಎರಡು ಪಕ್ಷಗಳುಂಟು.

ಇದರಲ್ಲಿ ಅಧಿಕಾರಸ್ಥರಾದವರು ತಮ್ಮ ಅಧಿಕಾರವನ್ನು ನ್ಯಾಯತಪ್ಪದ ರೀತಿಯಲ್ಲಿ ಉಪಯೋಗಿಸುವ ಹಾಗೆ ನೋಡಿಕೊಳ್ಳುವುದು ಅಧೀನರಾದವರ ಕರ್ತವ್ಯವಾಗಿರುತ್ತದೆ. ಅಧಿಕಾರಸ್ಥರ ಅಧಿಕಾರಬಲಕ್ಕೆ ಅಧೀನಜನರ ಒಪ್ಪಿಕೆಯೇ ಜನ್ಮಸ್ಥಾನವಾಗಿರುತ್ತದೆ. ಅಧಿಕಾರಬಲವು ಅಧಿಕಾರಸ್ಥರಿಗೆ ಹುಟ್ಟುಗುಣವಾಗಿ ಬಂದದ್ದಲ್ಲ, ಆಕಾಶದಿಂದ ವರವಾಗಿ ಬಂದದ್ದಲ್ಲ, ಪಿತ್ರಾರ್ಜಿತವಾಗಿ ಬಂದದ್ದಲ್ಲ. ಅದು ಬಹುಮಂದಿಯ ಸಮ್ಮತಿಯಿಂದ ನಿಂತು ನಡೆಯುತ್ತಿರುವ ಒಂದು ವ್ಯವಸ್ಥೆಯಿಂದ ಉತ್ಪತ್ತಿಯಾದದ್ದು. ಒಟ್ಟು ಸಮಾಜದ ಹಿತಕ್ಕೋಸ್ಕರ—ದೇಶದ ಸಾರ್ವಜನಿಕ ಕ್ಷೇಮಕ್ಕೋಸ್ಕರ—ದೇಶೀಯರೆಲ್ಲರೂ ಒಂದು ಏರ್ಪಾಟಿಗೆ ಒಡಂಬಟ್ಟು, ಅದರಂತೆ ತಮ್ಮ ಪೈಕಿ ಗೊತ್ತಾದ ಕೆಲಮಂದಿಯಲ್ಲಿ ಯಾವ ಒಂದು ಶಕ್ತಿಯನ್ನು ನಿಲ್ಲಿಸಿ ನಡೆಯಿಸಿಕೊಂಡುಬರುವರೋ, ರಾಷ್ಟ್ರಜನಕಲ್ಪಿತವಾದ ಆ ಶಕ್ತಿಯೇ ಅಧಿಕಾರವೆಂಬುದು. ಹೀಗೆ ಅಧಿಕಾರ ವೃಕ್ಷದ ಬೇರು ಅಧೀನರ ಇಷ್ಟದಲ್ಲಿರು

ತ್ತದೆ; ಆದರ ಫಲವು ಅವರ ಪ್ರಯೋಜನದಲ್ಲಿರುತ್ತದೆ. ಆದಕಾರಣ ಅಧಿಕಾರಸ್ಥರಾದವರು ತಮ್ಮ ಅಧಿಕಾರಬಲವನ್ನು ಉಪಯೋಗಿಸುವುದರಲ್ಲಿ ಹದ್ದುಮೀರದೆ ನಡೆದುಕೊಳ್ಳುವಂತೆ ಅವರನ್ನು ತಿದ್ದಿ ನಡೆಸುವ ಶಕ್ತಿಯು ಅಧೀನರಾದವರಿಗೆ,—ಎಂದರೆ ಪ್ರಜಾವರ್ಗಕ್ಕೆ,—ಆಜನ್ಮಸಿದ್ಧವಾಗಿರುತ್ತದೆ. ಈ ಶಕ್ತಿಯನ್ನು ಪ್ರಜಾಜನರು ಎರಡು ಬಗೆಯ ಆಯುಧಗಳಿಂದ ಪ್ರಯೋಗಿಸಬಹುದು : (೧) ವೃತ್ತಪತ್ರಿಕೆ, (೨) ಸಭಾಪ್ರಸಂಗ ಉಪನ್ಯಾಸಗಳು. ಈ ಎರಡರ ಮೂಲರೂಪವೂ ಒಂದೇ. ಅಧೀನಜನರ ಪರವಾಗಿ ಹೇಳಬೇಕಾದ ಮಾತನ್ನು ಕಾಗದದ ಮೇಲೆ ಬರೆದರೆ ಅದು ಪತ್ರಿಕೆಯಾಗುವುದು; ಅದೇ ಮಾತನ್ನು ಬಾಯಿಂದ ಆಡಿದರೆ ಅದು ಉಪನ್ಯಾಸ ಅಥವಾ ಚರ್ಚೆಯೆನಿಸುವುದು.

ಬಲವಶರಾದ ಜನರ ಪರವಾಗಿ ನಿಂತು, ಬಲಸಂಪನ್ನರಾದವರ ನಡೆವಳಿಕೆಗಳನ್ನು ಪರೀಕ್ಷಿಸಿ ನೋಡುತ್ತಾ, ಅವರನ್ನು ಹದ್ದಿನಲ್ಲಿರಿಸುವುದೇ ಪತ್ರಿಕೆಗಳ ಮುಖ್ಯೋದ್ದೇಶವಾಗಿರುವ ಕಾರಣ, ಈ ಪತ್ರಿಕೆಗಳನ್ನು ಸ್ವಾತಂತ್ರ್ಯದಲ್ಲಿ ಬಿಡಬಾರದೆಂದು ಅಧಿಕಾರ ಪಕ್ಷದವರು ಇಚ್ಛಿಸುವುದು ಸ್ವಾಭಾವಿಕವಾಗಿಯೇ ಇದೆ. ಆದರೆ ಅಧಿಕಾರಿ ಜನರ ಈ ಇಚ್ಛೆಯನ್ನು ನಡೆಸಿಕೊಟ್ಟರೆ, ಅದರಿಂದ ಪ್ರಜೆಗಳು ತಮ್ಮ ಕಡೆಯ ನ್ಯಾಯವಾದಿಯ ಬಾಯನ್ನು ತಾವೇ ಮುಚ್ಚಿದಂತೆ ಆಗುವುದು.

ಅಧಿಕಾರವರ್ಗವನ್ನು ಪರೀಕ್ಷಿಸಿ ವಿರೋಧಿಸುವುದೊಂದು ಮಾತ್ರವೇ ಅಲ್ಲ; ಇನ್ನೊಂದು ಕೆಲಸವೂ ಪತ್ರಿಕೆಗಳಿಂದ ನೇರವೇರಬೇಕಾಗಿರುತ್ತದೆ. ಅದೇನೆಂದರೆ—ಪ್ರಕೃತವ್ಯವಸ್ಥೆಯ ಪರಿಶೋಧನೆ. ಈಗ ಇರತಕ್ಕ ಏರ್ಪಾಟು ಸರಿಯಾಗಿದೆಯೇ ಅಥವಾ ಅದನ್ನೇನಾದರೂ ಬದಲಾಯಿಸಬೇಕೆ? ನಮ್ಮ ಈಗಿನ ಅಭಿಪ್ರಾಯಗಳು ಸಕಾರಣವಾಗಿವೆಯೆ ಅಥವಾ ಅವುಗಳನ್ನು ವ್ಯತ್ಯಾಸಮಾಡಬೇಕೆ? ಹೀಗೆಂದು ರಾಜಕೀಯ ವಿಚಾರಗಳಲ್ಲಿಯೂ ಸಾಮಾಜಿಕ ವಿಚಾರಗಳಲ್ಲಿಯೂ ಮತಾಚಾರ ವಿಚಾರಗಳಲ್ಲಿಯೂ ಪದೇ ಪದೇ ಪ್ರಶ್ನೆಯೆತ್ತಿ ಚರ್ಚೆ ನಡಸುತ್ತಿರುವುದು ವೃತ್ತಪತ್ರಿಕೆಗಳ ಧರ್ಮ. ಈ ವಿಧದ ಚರ್ಚೆಯಿಂದ ಸಂಸ್ಕಾರ ಸುಧಾರಣೆಗಳು ಹುಟ್ಟಿ ಪ್ರಚಾರಕ್ಕೆ ಬಂದ ಹೊರತು ಜನಕ್ಕೆ ಕ್ಷೇಮಶಾಂತಿಗಳು ಸಂತತವಾಗಿರಲಾರವು. ನಮ್ಮ ದೇಹಗೇಹಗಳನ್ನು ಆಗಾಗ ಪರಿಶೋಧಿಸಿ ತೊಳೆದು ಚೊಕ್ಕಟಪಡಿಸುವಂತೆ, ನಮ್ಮ ಭಾವನೆಗಳನ್ನೂ ಅಭಿಪ್ರಾಯಗಳನ್ನೂ ಸಂಸ್ಥೆಗಳನ್ನೂ ಕಟ್ಟುಪಾಡುಗಳನ್ನೂ ಆಗಾಗ ಪರಿಶೋಧಿಸಿ ಸರಿಪಡಿಸುತ್ತಿರಬೇಕು. ಈ ಪರಿಷ್ಕಾರ ಕಾರ್ಯಕ್ಕೆ ಪತ್ರಿಕೆಗಳು ಕೈಹಾಕಿದಾಗಲೆಲ್ಲ, ಆ ತೆರದ ಬದಲಾವಣೆಯಿಂದ ಯಾರು ಯಾರಿಗೆ ನಷ್ಟವಾಗುವುದೆಂಬ ಭೀತಿ ತೋರುವುದೋ ಅವರೆಲ್ಲರೂ ಪತ್ರಿಕೆಗಳ ವಿಷಯದಲ್ಲಿ ಕೋಪಗೊಳ್ಳುವುದು ಸ್ವಾಭಾವಿಕವಾಗಿಯೇ ಇರುತ್ತದೆ. ಪ್ರಜಾಪ್ರತಿನಿಧಿಸಭೆ ಶಾಸನಸಭೆಗಳ ಶಕ್ತಿ ಇನ್ನೂ ಹೆಚ್ಚಬೇಕೆಂದರೆ ಸರಕಾರದ ಅಧಿಕಾರಸ್ಥರಿಗೂ, ಮತಾಚಾರಗಳನ್ನು ಪರಿಷ್ಕರಿಸಬೇಕೆಂದರೆ ಮಠಾಧಿಪತಿಗಳಿಗೂ, ಕೂಲಿಯ

ಜನರ ಅನುಕೂಲವನ್ನು ನೋಡಬೇಕೆಂದರೆ ಕಾರ್ಖಾನೆಯ ಯಜಮಾನರಿಗೂ, ಸಾಲಗಾರರ ಕಷ್ಟವನ್ನು ಚಿಂತಿಸಬೇಕೆಂದರೆ ಸಾಹುಕಾರರಿಗೂ ಅಸಮಾಧಾನ ತಲೆದೋರುವುದು ಆಶ್ಚರ್ಯವಲ್ಲ. ಆದರೆ ಈ ಪ್ರಬಲಜನರ ಅಸಮಾಧಾನಕ್ಕೆ ತಲೆಬಾಗಿ ಪತ್ರಿಕೆಗಳಿಗೆ ವಾಗ್ಬಂಧನ ಮಾಡಿದರೆ ಇತರ ಸಾಮಾನ್ಯಜನರ ಗತಿ ಉತ್ತಮಪಡಲು ಮಾರ್ಗವಿಲ್ಲದೆ ಹೋಗುವುದು.

## ಎರಡು ಸ್ವಾಭಾವಿಕ ನಿರ್ಬಂಧಗಳು

ಹಾಗಾದರೆ ವೃತ್ತಪತ್ರಿಕೆಗಳು ಮನಸ್ವೀ ಬರೆದು ಹಾವಳಿ ಮಾಡಬಹುದೋ? ಅವುಗಳಿಗೆ ಯಾವ ನಿರ್ಬಂಧವೂ ಇರಕೂಡದೋ? ಈ ಪ್ರಶ್ನೆ ನ್ಯಾಯವಾದದ್ದೇನೋ ಹೌದು, ಆದರೆ ಅನವಶ್ಯವಾದುದು. ಏಕೆಂದರೆ ಪತ್ರಿಕೆಗಳಿಗೆ ಎರಡು ಬಗೆಯ ನಿರ್ಬಂಧಗಳು ಸ್ವಭಾವಸಿದ್ಧವಾಗಿಯೇ ಯಾವಾಗಲೂ ಇರುತ್ತವೆ: ವಾಚಕ ಮಹಾಶಯರ ವಿಚಾರಶೀಲತೆಯೇ ಮೊದಲನೆಯದು; ಪತ್ರಿಕೆಗಳಲ್ಲಿ ಪರಸ್ಪರ ಇರತಕ್ಕ ಸ್ಪರ್ಧೆಯೇ ಎರಡನೆಯದು. ಯಾವ ಪತ್ರಿಕೆಯಲ್ಲಾದರೂ ಸುಳ್ಳಾದ ಸಂಗತಿಗಳೂ ಅಸಂಬದ್ಧವಾದ ಪ್ರಸಂಗಗಳೂ ಅಯೋಗ್ಯವಾದ ಆಕ್ಷೇಪಣೆಗಳೂ ಪದೇ ಪದೇ ಬರುತ್ತಿದ್ದರೆ ಮಹಾಜನರು ಅಂಥಾ ಪತ್ರಿಕೆಯನ್ನು ಪ್ರೋತ್ಸಾಹಿಸುವುದೇ ಇಲ್ಲ. ಪತ್ರಿಕೆಗಳನ್ನೋದತಕ್ಕವರೆಲ್ಲರೂ ಅಕ್ಷರಸ್ಥರು, ವಿವೇಚನಶಕ್ತಿಯುಳ್ಳವರು, ಅನೇಕ ಗ್ರಂಥಪತ್ರಿಕೆಗಳಿಂದ ವಿಷಯಗಳನ್ನು ಸಂಗ್ರಹಿಸಿ, ಹೋಲಿಸಿ ನೋಡಿ, ನಿಶ್ಚಯವನ್ನರಿಯಬಲ್ಲವರು. ಇಂಥಾ ಜನರು ದುಷ್ಟಪತ್ರಿಕೆಗಳನ್ನು ತಾವೇ ದೂರತಳ್ಳಿ ಶಿಕ್ಷಿಸುತ್ತಾರೆ. ಇವರ ಜೊತೆಗೆ ಪತ್ರಿಕಾಕರ್ತರೇ ತಮ್ಮ ಪೈಕಿ ಒಬ್ಬರಿನ್ನೊಬ್ಬರ ತಪ್ಪುಗಳನ್ನು ಹುಡುಕಿ ಖಂಡಿಸುತ್ತಾ ತಮ್ಮ ತಮ್ಮ ಉತ್ತಮತೆಯನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸುತ್ತಿರುವರು. ಇದರಿಂದಲೂ ಪತ್ರಿಕಾಲೇಖನಗಳಲ್ಲಿರಬಹುದಾದ ಹೆಚ್ಚುಕಡಮೆಗಳೂ ಅನ್ಯಾಯಗಳೂ ಮಹಾಜನರಿಗೆ ತಿಳಿಯಬಂದು, ಪತ್ರಿಕೆಗಳಿಂದ ಯಾವ ಅಪಾಯವೂ ಆಗದಂತೆ ಇರುವುದು. ಈ ಎರಡು ನಿರ್ಬಂಧಗಳೇ ಪತ್ರಿಕೆಗಳನ್ನು ಹದ್ದಿನಲ್ಲಿರಿಸಲು ಸಾಮಾನ್ಯವಾಗಿ ಸಾಕಾಗಿರುತ್ತವೆ.

ಪತ್ರಿಕೆಯು ಪ್ರಜೆಗಿಂತ ಮಿಂಚಿದ್ದಲ್ಲ. ಎಲ್ಲಿ ಪ್ರಜಾಹಿತಕ್ಕೆ ಪತ್ರಿಕೆಯಿಂದ ಭಂಗಬಂದೀತೋ ಅಲ್ಲಿ ಅಂಥಾ ಭಂಗವನ್ನು ತಡೆಯಲು ಬೇಕಾದ ಕಾಯಿದೆ ಕಟ್ಟುಪಾಡುಗಳನ್ನು ಮಾಡಲು ಪ್ರಜಾಜನರು ಸ್ವತಂತ್ರರಾಗಿರುತ್ತಾರೆ. ಆದರೆ ಈ ಶಾಸನತತ್ತ್ವವು ವ್ಯಕ್ತಿಪ್ರಜೆಯ ವಿಷಯದಲ್ಲಿಯೂ ಸಹ ಅನ್ವಯಿಸತಕ್ಕ ಒಂದು ಸಾಧಾರಣ ನಿಯಮವೇ ಹೊರತು ಬೇರೆಯಲ್ಲ. ಪ್ರಜಾಕಂಟಕನಾದವನು ಪತ್ರಕರ್ತನಾಗಲಿ, ಉಪನ್ಯಾಸಕನಾಗಲಿ, ಸಾಮಾನ್ಯ ಪ್ರಜೆಯೇ ಆಗಲಿ—ಅಂಥವನನ್ನು ದಂಡಿಸುವುದು ರಾಜ್ಯಶಾಸನದ ಕರ್ತವ್ಯವೇ ಸರಿ. ಆದರೆ ಅವನ ದೋಷ

ವನ್ನು ನಿಷ್ಕರ್ಷೆಮಾಡತಕ್ಕವರೂ ದಂಡನೆಯನ್ನು ವಿಧಿಸತಕ್ಕವರೂ ಯಾರಾಗಿ ಬೇಕು? ಯಾರು ಪತ್ರಿಕೆಯ ಬರೆವಣಿಗೆಯಿಂದ ಕುಪಿತರಾಗಿರುವರೋ ಅವರೇ ನ್ಯಾಯನಿರ್ಣಯ ಮಾಡಬಹುದೆ, ಅಥವಾ (ಅಪರಾಧಿ) ಪತ್ರಿಕಾಕರ್ತನೂ, (ಫಿರ್ಯಾದಿ) ದೋಷಾರೋಪಣಕರ್ತನೂ ಇಬ್ಬರೂ ಅಲ್ಲದೆ ಬೇರೊಬ್ಬ ನಿಷ್ಪಕ್ಷಪಾತಿಯಾದ (ಜಡ್ಜಿ) ನ್ಯಾಯಾಧಿಕಾರಿಯೇ ನ್ಯಾಯವಿವೇಚನೆ ಮಾಡಬೇಕೆ ?

## ಶಾಸನದ ನಾಲ್ಕು ತತ್ತ್ವಗಳು

ಸಾಮಾನ್ಯ ಪ್ರಜೆಗಿರುವುದಕ್ಕಿಂತ ಹೆಚ್ಚಿನ ಸ್ವಾತಂತ್ರ್ಯವೇನೂ ಪತ್ರಕರ್ತನಿಗೆ ಬೇಕಿಲ್ಲ; ಆದರೆ ಅದಕ್ಕಿಂತ ಕಡಮೆಯಾಗಿಯೂ ಇರಬಾರದು. ಸಾಮಾನ್ಯ ಪ್ರಜೆಯೊಬ್ಬನು ತಪ್ಪಿತಸ್ಥನೆಂದು ಯಾರಾದರೂ ದೋಷಾರೋಪಣೆ ಮಾಡಿದರೆ ಅವನಿಗೆ ಶಿಕ್ಷೆಯಾಗುವ ಬಗೆ ಹೇಗೆ? ಮೊದಲು ಅವನ ಅಪರಾಧವೆಂತಹುದೆಂಬುದು ಸ್ಪಷ್ಟವಾಗಿ ತಿಳಿದುಬರಬೇಕು. ಆಮೇಲೆ, ಅಂಥಾ ಅಪರಾಧವನ್ನು ಕಾನೂನು (ಅಥವಾ ರಾಜ್ಯಶಾಸನವು) ಗಣನೆಗೆ ತೆಗೆದುಕೊಂಡಿದೆಯೆ ಎಂಬುದು ಗೊತ್ತಾಗಬೇಕು. ಅನಂತರ, ಆ ಅಪರಾಧವು ಆ ಮನುಷ್ಯನಿಂದ ನಿಜವಾಗಿ ನಡೆದಿದೆಯೆ, ಮತ್ತು ಎಷ್ಟುಮಟ್ಟಿಗೆ, ಯಾವ ಸಂದರ್ಭಗಳಲ್ಲಿ, ನಡೆದಿದೆ–ಎಂಬುದರ ವಿಚಾರಣೆಯು ಸಾಮಾನ್ಯವಾದ (ನ್ಯಾಯಸ್ಥಾನ) ಕೋರ್ಟಿನಲ್ಲಿ ಬಹಿರಂಗವಾಗಿ, ವಿಹಿತ ಕ್ರಮದಿಂದ, ನಡೆಯಬೇಕು. ಈ ವಿಚಾರಣೆಯ ಫಲಿತಾಂಶವೇ ಕೋರ್ಟು ಕೊಡತಕ್ಕ ಶಾಸನಾನುಸಾರವಾದ ತೀರ್ಮಾನ. ವೃತ್ತಪತ್ರಿಕೆಯ ವಿಷಯದಲ್ಲಿಯೂ ನಿರ್ಬಂಧಗಳು ಇದೇ ರೀತಿಯಾಗಿಯೇ, ಇಷ್ಟು ಮಾತ್ರವೇ, ಇರಬೇಕು.

(೧) ಪತ್ರಿಕೆ ಹೊರಡಿಸಬೇಕೆಂದಿರುವವನು ಮೊದಲೇ ಸರಕಾರದ ಅಪ್ಪಣೆಯನ್ನು ಪಡೆದುಕೊಳ್ಳಬೇಕೆಂಬ ವಿಧಿ ಇರಬಾರದು. ಪ್ರತಿಯೊಬ್ಬ ಮನುಷ್ಯನೂ ತನ್ನ ಜನರ ಮೇಲ್ಮೆಗೆ ಅವಶ್ಯವೆಂದು ತನಗೆ ತೋರುವ ಸಂಗತಿಗಳನ್ನೂ ಭಾವನೆಗಳನ್ನೂ, ಕೆಲವು ಗೊತ್ತಾದ ನೀತಿಗಳಿಗೆ ಭಂಗತಾರದ ರೀತಿಯಲ್ಲಿ, ಬರೆದು ಪ್ರಕಟಗೊಳಿಸಲು ಸ್ವತಂತ್ರನಿರುತ್ತಾನೆ. ಅದು ಸ್ವಜನ ವಿಷಯದಲ್ಲಿ ಅವನಿಗೆ ಪರಮ ಧರ್ಮವೇ ಆಗಿರುತ್ತದೆ. ಆ ಗೊತ್ತಾದ ನೀತಿಗಳಿಗೆ ಅವನು ಭಂಗ ತಂದಮೇಲೆ ಅವನನ್ನು ಶಿಕ್ಷಿಸಬಹುದೇ ವಿನಾ, ಅವನು ಕೆಲಸವನ್ನಾರಂಭಿಸುವುದಕ್ಕೆ ಮುಂಚೆಯೇ ಅವನು ತಪ್ಪುಮಾಡಬಹುದೇನೋ ಎಂದು ಸಂದೇಹಪಟ್ಟು, ಅವನನ್ನು ನಿರ್ಬಂಧಕ್ಕೊಳಪಡಿಸುವುದು ನ್ಯಾಯವಲ್ಲ. ಯಾವನಾದರೊಬ್ಬ ಮನುಷ್ಯನು ತುಂಟನೆಂದು ಗೊತ್ತಾದ ಮೇಲೆ ಅವನನ್ನು ಸೆರೆ ಹಿಡಿಯಬಹುದೇ ಹೊರತು, ಅವನು ತುಂಟತನವನ್ನು ಮಾಡಬಹುದೋ ಏನೋ ಎಂದು ಮೊದಲೇ ನಿಷ್ಕಾರಣವಾಗಿ ಆಶಂಕಿಸಿ ಅವನ ಕೈಕಾಲುಗಳಿಗೆ ಯಾರೂ ಸಂಕೋಲೆ ತೊಡಿಸುವುದಿಲ್ಲ.

(೨) ವೃತ್ತಪತ್ರಿಕೆಯ ಶಿಕ್ಷೆಗೆ ತಕ್ಕ ಕಾರಣ ಎಂಥಾ ಅಪರಾಧವೆಂಬುದನ್ನು

ಕಾನೂನು (ಶಾಸನ) ಸ್ಪಷ್ಟವಾಗಿ ತಿಳಿಸಬೇಕು. ಮುಖ್ಯಮುಖ್ಯವಾದ ಅಪರಾಧಗಳು ಈಗಾಗಲೇ (ದಂಡಶಾಸನ) ಪೀನಲ್‌ಕೋಡಿನಲ್ಲಿ ವಿವರಿಸಲ್ಪಟ್ಟಿವೆ. ಅವು (೧) ಮಾನಹಾನಿ, (೨) ಪ್ರಜಾ ವೈಷಮ್ಯ (ಅಥವಾ ಜಾತಿವೈರ) ಪ್ರೋತ್ಸಾಹ, (೩) ರಾಜದ್ರೋಹ (ಅಥವಾ ರಾಜ್ಯದ್ವೇಷ)—ಈ ಮೂರು. ಇವಲ್ಲದೆ ಇನ್ನಾವ ದೋಷವನ್ನಾದರೂ ದಂಡನಾರ್ಹವಾದ ಅಪರಾಧಗಳ ಪಟ್ಟಿಗೆ ಹೊಸದಾಗಿ ಸೇರಿಸ ಬೇಕಾದರೆ ಆ ಹೊಸ ದೋಷದ ಸ್ವರೂಪ ಲಕ್ಷಣಗಳನ್ನು ಶಾಸನವಚನದಲ್ಲಿ ವಿಶದ ಪಡಿಸಿರಬೇಕು.

(೩) ಆದರೆ ಇಂಥಾ ದೋಷ ಪಟ್ಟಿಕೆಯಲ್ಲಿ ಅಧಿಕಾರಸ್ಥ ವರ್ಗದ ಆಕ್ಷೇಪಣೆ ಯನ್ನು ಮಾತ್ರ ಎಂದಿಗೂ ಸೇರಿಸಬಾರದು. ಏಕೆಂದರೆ ಅಧಿಕಾರಸ್ಥರ ನಡೆವಳಿಕೆ ಗಳನ್ನು ಪರೀಕ್ಷಿಸಿ, ಅವರ ತಪ್ಪುಗಳನ್ನು ತೋರಿಸಿ, ಅವರ ಅಧಿಕಾರಧೋರಣೆಯ ವೇಗವನ್ನು ನಿರೋಧಿಸುವುದೇ ಪತ್ರಿಕೆಗಳ ಮುಖ್ಯ ಕರ್ತವ್ಯ. ಇದನ್ನು ಸಾಂಗವಾಗಿ ನೆರವೇರಿಸುವುದು ಒಂದು ತಪ್ಪೆಂದು (ಕಾನೂನು) ರಾಜ್ಯಶಾಸನವು ವಿಧಿಸಿ ದ್ದಾದರೆ, ಪತ್ರಿಕೆಗಳು ತಮ್ಮ ಪ್ರಥಮಕರ್ತವ್ಯವನ್ನೇ ಬಿಟ್ಟು ಬಿಡಬೇಕಾಗುವುದು. ಅದರಿಂದಾಗುವ ನಷ್ಟವು ಪ್ರಜೆಗೆ. ಈ ಕಾರಣದಿಂದಲೇ ಪತ್ರಿಕೆಗಳ ಮೇಲೆ ಸರಕಾರದ ಕಾರ್ಯಕಾರಿ ವರ್ಗಕ್ಕೆ (ಎಕ್ಸೆಕ್ಯೂಟಿವ್ ಅಧಿಕಾರಸ್ಥರಿಗೆ) ಯಾವ ವಿಧವಾದ ದಂಡನಾಧಿಕಾರವೂ ಎಂದಿಗೂ ಇರಬಾರದೆಂದು ರಾಜ್ಯಶಾಸ್ತ್ರ ಪಂಡಿತರು ಹೇಳುವುದು.

(೪) ಪತ್ರಿಕೆಯು ಶಾಸನಕ್ಕೆ ವಿರೋಧವಾಗಿ ನಡೆದಿದೆಯೆಂದು ತೋರಿದಾಗ ಅದಕ್ಕೆ ತಕ್ಕ ದಂಡನೆಯು ಕ್ರಮವಾದ ಕೋರ್ಟುಗಳ ಮುಖಾಂತರವೇ,— ಶಾಸನಾನುಸಾರವಾದ ಬಹಿರಂಗ ವಿಚಾರಣೆಯ ಮೂಲಕವೇ—ನಡೆಯಬೇಕು. ಸರಕಾರದ ಅಧಿಕಾರಸ್ಥವರ್ಗದ ವಿಷಯದಲ್ಲಿ ಪತ್ರಿಕೆಯಿಂದ ಅಪರಾಧ ನಡೆದಿದ್ದರೆ ಸರಕಾರವೂ, ಸಾಮಾನ್ಯ ಪ್ರಜೆಯಂತೆಯೆ, ಕೋರ್ಟಿನಲ್ಲಿ ವ್ಯವಹಾರ ನಡಸಿ ತಕ್ಕ ನ್ಯಾಯವನ್ನು ಪಡೆಯಬಹುದು.

ಈ ನಾಲ್ಕು ತತ್ತ್ವಗಳಿಗೆ ವಿರೋಧವಾಗದ ರೀತಿಯಲ್ಲಿ ಪ್ರಜಾಜನರು ಯಾವ ನಿರ್ಬಂಧವನ್ನಾದರೂ ಶಾಸನದ್ವಾರಾ ಪತ್ರಿಕೆಗಳಿಗೆ ಕಲ್ಪಿಸಬಹುದು. ಸದ್ಯಃ ಮೈಸೂರಿನಲ್ಲಿದ್ದ ೧೯೦೮ರ ಶಾಸನವು ಈ ತತ್ತ್ವಗಳಿಗೆ ವಿರುದ್ಧವಾಗಿದೆ. ಅದರಲ್ಲಿ— (೧) ಪತ್ರಕರ್ತನ ಮೇಲೆ ಅಪರಾಧ ತೋರುವುದಕ್ಕಿಂತ ಮುಂಚೆಯೇ ಆತಂಕದ ಏರ್ಪಾಟಿದೆ; (೨) ಅಪರಾಧ ಎಂಥದೆಂಬ ನಿಷ್ಕರ್ಷೆಯೇ ಇಲ್ಲ; (೩) ಕೋರ್ಟುಗಳ ಪ್ರವೇಶಕ್ಕೆ ಅವಕಾಶವೂ ಇಲ್ಲ; (೪) ದಂಡನಾಧಿಕಾರವು ರಾಜ್ಯದ ಕಾರ್ಯಕಾರಿ ಮಂಡಲದ (ಎಕ್ಸೆಕ್ಯೂಟಿವ್) ಕೈಯಲ್ಲಿದೆ. ಹೀಗಿರುವುದರಿಂದ ಈ ಕಾನೂನು ಪ್ರಜಾಸ್ವಾತಂತ್ರ್ಯಕ್ಕೆ ಹಾನಿಕಾರಕವಾಗಿದೆ. ಇದನ್ನು ತೆಗೆದುಹಾಕುವುದು ಈಗ ಆವಶ್ಯಕವೇ ಹೊರತು, ಹೊಸ ವೃತ್ತಪತ್ರಿಕಾ ಶಾಸನವಾವುದೂ ಈಗ ಬೇಕಾಗಿಲ್ಲ.

ಪೀನಲ್‌ಕೋಡೇ ಎಲ್ಲ ವಿಶೇಷ ಸಂದರ್ಭಗಳಿಗೂ ಸಿದ್ಧವಾಗಿರುವುದಲ್ಲದೆ, ಮೇಲೆ ಹೇಳಿದಂತೆ, ವಾಚಕ ಮಂಡಲಿಯ ಯುಕ್ತಾಯುಕ್ತ ಪರಿಜ್ಞಾನವೂ ಪತ್ರಿಕಾ ಪ್ರಪಂಚದೊಳಗಿನ ಅನ್ಯೋನ್ಯ ಪರಿಶೋಧನ ಪದ್ಧತಿಯೂ ಪತ್ರಿಕೆಗಳನ್ನು ನೀತಿ ಮಾರ್ಗದಲ್ಲಿ ನಿಲ್ಲಿಸಲು ಸಾಮಾನ್ಯವಾಗಿ ಸಾಕಾಗಿರುತ್ತವೆ.

## ವಾದವು ನಿರುಪಾಧಿಕವಾಗಿರಬೇಕು

ಈ ಪ್ರಪಂಚದಲ್ಲಿ ನಾವು ನಮ್ಮ ತಿಳಿವಳಿಕೆಯನ್ನೂ ಏರ್ಪಾಟುಗಳನ್ನೂ ದಿನೇ ದಿನೇ ಉತ್ತಮಪಡಿಸಿಕೊಳ್ಳುತ್ತ ಹೋಗಬೇಕಾದರೆ ಅದಕ್ಕೆ ನಮಗೆ ಲಭ್ಯವಾಗಿರುವ ಸಾಧನವು ಚರ್ಚೆಯೊಂದೇ. ಇದನ್ನು ಉದ್ದೇಶಿಸಿಯೇ ಪೂರ್ವಿಕರು—

" ವಾದೇ ವಾದೇ ಜಾಯತೇ ತತ್ತ್ವಬೋಧಃ "

ಎಂದು ಹೇಳಿದರು. ಈ ವಾದಕಾರ್ಯವು ಸಾಂಗವಾಗಿ, ಸಫಲವಾಗಿ, ನೆರವೇರಬೇಕಾದರೆ ಅದು ಸ್ವತಂತ್ರವಾಗಿ, ನಿರ್ಭಯವಾಗಿ, ಜರುಗಬೇಕು. ವೃತ್ತಪತ್ರಿಕೆಯೇ ವಾದಕರ್ಮದ ಮುಖ್ಯ ಕ್ಷೇತ್ರ. ಈ ಕಾರಣದಿಂದಲೇ ಮಿಲ್ಟನ್ ಮಹಾಕವಿಯು ಗೀಳಳರಲ್ಲಿ ಹೀಗೆ ಬರೆದನು:

> "Who kills a man kills a reasonable creature, God's image; but he who destroys a good book kills reason itself, kills the image of God as it were in the eye .... Give me the liberty to know, to utter, and to argue freely according to conscience, above all liberties."
>
> —John Milton

> "ಯಾರು ಒಬ್ಬ ಮನುಷ್ಯನನ್ನು ಕೊಲ್ಲುತ್ತಾನೆಯೋ ಅವನು ವಿವೇಚನಶಕ್ತಿಯುಳ್ಳ ಪ್ರಾಣಿಯೊಂದನ್ನು, ಎಂದರೆ ಭಗವಂತನ ಪ್ರತಿಬಿಂಬವೊಂದನ್ನು, ಕೊಂದಂಥವನಾಗುತ್ತಾನೆ; ಯಾರು ಒಂದು ಸದ್ಗ್ರಂಥವನ್ನು ನಾಶಪಡಿಸುತ್ತಾನೆಯೋ ಅವನು ವಿವೇಚನಶಕ್ತಿಯನ್ನೇ ಕೊಂದವನಾಗುತ್ತಾನೆ—ಎಂದರೆ ಭಗವಂತನ ಪ್ರತಿಬಿಂಬದ ಕಣ್ಣನ್ನೇ ಕಿತ್ತು ಅದನ್ನು ಕೊಂದವನಾಗುತ್ತಾನೆ. . . . ನನಗೆ ಎಲ್ಲ ಸ್ವಾತಂತ್ರ್ಯಗಳಿಗಿಂತಲೂ ಮುಖ್ಯವಾಗಿ ಬೇಕಾದದ್ದು ತಿಳಿವಳಿಕೆ ಪಡೆದುಕೊಳ್ಳುವ, ತಿಳಿದದ್ದನ್ನು ಹೇಳುವ ಮತ್ತು ಆತ್ಮಸಾಕ್ಷಿಗನುಸಾರವಾಗಿ, ನಿರಾತಂಕವಾಗಿ, ಚರ್ಚೆ ನಡಸುವ ಸ್ವಾತಂತ್ರ್ಯ."

ಒಬ್ಬಾನೊಬ್ಬ ಪ್ರಸಿದ್ಧ ಫ್ರೆಂಚ್ ಲೇಖಕನು ಈ ರೀತಿ ಸಾರಿದ್ದಾನೆ:

"Suffer yourself to be blamed, imprisoned, condemned; suffer yourself even to be hanged; but publish your opinions. It is not a right; it is a duty"*

"ನಿಂದೆ ಬಂದರೆ ಅನುಭವಿಸು; ಕಾರಾಗೃಹ ಪ್ರಾಪ್ತಿಯಾದರೆ ಅನುಭವಿಸು; ಉಗ್ರ ದಂಡನೆಯಾದರೆ ಅನುಭವಿಸು; ನೇಣುಹಾಕುವುದಾದರೂ ಅನುಭವಿಸು; ಆದರೆ ನಿನ್ನ ಅಭಿಪ್ರಾಯಗಳನ್ನು ಪ್ರಕಟಗೊಳಿಸು. ಅವುಗಳನ್ನು ಪ್ರಕಟಿಸುವುದು ನಿನ್ನ ಹಕ್ಕು ಮಾತ್ರವಲ್ಲ; ಅದು ನಿನ್ನ ಕರ್ತವ್ಯ."

ಯಾವುದೋ ಒಂದು ವಿಶೇಷ ಸಂದರ್ಭದಲ್ಲಿ ಒಂದೆರಡು ಪತ್ರಿಕೆಗಳು ಉದ್ರೇಕಕರವಾದ ಬರವಣಿಗೆಗಳನ್ನು ಪ್ರಕಟಿಸಿದವೆಂಬ ನೆವದಿಂದ ವೃತ್ತಪತ್ರಿಕೆಗಳನ್ನೆಲ್ಲ ಬಂಧಿಸುವ ಯೋಚನೆಯನ್ನು ಮಾಡುವುದು ಹಿತಕರವಲ್ಲ. ನಮ್ಮ ದೇಶದಲ್ಲಿ ಪ್ರಜಾಪ್ರಮುಖರೆಂದೆನಿಸಿಕೊಂಡವರೇ ಸರಕಾರದ (ಎಕ್ಸೆಕ್ಯೂಟಿವ್) ಕಾರ್ಯಕಾರಿ ಮಂಡಲದೊಡನೆ ಸೇರಿಕೊಂಡು ಇಂಥಾ ಯೋಚನೆ ಮಾಡಿಯಾರೆಂಬ ಭೀತಿಗೆ ಇನ್ನೂ ಅವಕಾಶವಿರುವುದಾದ ಕಾರಣ, ಪ್ರಜಾಭಿಮಾನಿಗಳೆಲ್ಲರೂ ಜಾಗರೂಕರಾಗಿದ್ದುಕೊಂಡು ಪತ್ರಿಕಾಸ್ವಾತಂತ್ರ್ಯವನ್ನು—ಅದು ತಮ್ಮೆಲ್ಲರ ಸ್ವಂತಕ್ಕೆ ಸೇರಿದ ಸಾಮುದಾಯಿಕವಾದ ಒಂದು ಹಕ್ಕೇ ಹೊರತು ಬೇರೆಯಲ್ಲವೆಂದು ಭಾವಿಸಿ—ಕಾಪಾಡಿಕೊಳ್ಳಬೇಕು. ಈ ಸಂದರ್ಭದಲ್ಲಿ ಲಾರ್ಡ್ ಬ್ರೈಸ್ ಮಹಾಶಯರು ಬರೆದಿರುವ ಈ ಕೆಳಗಣ ವಾಕ್ಯಗಳು ಧ್ಯಾನಾರ್ಹಗಳಾಗಿವೆ:

"If, in its heedlessness, the press sometimes causes pain to the innocent, it does a great and necessary service in exposing evil-doers, many of whom would escape were it never to speak except upon sufficient evidence.... It is a watch-dog whose noisy bark must be tolerated, even when the person who approaches has no bad intent."

"ಪತ್ರಿಕೆಗಳು ಜಾಗರೂಕತೆ ಬಿಟ್ಟು ಒಂದೊಂದು ವೇಳೆ ನಿರಪರಾಧಿಗಳಿಗೆ ನೋವನ್ನುಂಟುಮಾಡಬಹುದು; ಆದರೆ ಪ್ರಮಾಣ ರುಜುವಾತುಗಳಿಲ್ಲದಿದ್ದರೆ ತಾವು ಮಾತನ್ನೇ ಆಡುವುದಿಲ್ಲವೆಂದು ಅವು

---

* *Encyclo. Brit.* (11th Edn.) Vol. XIX, p. 545 A.

ವ್ರತಮಾಡಿಕೊಂಡ ಪಕ್ಷದಲ್ಲಿ, ಅನೇಕ ಮಂದಿ ಕೆಡುಕರು ತಪ್ಪಿಸಿಕೊಳ್ಳುವಂತೆ ಆಗುವುದು. ಇಂಥಾ ಕೆಟ್ಟ ಜನರನ್ನು ಬಯಲಿಗೆಳೆಯುವುದು ಅವಶ್ಯವಾಗಿ ನಡೆಯಬೇಕಾದ ದೊಡ್ಡ ಕೆಲಸ . . . . ವೃತ್ತಪತ್ರಿಕೆಯು ಮನೆಗಾವಲಿನ ನಾಯಿಯ ಹಾಗೆ. ಅದು ಗಟ್ಟಿಯಾಗಿ ಬೊಗಳುತ್ತಿರುವುದೇ ನಮಗೆ ಒಂದು ಉಪಕಾರ. ಹತ್ತಿರ ಬಂದವನಿಗೆ ದುರುದ್ದೇಶವೇನೂ ಇಲ್ಲದಿದ್ದರೂ ಅದರ ಬೊಗಳಿಕೆಯನ್ನು ನಾವೆಲ್ಲ ಸಹಿಸಬೇಕು."

ಅಮೆರಿಕದ ರಾಷ್ಟ್ರವ್ಯೂಹಾಧ್ಯಕ್ಷನಾದ ಥಾಮಸ್ ಜೆಫರ್‌ಸನ್ ಮಹಾಶಯನು ಈ ರೀತಿ ಬರೆದನು :

"No government ought to be without censors; and where the press is not free, none else will be. If virtuous, it need not fear the fair operation of attack and defence. Nature has given to man no other means of sifting out the truth."

"ಎಂಥಾ ಸರಕಾರವಾದರೂ ಗುಣದೋಷವಿಮರ್ಶಕರಿಲ್ಲದೆ ಇರಬಾರದು. ಎಲ್ಲಿ ವೃತ್ತಪತ್ರಿಕೆಗಳು ಸ್ವತಂತ್ರವಲ್ಲವೋ ಅಲ್ಲಿ ಯಾರಿಗೂ ಸ್ವಾತಂತ್ರ್ಯ ಉಳಿಯದು. ಸರಕಾರವು ಧರ್ಮಮಾರ್ಗದಲ್ಲಿ ನಡೆಯುವಂತಹುದಾಗಿದ್ದರೆ, (ಪತ್ರಿಕೆಗಳಲ್ಲಿ) ಆಕ್ಷೇಪಣೆ ಸಮಾಧಾನಗಳು ಕ್ರಮವಾಗಿ ನಡೆಯುವುದರಿಂದ ಅದು ಏನೂ ಭಯಪಡಬೇಕಾದುದಿಲ್ಲ. ಇಂಥಾ ಚರ್ಚೆಯನ್ನು ಬಿಟ್ಟರೆ ಸತ್ಯವನ್ನು ಕಂಡುಹಿಡಿಯಲು ಬೇರೆ ಯಾವ ಸಾಧನವನ್ನೂ ಪ್ರಕೃತಿಯು ಮನುಷ್ಯನಿಗೆ ಕೊಟ್ಟಿಲ್ಲ."

### ಅಪಾಯವೇನು ?

ವೃತ್ತಪತ್ರಿಕೆಗಳು ಸ್ವತಂತ್ರವಾಗಿದ್ದರೆ ಸರಕಾರವನ್ನಲ್ಲಾಡಿಸಿ ಉರುಳಿಸುತ್ತವೆಯೆಂದು ಕೆಲವರು ಹೇಳುವುದುಂಟು. ಹಾಗೆ ಏಕೆ ಅವು ಮಾಡಬಾರದು? ಇಂಗ್ಲೆಂಡು ಅಮೆರಿಕಗಳಲ್ಲಿ ಪತ್ರಿಕೆಗಳು ಪ್ರತಿದಿವಸವೂ ಹಾಗೆ ಮಾಡಲು ಯತ್ನಿಸುತ್ತಿರುತ್ತವೆ. ಅವು ಹಾಗೆ ಮಾಡಿದರೆ ಅದರಿಂದ ಪ್ರಜೆಗಳಿಗಾಗುವ ನಷ್ಟವೇನು ? ಒಂದು ಸರಕಾರ ಉರುಳಿಹೋದರೆ ಮತ್ತೊಂದು ಸರಕಾರ ಬರಲೇಬರುತ್ತದೆ. ಸರಕಾರವನ್ನು ಉರುಳಿಸುವುದೆಂದರೆ ಅಧಿಕಾರಸ್ಥಾನದಲ್ಲಿರುವ ಕೆಲಮಂದಿಯನ್ನು ಆ ಸ್ಥಾನದಿಂದ ಈಚೆಗೆ ತೆಗೆದು, ಬೇರೆ ಜನರನ್ನು ಅಲ್ಲಿ ಕೂಡಿಸುವುದೆಂದು ಅರ್ಥವಾಗುವುದೇ

ಹೊರತು, ಸರಕಾರವೆಂಬ ಏರ್ಪಾಟನ್ನೇ ಕಿತ್ತುಹಾಕುವುದೆಂದು ಅರ್ಥವಾಗಲಾರದು. ಹಾಗೊಂದುವೇಳೆ ಅನಾಯಕತ್ವವನ್ನೂ ಅರಾಜಕವನ್ನೂ ಪತ್ರಿಕೆಗಳು ಸಾರುತ್ತಿದ್ದರೆ, ಅಂಥಾ ಪತ್ರಿಕೆಗಳನ್ನು ಶಿಕ್ಷಿಸಲು (ಪೀನಲ್ ಕೋಡ್) ದಂಡಶಾಸನವೂ ಕೋರ್ಟುಗಳೂ ಇದ್ದೇ ಇರುತ್ತವೆ. ಅರಾಜಕತ್ವವನ್ನು ಬಿಟ್ಟು, ಸರಕಾರದ ಅಧಿಕಾರಸ್ಥ ಜನರನ್ನು ಆಕ್ಷೇಪಿಸುವುದು ಮಾತ್ರವೇ ಒಂದು ಪತ್ರಿಕೆಯ ವಿಶೇಷಗುಣವಾಗಿರುವ ಪಕ್ಷಕ್ಕೆ, ಅದನ್ನು ಏಕೆ ನಿರ್ಬಂಧಿಸಬೇಕು? ಯಾರು ಪತ್ರಿಕೆಗಳ ಆಕ್ಷೇಪಣೆಗಳನ್ನು ಎದುರಿಸಬಲ್ಲಷ್ಟು ಸಾಹಸ ಸಾಮರ್ಥ್ಯಗಳನ್ನು ಪಡೆದಿರುವರೋ ಅಂಥವರು ಮಾತ್ರವೇ ಸರಕಾರವನ್ನು ನಡೆಸಲು ಅರ್ಹರಾಗಿರುತ್ತಾರೆ. ಯಾರು ಪತ್ರಿಕೆಗಳಿಗೆ ಅಂಜುವಷ್ಟು ದುರ್ಬಲರೂ, ಪತ್ರಿಕೆಗಳ ಚಳವಳಿಯಿಂದಲೇ ಪ್ರಜೆಗಳ ಅಪನಂಬಿಕೆಗೆ ಪಾತ್ರರಾಗಿ ಅಧಿಕಾರವನ್ನು ಕಳೆದುಕೊಳ್ಳುವಷ್ಟು ಅವಿಚಕ್ಷಣರೂ ಅಪ್ರಶಸ್ತರೂ ಆಗಿರುವರೋ, ಅಂಥವರು ಸರಕಾರವನ್ನು ಬಿಡುವುದೇ ಲೇಸು. ಪತ್ರಿಕೆಗಳ ಆಕ್ಷೇಪಣೆಯಲ್ಲಿ ಸತ್ಯಧರ್ಮಗಳಿದ್ದರಲ್ಲವೆ ಆ ಆಕ್ಷೇಪಣೆಯನ್ನು ಪ್ರಜೆಗಳು ನಂಬಿ ಅಂಗೀಕರಿಸುವುದು? ಇಂಥಾ ಆಕ್ಷೇಪಣೆಗೆ ಅವಕಾಶವು ಸರಕಾರದ ಅಕ್ರಮ ಅತ್ಯಾಚಾರಗಳಿಂದಲ್ಲವೆ ಉಂಟಾಗುವುದು? ಹೀಗೆ ವಿಚಾರಮಾಡಿ ನೋಡಿದರೆ, ಪತ್ರಿಕೆಗಳಿಂದ ಸರಕಾರಕ್ಕೆ ಯಾವ ಕೆಡುಕು ಉಂಟಾಗುವುದೆಂದು ಅಧಿಕಾರಸ್ಥಪಕ್ಷದವರು ಹೇಳುತ್ತಾರೆಯೋ, ಆ ಕೆಡುಕಿನ ಬೇರು ನಿಜವಾಗಿ ಸರಕಾರದ ನಡವಳಿಕೆಗಳಲ್ಲಿಯೇ ಇರುವುದೆಂದು ಗೊತ್ತಾಗುತ್ತದೆ. ಅಧಿಕಾರಸ್ಥರನ್ನು ಚುಚ್ಚುವ ಮುಳ್ಳುಮೊನೆಯು ಪತ್ರಿಕಾಕರ್ತನ ಲೇಖಣಿಯಲ್ಲಿಲ್ಲ; ಅವರನ್ನು ನೋಯಿಸುವ ವಿಷಬಿಂದುವು ಅವನ ಮಶೀ ಪಾತ್ರೆಯಲಿಲ್ಲ. ಆ ಮುಳ್ಳೂ ಆ ವಿಷವೂ ಸರಕಾರವು ಅವನಿಗೆ ಒದಗಿಸಿಕೊಡುವ ಸಂಗತಿಗಳಲ್ಲೇ ಅಡಗಿರುತ್ತವೆ. ಸರಕಾರವು ಆಕ್ಷೇಪಾರ್ಹವಾದ ಸಂಗತಿಗಳನ್ನು ಅವನಿಗೆ ಒದಗಿಸದೆ ಹೋದರೆ, ಅವನ ಲೇಖಣಿಯ ಮುಳ್ಳು ಮೃದುವಾಗಿಯೇ ಇರುವುದು; ಅವನ ಮಶಿ ನೀರಾಗಿಯೇ ಇರುವುದು.

## ಗುಣಗ್ರಹಣ

ಈಗ ನಮ್ಮ ದೇಶದ ಪತ್ರಿಕೆಗಳ ಮೇಲೆ ಇರುವ ಆಕ್ಷೇಪಣೆಗಳಲ್ಲಿ ಮುಖ್ಯವಾದ ಒಂದು ಏನೆಂದರೆ—ಅವು ಯಾವಾಗಲೂ ಸರಕಾರಕ್ಕೆ ಪ್ರತಿಕಕ್ಷಿ (Opposition) ಯಾಗಿಯೇ ಇರುತ್ತವೆಂಬುದು. ಇದೇ ಆಕ್ಷೇಪಣೆಯೇ ಸಾಮಾನ್ಯವಾಗಿ ನಮ್ಮ ಪ್ರಜಾಪ್ರಮುಖರ ಮೇಲೆಯೂ ಬಂದಿದೆ. ಇದು ಸ್ವಲ್ಪಮಟ್ಟಿಗೆ ನಿಜವಾದ ಸ್ಥಿತಿಯೆಂದೇ ನಾವು ಒಪ್ಪಬೇಕು. ಆದರೆ ಇದು ಸಕಾರಣವಾದ ಸ್ಥಿತಿ. ಇದರ ಕಾರಣಗಳು ಆಳವಾಗಿ ಬೇರುಬಿಟ್ಟಿರತಕ್ಕವು. ಅವು ಇಲ್ಲದಹಾಗಾದರೆ ಆಗ ಈ ಸ್ಥಿತಿ ತಾನಾಗಿ ಬದಲಾಯಿಸುವುದು.

ರಾಜ್ಯದ ಅಧಿಕಾರಿಚರ್ಯಾವಿಮರ್ಶೆಯಲ್ಲಿಯೂ, ಪ್ರಕೃತ ವ್ಯವಸ್ಥಾ ಪರೀಕ್ಷೆಯಲ್ಲಿಯೂ ಗುಣಗ್ರಹಣಮಾಡಬೇಕಾದದ್ದೂ, ಒಳ್ಳೆಯ ಜನರನ್ನು ಪ್ರೋತ್ಸಾಹಿಸಿ ಒಳ್ಳೆಯ ಏರ್ಪಾಟುಗಳಿಗೆ ಒತ್ತಾಸೆ ಕೊಡಬೇಕಾದದ್ದೂ ವೃತ್ತ ಪತ್ರಿಕೆಗಳ ಧರ್ಮವೇ ಹೌದು. ಆದರೆ ಸದ್ಯದ ರಾಜಕೀಯ ಪರಿಸ್ಥಿತಿಯಲ್ಲಿ ಈ ಧರ್ಮದ ಆಚರಣೆಗೆ ಅವಕಾಶ ಹೆಚ್ಚಾಗಿಲ್ಲ. ಇರುವಷ್ಟರ ಮಟ್ಟಿಗೆ ನಮ್ಮ ಮುಖ್ಯ ಮುಖ್ಯ ಪತ್ರಿಕೆಗಳು ಹಾಗೆ ಮಾಡುತ್ತಲೇ ಇವೆ. ಕಾರುಬಾರಿಗಳ ಉತ್ತಮ ಕಾರ್ಯ ಗಳ ವಿಷಯದಲ್ಲಿ ಮೆಚ್ಚಿಕೆಯನ್ನು ತೋರಿಸುವುದಕ್ಕೂ ಆಡಳಿತದ ಉತ್ತಮ ಪ್ರಯತ್ನಗಳಿಗೆ ಬೆಂಬಲಕೊಡುವುದಕ್ಕೂ ನಮ್ಮ ಮೇಲ್ತರದ ಪತ್ರಿಕೆಗಳು ಹಿಂಜರಿ ಯುತ್ತಿಲ್ಲ. ಹಾಗಿದ್ದರೂ, ಎದುವರೆಗೂ ರಾಜ್ಯಯಂತ್ರ ಚಾಲನೆಯಲ್ಲಿ ಪ್ರಜಾ ವರ್ಗಕ್ಕೆ ನಿಜವಾದ ಅಧಿಕಾರಶಕ್ತಿಯೂ ತತ್ಸಂಬಂಧವಾದ ಉತ್ತರಭಾರವೂ ಇರುವು ದಿಲ್ಲವೋ, ಅದುವರೆಗೂ ಪತ್ರಿಕೆಗಳ ಪ್ರಧಾನಕರ್ತವ್ಯವು ಅಧಿಕಾರವರ್ಗಕ್ಕೆ ಪ್ರತಿ ಭಟನೆಯಾಗಿಯೇ ಇರಬೇಕಾಗುತ್ತದೆ. ಪ್ರಕೃತ ಸ್ಥಿತಿಯಲ್ಲಿ, ಸರಕಾರದ ನ್ಯೂನಾತಿ ರೇಕಗಳನ್ನು ಸೂಚಿಸಿ ತಮ್ಮ ಅಪೇಕ್ಷೆಗಳನ್ನು ಅರಿಕೆ ಮಾಡಿಕೊಳ್ಳುವ ಅವಕಾಶ ಗಳು ಪ್ರಜಾ ಜನರಿಗೆ ಇರುವುದೇನೋ ನಿಜ. ಆದರೆ ತಮ್ಮ ಇಷ್ಟವನ್ನು ನೆರವೇರಿಸು ವಂತೆ ಸರಕಾರವನ್ನು ಒತ್ತಾಯಪಡಿಸುವ ಶಕ್ತಿ ಇನ್ನೂ ಅವರಿಗೆ ದೊರೆತಿಲ್ಲ. ಪ್ರಜೆಗಳು ತಮ್ಮ ಪ್ರತಿನಿಧಿಗಳ ಮುಖಾಂತರ ಅರ್ಜಿ ಮಾಡಿಕೊಳ್ಳಬಹುದು; ಆದರೆ ಸರಕಾರದವರು ಆ ಅರ್ಜಿಯನ್ನು ನಡೆಸಿಕೊಡಬೇಕೆಂಬ ನಿರ್ಬಂಧವೇನೂ ಇಲ್ಲ.* ಪ್ರಜಾಜನರು ತಮ್ಮ ಪ್ರತಿನಿಧಿಗಳನ್ನೇ ಅಧಿಕಾರ ಸ್ಥಾನದಲ್ಲಿರಿಸಿ, ತಮಗೆ ಬೇಕಾದ ಕೆಲಸಗಳನ್ನು ಅವರ ಕೈಯಿಂದ ಆಗಮಾಡಿಸಿಕೊಳ್ಳುವುದು ಈಗ (೧೯೨೮) ಸಾಧ್ಯವಿಲ್ಲ; ಎಂದರೆ ಈಗಿನ ಸರಕಾರವು ಪ್ರಜಾಧೀನವಾಗಿಲ್ಲ. ಇದರಿಂದ, ಪ್ರಜಾ ಪಕ್ಷದ ಪತ್ರಿಕೆಗಳಿಗೂ ಪ್ರಮುಖ ಜನರಿಗೂ ಯಾವಾಗಲೂ, ಸರಕಾರವು ಹೇಗೆ ಪ್ರಜಾಭಿಪ್ರಾಯಕ್ಕೆ ವಿರೋಧವಾಗಿ ನಡೆಯುತ್ತಿದೆಯೆಂಬುದನ್ನು ಹುಡುಕಿ ತೋರಿಸುತ್ತಿರುವುದೇ ದೊಡ್ಡ ಕೆಲಸವಾಗಿದೆ. ಈ ಸ್ಥಿತಿ ತಪ್ಪಿ, ಜವಾಬ್ದಾರೀ ಸರಕಾರ ಕ್ರಮವು (Responsible Government) ರೂಢಿಗೆ ಬಂದು, ರಾಜ್ಯ ವ್ಯವಹಾರದಲ್ಲಿ ಪ್ರಜಾಪ್ರಾಬಲ್ಯವು ಹೆಚ್ಚಿ, ಅಧಿಕಾರಪದವಿಯಲ್ಲಿ ಪ್ರಜಾಜನರು ತಮ್ಮ ಪ್ರತಿನಿಧಿಯನ್ನೇ ಕೂಡಿಸುವ ಕಾಲ ಬಂದಾಗ, ಪತ್ರಿಕೆಗಳಿಗೆ ಈಗಿನ ಸಂತತ ಪ್ರತಿಭಟನ ಕಾರ್ಯವು ತಪ್ಪಿ, ಅವು ಸರಕಾರಕ್ಕೆ ಸಂದರ್ಭಾನುಸಾರ ಅನುಮೋದನ ಕಾರಿಗಳೇ ಆಗುವುವು. ಈಗ ನಮ್ಮ ದೇಶದಲ್ಲಿರುವ ಜಾತಿ ಮತಾನುಸಾರಿಗಳಾದ ಕಕ್ಷಿಗಳು ಆಗ ಇಲ್ಲದೆಹೋಗಿ, (ಇಂಗ್ಲೆಂಡು ಮುಂತಾದ ರಾಷ್ಟ್ರಗಳಲ್ಲಿರುವಂತೆ) ನಿಜವಾದ ರಾಜಕೀಯ ತತ್ತ್ವಗಳನ್ನವಲಂಬಿಸಿ, ಜಾತಿ ಮತ ಭೇದಗಳನ್ನು

---

* ಈ ವಾಕ್ಯಗಳು ಇಂಡಿಯದ ಸ್ವಾತಂತ್ರ್ಯಕ್ಕೆ ಹಿಂದಿನ ದಿವಸಗಳಲ್ಲಿ ಬರೆದವು.

ಮರೆತಿರುವ ಸಾರ್ವಜನಿಕ ಕಕ್ಷಿಗಳು ಹುಟ್ಟುವುವು. ಆಗ ವೃತ್ತಪತ್ರಿಕೆಗಳು ಆ ಕಕ್ಷಿಗಳಿಗನುಸಾರ ವಿಂಗಡವಾಗಿ ತಮ್ಮ ಕಕ್ಷಿಯು, ಅಧಿಕಾರಸ್ಥಾನದಲ್ಲಿರುವಾಗ ಆ ಸರಕಾರವನ್ನು ಪೋಷಿಸುತ್ತಲೂ, ತಮ್ಮ ಪ್ರತಿಕಕ್ಷಿಯು ಅಧಿಕಾರಕ್ಕೆ ಬಂದಾಗ ಮಾತ್ರ ಆ ಸರಕಾರವನ್ನು ಆಕ್ಷೇಪಿಸುತ್ತಲೂ ಇರುವುವು. ಸರಕಾರವನ್ನು ನಿಲ್ಲಿಸುವ ಮತ್ತು ಬೀಳಿಸುವ ಶಕ್ತಿಯು ನಿಜವಾಗಿ ಪ್ರಜೆಗಳ ಕೈಗೆ ದೊರೆತಮೇಲೆ, ವೃತ್ತ ಪತ್ರಿಕೆಗಳಿಗೆ ಸರಕಾರದ ದೂಷಣ ಭೂಷಣಗಳಲ್ಲಿ ಹೆಚ್ಚಿನ ಜವಾಬ್ದಾರೀ ಬುದ್ಧಿಯೂ, ಯಾವುದಾದರೊಂದು ಸಾರ್ವಜನಿಕ ತತ್ತ್ವವನ್ನವಲಂಬಿಸಿರುವ ರಾಜಕೀಯ ಪಕ್ಷಕ್ಕೆ ತಾವು ದೃಢವಾದ ಬೆಂಬಲವನ್ನು ಕೊಟ್ಟು, ಆ ಪಕ್ಷದ ಪ್ರಜಾಪ್ರತಿನಿಧಿಗಳನ್ನು ಸರಕಾರದ ಪದವಿಯಲ್ಲಿ ನೆಲೆಗೊಳಿಸಿ ಪ್ರೋತ್ಸಾಹಿಸ ಬೇಕೆಂಬ ಆಸಕ್ತಿಯೂ ತಾವಾಗಿ ಉಂಟಾಗುವುವು.

ಇದರ ಜೊತೆಗೆ ನಮ್ಮ ದೇಶದ ಸ್ವಾತಂತ್ರ್ಯವೂ ಪ್ರಾಶಸ್ತ್ಯವೂ ಬೆಳೆದು, ದೇಶೀಯರ ಜೀವಿತಾಶಯಗಳೂ ಉದ್ಯಮಗಳೂ ಉನ್ನತೋನ್ನತವಾಗಿ, ನಮ್ಮ ಸಾರ್ವಜನಿಕ ವ್ಯಾಪಾರಗಳು ಮೇಲ್ತರಗತಿಗೆ ಬಂದಂತೆಲ್ಲ, ನಮ್ಮ ವೃತ್ತಪತ್ರಿಕೆಗಳ ವಿಷಯ ಕಲಾಪವೂ ವಿಚಾರಸರಣಿಯೂ ಉತ್ತಮೋತ್ತಮವಾಗುವುವು. ವೃತ್ತ ಪತ್ರಿಕೆಗಳನ್ನು ತಿದ್ದಿ ಸರಿಪಡಿಸಬೇಕೆನ್ನುವವರು ಜನಜೀವನವನ್ನು ತಿದ್ದಿ ಸರಿಪಡಿಸಲಿ. ಆ ಪ್ರಯತ್ನದಲ್ಲಿ ಎಲ್ಲ ಯೋಗ್ಯರಾದ ಪತ್ರಿಕಾಕರ್ತರೂ ನೆರವಾಗುವರು.

— ಡಿ.ವಿ.ಜಿ.

# ಧ್ವನಿತತ್ತ್ವ

ಲೋಕದಲ್ಲಿ ಸುಖವೂ ದುಃಖವೂ ಇರುವಂತೆ, ಸೌಂದರ್ಯವೂ ವಿಕಾರವೂ ಇವೆ. ಈ ಸೌಂದರ್ಯವಿಕಾರಗಳು ವಸ್ತುಗಳಲ್ಲಿರುವಂತೆ ಜನರ ನಡೆನುಡಿಗಳಲ್ಲಿಯೂ ಇವೆ. ನುಡಿಯ ಸೌಂದರ್ಯವೇ ಅಲಂಕಾರಶಾಸ್ತ್ರದ ವಿಷಯ.

ಅಲಂಕಾರಕ್ಕೆ ಸೌಂದರ್ಯವೆಂಬ ವಿಸ್ತಾರವಾದ ಅರ್ಥವೂ ಇದೆ, ಭೂಷಣವೆಂಬ ಸಂಕುಚಿತವಾದ ಅರ್ಥವೂ ಇದೆ. ಸೌಂದರ್ಯವೇ ನಿಜವಾದ, ಸ್ವತಸ್ಸಿದ್ಧವಾದ, ಅಲಂಕಾರ. ಸುಂದರವಾದ ವಸ್ತುವಿಗೆ ಬೇರೆ ಭೂಷಣವೇಕೆ ? ಪೂರ್ಣಚಂದ್ರನನ್ನು ದೀಪದ ಬೆಳಕಿನಿಂದ ಬೆಳಗಿಸಬೇಕೇ ? ಅದು ಚಿನ್ನಕ್ಕೆ ಗಿಲೀಟುಮಾಡುವಂಥ ಕೆಲಸ, ಆದರೂ ಚಿನ್ನಕ್ಕೆ ಒಪ್ಪವಿಡಬಹುದು, ಕಬ್ಬಿಣಕ್ಕೂ ಹೊಳಪು ಕೊಡಬಹುದು. ಕಲ್ಲನ್ನೂ ನಯಮಾಡಬಹುದು—ಅವಕ್ಕೆ ಇರುವ ಗುಣವನ್ನು ಸಂಸ್ಕಾರದಿಂದ

ಹೆಚ್ಚಿಸಬಹುದು. ಹಾಗೇ, ಮಾತಿನಲ್ಲಿ ಸುಂದರವಾದ ಮಾತಾವುದು, ಆ ಸೌಂದರ್ಯ ವೆಲ್ಲಿದೆ, ಅದನ್ನು ಹೆಚ್ಚಿಸುವುದು ಹೇಗೆ—ಇವನ್ನೇ ಅಲಂಕಾರಶಾಸ್ತ್ರ ವಿಚಾರ ಮಾಡುತ್ತದೆ.

ಮಾತುಗಳು ಒಂದರಂತೆ ಒಂದು ಇರುವುದಿಲ್ಲ; ಒಂದಕ್ಕೊಂದಕ್ಕೆ ಹಲವು ವಿಧಗಳಲ್ಲಿ ವ್ಯತ್ಯಾಸವಿರುತ್ತದೆ. ಒಂದೇ ಅರ್ಥವಿರುವ ಪದಗಳನ್ನು ಪರಿಶೀಲಿಸಿದರೂ ಈ ವ್ಯತ್ಯಾಸ ಕಾಣುತ್ತದೆ. ಇವುಗಳನ್ನು ನೋಡಿ—

೧) ಶಿವ ಶಂಕರ ರುದ್ರ ಪಶುಪತಿ ಚಂದ್ರಶೇಖರ ಶ್ರೀಕಂಠ ಈಶ್ವರ ಮೃತ್ಯುಂಜಯ ಮಹಾದೇವ ಕಪಾಲಿ ಕಪರ್ದಿ ಕೃತ್ತಿವಾಸ.

೨) ಭಾನು ರವಿ ಸೂರ್ಯ ಆದಿತ್ಯ ನೇಸಱು ಬಿಸುಗದಿರ.

೩) ಹೆಣ್ಣು ಹೆಂಗಸು ವೈಯಾರಿ ಸಿಂಗಾರಿ ನಾರಿ ಸ್ತ್ರೀ ಕಾಮಿನಿ ಭಾಮಿನಿ ಮಾನಿನಿ ಪ್ರಮದೆ ವನಿತೆ ಲಲನೆ ವಿಲಾಸಿನಿ ನಿತಂಬಿನಿ ಬಜಾರಿ ಗೈಯಾಳಿ ಗರತಿ.

೪) ಕಡಿ ಕೆತ್ತು ಕೊಚ್ಚು ಕುಯ್ಯಿ ಸೀಳು ಕೀಳು ಗೀಳು ಸಿಗಿ ಒಡೆ ತರಿ ತುಂ ಕವರು ಚಚ್ಚು ಜಜ್ಜು ಕುಟ್ಟು ಬಗಿ ಅರೆ ಹರಿ ಹೋಳುಮಾಡು ತುಂಡುಮಾಡು ಪುಡಿಮಾಡು ಚೂರುಮಾಡು.

೫) ಇಡು ಹಾಕು ಒಗೆ ಎಸೆ ಬೀರು ಎರಚು ಚೆಲ್ಲು.

ಕೆಲವು ಮಾತುಗಳಿಗೆ ಅರ್ಥವು ನಿರ್ದಿಷ್ಟವಾಗಿರುವುದರಿಂದ ಅವು, ಹಾಕಿದಕಡೆ ಬಿದ್ದಿರುವ ವಸ್ತುಗಳ ಹಾಗೆ, ನಿಶ್ಚೇತನವಾಗಿರುವಂತೆ ತೋರುತ್ತವೆ. ಇನ್ನು ಕೆಲವುಗಳಿಗೆ ಜೀವವಿರುವಂತೆ, ಪ್ರಭೆಯಿರುವಂತೆ, ತೋರುತ್ತದೆ. ಆ ಜೀವ ಆ ಪ್ರಭೆ ಮಾತಿನ ಚೈತನ್ಯದ ಮೇಲೆ ಹೋಗುತ್ತದೆ. ಒಂದು ಬೆಂಡುಹೂವಿಗೂ ಮಲ್ಲಿಗೆ ಹೂವಿಗೂ ಹೇಗೆ ವ್ಯತ್ಯಾಸವೋ, ಮರದ ಆನೆಗೂ ಜೀವದ ಆನೆಗೂ ಹೇಗೆ ವ್ಯತ್ಯಾಸವೋ, ಬೆಳಗುವ ಗ್ರಹಕ್ಕೂ ಮಿನುಗುವ ನಕ್ಷತ್ರಕ್ಕೂ ಹೇಗೆ ವ್ಯತ್ಯಾಸವೋ, ಹಾಗೆ ಅವಕ್ಕೆ ವ್ಯತ್ಯಾಸವಿರುತ್ತದೆ. ಮಧ್ಯಾಹ್ನದ ಸೂರ್ಯನ ಸುತ್ತ ಕಣ್ಣು ಕೋರೈಸುವಷ್ಟು ಪ್ರಭೆಯಿರುತ್ತದೆ; ಸಂಜೆಯ ಸೂರ್ಯ ಒಂದು ಕೆಂಪಿನ ಗುಂಡು. ಶರತ್ಕಾಲದ ಹುಣ್ಣಿಮೆಯ ಚಂದ್ರ ಅಮೃತಕಿರಣಗಳನ್ನು ಸುತ್ತಲೂ ಸೂಸುತ್ತಾನೆ; ಮಳೆಗಾಲದಲ್ಲಿ ಮೋಡಮುಚ್ಚಿದ ಚಂದ್ರ ಮಂಕು; ಮಂಡಲದಿಂದ ಹೊರಗೆ ಅದರ ಬೆಳಕಿಲ್ಲ. ಈ ನಡುಹಗಲಿನ ಸೂರ್ಯನೂ ಹುಣ್ಣಿಮೆಯ ಚಂದ್ರನೂ ಸಂಜೆಯ ಸೂರ್ಯ ಮೋಡದ ಚಂದ್ರ ಇವರಿಗಿಂತ ಹೇಗೆ ಮೇಲೆನ್ನಬಹುದೋ ಹಾಗೇ ಧ್ವನಿ ಯಿಂದ ಕೂಡಿದ ಮಾತನ್ನೂ ವಾಚ್ಯಕ್ಕಿಂತ ಮೇಲೆನ್ನಬಹುದು. 'ಯಾವತ್ ಪ್ರತಾಪನಿಧಿರಾಕ್ರಮತೇ ನ ಭಾನುರಹ್ನಾಯ ತಾವದರುಣೇನ ತಮೋ ನಿರಸ್ತಮ್'

(ರಘುವಂಶ ೫–೭೧) ಎಂಬ ಕಾಳಿದಾಸನ ವಾಕ್ಯವನ್ನು ನೋಡಿ: ಇಲ್ಲಿ 'ಭಾನುಃ' ಎಂಬ ಮಾತು 'ಪ್ರತಾಪನಿಧಿ'ಯನ್ನೂ ಅವನ 'ಆಕ್ರಮಣ'ವನ್ನೂ ಹೇಗೆ ಪ್ರತಿಫಲಿಸುತ್ತದೆ; ಆ ಕೆಲಸವನ್ನು ಸೂರ್ಯನೆಂಬ ಅರ್ಥಕೊಡಬಲ್ಲ ಮತ್ತಾವ ಮಾತು ಮಾಡಬಲ್ಲುದು? ಹಾಗೇ ಅಶ್ವಘೋಷನು ಒಂದು ಕೆರೆಯನ್ನು ಬಿಳಿಯ ಸೀರೆ ಸುತ್ತಿಕೊಂಡು ಮಲಗಿರುವ ಪ್ರಮದೆಗೆ ಹೋಲಿಸಿರುವ ಈ ಶ್ಲೋಕವನ್ನು ನೋಡಿ (ಬುದ್ಧಚರಿತೆ ೪–೪೯)—

ದೀರ್ಘಿಕಾಂ ಪ್ರಾವೃತಾಂ ಪಶ್ಯ ತೀರಜೈಃ ಸಿಂಧುವಾರಕೈಃ
ಪಾಂಡುರಾಂಶುಕಸಂವೀತಾಂ ಶಯಾನಾಂ ಪ್ರಮದಾಮಿವ

ಇಲ್ಲಿ 'ಶಯನಾಂ ಪ್ರಮದಾಂ' ಎಂಬುದಕ್ಕೆ ಬದಲಾಗಿ 'ಪ್ರಸುಪ್ತಾಂ ವನಿತಾಂ ಎಂದೋ 'ಪ್ರಸುಪ್ತಾಂ ಲಲನಾಂ' ಎಂದೋ ಹೇಳಬಹುದು; ಛಂದಸ್ಸು ಕೆಡುವುದಿಲ್ಲ. ಆದರೆ ಅರ್ಥಪುಷ್ಟಿಯಲ್ಲಿ, ಧ್ವನಿಯಲ್ಲಿ, ಎಷ್ಟು ವ್ಯತ್ಯಾಸವಾಗುತ್ತದೆ! ವನಿತೆಯೆಂದರೆ ಹೆಂಗಸು, ಅಷ್ಟೇಯೇ; ಲಲನೆಯೆಂದರೆ ಚಂಚಲೆಯಾಗಿ ಬಳಕುತ್ತಿರುವ ಲತಾಂಗಿ; ಪ್ರಮದೆ, ಯೌವನದಿಂದ ಕೊಬ್ಬಿ ರಸರಸವಾಗಿರುವವಳು. ಪ್ರಸುಪ್ತಾಂ ಎಂದರೆ ನಿದ್ದೆ ಹೋಗಿರುವವಳು; ಶಯಾನಾಂ ಎಂದರೆ ಕಾಲು ನೀಡಿಕೊಂಡು, ಆದರೆ ಎಚ್ಚರವಾಗಿ, ಮಲಗಿರುವವಳು; ಹಾಗೇ ದೀರ್ಘಿಕಾಂ ಎಂಬುದಕ್ಕೆ ಬದಲಾಗಿ ವಾಪಿಕಾಂ ಎಂದೋ ಸರಃ ಎಂದೋ ಹೇಳಬಹುದು. ದೀರ್ಘಿಕೆ ನೀಳ, ವಾಪಿ ಆಳ; ಸರಸ್ಸು ಕುರುಚಲನ್ನೋ ಕುಂಟೆಯನ್ನೋ ಮನಸ್ಸಿಗೆ ತರುತ್ತದೆ. ಅದು ನಪುಂಸಕಲಿಂಗ. ಇದನ್ನು ಹೆಚ್ಚು ವಿವರಿಸಬೇಕಾಗಿಲ್ಲ. ಈ ಮಾತುಗಳ ಔಚಿತ್ಯ ಧ್ವನಿ ಸ್ವಾರಸ್ಯಗಳು ಅವರವರ ಸಂಸ್ಕಾರಾಭಿರುಚಿಗಳ ಮೇಲೆ ಹೋಗುತ್ತವೆ. ಅಶ್ವಘೋಷ ಕಾಳಿದಾಸರು ಆನಂದವರ್ಧನನಿಗಿಂತ ಐನೂರು ಆರುನೂರು ವರ್ಷಗಳಷ್ಟು ಹಿಂದೆ ಇದ್ದವರು; ಅವರು ಧ್ವನ್ಯಾಲೋಕದ ನಿಯಮವನ್ನು ಅನುಸರಿಸಿ ಬರೆದವರೇನಲ್ಲ; ಅಂಥವರ ಪ್ರಯೋಗಗಳನ್ನು ಪರಿಶೀಲಿಸಿ, ಆನಂದವರ್ಧನನು ತನ್ನ ಲಕ್ಷಣ ಗ್ರಂಥವನ್ನು ಬರೆದನು.

ವಾಲ್ಮೀಕಿವ್ಯಾಸಮುಖ್ಯಾಶ್ಚ ಯೇ ಪ್ರಖ್ಯಾತಾಃ ಕವೀಶ್ವರಾಃ
ತದಭಿಪ್ರಾಯಬಾಹ್ಯೋಽಯಂ ನಾಸ್ಮಾಭಿರ್ದರ್ಶಿತೋ ನಯಃ (ಪುಟ ೧೬೮)

ಅವರು ಪ್ರಯೋಗಿಸುವ ಮಾತುಗಳು 'ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು' ಎಂಬಂತಿರುತ್ತವೆ; ಕತ್ತಲೆಯ ಮನೆಯಲ್ಲಿ ದೀಪ ತಂದಿಟ್ಟಂತಿರುತ್ತವೆ—

ವಿಚ್ಛಿತ್ತಿಶೋಭಿನೈಕೇನ ಭೂಷಣೇನೇವ ಕಾಮಿನೀ
ಪದದ್ಯೋತ್ಯೇನ ಸುಕವೇಃ ಧ್ವನಿನಾ ಭಾತಿ ಭಾರತೀ (ಪುಟ ೧೩೫)

ಒಂದು ಮರದ ದಿಮ್ಮಿಯನ್ನು ಸಲಾಕಿಯಿಂದ ಹೊಡೆದರೆ 'ಥಡ್' ಎಂದು ಸದ್ದಾಗುತ್ತದೆ; ಉತ್ತರ ಕ್ಷಣದಲ್ಲಿಯೇ ಅಡಗಿಹೋಗುತ್ತದೆ. ಅದೇ ಒಂದು ಲೋಹದ, ಅದರಲ್ಲಿಯೂ ಬೆಳ್ಳಿಯ ಅಥವಾ ಕಂಚಿನ ಪಾತ್ರೆಯನ್ನು ಹೊಡೆದರೆ 'ಠಣ್' ಎಂದು ಸದ್ದಾಗುತ್ತದೆ. ಆ ಸದ್ದು ಅಲ್ಲಿಯೇ ಅಡಗಿಹೋಗುವುದಿಲ್ಲ; ಹರಡುತ್ತದೆ, ಅಲೆ ಅಲೆಯಾಗಿ ಮುಂದುವರಿಯುತ್ತದೆ, 'ಅನುರಣನ' ವಾಗುತ್ತದೆ. ಹಾಗೇ, ಪರ್ವತ ಪ್ರಾಂತ್ಯದಲ್ಲಿ ಸಿಡಿಯುವ ಸಿಡಿಲು ಪ್ರತಿಧ್ವನಿ ಪಡಿಮಾರ್ದನಿಗೊಟ್ಟು ಕುಡಿವರಿದು ಆ ಪ್ರಾಂತವನ್ನೆಲ್ಲಾ ಗುಡುಗುಡು ಶಬ್ದದಿಂದ ತುಂಬುತ್ತದೆ. ವಸ್ತುತಃ ಅದು 'ಥಂ' ಎಂಬ ಒಂದೇ ಏಟು, ಒಂದೇ ಸದ್ದು. ಹೀಗೆ ಸತ್ತ್ವವುಳ್ಳ, ಜೀವವುಳ್ಳ ಒಂದು ಮಾತೂ ಹತ್ತು ಮಾತಿನ ಕೆಲಸಮಾಡುತ್ತದೆ; ಮಾತನಾಡಿ ಆಗದ ಕೆಲಸವನ್ನೂ ಮಾಡುತ್ತದೆ; ಇದು 'ಧ್ವನಿ'ಯ ಮಹತ್ವ. ಈ ಧ್ವನಿಯನ್ನು ಮಾತಿನ 'ಜೀವ'ವೆಂದಾದರೂ ಕರೆಯಬಹುದು, 'ಆತ್ಮ'ವೆಂದಾದರೂ ಕರೆಯಬಹುದು, 'ಪ್ರಭೆ' ಎಂದಾದರೂ ಎನ್ನಬಹುದು.

ಧ್ವನಿಯು ಮಾತಿನ ಭಾಗದಲ್ಲಾದರೂ ಇರಬಹುದು, ಮಾತುಗಳು ಸೇರಿ ಆದ ವಾಕ್ಯ, ಪ್ರಬಂಧ ಇವುಗಳಲ್ಲಿ ಬೇಕಾದರೂ ಇರಬಹುದು :—

> ಸುಪ್‌ತಿಙ್‌ವಚನಸಂಬಂಧೈಃ ತಥಾ ಕಾರಕಶಕ್ತಿಭಿಃ
> ಕೃತ್ತದ್ಧಿತಸಮಾಸೈಶ್ಚ ದ್ಯೋತ್ಯೋಽಲಕ್ಷ್ಯಕ್ರಮಃ ಕ್ವಚಿತ್ (ಪುಟ ೧೫೪)
> ಯಸ್ತ್ವಲಕ್ಷ್ಯಕ್ರಮವ್ಯಂಗ್ಯೋ ಧ್ವನಿರ್ವರ್ಣಪದಾದಿಷು
> ವಾಕ್ಯೇ ಸಂಘಟನಾಯಾಂ ಚ ಸ ಪ್ರಬಂಧೇಪಿ ದೀಪ್ಯತೇ (ಪುಟ ೧೩೫)

'ಬೆಳಗಾಯಿತು' 'ಸಂಜೆಯಾಯಿತು' ಎಂಬ ವಾಕ್ಯಕ್ಕೆ ಸಂದರ್ಭಾನುಸಾರವಾಗಿ ಬಗೆಬಗೆಯ ಅರ್ಥವಾಗುತ್ತದೆ. ಅವೆಲ್ಲಾ ಧ್ವನಿತಾರ್ಥವೆ. ಅದು ಸ್ವತಸ್ಸಿದ್ಧವಾಗಿರಬಹುದು, ಸಂದರ್ಭ ಸನ್ನಿವೇಶಗಳಿಂದ ಬಂದಿರಬಹುದು, ಉಚ್ಚರಿಸುವ ಬಗೆಯಿಂದ (ಕಾಕು) ಬಂದಿರಬಹುದು. ರಾಮ ರಾವಣ ಅವನು ನಾನು—ಇಂಥ ಮಾತುಗಳಿಗೆ ಪ್ರಕರಣ ವಿಶೇಷದಲ್ಲಿ ಬಹಳವಾದ ಅರ್ಥ ಬಂದು ತುಂಬುತ್ತದೆ. ರಾಮಾಯಣ ಭಾರತಗಳಿಗೆ ಧ್ವನಿತವಾಗುವ ರಸಭಾವಗಳೇ ಬೇರೆ, ವಾಚ್ಯವಾದ ರಸಭಾವಗಳೇ ಬೇರೆ.

— ಎ. ಆರ್. ಕೃಷ್ಣಶಾಸ್ತ್ರಿ

## ಹಿಂದೂದರ್ಶನ

ಹಿಂದೂದರ್ಶನವೆಂದರೆ ಈ ಭರತಖಂಡದಲ್ಲಿ ಬಹುಕಾಲದಿಂದ ಹಿಂದಿನವರು ಮಾಡಿರುವ ತತ್ತ್ವವಿಚಾರವು. ತತ್ತ್ವವೆಂದರೆ ಕಲ್ಪಿತವಲ್ಲದಿರುವ ವಸ್ತುವು. ಅದರ ಸ್ವಭಾವವು, ಅಗ್ನಿರುಷ್ಣಃ, ಜಲಂ ಶೀತಂ, ಇದು ಮೊದಲಾದುದು. ಪ್ರತಿಯೊಂದು ವಸ್ತುವೂ ವಿಚಿತ್ರವಾಗಿರುವುದು. ಅವುಗಳ ಸ್ವಭಾವಗಳು ಅನಂತಗಳಾಗಿಯೂ ಅತಿ ವಿಚಿತ್ರಗಳಾಗಿಯೂ ಇರುವುವು. ವಸ್ತುಸ್ವಭಾವ ವಿಚಾರವೇ ತತ್ತ್ವದರ್ಶನವು.

ವಸ್ತುವೆಂದರೆ ವ್ಯತ್ಯಾಸವಾಗದಿರುವ, ಕಲ್ಪಿತವಲ್ಲದಿರುವ, ಯಥಾರ್ಥವಾಗಿರುವ ಪದಾರ್ಥವೆಂದರ್ಥವು. ಪ್ರತಿಯೊಂದು ವಸ್ತುವಿಗೂ ಹೆಸರು—(ನಾಮಪದ) ಇರುವುದು. ಇಂತಹ ಪದಗಳಿಂದ ತಿಳಿಯಲ್ಪಡುವ ವಸ್ತುಗಳೇ ಪದಾರ್ಥಗಳು. ಪದಾರ್ಥವೆಂದರೂ ತತ್ತ್ವವೆಂದರೂ ಒಂದೇ ಅರ್ಥವು. ಪದಾರ್ಥ ಪರಿಶೋಧನಶಾಸ್ತ್ರವೇ ತತ್ತ್ವವಿಚಾರವು.

ಈ ವಿಚಾರದಿಂದ ಕೆಲವು ವಸ್ತುಗಳಲ್ಲಿ ಕೆಲವು ಸ್ವಭಾವಗಳು ನಿರ್ಣಯಿಸಲ್ಪಡುವುವು. ಆ ಸ್ವಭಾವಗಳ ವ್ಯವಸ್ಥೆಗೆ, ನಿಯಮಕ್ಕೆ, ಸಿದ್ಧಾಂತವೆಂದು ಹೆಸರು. ಸಿದ್ಧವೆಂದರೆ ನಿರ್ಣಯಿಸಲ್ಪಟ್ಟ ವಸ್ತುಸ್ವಭಾವಗಳು; ಅಂತವೆಂದರೆ ವ್ಯವಸ್ಥೆ, ನಿಯಮವು. ವಸ್ತುಸ್ವಭಾವ ನಿಯಮವೇ ಸಿದ್ಧಾಂತವು.

ಈ ಪ್ರಪಂಚದಲ್ಲಿರುವ ವಸ್ತುಗಳಲ್ಲಿ ಕೆಲವು ಪ್ರತ್ಯಕ್ಷಗಳಾಗಿರುವುವು. ಆತ್ಮ, ಪರಮಾತ್ಮ, ಪರಲೋಕ, ಪುಣ್ಯ, ಪಾಪ ಮೊದಲಾದ ಕೆಲವು ವಸ್ತುಗಳು ಪರೋಕ್ಷಗಳಾಗಿರುವುವು. ಪ್ರತ್ಯಕ್ಷ್ಯ ಪರೋಕ್ಷವಾದ ಸಲಕ ವಸ್ತುಗಳ ವಿಚಾರವೇ ತತ್ತ್ವಮಾರ್ಗವು. ಇದರಲ್ಲಿ ವಿವಿಧ-ವಿಚಿತ್ರ ಪ್ರಪಂಚದ ಮೂಲತತ್ತ್ವಗಳು ಹೇಗಿರಬಹುದು, ಒಂದೇ? ಅನೇಕವೆ? ಒಂದೇ ವಿಧವೇ? ಅನೇಕ ವಿಧವೇ? ಇವುಗಳಿಂದ ನಮಗೆ ಸುಖವೇ? ದುಃಖವೇ? ನಾವು ಎಂಬುದು ಎಂತಹ ವಸ್ತುವು? ಅದಕ್ಕೆ ಬೇಕಾದದ್ದು ಯಾವುದು? ಇವೇ ಮೊದಲಾದ ವಿಚಾರವೇ ತತ್ತ್ವಮಾರ್ಗದ ಸ್ವಭಾವವು.

ಇದಲ್ಲದೆ ಭಕ್ತಿಮಾರ್ಗವೆಂದು ಮತ್ತೊಂದು ಮಾರ್ಗವಿರುವುದು. ಅದೇ ಮತವೆನ್ನಲ್ಪಡುವುದು. ಮತವೆಂದರೆ ಮನೋಭಾವಕ್ಕೆ ಗೋಚರವಾದುದು. ಈ ಮನೋಭಾವವನ್ನು ಶ್ರದ್ಧಾಭಕ್ತಿ, ವಿಶ್ವಾಸ, ನಂಬಿಕೆ ಮೊದಲಾದ ಶಬ್ದಗಳಿಂದ ವ್ಯವಹರಿಸುವರು. ಈ ಮನೋಭಾವಗಳೂ ಅನಾದಿ ಸಂಪ್ರದಾಯಗಳಿಂದ ವಿಚಿತ್ರಗಳಾಗಿರುವುವು. ಇವುಗಳಲ್ಲಿ ವಸ್ತುಸ್ವಾಭಾವಗಳನ್ನು ಪರೀಕ್ಷಿಸಬೇಕಾಗಿಲ್ಲ; ಪರೀಕ್ಷಿಸಲೂ ಬಾರದು.

ಏವಂಚ ತತ್ತ್ವಮಾರ್ಗಕ್ಕೂ ಭಕ್ತಿಮಾರ್ಗಕ್ಕೂ ಇರುವ ವ್ಯತ್ಯಾಸವಿದು—ಒಂದು ವಸ್ತುಸ್ವಭಾವವಿಷಯ, ಮತ್ತೊಂದು ಸಂಪ್ರದಾಯಿಕ ಮನೋಭಾವ

ವಿಷಯ. ಪ್ರಾಯಶಃ ಈಗ ಎರಡು ಮಾರ್ಗಗಳನ್ನು ಸರಿಪಡಿಸಿ ಅನುಷ್ಠಾನಕ್ಕೆ ಆಚರಣೆಗೆ ಒಂದೇ ಮಾಡಿರುವರು. ಪರಸ್ಪರ ಮಿಶ್ರವಾಗಿದ್ದರೂ ಮಾರ್ಗಗಳ ವ್ಯತ್ಯಾಸವು ಇದ್ದೇ ಇರುವುದು.

ಈ ತತ್ತ್ವವಿಚಾರವೇ ವಿಚಾರಪರರಿಗೆ ದೃಢಸಂಸ್ಕಾರದಿಂದ ಭಾವನಾಮಯ ವಾಗಿ ಅನುಭವ, ಸಾಕ್ಷಾತ್ಕಾರ ಎಂಬ ಪದಗಳಿಂದಲೂ ಹೇಳಲ್ಪಡುವುದು. ಆದುದ ರಿಂದ ತತ್ತ್ವದರ್ಶನವು ಎಂದು ದರ್ಶನಪದವನ್ನು ಪ್ರಯೋಗಿಸುವರು.

## ದರ್ಶನೋದಯ

ತತ್ತ್ವವಿಚಾರವೆಂಬ ದರ್ಶನಮಾರ್ಗಗಳು ಆರಂಭವಾಗುವುದಕ್ಕೆ ಕಾರಣಗಳು ಹೀಗಿರುವುವು—ಪ್ರಪಂಚದಲ್ಲಿ ಸಕಲ ಪ್ರಾಣಿಗಳಿಗಿಂತಲೂ ಮನುಷ್ಯನು ಬುದ್ಧಿ ಶಕ್ತಿಯಲ್ಲಿ ಪ್ರಬಲನು; ಊಹಾಪೋಹ ಶಕ್ತಿಯಲ್ಲಿ ನಿಪುಣನು. ನಾಗರಿಕತೆ ದಿನೇ ದಿನೇ ಅಭಿವೃದ್ಧಿಯಾಗುತ್ತಿರುವುದು ಪ್ರತ್ಯಕ್ಷವು. ಮನುಷ್ಯರಲ್ಲಿ ಮುಖ್ಯವಾದ ಸಹಜವಾದ ಸ್ವಭಾವಗಳು ರಾಗದ್ವೇಷ ಮೋಹಗಳು. ದಯಾದಾಕ್ಷಿಣ್ಯವಿನಯಾದಿ ಗಳು ಅಭ್ಯಾಸದಿಂದ ಬರುವಂತಹ ಸ್ವಭಾವಗಳು. ರಾಗವೆಂದರೆ ಆಶೆ. ಇದು ಪ್ರಬಲವಾದರೆ ಕಾಮವೆನ್ನಲ್ಪಡುವುದು. ಇದಕ್ಕೆ ವಿರೋಧ ಮಾಡಿರುವವರ ಮೇಲೆ ದ್ವೇಷವು ಅಭಿವೃದ್ಧಿಯಾಗಿ ಕ್ರೋಧವಾಗುವುದು. ವಸ್ತುಸ್ವಭಾವವನ್ನು ತಿಳಿಯದೆ ಇರುವಿಕೆಯೇ, ಭ್ರಾಂತಿಯೇ ಮೋಹವು. ಇದೇ ಅಜ್ಞಾನವು. ಇದು ಪ್ರಬಲವಾದರೆ ಲೋಭವಾಗುವುದು. ಲೋಭವೆಂದರೆ ಎಲ್ಲವೂ ತಮಗೇ ಬೇಕು, ಇತರರಿಗೆ ಇರಬಾರ ದೆಂಬ ದುರ್ಗುಣವು. ಈ ಉತ್ಕಟ ರಾಗದ್ವೇಷ ಮೋಹಗಳೆಂಬ ಕಾಮಕ್ರೋಧ ಲೋಭಗಳೇ ಮನುಷ್ಯರಿಗೆ ಪ್ರಬಲವಾದ ಶತ್ರುಗಳು.

ಈ ಮೂರು ಗುಣಗಳೇ ಲೋಕದಲ್ಲಿ ಪ್ರಬಲಗಳಾದರೆ ಸಕಲವಿಧವಾದ ಅನರ್ಥಗಳಿಗೂ ಕಾರಣಗಳಾಗುವುವು. ಮನುಷ್ಯರಾಗಿರುವವರಿಗೆ ಈ ಗುಣಗಳನ್ನು ಸಂಪೂರ್ಣವಾಗಿ ಬಿಡಲು ಸಾಧ್ಯವೇ ಇಲ್ಲ. ಬಿಟ್ಟರೆ ಜೀವನವೇ ಸಾಧ್ಯವಿಲ್ಲ ಯಥೋಚಿತವಾಗಿ ಇವುಗಳನ್ನು ತಗ್ಗಿಸುವುದಕ್ಕೆ ಶಾಂತಿಯೆಂದು ಹೆಸರು.

ಇಂತಹ ಶಾಂತಿಯನ್ನು ನಾನಾಮುಖವಾಗಿ ಉದ್ದೇಶಿಸಿ ಕೆಲವು ಸಂದರ್ಭ ಗಳಲ್ಲಿ ಕೆಲವು ಕಾರಣಗಳಿಗೆ ಪ್ರಾಧಾನ್ಯವನ್ನು ಕೊಟ್ಟು ಅತಿವಾದಗಳು ಹೊರಟಿ ವುವು. ಸಕಲ ದರ್ಶನಗಳಿಗೂ ಶಾಂತಿಯೇ ಮುಖ್ಯೋದ್ದೇಶವೆಂಬುದರಲ್ಲಿ ಸಂದೇಹವಿಲ್ಲ. ಶಾಂತಿಯಿಂದ ಇಹಲೋಕದಲ್ಲಿ ಬರುವ ಆನುಕೂಲ್ಯವನ್ನು ವಿಸ್ತರಿ ಬೇಕಾಗಿಲ್ಲ; ಪರಲೋಕದಲ್ಲಿ ಬರುವ ಆನುಕೂಲ್ಯವು ಅವರವರ ವಿಶ್ವಾಸಾನು ಸಾರವಿರುವುದು.

ಇಂತಹ ಶಾಂತಿಕರವಾದ ವಿಚಾರಗಳೇ ದರ್ಶನಗಳು, ಸಿದ್ಧಾಂತಗಳು, ತತ್ತ್ವ ವಿಚಾರಗಳು. ಇವುಗಳ ವಿಚಾರದಿಂದಲೂ ಯಥೋಚಿತವಾದ ಶಾಂತಿ ಬರುವುದು ಎಂದು ವಿಚಾರಪರರ ಅನುಭವವು.

ಲೋಕದಲ್ಲಿ ಸುಖಾನುಭವವು ಎರಡು ವಿಧ. ಒಂದನೆಯದು—ಕಣ್ಣು ಕಿವಿ ಮೊದಲಾದ ಇಂದ್ರಿಯಗಳ ಮೂಲಕ ಚಿತ್ರ, ಸಂಗೀತ ಮೊದಲಾದುವುಗಳನ್ನು ತಿಳಿದು ಸಂತೋಷಪಡುವುದು. ಇದು ವಿಷಯಸುಖವೆನ್ನಲ್ಪಡುವುದು.

ಇದಕ್ಕೆ ಅವಕಾಶವಿಲ್ಲದಿರುವಾಗ ಬರುವ ಸ್ಥಿತಿಯೇ ಎರಡನೆಯ ಸುಖವು. ಇದನ್ನು ಶಮ ದಮ ಶಾಂತಿ ಎನ್ನುವರು. ಇದು ಸುಖವೆನ್ನುವುದಕ್ಕೆ ಉದಾಹರಣೆ—ಗಾಢಾನಿದ್ರಾವಸ್ಥೆ. ಗಾಢನಿದ್ರಾಕಾಲದಲ್ಲಿ ಇಂದ್ರಿಯ ವ್ಯಾಪಾರವಿಲ್ಲ, ಯಾವ ಸುಖ ದುಃಖಾನುಭವವೂ ಇಲ್ಲ. ಈ ಸ್ಥಿತಿಯನ್ನೇ ಪರಮ ಸುಖಾನುಭವ ವೆಂದು ತಿಳಿಯುವರು. ಆದುದರಿಂದಲೇ ಸಕಲ ಪ್ರಾಣಿಗಳೂ ನಿದ್ರೆಗೋಸ್ಕರ ಪ್ರಯತ್ನಪಡುವುವು. ಇದನ್ನೇ ಆತ್ಮಸುಖಾನುಭವವೆನ್ನುವರು. ಸ್ಥಿರವಾದ ಈ ಸ್ಥಿತಿಯನ್ನೇ ಮೋಕ್ಷಸುಖಾನುಭವಕ್ಕೆ ಉದಾಹರಣೆಯಾಗಿ ವೇದಾಂತಿಗಳೂ ತಾರ್ಕಿಕರೂ ಹೇಳುವರು. ದರ್ಶನದೃಷ್ಟಿಗಳೆಲ್ಲವೂ ಇಂತಹ ಶಾಂತಿಸುಖವನ್ನು ಹೊಗಳುವುವು. ಆತ್ಮನೇ ಸುಖಸ್ವರೂಪನಾದರೂ ಆತ್ಮನಿಗೆ ಸುಖವೆಂಬ ಸ್ವಭಾವ ವಿರುವುದಾದರೂ ಸರ್ವದುಃಖ ನಿವೃತ್ತಿಯೇ ಸುಖವಾದರೂ ಗಾಢನಿದ್ರಾವಸ್ಥೆ ಯೆಂಬ ಸುಷುಪ್ತಿಕಾಲದಲ್ಲಿ ಪರಮಸುಖಾನುಭವ ಇದೆಯೆಂದು ಹೇಳುವುದರಲ್ಲಿ ಬಾಧಕವಿಲ್ಲ.

ಸರಸಕಾವ್ಯಪಠನ, ನಾಟಕದರ್ಶನ ಮೊದಲಾದುವುಗಳಲ್ಲಿ ಮಹಾಪುರುಷರ ಮನೋಭಾವ ಭಾವನೆಯಿಂದ ಪಾಠಕ ಸದಸ್ಯರುಗಳಿಗೆ ಸಂತೋಷ ವ್ಯಸನಗಳು ಉಂಟಾಗುವುದು ಸಕಲಜನ ಪ್ರತ್ಯಕ್ಷವು. ಹೀಗೆ ದರ್ಶನವಿಚಾರದಲ್ಲಿ ಮನ ಶ್ಶುದ್ಧಿ, ಸಂಪ್ರದಾಯ, ಯಥೋಚಿತಶಾಂತಿ, ದರ್ಶನ ನಿಮಿತ್ತರಾಗದ್ವೇಷನಿವೃತ್ತಿ ಮೊದಲಾದ ಪ್ರಯೋಜನವು ಸಿದ್ಧಿಸುವುದು.

## ವಿರೋಧಪರಿಹಾರ

ಈ ಪ್ರಕಾರ ಶಾಂತಿಯೆಂಬ ದರ್ಶನೋದಯ ಕಾರಣವನ್ನು ತಂತಮ್ಮ ಸಂಪ್ರದಾಯದಲ್ಲಿ ಸಕಲ ದಾರ್ಶನಿಕರೂ ತತ್ತ್ವವಿಚಾರಪರರೂ ಸೂಚಿಸಿರುವರು. ಆದರೂ ತತ್ತ್ವವಿಚಾರಗಳಲ್ಲೇ ಪರಸ್ಪರ ಈರ್ಷ್ಯಾಸೂಯೆಗಳೂ ಕಲಹಗಳೂ ವೃದ್ಧಿಯಾಗಿ ಉದ್ದೇಶವು ನೆರವೇರದೆ ಅನರ್ಥಕ್ಕೂ ಕಾರಣವಾಗಿದೆಯಲ್ಲಾ ಎಂದು ಉದಾರಹೃದಯವುಳ್ಳವರು ಚಿಂತಿಸುತ್ತಾರೆ. ಅವರಿಗೆ ಸಮಾಧಾನವು ಇದು—ಈ ಈರ್ಷ್ಯಾಸೂಯಾದಿಗಳು ಕೆಲವು ಕ್ಷುದ್ರ ವ್ಯಕ್ತಿಗಳಲ್ಲಿರುವುವೇ ಹೊರತು ಉದಾರ ಹೃದಯವುಳ್ಳ ನಾನಾ ಸಿದ್ಧಾಂತಗಳನ್ನು ತಿಳಿದ ಮಹನೀಯರಲ್ಲಿ ಇಲ್ಲವೇ ಇಲ್ಲ.

ಆದರೂ ಮಹನೀಯರಾದ ಪೂರ್ವಾಚಾರ್ಯರು ಪರಸ್ಪರ ಸಿದ್ಧಾಂತಗಳನ್ನು ಖಂಡನೆಮಾಡಿರುವುದಿಲ್ಲವೇ? ಅವರಿಗೂ ದೌರ್ಜನ್ಯವು ತಪ್ಪಲಿಲ್ಲವಲ್ಲಾ ಎಂದು ಶಂಕೆ ಬರುತ್ತದೆ. ಇಲ್ಲಿ ಸಮಾಧಾನವಿದು—ಆಯಾ ಪೂರ್ವಾಚಾರ್ಯರುಗಳೇ

ಇಂತಹ ದೌರ್ಜನ್ಯಾಕ್ಷೇಪವನ್ನು ಮಾಡಿಕೊಂಡು ಹೇಳಿರುವ ಸಮಾಧಾನದ ಸಾರಾಂಶವೇಂತೆಂದರೆ—ತಂತಮ್ಮ ಸಿದ್ಧಾಂತದಲ್ಲಿ ಶಿಷ್ಯರಿಗೆ ಶ್ರದ್ಧೆ ಕಡಮೆಯಾಗದೆ ಇರಬೇಕೆಂಬ ಸಿದ್ಧಾಂತಸಂರಕ್ಷಣೆಯೇ ನಮಗೆ ಉದ್ದೇಶವೆಂದು ಸಕಲರೂ ಹೇಳಿರುವರು. ಅಲ್ಲದೆ, ಖಂಡನದಲ್ಲೇ ತಾತ್ಪರ್ಯವಾದರೆ ಪ್ರತಿಪಕ್ಷ ಸಿದ್ಧಾಂತಗಳು ಖಂಡನವಾಗಿ ಏನಾದರೂ ನಾಶವಾದುವೇ? ಇಲ್ಲ. ಒಂದೇ ಸಿದ್ಧಾಂತವೇನಾದರೂ ಉಳಿದಿದೆಯೆ? ಇಲ್ಲ. ಆದುದರಿಂದ ತಂತಮ್ಮ ಸಿದ್ಧಾಂತದಲ್ಲಿ ಭಕ್ತಿ ಶ್ರದ್ಧೆಯನ್ನು ಕಾಪಾಡುವುದೇ ಖಂಡನಪ್ರಯೋಜನವು. ಈ ಅಂಶವನ್ನು ಪರಿಶೀಲಿಸಿದವರಿಗೆ ಸಿದ್ಧಾಂತ ನಿಮಿತ್ತವಾದ ರಾಗದ್ವೇಷಗಳು ಇರಲಾರವು. ರಾಗದ್ವೇಷಗಳಿದ್ದರೆ ಶಾಸ್ತ್ರತಾತ್ಪರ್ಯವಾಗಲಿ ಸಿದ್ಧಾಂತ ತಾತ್ಪರ್ಯವಾಗಲಿ ಅವರಿಗೆ ತಿಳಿದಿಲ್ಲವೆಂದು ಸಿದ್ಧಾಂತವು.

## ಸಾಮರಸ್ಯ

ಎಲ್ಲ ದರ್ಶನಕಾರರೂ ತಮ್ಮ ತಮ್ಮ ಸಿದ್ಧಾಂತವೇ ತತ್ತ್ವವಾದುದು, ಯಥಾರ್ಥವಾದುದು, ಕಲ್ಪಿತವಲ್ಲದಿರುವುದು ಎಂದು ವಿಶ್ವಾಸವಿಟ್ಟಿರುವರು. ಮಧ್ಯಸ್ಥವಾದ ದೃಷ್ಟಿಯಲ್ಲಿ ಪರಸ್ಪರ ವಿರುದ್ಧವಾದ ಸಕಲ ಸಿದ್ಧಾಂತಗಳೂ ಹೇ ಸಮರಸಗಳಾಗುವುವು? ಎಂದು ಆಕ್ಷೇಪವಿರುತ್ತದೆ. ಇದಕ್ಕೆ ಶಾಸ್ತ್ರಕಾರರ ಕೆಲವರು ಸರ್ವವಸ್ತುಗಳಿಗೂ ಸರ್ವಸ್ವಭಾವವನ್ನೂ ಅಂಗೀಕರಿಸಿ ವಿರೋ ಪರಿಹಾರ ಮಾಡಿರುವರು. ಇದಕ್ಕೆ ಅನೇಕಾಂತ ವಾದವೆಂದು ಹೆಸರು. ಏಕಾಂ ವೆಂದರೆ ಒಂದೇ ಸ್ವಭಾವವು, ಅನೇಕಾಂತವೆಂದರೆ ನಾನಾ ಸ್ವಭಾವವು. ಇದ ಸಾರ್ವಾತ್ಮ್ಯವಾದವು.

ಕೆಲವರು ಸಕಲ ವಸ್ತುಗಳೂ, ಅವುಗಳ ಸ್ವಭಾವಗಳೂ ಪರಮಾರ್ಥಗಳ ವಸ್ತುವೆಂಬುದೇ ಇಲ್ಲದಿರುವುದರಿಂದ ವಿರೋಧವಿಲ್ಲ ಎಂದು ಹೇಳುವರು. ಇದ ನೈರಾತ್ಮ್ಯವಾದವೆಂದೂ ಶೂನ್ಯವಾದವೆಂದೂ ಹೆಸರು.

ಕೆಲವರ ತಾತ್ಪರ್ಯವಿದು—ಪ್ರತ್ಯಕ್ಷ ಗೋಚರವಾದ ಮಹಾವೃಕ್ಷ, ಮಹ ಪರ್ವತ ಮೊದಲಾದುವು ಒಂದೊಂದು ದಿಕ್ಕಿನಲ್ಲಿ ನೋಡಿದರೆ ಒಂದೊಂದು ರಿ ಯಿಂದ ಕಾಣುತ್ತಿರುವಲ್ಲಿ, ಅತ್ಯಂತ ಪರೋಕ್ಷವಾದ ಮತ್ತು ಉಪದೇಶದಿಂದ ತಿಳಿಯತಕ್ಕುದಾದ ಪ್ರಪಂಚಮೂಲಕಾರಣ ತತ್ತ್ವದಲ್ಲಿ ದೃಷ್ಟಿಭೇದದಿಂದಲೂ ಕಾ ದೇಶಭೇದಗಳಿಂದಲೂ ಮತಭೇದಗಳು, ಅಭಿಪ್ರಾಯಭೇದಗಳು ಏತಕ್ಕೆ ಉದಯಿ ಲಾರವು? ಸಾಮರಸ್ಯವು ಏತಕ್ಕೆ ಬರಲಾರದು? ಇದಕ್ಕೆ ಅಂಧಗಜಪರೀಕ್ಷೆ ವೃತ್ತಾಂತವೇ ನಿದರ್ಶನವಾಗುವುದು. ಅದೆಂತೆಂದರೆ—ನಾಲ್ಕು ಕುರುಡರು ಆ ಯನ್ನು ತಿಳಿಯಬೇಕೆಂಬ ಅಪೇಕ್ಷೆಯಿಂದ ಒಬ್ಬ ಪುರುಷನ ಸಹಾಯದಿಂ ಗಜವನ್ನು ಮುಟ್ಟಿ ನೋಡಿದರು. ಅವರಲ್ಲಿ ಕಾಲನ್ನು ಮುಟ್ಟಿ ನೋಡಿದವ

ಆನೆ ಕಂಭದಂತಿರುವುದೆಂದು ತಿಳಿದನು. ಬಾಲವನ್ನು ಮುಟ್ಟಿದವನು ಕಸಪೊರಕೆಯಂತೆ ಗಜವಿರುವುದೆಂದು ತಿಳಿಸಿದನು. ಹೀಗೆ ಕಿವಿಯನ್ನು ಮುಟ್ಟಿದವನು ಮೊರದಂತೆ ಗಜಸ್ವರೂಪವನ್ನೂ, ದಂತವನ್ನು ಮುಟ್ಟಿದವನು ಕಲ್ಲಿನಂತೆ ಗಜಸ್ವರೂಪವನ್ನೂ ತಿಳಿದರು. ಇದರಲ್ಲಿ ಎಲ್ಲವೂ ತಪ್ಪು, ಎಲ್ಲವೂ ನಿಶ್ಚಯವು. ಎಂದರೆ ಯಾವುದೂ ಸಮಗ್ರವಲ್ಲ, ಏಕದೇಶವೆಂದು ತಾತ್ಪರ್ಯವು ಆಗುತ್ತದೆ. ಅದರಂತೆ ತತ್ತ್ವವಿಚಾರವೂ ಇರಬಹುದು; ಪರಸ್ಪರ ಅಭಿಪ್ರಾಯಭೇದಗಳೂ ಇರಬಹುದು ಎಂದು ಕೆಲವರ ಸಿದ್ಧಾಂತವು. ಇದರಿಂದ ಸಾರ್ವಾತ್ಮ್ಯ, ನೈರಾತ್ಮ್ಯ, ಏಕದೇಶ ಎಂದು ಮೂರು ಮಾರ್ಗಗಳು ಸಾಮರಸ್ಯೋಪಾಯಗಳೆಂದು ಅಭಿಪ್ರಾಯವಾಗುವುದು.

## ಅದ್ಭುತಗಳು

ಈ ತತ್ತ್ವವಿಚಾರದಲ್ಲಿ ಪ್ರಾಯೇಣ ಸಕಲ ದಾರ್ಶನಿಕರು ವಸ್ತುಸ್ವಭಾವಕ್ಕೂ ಪ್ರತ್ಯಕ್ಷಕ್ಕೂ ವಿರುದ್ಧವಾದ ಅದ್ಭುತಗಳು ಎಂದರೆ ಸಿದ್ಧಿಗಳಿಂದಲೂ, ಕಥೆಗಳಿಂದಲೂ ತತ್ತ್ವವನ್ನು ನಿರ್ಣಯಿಸಲಿಲ್ಲ. ಕರ್ಮಕ್ಕೂ ಈಶ್ವರನಿಗೂ ಅಪಾರವಾದ ಶಕ್ತಿಯನ್ನು ಅಂಗೀಕರಿಸಿರುವವರೂ, ಕರ್ಮವೂ ಈಶ್ವರನೂ ತಾನು ಕೊಟ್ಟಿರುವ ವಸ್ತುಸ್ವಭಾವಗಳನ್ನು ವ್ಯತ್ಯಾಸಮಾಡುವುದಿಲ್ಲವೆಂದು ಅಂಗೀಕರಿಸುತ್ತಾರೆ. ಆದುದರಿಂದ ತತ್ತ್ವವಿಚಾರ ಶಾಸ್ತ್ರವೂ, ವಸ್ತುಸ್ವಭಾವ ಶಾಸ್ತ್ರವೂ ಪರಸ್ಪರ ವಿರುದ್ಧವಲ್ಲವೆಂದು ನಿರ್ಣಯವು.

ಕೆಲವು ದಾರ್ಶನಿಕರು ದರ್ಶನ ಮೂಲಪುರುಷರ ಅಪಾರವಾದ ಶಕ್ತಿಯನ್ನು ಅವರ ವಿಜಯಗಳಿಂದಲೂ, ಉಪಾಖ್ಯಾನಗಳಿಂದಲೂ ನಂಬಿರುವರು. ಆದರೆ ಆ ನಂಬಿಕೆಗಳು ಮೂಲಪುರುಷರಿಗೆ ಪ್ರಾಮಾಣಿಕತೆಯನ್ನು ಪ್ರಕಾಶಪಡಿಸುವುದರಲ್ಲಿ ಪರ್ಯವಸಾನವಾಗುವುವು. ವೈದಿಕರು ಪ್ರತಿಕಕ್ಷಿಯರ ಅದ್ಭುತಗಳನ್ನು ಖಂಡಿಸಿ ಸಿದ್ಧಾಂತವನ್ನು ನಿರಾಕರಿಸಿರುತ್ತಾರೆ. ಪ್ರಾಯಶಃ ಈ ವಿಚಾರವು ಸೌಗತ ಸಿದ್ಧಾಂತದಲ್ಲಿ ಅಧಿಕವಾಗಿ ಬರುವುದು.

## ವ್ಯವಹಾರ

ಪ್ರಾಯಶಃ ಸಕಲ ದಾರ್ಶನಿಕರೂ ತಮ್ಮ ತಮ್ಮ ವ್ಯವಹಾರದಿಂದ ತತ್ತ್ವನಿರ್ಣಯವನ್ನು ತೋರಿಸುತ್ತಾರೆ. ವ್ಯವಹಾರವೆಂದರೆ ಆಡುವ ಮಾತುಗಳು. ಬಾಲಕರಿಗೆ ಅಕ್ಷರಾಭ್ಯಾಸದಂತೆ ಆಡುವ ಮಾತುಗಳು ಕಲಿಸಲ್ಪಡುವುವು. ಮೊಟ್ಟಮೊದಲು ಆನೆ, ಕುದುರೆ, ಆಕಳು, ಚಂದ್ರ, ಸೂರ್ಯ ಮೊದಲಾದ ಮಾತುಗಳಂತೆ ನಾನು ನೀನು ಎಂಬ ಮಾತುಗಳು ಪ್ರತ್ಯಕ್ಷವಾದ ಶರೀರದಲ್ಲಿ ಶಿಕ್ಷಿಸಲ್ಪಡುವುವು. ಕಾಲಕ್ರಮದಲ್ಲಿ ಅವರು ವಿದ್ಯಾವಂತರಾದರೆ ಅಥವಾ ವಿದ್ಯಾವಂತರ ಸಹವಾಸವಿದ್ದರೆ

ಶರೀರ ಬೇರೆ, ಶರೀರದೊಳಗಿರುವ ಜೀವಾತ್ಮನು ಬೇರೆ ಎಂಬ ಶಿಕ್ಷೆ ಆಗುವುದು; ಆವಾಗ ನಾನು ನೀನು ಎಂಬ ಪದಗಳಿಗೆ ಶರೀರದೊಡನೆ ಕೂಡಿರುವ ಆತ್ಮನು ಎಂಬ ಅಭಿಪ್ರಾಯ ಬರುತ್ತದೆ. ಆದೇ ಸಂಸ್ಕಾರವು ದೃಢವಾದರೆ ನಾನು ನೀನು ಎಂಬ ಪದಗಳನ್ನು ಆತ್ಮನಲ್ಲೇ ಪ್ರಯೋಗಿಸುತ್ತಾನೆ; ಅಥವಾ ನಾನು ಎಂಬ ಪದವು ಶರೀರಕ್ಕೆ ಸೇರಿದುದು ಎಂದು ಆತ್ಮನಲ್ಲಿ ಉಪಯೋಗಿಸುವುದಿಲ್ಲ.

ಮತ್ತು ಸಕಲವಸ್ತುಗಳಲ್ಲೂ ಬ್ರಹ್ಮವೆಂಬ ಪರಮಾತ್ಮನಿರುತ್ತಾನೆಂಬ ಭಾವನೆ ದೃಢತಮವಾದರೆ ಬ್ರಹ್ಮನೇ ಪರಮಾತ್ಮನೆಂದು ವ್ಯವಹರಿಸುತ್ತಾನೆ. ಹಾಗೆಯೇ ಆ ಪರಮಾತ್ಮನೇ ಶಿವನೆಂದು ನಿರಂತರಭಾವನೆಯಾದರೆ ನಾನೂ ಶಿವನು, ಅವನೂ ಶಿವನು, ಸರ್ವಂ ಶಿವಮಯಂ ಎಂಬ ಭಾವನೆ ಬರುವುದು. ಹೀಗೆ ನಾರಾಯಣ ಭಾವನೆ ಬಂದರೆ ಸರ್ವಂ ನಾರಾಯಣಮಯಂ ಎಂಬ ಭಾವನೆ ಬರುತ್ತದೆ. ಈ ವಿಷಯಗಳು ಪುರಾಣಗಳಲ್ಲಿ ವಿಸ್ತಾರವಾಗಿರುವುವು.

ನಮ್ಮ ವ್ಯವಹಾರವನ್ನು ಬಿಟ್ಟು ಉಪನಿಷತ್ತುಗಳ ವ್ಯವಹಾರವನ್ನು ಆಧಾರವಾಗಿ, ಪ್ರಮಾಣವಾಗಿ, ಕೆಲವರು ತಿಳಿಯುತ್ತಾರೆ. ಆ ಉಪನಿಷತ್ತುಗಳಲ್ಲಿರುವ ಮಾತುಗಳು ಗುರುಶಿಷ್ಯರಾದ ಋಷಿಗಳಾದ ಮನುಷ್ಯರ ಭಾಷಾಮಯವಾಗಿಯೇ ಇರುವುವು. ಅವುಗಳಿಗೆ ಅರ್ಥಗಳೂ ಸಹ ನಮ್ಮ ವಿದ್ಯಾಭ್ಯಾಸವನ್ನು ಅನುಸರಿಸುತ್ತವೆ. ತಾತ್ಪರ್ಯ ನಿರ್ಣಯಗಳಿಂದ ಅರ್ಥವನ್ನು ಹೇಳುತ್ತೇವೆಂದು ಕೆಲವರು ಪ್ರಯತ್ನಪಡುತ್ತಾರೆ. ಆ ತಾತ್ಪರ್ಯವನ್ನು ಕಂಡುಹಿಡಿಯುವ ಹೇತುಗಳು ಆಕಾಶದಿಂದ ಬೀಳತಕ್ಕವುಗಳಲ್ಲ. ಅವರವರ ಅಭ್ಯಾಸಾನುಸಾರವಾಗಿ ತೋರುವಂತಹವು. ಆದುದರಿಂದಲೇ ಭಾಷ್ಯಭೇದಗಳು ಅದ್ಯಾಪಿ ಹೊರಡುತ್ತಲಿವೆ.

ಹೀಗಿರುವಲ್ಲಿ ನಾನು ಕೃಶನು, ಸ್ಥೂಲನು, ಇತ್ಯಾದಿ ವ್ಯವಹಾರದಿಂದ ನಾನು ಎಂಬ ಪದಕ್ಕೆ ಶರೀರವೇ ಅರ್ಥವು. ಕೃಶತ್ವವು ಶರೀರದಲ್ಲಿರುವ ಸ್ವಭಾವಗಳು ಎಂದು ಚಾರ್ವಾಕರು ಹೇಳುವರು. ನನ್ನ ದೇಹ, ನನ್ನ ಕೈ, ನನ್ನ ಕಾಲು ಇತ್ಯಾದಿ ವ್ಯವಹಾರಗಳಿರುವುದರಿಂದ ದೇಹಕ್ಕಿಂತಲೂ ಆತ್ಮನು ಬೇರೆಯಾದವನೆಂದು ಇತರರು ತಿಳಿಯುವರು. ಮತ್ತು ಕೆಲವರು ಯುಕ್ತಿಗಳಿಂದ ಸ್ಥಾಪಿಸುವರು. ಈ ವ್ಯವಹಾ ತತ್ತ್ವಮಾರ್ಗವು ಹೀಗಿರುವುದರಿಂದ ವ್ಯವಹಾರಗಳು ತತ್ತ್ವನಿರ್ಣಯಕ್ಕೆ ಆಧಾ ವಾಗಲಾರವು ಎಂದು ಕೆಲವರು ಹೇಳುವರು.

ವ್ಯವಹಾರವು ಈಗ ಪ್ರಾರಂಭವಾದುದಲ್ಲ, ಅನಾದಿ ಸೃಷ್ಟಿಕಾಲದಿಂದಲು ಪರಮೇಶ್ವರನ ಆಜ್ಞೆಯಿಂದಲೂ ಮಹರ್ಷಿಗಳ ತತ್ತ್ವದೃಷ್ಟಿಯಿಂದಲೂ ಬಂದ ನಮ್ಮ ಪೂರ್ವಾಚಾರ್ಯರ ಕರುಣಾಪ್ರಸಾದದಿಂದ ಪ್ರಾಪ್ತವಾದುದು. ಇದನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ. ಇದನ್ನೇ ಪ್ರಮಾಣವಾಗಿಟ್ಟುಕೊಳ್ಳಬೇಕೆಂದು ಬಹ ಜನರು ಅಭಿಪ್ರಾಯಪಡುತ್ತಾರೆ.

ಮತ್ತು ವಿಚಾರಪರರು ವ್ಯವಹಾರ ಮಾರ್ಗವನ್ನು ಬಿಟ್ಟುಹೋಗುವುದಕ್ಕೆ

ಅವಕಾಶವೇ ಇಲ್ಲ. ಮಾತಿಲ್ಲದೆ ವಿಚಾರವಿಲ್ಲ, ಭಾಷೆಯಿಲ್ಲದೆ ಮಾತಿಲ್ಲ, ಮನುಷ್ಯ ನಿಲ್ಲದೆ ಭಾಷೆಯಿಲ್ಲ. ಗ್ರಂಥಗಳು, ಉಪದೇಶಗಳು, ಯುಕ್ತಿಗಳು ಸರ್ವವೂ ಭಾಷಾ ಮಯವಾಗಿರುವುವು. ವ್ಯವಹಾರವಿಲ್ಲದಿದ್ದರೆ ಕೇವಲ ಮೌನವೇ ಶರಣು. ಆದುದ ರಿಂದ ಅವರವರ ಸಂಪ್ರದಾಯಾನುಸಾರ ಶ್ರದ್ಧೆಯಿಂದ ಇರುವುದಕ್ಕಿಂತ ಬೇರೆ ಯಾವ ಮಾರ್ಗವೂ ಇಲ್ಲವೆಂದು ಸಿದ್ಧಾಂತವಾಗುತ್ತದೆ:

## ದರ್ಶನ ವಿಭಾಗ

ಈಗ ಲೋಕದಲ್ಲಿ ದರ್ಶನವಿಚಾರವೆಂದರೆ ತತ್ತ್ವವಿಚಾರ, ಮತವೆಂದರೆ ಆಚಾರ ವಿಚಾರ ಎಂದು ವಾಡಿಕೆಯಿರುವುದರಿಂದ ದರ್ಶನವೆಂದರೆ ತತ್ತ್ವಮಾರ್ಗವು, ಮತವೆಂದರೆ ಭಕ್ತಿಮಾರ್ಗವು. ಈ ಎರಡು ಮಾರ್ಗದಲ್ಲೂ ದರ್ಶನ ಪ್ರವರ್ತಕರ ಹೆಸರುಗಳಿಂದಲೂ ಪೂಜ್ಯದೇವತಾ ಭೇದದಿಂದಲೂ ಆರಾರು ವಿಭಾಗಗಳನ್ನು ಮಾಡಿರುವರು —

ಕಣಾದಸ್ಯಾಕ್ಷಪಾದಸ್ಯ ವ್ಯಾಸಸ್ಯ ಕಪಿಲಸ್ಯ ಚ
ಪತಞ್ಜಲೇಃ ಜೈಮಿನೇಶ್ಚ ದರ್ಶನಾನಿ ಷಡೇವ ಹಿ

ವೈಶೇಷಿಕ, ನ್ಯಾಯ, ವೇದಾಂತ, ಸಾಂಖ್ಯ, ಯೋಗ, ವೇದ ಎಂದು ಆರು ದರ್ಶನಗಳು.

ಶೈವಂ ಚ ವೈಷ್ಣವಂ ಶಾಕ್ತಂ ಸೌರಂ ವೈನಾಯಕಂ ತಥಾ
ಸ್ಕಾನ್ದಂ ಚ ಭಕ್ತಿಮಾರ್ಗಸ್ಯ ದರ್ಶನಾನಿ ಷಡೇವ ಹಿ

ಶೈವ, ವೈಷ್ಣವ, ಶಾಕ್ತ, ಸೌರ, ಗಾಣಾಪತ್ಯ, ಸ್ಕಾಂದಗಳೆಂಬ ಷಣ್ಮತಗಳು ಪೂಜ್ಯ ದೇವತಾ ವಿಭಾಗದಿಂದ ವಿಭಕ್ತಿಗಳಾಗಿರುವುವು. ಈ ಮತವಿಭಾಗ ಶ್ಲೋಕವನ್ನು ಮಾಧವಾಚಾರ್ಯರು 'ಪರಾಶರಸ್ಮೃತಿ ವ್ಯಾಖ್ಯಾನ'ದಲ್ಲಿ ವಿಷ್ಣು ಪೂಜಾ ಪ್ರಕರಣದಲ್ಲಿ ಬೋಧಾಯನೀಯ ಪುರಾಣಸಾರವಚನವೆಂದು ಉದಹರಿಸಿರುವರು.

ಭಕ್ತಿಮಾರ್ಗದಲ್ಲಿ ತಕ್ಕ ವೇಷಾಚಾರಗಳು ಪ್ರಸಿದ್ಧಗಳಾಗಿರುತ್ತವೆ. ಬೌದ್ಧ ಜೈನ ಮತಗಳು ಸಹ ಪೂಜ್ಯಮಹಾಪುರುಷರ ಮೂಲಕವಾಗಿ ದರ್ಶನಗಳಲ್ಲಿ ಮುಖ್ಯಸ್ಥಾನವನ್ನು ಹೊಂದಿರುತ್ತವೆ.

ಏವಂಚ, ತತ್ತ್ವಮಾರ್ಗದಲ್ಲಿ ಮುಖ್ಯವಾಗಿ ಹನ್ನೊಂದು ದರ್ಶನಗಳು ಹಿಂದೂದರ್ಶನವೆಂದು ಇಲ್ಲಿ ವಿವರಿಸಲ್ಪಡುವುವು. ಪ್ರಥಮದಲ್ಲಿ ಸಕಲ ದರ್ಶನ ಗಳಿಗೂ ಪ್ರತಿಪಕ್ಷವಾಗಿರುವ ಚಾರ್ವಾಕ ದರ್ಶನವು ತೆಗೆದುಕೊಳ್ಳಲ್ಪಡುವುದು. ಅನಂತರ ಸೌಗತ, ಸಾಂಖ್ಯ, ಆರ್ಹತ, ಯೋಗ, ತಾರ್ಕಿಕ, ಮೀಮಾಂಸಕ, ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ಶೈವ—ಈ ಹತ್ತು ದರ್ಶನಗಳ ಸಾರಾಂಶಗಳು

ವಿವರಿಸಲ್ಪಡುವುವು. ಏವಂಚ, ಈ ಪ್ರಬಂಧವು ಹನ್ನೆರಡು ಅಧ್ಯಾಯವುಳ್ಳದ್ದು ಎಂದು ತಿಳಿಯತಕ್ಕದ್ದು.

— ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ

## ವಿಮರ್ಶೆಯ ಕಾರ್ಯ

ಶಕ್ತರಾದ ವಿಮರ್ಶಕರಿಂದ ಸದ್ಯ ಇರುವ ಸಾಹಿತ್ಯ ಎಲ್ಲರಿಗೂ ಚೆನ್ನಾ ತಿಳಿಯುವುದಲ್ಲದೆ ಮುಂದಕ್ಕೆ ಒಳ್ಳೆಯ ಸಾಹಿತ್ಯ ಬರುವುದು ಸಾಧ್ಯವಾಗುವುದು ಮನುಷ್ಯನ ಬುದ್ಧಿಯೂ ರಾಗವೂ ವ್ಯವಹಾರಕ್ಕೆ ಬೇರೆಯೇ ಹೊರತು ಜೀವನದ ಎರಡೂ ಬೆರೆತೇ ಕೆಲಸಮಾಡಬೇಕು. ಎರಡನ್ನೂ ಜೊತೆಯಾಗಿ ನಯಮಾಡುವು ನಮ್ಮ ಕರ್ತವ್ಯ. ಮನುಷ್ಯನ ಪುರೋಗಮನದ ಸಾರವೇ ಇದು: ರಾಗದಿಂ ತಿಳಿದದ್ದನ್ನು ಬುದ್ಧಿ ಗ್ರಹಿಸಬೇಕು; ಬುದ್ಧಿಯಿಂದ ತಿಳಿದದ್ದನ್ನು ರಾಗ ಗ್ರಹಿ ಬೇಕು. ಮೊದಲು ಹಸಿವನ್ನು ತಿಳಿದು ಪ್ರಾಣಿಗಳು ಅದಕ್ಕೆ ಒಂದು ಹೆಸರನ ಇಟ್ಟದ್ದೂ, ಸುಖವನ್ನು ತಿಳಿದವು ಅದಕ್ಕೆ ಇನ್ನೊಂದು ಹೆಸರನ್ನು ಇಟ್ಟದ್ದು ಮನುಷ್ಯನ ಆತ್ಮಜ್ಞಾನದಲ್ಲಿ ಒಂದೊಂದು ಹೆಜ್ಜೆ. ಆ ಆರಂಭದ ಅವಸ್ಥೆಯಿ ಮನುಷ್ಯನು ಈಗ್ಗೆ ಬಹಳ ದೂರ ಪ್ರಯಾಣಮಾಡಿ ಬಂದಿದ್ದಾನೆ. ಬಹಳದ ಬಂದಿರುವುದರಿಂದ ಆ ಆರಂಭದ ಅವಸ್ಥೆ ಒಂದು ಇದ್ದಿರಬೇಕೆಂಬುದನ್ನು ಊಹಿ ವುದು ಕೂಡ ಅವನಿಗೆ ಸಾಧ್ಯವಲ್ಲದೆ ಆಗಿದೆ. ಆದರೆ ಸ್ವಲ್ಪ ಪರಾಮರ್ಶದಿ ನೋಡಿದೆವಾದರೆ ಹಿಂದೆ ಆ ಅವಸ್ಥೆ ಇದ್ದುದೇ ಅಲ್ಲದೆ ಈಗ ನಡೆಯುವ ಭಾ ವಿವರಣದ ನ್ಯಾಸವೂ ಕೂಡ ಅನುಭವಕ್ಕೆ ಹೆಸರನ್ನಿಡುವ ಅದೇ ನ್ಯಾಸವೆಂ ತಿಳಿಯುವುದು. ಕಲೆಯೆಲ್ಲ ರಸವ್ಯಕ್ತಿಗಾಗಿ ನಡೆಯುವ ಕೆಲಸ. ಒಬ್ಬ ಬಂದ ಅನುಭವವನ್ನು ಇನ್ನೊಬ್ಬನಿಗೆ ತಿಳಿಸುವುದೇ ಅದರ ಉದ್ದೇಶ. ಕಾವ್ಯ ಅಂತರ್ಯದ ಅನುಭವಕ್ಕೆ ಇಡುವ ಒಂದು ಹೆಸರು; ಸರಳವಾದ ಮೂರಕ್ಷ ಹೆಸರಲ್ಲ, ಸ್ವಲ್ಪ ಕಷ್ಟವಾಗಿ ತಿಳಿಯುವ ಹೆಸರು. ಆದದ್ದರಿಂದ ಈ ಹೆಸರ ಹೇಳುವುದೇ ಅಲ್ಲದೆ ಅದು ಅನೇಕರಿಗೆ ತಿಳಿಯುವ ಹಾಗೆ ಮಾಡುವುದರಿಂದ ಜನ ತಿಳಿವು ವಿಸ್ತಾರವಾಗುತ್ತದೆ, ಪರಿಷ್ಕಾರವಾಗುತ್ತದೆ. ಸಾಹಿತ್ಯ ಈ ಹೆಸರಾ ವಿಮರ್ಶೆ ಅದರ ವಿವರಣ: ವಿಮರ್ಶೆ ಸಾಹಿತ್ಯ ಸಮಷ್ಟಿಯ ಅಂಗೋಪಾ ಗಳನ್ನೂ ಜೀವಾತ್ಮಾದಿ ವಿಷಯಕವಾದ ನಿಗೂಢ ತತ್ತ್ವಗಳನ್ನೂ ವಿವರಿಸಿ ಪ್ರತ್ಯೇ ಅದರ ಅರ್ಥವನ್ನೂ ಉದ್ದೇಶವನ್ನೂ ಸರ್ವರಿಗಾಗಿ ಸ್ಪಷ್ಟಗೊಳಿಸಿದ ಹಾಗೆಲ್ಲ ಜನ ಸಾಹಿತ್ಯವು ಉತ್ತಮವಾಗುವುದಕ್ಕೆ ಆವಶ್ಯಕವಾದ ಅವಸ್ಥೆ ಮತ್ತೆ ಮತ್ತೆ ಹ

ವಾಗುವುದು. ಒಂದು ತಲೆಮಾರಿನಲ್ಲಿ ಕೆಲವರಿಗೆ ಮಾತ್ರ ತಿಳಿದ ವಿಷಯ ಇನ್ನೊಂದು ತಲೆಮಾರಿನಲ್ಲಿ ಹತ್ತು ಜನರಿಗೆ ತಿಳಿಯುವುದು. ಒಂದು ತಲೆಮಾರಿನಲ್ಲಿ ಒಂದು ವಿಷಯ ತಿಳಿದರೆ ಇನ್ನೊಂದರಲ್ಲಿ ಹತ್ತು ತಿಳಿದಿರುವುದು. ಒಂದು ತಲೆಮಾರಿನಲ್ಲಿ ಜನ ಸರಿಯೆಂದು ತಿಳಿದಿದ್ದ ವಿಷಯಕ್ಕೆ ಹತ್ತು ಆಕ್ಷೇಪಗಳು ತೋರಿ ಬಂದು ಇನ್ನೊಂದು ತಲೆಮಾರಿನ ಜನ ಸಾಹಿತ್ಯಜ್ಞಾನದಲ್ಲಿ ಅವರಿಗಿಂತ ಮುಂದಾಗುವರು. ಕವಿ ಸುತ್ತಣ ಪ್ರಸ್ಥಭೂಮಿಯ ನಡುವೆ ಇರುವ ಪರ್ವತ ಶಿಖರ. ವಿಮರ್ಶೆಯಿಂದ ಈ ಪ್ರಸ್ಥಭೂಮಿ ಉಂಟಾಗುವುದು; ಅದರ ನಡುವೆ ಕವಿ ಸಾಧ್ಯವಾಗುವನು; ಜನಾಂಗದ ಮನಸ್ಸು ಕಾವ್ಯಾವೇಶದ ಸಮೀಪ ಸ್ಥಳಗಳಲ್ಲಿ ಸುಳಿಯುವುದು ವಾಡಿಕೆಯಾಗುವುದು.

ಇದೆಲ್ಲ ಸಾಹಿತ್ಯದ ಏಳ್ಗೆಗೆ ಬೇಕಾದ ಕಾರ್ಯ, ಜನಾಂಗದ ಪುರೋಭಿವೃದ್ಧಿಯಲ್ಲಿ ಮುಖ್ಯವಾದ ಕಾರ್ಯ. ಆದದ್ದರಿಂದ ವಿಮರ್ಶೆಯನ್ನು ಬರೆಯುವುದಕ್ಕೆ ಪ್ರತಿಯಾಗಿ ಕಾವ್ಯವನ್ನು ಬರೆಯಬಾರದೆ ಎಂದು ನಾವು ಕೇಳಬಾರದು. ಕಾವ್ಯ ನಿರ್ಮಾಣಶಕ್ತಿ ಇರುವವರೂ ಕೂಡ ಈ ಕಾರ್ಯದಲ್ಲಿ ಕೈಹಾಕುವುದು ವ್ಯರ್ಥವಲ್ಲ. ಅಂಥವರು ವಿಮರ್ಶೆಗೆ ಕೈಹಾಕಿದರೆ ಅದಕ್ಕೆ ಒಂದು ಹೊಸ ಕಳೆ ಬರುವುದು. ಇದೂ ಈ ಸಂದರ್ಭದಲ್ಲಿ ನಾವು ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದ ವಿಷಯ. ಕಾವ್ಯವು ಸಾಹಿತ್ಯದ ಉನ್ನತ ರೂಪವಾದದ್ದರಿಂದ ಅದನ್ನು ವಿಮರ್ಶೆಯಿಂದ ಬೇರೆಯೆಂಬಂತೆ ಹೇಳುತ್ತಿದೆ. ಆದರೆ ವಿಮರ್ಶೆಯೂ ಒಂದು ರೀತಿಯ ಉಪನ್ಯಾಸ; ಅದು ಸಾಹಿತ್ಯದಲ್ಲಿಯ ಒಂದು ಶಾಖೆ. ವಿಮರ್ಶಕನು ಸಾಮಾನ್ಯನಾದರೆ ಅವನು ಸಾಮಾನ್ಯ ಉಪನ್ಯಾಸಕಾರನಂತಾಗುವನು; ಪ್ರತಿಭಾಶಾಲಿಯಾದರೆ ಉಪನ್ಯಾಸವು ಉತ್ತಮವಾದ ಉಪನ್ಯಾಸವಾಗುವುದು. ಪ್ರತಿಭಾಶಾಲಿಯ ವಿಮರ್ಶೆಯಲ್ಲಿ ಕವಿಯ ತತ್ತ್ವಬೋಧೆಯಂತೆ ಕಾವ್ಯವಿವರಣವೂ ರಸಯುಕ್ತವಾಗುವುದು. ಅಂಥ ವಿಮರ್ಶೆಯೂ ಕಾವ್ಯವೇ ಸರಿ. ನಮ್ಮಲ್ಲಿ ಈ ರೀತಿಯ ಬರೆವಣಿಗೆ ಬೆಳೆಯದೆ ಇರುವುದರಿಂದ ನಮಗೆ ಈ ಮಾತು ಅರ್ಥವಾಗದೆ ಹೋಗಬಹುದು. ಆದರೆ ಪಶ್ಚಿಮ ದೇಶಗಳ ಸಾಹಿತ್ಯದಲ್ಲಿ ವಿಮರ್ಶೆ ಧರಿಸಿರುವ ರೂಪಗಳನ್ನು ನೋಡಿದರೆ ಈ ವಿಷಯದಲ್ಲಿ ಸಂದೇಹ ಬರುವುದಿಲ್ಲ. ಮ್ಯಾಥ್ಯು ಆರ್ನಾಲ್ಡ್, ಲೆಸ್ಲೀ ಸ್ಟೀವನ್, ಜಾನ್ ಮಾರ್ಲೀ, ಮೊದಲಾದ ವಿಮರ್ಶಕವರ್ಯರು ಇಂಗ್ಲೀಷಿನಲ್ಲಿ ಬರೆದಿರುವ ಉಪನ್ಯಾಸಗಳು ಸಾಹಿತ್ಯದಲ್ಲಿ ಅತ್ಯುನ್ನತವಾದ ಸ್ಥಾನಕ್ಕೆ ಅರ್ಹವಾದವು. ಅವುಗಳಲ್ಲಿ ಅವರ ಜೀವನದ ಉತ್ತಮ ಸಂಸ್ಕಾರವೆಲ್ಲದರ ಛಾಯೆಯೂ ರೂಪುಗೊಂಡಿದೆ. ಉತ್ತಮ ಕವಿಯ ಕಾವ್ಯ ಒಂದನ್ನು ಓದಿದ್ದರಿಂದ ನಮಗೆ ಯಾವ ಸುಖ ಉಂಟಾಗಬಹುದೋ ಯಾವ ಸಂಸ್ಕಾರ ಉಂಟಾಗಬಹುದೋ ಆ ಸಂಸ್ಕಾರವು ಈ ಮಹನೀಯರ ವಿಮರ್ಶನ ಲೇಖನಗಳನ್ನು ಓದುವುದರಿಂದ ಉಂಟಾಗುವುದು. ಪ್ರಪಂಚ ಜ್ಞಾನವನ್ನುಂಟುಮಾಡಿ ರಾಗಗಳನ್ನು ಶೋಧಿಸಿ ಬುದ್ಧಿಯನ್ನು ವಿಕಾಸ

ಗೊಳಿಸುವ ಇವರ ಈ ಲೇಖನಗಳನ್ನು ಓದಿ ಆಶ್ಚರ್ಯಪಡುವ ನಮಗೆ ಈ ಮಹನೀಯರು ಫ್ರಾನ್ಸಿನ ವಿಮರ್ಶಕರ ವಿಷಯದಲ್ಲಿ ಹೇಳಿರುವ ಮಾತನ್ನು ಕೇಳಿದರೆ ಮತ್ತಷ್ಟು ಆಶ್ಚರ್ಯವಾಗುವುದು. ಫ್ರಾನ್ಸಿನಲ್ಲಿಯ ವಿಮರ್ಶೆಯ ಎತ್ತರಕ್ಕೆ ಇಂಗ್ಲಿಷರ ವಿಮರ್ಶೆ ಹೋಗಿಲ್ಲವೆಂದು ಇವರು ಅಭಿಪ್ರಾಯಪಡುತ್ತಾರೆ. ಹಾಗಾದರೆ ವಿಮರ್ಶೆ ಇನ್ನು ಎಷ್ಟು ಉತ್ತಮವಾದ ಕಾರ್ಯವಾಗುವುದು ಸಾಧ್ಯ ಎಂಬುದನ್ನು ಹೇಳಬೇಕಾದದ್ದಿಲ್ಲ. ಆದದ್ದರಿಂದ ವಿಮರ್ಶೆಯ ಕಾರ್ಯವು ಎಂಥ ಶಕ್ತನಾದ ಲೇಖಕನಾದರೂ ಕೈಹಾಕಬಹುದಾದಷ್ಟು ಉನ್ನತವಾದ ಕಾರ್ಯ. ಕಾವ್ಯವನ್ನು ಬರೆಯುವ ಸಂಸ್ಕಾರ ಉಳ್ಳವನು ಬರೆದದ್ದಾದರೆ ಅದು ಬಹುಮಟ್ಟಿಗೆ ಕಾವ್ಯವೇ ಆಗುವುದು. ಆ ಸಂಸ್ಕಾರವಿಲ್ಲದೆ ಉಳಿದ ಶಕ್ತಿ ಇರುವವನು ಬರೆದದ್ದಾದರೆ ಅದು ಲೇಖಕನ ಸಂಸ್ಕಾರವನ್ನು ಪೂರ್ತಿಗೊಳಿಸುವ ಬುದ್ಧಿ ಪ್ರಮುಖವಾದ ಉಪನ್ಯಾಸವಾಗುವುದಲ್ಲದೆ ಸಾಹಿತ್ಯದ ಅರ್ಥವನ್ನು ಜನರಿಗೆ ತಿಳಿಸಿ ಅದರ ಏಳ್ಗೆಗೆ ಸಹಾಯವಾಗಿ ಜನರಿಗೂ ಜನಾಂಗಕ್ಕೂ ಉಪಯುಕ್ತವಾಗುವುದು.

ಸಾಹಿತ್ಯದ ವಿಷಯದಲ್ಲಿ ಸಾಕಾದ ಜ್ಞಾನವೂ ಪರಿಶ್ರಮವೂ ಇಲ್ಲದೆ ವಿಮರ್ಶೆಯ ಕಾರ್ಯವು ಎಷ್ಟು ಉನ್ನತವಾದುದೆಂಬುದನ್ನು ತಿಳಿಯದೆ, ಬರೆಯುವ ವಿಮರ್ಶೆ ಕೇವಲ ವ್ಯರ್ಥಮಾತ್ರ ಆಗುವುದಲ್ಲದೆ ಹಾನಿಯನ್ನುಂಟುಮಾಡುವುದು. ಅಲ್ಪಜ್ಞಾನ ಅಲ್ಪಪರಿಶ್ರಮದಿಂದ ಉಂಟಾದ ಕಾವ್ಯಕ್ಕಿಂತ ಅಲ್ಪಜ್ಞಾನ ಅಲ್ಪಪರಿಶ್ರಮದಿಂದ ಉಂಟಾಗುವ ವಿಮರ್ಶೆಯಿಂದ ಬರುವ ಹಾನಿ ಹೆಚ್ಚು. ಕಾವ್ಯ ಒಳ್ಳೆಯದಾಗದೆ ಅದರಿಂದ ಇತರರಿಗೆ ರಾಗ ಸಂಸ್ಕಾರ ಉಂಟಾಗದೆ ಹೋದರೂ ತೊಂದರೆ ಇಲ್ಲ. ಅಲ್ಲದೆ ಅದರಲ್ಲಿಯ ದೋಷವನ್ನು ಓದುವವನ ಹೃದಯವು ಸುಲಭವಾಗಿ ಅರಿಯುವುದು. ವಿಮರ್ಶೆ ಅದಕ್ಷವಾದದ್ದಾದರೂ ಬುದ್ಧಿಯ ಆಡಂಬರದಿಂದ ಕೂಡಿರುವುದರಿಂದ ಸಾಮಾನ್ಯರಿಗೆ ಅದರ ದೋಷ ಅಷ್ಟು ಸುಲಭವಾಗಿ ತಿಳಿಯುವುದಿಲ್ಲ. ಕಾವ್ಯದ ರಚನೆ ಅರ್ಧ ಕವಿಗಾಗಿ, ಅರ್ಧ ಪಾಠಕರಿಗಾಗಿ. ಕ್ಷುದ್ರಕಾವ್ಯ ಇತರರಿಗೆ ಸುಖಕೊಡದೆ ಇದ್ದರೂ ಅದರಿಂದ ಕವಿಯ ದಾಹವಾದರು ಶಮನವಾದಹಾಗಾಯಿತು. ವಿಮರ್ಶೆ ಕ್ಷುದ್ರವಾಗಲಿ ಅಲ್ಲದೆ ಇರಲಿ ಬಹುಮಟ್ಟಿಗೆ ಪಾಠಕರಿಗಾಗಿ ಉದ್ದೇಶಿಸಲ್ಪಟ್ಟದ್ದು. ಬುದ್ಧಿ ವಿಕಾಸದಿಂದ ಆದದ್ದೆಂದು ಹೆಸರಿಟ್ಟುಕೊಂಡು ಮುಡ್ಡಿತನದಿಂದ ಉಂಟಾಗಿದ್ದರೆ ತಿಳಿಯದವರನ್ನು ಅದು ಮೋಹಗೊಳಿಸುವುದು. ವಿಮರ್ಶೆ ಕೌಶಲಾಪೇಕ್ಷೆಯಲ್ಲಿ ನೇತ್ರವೈದ್ಯನಂತೆ. ನೇತ್ರವ್ಯಾಧಿ ಶಸ್ತ್ರವೈದ್ಯವನ್ನು ಮಾಡಲು ಕವಿರಾಜನಾದರೂ ಹಿಂಜರಿಯಬೇಕು ; ಇಂಥದರಲ್ಲಿ ಕೊಡಲಿಯನ್ನು ಹಿಡಿದು ಸೌದೆಯನ್ನು ಸೀಳಲು ಕಲಿತ ಕೈಯಿಂದ ಕಣ್ಣಿ ಸ ಮಾಡುವೆನೆಂದು ಶಲ್ಯವನ್ನು ತರುವರೆ? ಕಾವ್ಯವನ್ನು ತಿರಸ್ಕರಿಸುವುದರಲ್ಲಿಯೂ ಪುರಸ್ಕರಿಸುವುದರಲ್ಲಿಯೂ ವಿಮರ್ಶೆ ಇದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು ; ತನ್ನ ಕೆಲಸದಲ್ಲಿ ಅತಿ ಜಾಗ್ರತೆಯಿಂದ ವರ್ತಿಸಬೇಕು.

ವಿಮರ್ಶೆಯ ವಿಷಯವಿದೆಂದು ತಿಳಿಯದೆ ಅದಕ್ಕೆ ಆವಶ್ಯಕವಾದ ಸಂಸ್ಕಾರವಿಲ್ಲದೆ ಬರೆಯುವ ವಿಮರ್ಶೆ ಹಾನಿಕರವಾಗುವುದನ್ನು ನಾವು ಸಾಹಿತ್ಯ ಚರಿತ್ರೆಯಲ್ಲಿಯೂ ಪ್ರಾಯಶಃ ನಮ್ಮಲ್ಲಿ ಈಗ ಇರುವ ಬಹುಭಾಗದ ವಿಮರ್ಶೆಯಿಂದಲೂ ತಿಳಿಯಬಹುದು. ಆಂಗ್ಲೇಯ ಸಾಹಿತ್ಯದಲ್ಲಿ ಹದಿನೆಂಟನೆಯ ಶತಮಾನದ ಕೊನೆಯಲ್ಲಿ ವಿಮರ್ಶೆ ಹೆಚ್ಚು ವಾಡಿಕೆಗೆ ಬಂದಿತು. ಹೊಸ ರೀತಿಯ ಕಾವ್ಯಗಳು ಬಂದಂತೆ ಹೊಸ ರೀತಿಯ ವಿಮರ್ಶೆಯೂ ಬಂದು ಕೆಲವರು ವಿಮರ್ಶಕರು ಕವಿಯನ್ನು ಹಿಡಿದು ತೂಕಮಾಡುವುದು ಅಥವಾ ನ್ಯಾಯಾಧಿಕಾರಿ ಅಪರಾಧಿಯ ತಪ್ಪನ್ನು ನಿರ್ಧರಿಸುವ ಹಾಗೆ ಕವಿಯ ಕಾವ್ಯದ ತಪ್ಪನ್ನು ನಿರ್ಧರಿಸುವುದು ತಮ್ಮ ಕೆಲಸ ಎಂದು ತಿಳಿದಿದ್ದಂತೆ ಕಾಣುತ್ತದೆ. ಈ ನಿರ್ಧರಣ ಕಾರ್ಯದಲ್ಲಿ ಅವರು ಈಗ ಆಂಗ್ಲ ಸಾಹಿತ್ಯದಲ್ಲಿ ಉತ್ತಮರೆಂದು ಗಣಿಸಲ್ಪಟ್ಟಿರುವ ವರ್ಡ್ಸ್‌ವರ್ತ್, ಕೀಟ್ಸ್ ಎಂಬ ಇಬ್ಬರು ಕವಿಗಳನ್ನು ಅತಿಹೀನವಾಗಿ ಬಯ್ದರು. ಆ ತಪ್ಪು ಆ ವಿಮರ್ಶಕರಲ್ಲಿ ಆಕ್ಷಮ್ಯವೆಂದು ನಾವು ಹೇಳಲಾಗುವುದಿಲ್ಲ; ಆಗ್ಗೆ ಅವರಿಗೆ ತಿಳಿದದ್ದು ಅಷ್ಟು. ಈಗ ನಾವು ಏನು ಮಾಡಬೇಕೆಂದರೆ ವಿಮರ್ಶೆಯ ವಿಷಯವನ್ನು ಸರಿಯಾಗಿ ತಿಳಿದುಕೊಂಡು ಒಂದು ಸಲ ಅಲ್ಲಿ ನಡೆದ ತಪ್ಪನ್ನು ಇಲ್ಲಿ ಮತ್ತೆ ನಡೆಯಿಸದಂತೆ ಜಾಗ್ರತೆಯಿಂದ ನೋಡಿಕೊಳ್ಳಬೇಕು. ನಮ್ಮ ಸೀಮೆಯ ಈಗಣ ವಿಮರ್ಶೆಯಲ್ಲಿ ಈ ತಿಳಿವಿನ ಚಿಹ್ನೆ ಕಾಣಲಿಲ್ಲ. ಓದುವ ಪುಸ್ತಕದಲ್ಲಿ ಇದು ಸರಿಯಾಗಿದೆ ಇದು ಸರಿಯಾಗಿಲ್ಲ ಎನ್ನುವುದು ಮಾತ್ರ ವಿಮರ್ಶೆ; ಅಥವಾ ಈ ಪದವು ವ್ಯಾಕರಣಕ್ಕೆ ಸರಿಯಾಗಿದೆ ಅಥವಾ ಇಲ್ಲ ಎನ್ನುವುದು ವಿಮರ್ಶೆ. ವಿಷಯ ಸಣ್ಣದಾದರೆ ಹೋಗಲಿ ಅದನ್ನು ಮರ್ಯಾದೆಯಿಂದ ಹೇಳಿದರೆ ಒಂದು ಮಾದರಿ; ವಿಮರ್ಶೆಯಲ್ಲಿ ತಿರುಳಿಲ್ಲದಿದ್ದರೂ ಲಕ್ಷಣವಾದರೂ ಇದೆ ಎನ್ನಬಹುದು. ಕೆಲವು ವಿಮರ್ಶೆಯಲ್ಲಿ ಇದೂ ಇರುವುದಿಲ್ಲ. ಇದಕ್ಕನುಸಾರವಾಗಿ ಕುಹಕ, ಕುಚೋದ್ಯ, ಭಾವಲಾಘವ, ಅಪ್ರಬುದ್ಧರು ಪರಸ್ಪರ ಅವಹೇಳನದಲ್ಲಿ ಉಪಯೋಗಿಸುವ ಅಹಹಾ ಉಹುಹೂ ಎಂಬಂಥ ಮಾತುಗಳು ಇರುತ್ತವೆ. ಇದು ವಿಮರ್ಶೆಯ ದಾರಿಯಲ್ಲ. ಅಹಹಾ ಎಂದು ಅವಹೇಳನಮಾಡಬೇಕಾದಷ್ಟು ನಿಕೃಷ್ಟವಾದ ಗ್ರಂಥವನ್ನು ಕುರಿತಾದರೂ ವಿಮರ್ಶಕನು ಅದರ ತಗ್ಗಿಗೆ ಇಳಿದು ಬರೆಯಬಾರದು. ವಿಮರ್ಶಕನು ಹಾಸ್ಯ ಮಾಡಬಾರದೆಂದಲ್ಲ; ಯಾವುದನ್ನೂ ಭಾವಗೌರವ ಉಕ್ತಿಗೌರವದಿಂದ ಮಾಡಬೇಕೆಂಬುದು ಮಾತ್ರ ಇಲ್ಲಿಯ ಅಭಿಪ್ರಾಯ. ಈ ಕೆಲಸವೇ ಇಷ್ಟರಮಟ್ಟಿಗೆ ಆದ ಮೇಲೆ ವಿಮರ್ಶೆಯ ಇತರ ಕಾರ್ಯದ ಎಷ್ಟು ಸ್ವಲ್ಪ ಭಾಗವೂ ನಮ್ಮಲ್ಲಿ ಈಗ ಬಹಳ ಮಟ್ಟಿಗೆ ನಡೆಯುತ್ತಿಲ್ಲವೆಂದು ಹೇಳಬೇಕಾದದ್ದಿಲ್ಲ. ಇದೆಲ್ಲದರ ಕಾರಣ ಬಹಳ ಮಟ್ಟಿಗೆ ವಿಮರ್ಶೆಗೆ ಬೇಕಾದ ತಿಳಿವು ಇಲ್ಲದವರು ವಿಮರ್ಶೆಯಲ್ಲಿ ಉದ್ಯುಕ್ತರಾಗಿರುವುದು. ಕವಿಗಿಂತಲೂ ವಿಮರ್ಶಕನು ತನ್ನ ಶಕ್ತಿಯ ವಿಷಯದಲ್ಲಿ ಅಧಿಕವಾದ ಯೋಚನೆಯುಳ್ಳವನಾಗಿರಬೇಕು, ತಾನು ಹೇಳುವುದು ಸರಿಯೇ ತಾನು

ಮಾಡುವುದು ಸರಿಯೇ ಎಂದು ಪರಾಮರ್ಶವುಳ್ಳವನಾಗಿರಬೇಕು, ಎಂಬುದೇ ಇದರಿಂದ ತಿಳಿಯಬೇಕಾದುದು.

— ಮಾಸ್ತಿ ವೆಂಕಟೇಶ ಅಯ್ಯಂಗಾರ್

## ಕಲಾಮಯ ಜೀವನ

ಇಂದು ಸರಸ್ವತೀ ಪೂಜೆಯ ದಿನ. ಸರಸ್ವತಿಯನ್ನು ಪೂಜಿಸುವುದೆಂದರೆ ಒಂದೆರಡು ಪುಸ್ತಕಗಳಿಗೋ ವಿಗ್ರಹಕ್ಕೋ ಧೂಪದೀಪಾದಿಗಳನ್ನು ಕೊಟ್ಟು ಮುಗಿಸುವುದು ಈಗಿನ ಸಾಮಾನ್ಯ ಸಂಪ್ರದಾಯವಾಗಿದೆ. ಇನ್ನೂ ಕೆಲವು ಕಡೆ, ಇದ್ದಬದ್ದ ಹಳೇ ಓಲೆಯ ಕಡತಗಳನ್ನು ಈ ಹೊತ್ತೇ ತೆಗೆದು, ಸಾಧ್ಯವಾದರೆ ಧೂಳಿಯನ್ನು ಕೊಡವಿ, ಪೂಜೆಯಾದಮೇಲೆ ಮತ್ತೆ ಮುಂದಿನ ನವರಾತ್ರಿಯವರೆಗೆ ಅಟ್ಟಕ್ಕೇರಿಸುವುದು ವಾಡಿಕೆ. ಇದು ನಿಜವಾಗಿ ಸರಸ್ವತೀ ಪೂಜೆಯ ಗಸಿ; ತುಪ್ಪ ಬೇರೆ.

ನಿಜವಾದ ಸರಸ್ವತೀ ಪೂಜೆಯೆಂದರೆ ನಿತ್ಯವಾದ ಕಲಾರಾಧನೆ; ಕಲೆಯನ್ನು ಸಾಧಿಸುವುದು; ಕಲಾದೃಷ್ಟಿಯಿಂದ ವಸ್ತುವ್ಯಾಪಾರಗಳ ಗುಣದೋಷಗಳನ್ನು ನಿರ್ಣಯಿಸುವುದು. ಕಲೆಯೆನ್ನುವುದು ಸೃಷ್ಟಿಯಲ್ಲಿ ವಿಚಿತ್ರವಾದ, ಆಳವರಿಯಲಾಗದ ದಿವ್ಯಶಕ್ತಿ; ಆ ಕಣ್ಣಿನಿಂದ ನೋಡದ ನೋಟ, ಮಾಡದ ಕೆಲಸ ಕೇವಲ ಶುಷ್ಕವಾಗಿ ಪೈಶಾಚಿಕವಾಗುವುದೆಂಬ ತತ್ತ್ವವನ್ನು ಸದಾ ಮನನ ಮಾಡುವುದು. ಈ ವಿಧವಾದ ಧ್ಯಾನಪ್ರವಾಹದ ಒಂದು ಬುಗ್ಗೆ ಮಾತ್ರವೇ ಬಹಿರಂಗ ಪೂಜೆ. "ನಾಲ್ಕು ವೇದಗಳನ್ನೂ ಎಲ್ಲ ಶಾಸ್ತ್ರಗಳನ್ನೂ ಕಡೆದು ಬಂದ ಬೆಣ್ಣೆಯನ್ನು ತಿನ್ನುವವರು ಯೋಗಿಗಳು, ಪಂಡಿತರಿಗೆ ಸಿಕ್ಕುವುದು ಬರೀ ಮಜ್ಜಿಗೆ ಮಾತ್ರ" ಎಂದು ಸಂಸ್ಕೃತದಲ್ಲಿ ಒಂದು ನಾಣ್ಣುಡಿಯುಂಟು.[1]

ಸರಸ್ವತಿಗೆ ವಾಗ್ದೇವತೆಯೆಂದು ಹೆಸರು. ಎಂದರೆ, ಎಲ್ಲಾ ವಿದ್ಯೆಗಳನ್ನೂ ಮಾತಿನ ಮೂಲಕವಾಗಿಯೇ ಕಲಿಯಬೇಕಾಗಿರುವುದರಿಂದ ವಿದ್ಯಾಸಾಮಾನ್ಯಕ್ಕೆ ಆಕೆ ಅಧಿದೇವತೆಯೆಂದರ್ಥ. ಆದ್ದರಿಂದಲೇ ಆಕೆಯನ್ನು ಪ್ರಾರ್ಥಿಸಿ 'ವಿದ್ಯಾರಮ್ಭಂ ಕರಿಷ್ಯಾಮಿ' ಎಂದು ನಾವು ಸಂಕಲ್ಪಮಾಡುತ್ತೇವೆ. ವಿದ್ಯೆಯು ಶಾಸ್ತ್ರವೆಂದೂ ಕಲೆಯೆಂದೂ ಎರಡು ವಿಧ. ಇರುವ ಪದಾರ್ಥಗಳ ಸ್ವರೂಪವನ್ನು ತಿಳಿಯುವುದು ಶಾಸ್ತ್ರ; ಹೊಸದನ್ನು ಸೃಷ್ಟಿಮಾಡುವುದು ಕಲೆ— ಎಂದು ಇವೆರಡರ ಭೇದವನ್ನು ಸ್ಥೂಲವಾಗಿ ಹೇಳಬಹುದು. ಸರಸ್ವತೀ ಮೂರ್ತಿಗೆ ಒಂದು ಕೈಯಲ್ಲಿ ಪುಸ್ತಕ, ಮತ್ತೊಂದರಲ್ಲಿ ವೀಣೆ ಇರುವುದರಿಂದ ಈ ಎರಡೂ ಆಕೆಯ

---

[1] ಮಥಿತ್ವಾ ಚತುರೋ ವೇದಾನ್ ಸರ್ವ ಶಾಸ್ತ್ರಾಣಿ ಚೈವ ಹಿ। ಸಾರಸ್ತು ಯೋಗಿಭಿಃ ಪೀತಃ ತಕ್ರಂ ಪಿಬತಿ ಪಂಡಿತಃ ॥ ಜ್ಞಾನಸಂಕಲಿನೀ ತನ್ತ್ರ

ಮೂರ್ತರೂಪಗಳೆಂದೂ ಆಕೆಯ ಅನುಗ್ರಹದಿಂದ ಪಡೆಯಬೇಕಾದವೆಂದೂ ಅರ್ಥ ವಾಗುವುದು. ಆದರೆ ಕಲೆಯನ್ನು ಸಾಧಿಸುವುದಕ್ಕೆ ಶಾಸ್ತ್ರವು ಸಾಧನ; ಶಾಸ್ತ್ರಾ ಭ್ಯಾಸದ ಫಲ ಕಲೆ. ಇವೆರಡೂ ಅನ್ಯೋನ್ಯಾಶ್ರಯವಾದವು. ಒಂದನ್ನು ಬಿಟ್ಟು ಮತ್ತೊಂದು ಸ್ವತಂತ್ರವಾಗಿ ಇರಲಾರದು, ಇರಲಾಗದು. ಶಾಸ್ತ್ರಜ್ಞಾನದ ಬೆಂಬಲವಿಲ್ಲದ ಕಲೆ ಮರಳಿನ ಕಟ್ಟಡದ ಹಾಗೆ ದುರ್ಬಲವಾಗಿ ಸಂಕುಚಿತವಾಗಿರು ವುದು. ಕಲೆಯ ಧ್ಯೇಯವಿಲ್ಲದ ಬರಿಯ ಶಾಸ್ತ್ರಜ್ಞಾನದಿಂದ ಏನೇನು ಅನರ್ಥ ಗಳಾಗಬಹುದೆಂದು ಊಹಿಸುವುದು ಕಷ್ಟ. ಶಾಸ್ತ್ರದಿಂದ ಲೋಕೋಪಕಾರವಾಗ ಬೇಕಾದರೆ ಶಾಸ್ತ್ರಜ್ಞನು ಕಲೆಗಾರನೂ ಆಗಬೇಕು. ಈ ತತ್ತ್ವವನ್ನು ಕವಿತಾ ಕಲೆಗೆ ಮಾತ್ರ ಅನ್ವಯಿಸಿ ಭಾಮಹನು—

> ಅಧನಸ್ಯೇವ ದಾತೃತ್ವಂ ಕ್ಲೀಬಸ್ಯೇವಾಸ್ತ್ರಕೌಶಲಮ್ ।
> ಅಜ್ಞಸ್ಯೇವ ಪ್ರಗಲ್ಭತ್ವಮಕವೇಃ ಶಾಸ್ತ್ರವೇದನಮ್ ॥[1]
> (ಭಾಮಹನ ಕಾವ್ಯಾಲಂಕಾರ, ೧.೩)

ಎಂದಿದ್ದಾನೆ. ಆದ್ದರಿಂದ ಸರಸ್ವತೀ ಪೂಜೆಯಿಂದ ನಾವು ಪಡೆಯಬೇಕಾದ ಫಲ ಕಲಾಸಿದ್ಧಿ. ಕಲೆ ಸರಿಯಾಗಿ ಸಿದ್ಧಿಸಬೇಕಾದರೆ ಶಾಸ್ತ್ರವು ಹಿಂದೆ ಬಂದೇ ಬರುವುದು. ಆದ್ದರಿಂದಲೇ ಭವಭೂತಿ ಮಹಾಕವಿಯು ಸರಸ್ವತಿಯನ್ನು 'ಅಮೃತಾಮಾತ್ಮನಃ ಕಲಾಮ್'[2] ಎಂದೇ ಸ್ಮರಿಸಿದ್ದಾನೆ. ಶಾಸ್ತ್ರದಲ್ಲಿ ವಿಷವೂ ಅಮೃತವೂ ಸಪ್ಪೆಯೂ ಉಂಟು. ಆದರೆ ಕಲೆಯಲ್ಲಿರುವುದು, ಇರಬೇಕಾದುದು ಅಮೃತವೊಂದೇ.

ಕಲೆಯೆಂದರೆ ಹೊಸ ಸೃಷ್ಟಿಯೆಂದು ಹೇಳಿದೆ. ಆದರೆ ಹೊಸದಾಗಿ ಸೃಷ್ಟಿಸಿ ದ್ದೆಲ್ಲಾ ಕಲೆಯಾಗಲಾರದು. ಸಿಡಿಮದ್ದನ್ನು ಸಿಡಿಯಿಸಿ ಬೆಂಕಿಯಿಂದ ಸುತ್ತು ಮುತ್ತು ಸುಡುವುದೂ ಸೃಷ್ಟಿಯೇ. ಆದರೆ ಅದನ್ನು ನಾವು ಕಲೆಯೆನ್ನುವುದಿಲ್ಲ. ಅದೇ ಚಿತ್ರವಿಚಿತ್ರವಾದ ಬಾಣ ಬಿರುಸುಗಳನ್ನು ಮಾಡಿ ತೋರಿಸಿದರೆ ಅದನ್ನು ಕಲೆಯೆನ್ನುತ್ತೇವೆ. ಸುಣ್ಣಕಲ್ಲನ್ನು ಪುಡಿಮಾಡುವುದೂ ಸೃಷ್ಟಿಯೇ. ಆದರೆ ಅದನ್ನು ಹಲವು ರೂಪುರೇಖೆಗಳ ರಂಗವಲ್ಲಿಯಾಗಿ ಎಳೆದರೆ ಕಲೆಯಾಗುವುದು. ತಲೆಹರಟೆಯೂ ಸೃಷ್ಟಿಯಾದರೂ ಕವಿತೆಗೆ ಮಾತ್ರ ಕಲೆಯೆಂಬ ಹೆಸರು ಬರುವುದು. ಹೀಗೆ ನಾವು ಮಾಡುವ ಕೆಲಸ ಕಲೆಯಾಗಬೇಕಾದರೆ ಅದರಲ್ಲಿ ಮುಖ್ಯವಾದ ಒಂದು ವಿಶಿಷ್ಟ ಧರ್ಮವಿರಬೇಕು. ಅದನ್ನು ನಾವು ಲಯವೆಂದು ಕರೆಯಬಹುದು. ಲಯವೆಂದರೆ ಸಮತೆ; ಯಾವ ಪದಾರ್ಥವಾಗಲಿ ಮತ್ತೊಂದೋ ಹಲವೋ

---

[1] ಬಡವನಿಗೆ ದಾತೃತ್ವದಂತೆ, ಹೇಡಿಗೆ ಅಸ್ತ್ರಕೌಶಲದಂತೆ, ಅಜ್ಞಾನಿಗೆ ಮಾತುಗಾರಿಕೆ ಯಂತೆ, ಕವಿಯಲ್ಲದವನಿಗೆ ಶಾಸ್ತ್ರಜ್ಞಾನ–ಎಂದರ್ಥ.

[2] ಭವಭೂತಿಯ 'ಉತ್ತರರಾಮ ಚರಿತೆ'ಯ ನಾಂದೀ ಪದ್ಯವನ್ನು ನೋಡಿರಿ.

ಪದಾರ್ಥಗಳೊಡನೆ ಸಮನಾಗಿರುವಿಕೆ. ಸಂಗೀತಗಾರರು ಶ್ರುತಿಲಯ ತಾಳಲಯ ಎಂದು ಇದೇ ಅರ್ಥದಲ್ಲಿ ಈ ಪದವನ್ನು ಉಪಯೋಗಿಸುತ್ತಾರೆ. ನಾವು ಅರ್ಥ ಅನ್ವಯವನ್ನು ವಿಸ್ತರಿಸಿ ಅಳತೆ, ತೂಕ, ಬಣ್ಣ, ವೇಷ, ನಡೆ, ನುಡಿ, ಭಾವ, ಜ್ಞಾ ಮತ, ನೀತಿ ಮುಂತಾದ ಎಲ್ಲ ವಿಷಯಗಳಿಗೂ ಸೇರಿಸಿದರೆ ಕಲಾಪ್ರಪಂಚ ತಿರುಳನ್ನು ಕಾಣಬಹುದು. ಸೃಷ್ಟಿಮಾಡಿದ ವಸ್ತುವಿನಲ್ಲಿ ವೈಷಮ್ಯವು ಎಷ್ಟು ಕಡಿಮೆಯಾಗಿದ್ದರೆ, ಸಾಮ್ಯವು ಎಷ್ಟು ಹೆಚ್ಚಾಗಿದ್ದರೆ, ಅಷ್ಟು ಕಲೆಯ ಹೊಳ ಹೆಚ್ಚಾಗಿ ತೋರುವುದು. ಅನುಕರಣವೇ ಕಲೆಗಳ ಮೂಲತತ್ತ್ವವೆಂದು ಹೇಳುವು -ದುಂಟು. ಆ ಅನುಕರಣಕ್ಕೂ ಮೂಲಭೂತವಾದ ಆಕರ್ಷಣಶಕ್ತಿಯು ಲಯವೇ ಸೃಷ್ಟಿಯಲ್ಲಿ ಇರುವುದನ್ನೂ, ಇರಬಹುದಾದದ್ದನ್ನೂ ಇರಬೇಕಾದದ್ದನ್ನೂ ಅನು ಕರಿಸುವುದರ ಮೂಲಕ ಕಲೆಗಾರರೆಲ್ಲರೂ ಈ ಲಯಾನುಭವವನ್ನು ಸಾಧಿಸುವರು; ಇತರರಿಗೆ ಉಂಟುಮಾಡಿಕೊಡುವರು. ಸಾಮಾನ್ಯ ಜೀವಿತದಲ್ಲಿ ಈ ಲಯಾನು ಭವದಿಂದ ಸ್ನೇಹ, ದಯೆ, ನೀತಿ ಮುಂತಾದ ಮಹಾಗುಣಗಳು ಬೆಳೆದರೆ, ಕಲೆಯಲ್ಲಿ ಇದರಿಂದ ಏಕಾಗ್ರತೆ, ಶಾಂತಿ, ಆನಂದ ಲಭಿಸುವುವು. ಲಯಬದ್ಧವಾದ ಸೃಷ್ಟಿ ಯಾವಾಗಲೂ ಹೊಸದಾಗಿ ಹೊಳೆಯುವುದು.

ಈ ಲಯಾನುಭವಕ್ಕಾಗಿ ದುಡಿಯುವವರ ಚಿತ್ತವೃತ್ತಿಯು ಎರಡು ವಿಧವಾ ಹರಿಯುತ್ತದೆ. ಒಂದು ಭೋಗ, ಮತ್ತೊಂದು ಯೋಗ. ಲಯಭೋಗಿಗಳ ಹೃದಯವು ಬಹು ಸುಕುಮಾರವಾಗಿರುವುದು. ಅವರು ಯಾವ ವಿಧವಾ ವೈಷಮ್ಯವನ್ನೂ ತಡೆದುಕೊಳ್ಳಲಾರರು. ಹದಿನಾಲ್ಕು ಲೋಕಗಳೂ ಸುಖವಾ ಬೇಕೆಂದು ಬಯಸುವವರು ಅವರು. ಸೌಂದರ್ಯವನ್ನು ಎಲ್ಲಿ ಕಂಡರೂ ಅದ ಪರವಶರಾಗುವರು. ಪಂಚೇಂದ್ರಿಯಗಳ ವೃತ್ತಿಗೆ, ಸ್ನೇಹವಿಶ್ವಾಸಗಳಿಗೆ, ಅವ ಮನಸೋಲುವರು. ಅವರು ಯಾರ ಮನಸ್ಸನ್ನೂ ಪ್ರಾಯಶಃ ನೋಯಿಸಲಾರ ಅವರ ಅನುಭವದಲ್ಲಿ ಆಳಕ್ಕಿಂತ ವಿಶಾಲತೆ ಹೆಚ್ಚು. ಚಿತ್ರ ಒಳ್ಳೆಯದಾ ಮಾತ್ರಕ್ಕೆ ತೃಪ್ತಿಯಿಲ್ಲ; ಅದರ ಬಣ್ಣ, ಚೌಕಟ್ಟು, ತಗಲುಹಾಕುವ ಮೊ ಇರಿಸುವ ಮನೆ, ಅದರ ಅಕ್ಕಪಕ್ಕದ ಸಾಮಾನು—ಎಲ್ಲ ಹೊಂದಿಕೊಂ ಒಟ್ಟಂದವಾಗಿರಬೇಕು. ಇವರಿಗೆ ಹಾಡಿಕೆ ಉತ್ತಮವೆನಿಸಬೇಕಾದರೆ ಹಾಡುವ ಶಾರೀರವೂ ಕಣಿಯಾಗಿರಬೇಕು. ಗಾಯಕರು ಸುಂದರಮೂರ್ತಿಗಳಾಗಿರಬೇಕು ಅವರು ಉಪಯೋಗಿಸುವ ತಂಬೂರಿ ವೀಣೆಗಳಿಗೆ ದಂತದ, ಚಿನ್ನಬೆಳ್ಳಿಗಳ ನಕಾಸಿ 'ಕಂಗೂರಿ' ಕಟ್ಟಿರಬೇಕು; ಹಾಡುವವರ ಕೈ, ಬಾಯಿ, ಕಣ್ಣು, ತಲೆ—ಎಲ್ಲ ನಯವಾಗಿ ಆಡುತ್ತಿರಬೇಕು. ಕೂತು ಕೇಳುವವರಿಗೆ ಮೆತ್ತನೆಯ ಒರ ದಿಂಬುಗಳು ಬೇಕು. ಗಮಗಮಿಸುವ ಪರಿಮಳದ ಊದುಬತ್ತಿಗಳು ಉರಿಯುತ್ತಿರ ಬೇಕು. ನಿದ್ದೆ ಬರುವುದಕ್ಕೆ ಮೊದಲೇ ಸಂಗೀತ ಮುಗಿಯಬೇಕು—ಇತ್ಯಾದಿ ಎಂದರೆ ಇವರು ಕೇವಲ ಸ್ವಾರ್ಥಪರರಲ್ಲ; ಸಂಘಜೀವಿಗಳು. ತಮಗೆ ಬೇಕಾದದ್ದ

ಎಲ್ಲರಿಗೂ ಬರಲಿ ಎಂದು ಹಾರೈಸುವವರು. ಇವರ ನಡೆ, ನುಡಿ, ವೇಷ ಮುಂತಾದ ಎಲ್ಲ ವಿಷಯಗಳಲ್ಲಿಯೂ ಈ ಕಲಾಭೋಗದ ಪ್ರಭಾವವನ್ನು ಕಾಣಬಹುದು. ಇವರ ಧ್ಯೇಯ ನೆಮ್ಮದಿ, ಸುಖ; ಉದ್ರೇಕವಲ್ಲ. ಒಟ್ಟಿನಲ್ಲಿ ಸಾಮಾಜಿಕ ಜೀವನಕ್ಕೆ ಇಂಥವರಿಂದಾಗುವ ಉಪಕಾರ ಸಾಮಾನ್ಯವಾದುದಲ್ಲ. ಸಂಘದಲ್ಲಿ ಕಳೆ, ಕೊಳೆ, ವಿಕಾರ, ಕಿರುಕುಳ, ಹೊಟ್ಟೇಕಿಚ್ಚು—ಮುಂತಾದ ಅವಲಯಗಳು ಕಡಮೆಯಾಗಬೇಕಾದರೆ, ಅಂದ ಚಂದ ಹರಡಬೇಕಾದರೆ ಇಂಥವರಿಂದಲೇ ಸಾಧ್ಯ.

ಇನ್ನು ಲಯಯೋಗಿಗಳ ರೀತಿ ಬೇರೆ. ಇವರು ಅಲ್ಪತೃಪ್ತರಲ್ಲ. ಯಾವ ಕಲೆಗೆ ಕೈಹಾಕಿದರೂ ಅದರ ಆಳವನ್ನು ಪೂರ್ತಿಯಾಗಿ ಇಳಿದು ನೋಡಬೇಕೆಂಬುವುದು ಇವರ ಪರಾಯಣ. ಇವರು ಅತೀಂದ್ರಿಯರು; ಎಂದರೆ ಸಹಜವಾದ ಇಂದ್ರಿಯಗಳ ತೃಪ್ತಿ ಇವರಿಗೆ ಸಾಲದು. ಪ್ರತಿಕ್ಷಣವೂ ಬಹಿರಿಂದ್ರಿಯಗಳನ್ನೂ ಅಂತಃಕರಣವನ್ನೂ ಮಸೆದು ಮಸೆದು ಅವುಗಳ ಗ್ರಹಣಶಕ್ತಿಯನ್ನು ಹರಿತ ಮಾಡುವರು. ಇತರ ವಿಷಯಗಳಲ್ಲೆಲ್ಲ ಇವರಿಗೆ ಉದಾಸೀನತೆ ಬಹಳ. ಯಾವ ಕೆಲಸ ಮಾಡುತ್ತಿದ್ದರೂ ಪರಮೈಕಾಂತಿಗಳಾಗಿ ಸದಾ ತಮ್ಮ ಇಷ್ಟವಸ್ತುವಿನ ರಹಸ್ಯಗಳನ್ನು ಮನನ ಮಾಡುತ್ತಲೇ ಇರುವರು. ತಮ್ಮನ್ನು ನೋಡಿ ಇತರರು ನಗಬಹುದು, ನಿಂದಿಸಬಹುದು, ಅಸಹ್ಯಪಡಬಹುದು. ಆದರೆ ಇವರದನ್ನು ಸ್ವಲ್ಪವೂ ಲಕ್ಷ್ಯಮಾಡುವುದಿಲ್ಲ. ಆದ್ದರಿಂದ ಸಾಮಾನ್ಯ ಕಲೆಗಾರರಿಗೆ, ಕಲಾಪ್ರೇಮಿಗಳಿಗೆ, ಊಹಿಸಲಸಾಧ್ಯವಾದ ಹಲವು ತತ್ವಗಳು ಇವರಿಗೆ ಪ್ರತ್ಯಕ್ಷವಾಗುವುದೆಂದರೆ ಆಶ್ಚರ್ಯವೇನೂ ಇಲ್ಲ.

ಹೀಗೆ ಕಲೆಗಾರರಲ್ಲಿ ಭೋಗದೃಷ್ಟಿ ಬಲವಂತವಾದರೆ ಸಾಮಾನ್ಯ ಮಾನವ ಜೀವನದ ಮಟ್ಟವು ಮೇಲಾಗುವುದು. ಯೋಗದೃಷ್ಟಿ ತೀವ್ರವಾದರೆ ವ್ಯಕ್ತಿ ಜೀವನವು ಗಂಭೀರವಾಗುವುದು. ಒಂದು ಸಂಘಬಲಕ್ಕೆ ಸಾಧನ; ಮತ್ತೊಂದು ಆತ್ಮಬಲಕ್ಕೆ ಮೂಲ; ಸೃಷ್ಟಿಯಲ್ಲಿ ಈ ಎರಡು ಬಲಗಳೂ ಸಮಾನವಾಗಿಯೇ ಪರಸ್ಪರ ಸಹಾಯದಿಂದ ಕೆಲಸಮಾಡಬೇಕಾಗಿವೆ. ಭೋಗಿ ಯೋಗಿಯಾಗುವುದಕ್ಕೆ ಯೋಗಿ ಭೋಗಿಯಾಗುವುದಕ್ಕೆ, ಹೇಸದೆ, ಹೆದರದೆ ಪ್ರಯತ್ನಪಡಬೇಕು. ಹಾಗಲ್ಲದಿದ್ದರೆ ಭೋಗಕಲೆ ಬರಿಯ ಬಹಿರಿಂದ್ರಿಯದಾಸ್ಯವಾಗಿಯೂ, ಯೋಗಕಲೆ ಪರರಿಗೇನೂ ಉಪಕರಿಸದ ಶುದ್ಧ ಸ್ವಾರ್ಥಪರತೆಯಾಗಿಯೂ ಪರಿಣಮಿಸಬಹುದು; ಪರಿಣಮಿಸುವುದು. ಕಲಾಪೂರ್ಣವಾದ ಜೀವನವೆಂದರೆ ಈ ಎರಡರ ಸಮಾನಬಲವುಳ್ಳ ಸಮ್ಮೇಳನವೇ. ನಾನು ಸೇವೆಮಾಡಿದ ಕಲೋಪಾಸಕರಲ್ಲಿ,—ಕವಿಗಳಲ್ಲಿ, ಪರಂಧಾಮವನ್ನೈದಿದ ಶ್ರೀ ಕೃಷ್ಣಬ್ರಹ್ಮತಂತ್ರ ಪರಕಾಲ ಸ್ವಾಮಿಗಳವರೂ, ಸಂಗೀತಗಾರರಲ್ಲಿ, ಶ್ರೀ ಕೃಷ್ಣಪ್ಪನವರೂ ಶ್ರೀ ಶೇಷಣ್ಣನವರೂ ಈ ತೆರದವರು. ಅಂತರ್ಮುಖತೆ, ಬಹಿರ್ಮುಖತೆ ಎರಡರ ಅಪೂರ್ವ ಸಮ್ಮೇಳನದ ಮೂರ್ತಿಗಳವರು.

ಇಂಥಾ ಸಮ್ಮೇಳನದ ಮಾತು ಹಾಗಿರಲಿ. ಕಲೆಯಲ್ಲಿ ಸಹ ಯೋಗವಾಗಲಿ ಭೋಗವಾಗಲಿ ಪ್ರತ್ಯೇಕವಾಗಿ ಎಲ್ಲರಿಗೂ ಲಭಿಸುವುದಿಲ್ಲ. ಭೋಗಕ್ಕೆ ದ್ರವ್ಯಬಲ ವಿರಬೇಕು. ಯೋಗಕ್ಕೆ ಮನೋಬಲವಿರಬೇಕು. ಈ ಎರಡರಮೇಲೆ ಅದೃಷ್ಟ ಬಲವೊಂದು ಬೇಕು. ಅದು ಹಾಗಿರಲಿ. ಜೀವನವನ್ನು ಕಲಾಪೂರ್ಣವಾಗ ಮಾಡಬೇಕೆಂದೂ, ಭುಕ್ತಿಮುಕ್ತಿಗಳೆರಡನ್ನೂ ಆ ಮೂಲಕ ಗಳಿಸುವಂತೆ ಸಂಘವನ್ನು ಸಂಸ್ಕರಿಸಬೇಕೆಂದೂ ಪ್ರಾಚೀನ ಭಾರತೀಯರು ಪಟ್ಟ ಪ್ರಯತ್ನವು ಅಪಾರ ವಾದದ್ದು. ಮಾನವನ ನಿತ್ಯಜೀವನದಲ್ಲಿ ಚಿಲ್ಲರೆ ಕಲೆಗಳಿಗೂ ಮಹಾ ಕಲೆಗಳಿಗೂ ಎಡಬಿಡದೆ ಸ್ಥಾನವನ್ನು ಕಲ್ಪಿಸಿದವರು ಅವರು. ನಮ್ಮ ಸಂಪ್ರದಾಯಗಳ ಆಚಾರ ವ್ಯವಹಾರಗಳ ತಿರುಳನ್ನು ತಿಳಿದು ನಡೆಯಬಲ್ಲವರಿಗೆ, ನಿಷ್ಕಲವಾಗಿ ಯಾವ ಕೆಲಸವನ್ನಾದರೂ ಮಾಡುವುದಕ್ಕಾದೀತೇ ಎಂದು ನಾವು ಸಂಶಯಪಡಬಹುದು. ನಮಗೆ ಶುಭ ಅಶುಭ ಎರಡರಲ್ಲಿಯೂ ಕೈಗಾರಿಕೆ, ಕವಿತೆ, ಸಂಗೀತ, ಚಿತ್ರ ಮುಂತಾದುವೆಲ್ಲಾ ಬೇಕು. ಕೊನೆಗೆ ಕೊಲೆ, ಕಳ್ಳತನ—ಇವುಗಳಲ್ಲಿಯೂ ಕಲಾ ದೃಷ್ಟಿಗೆ ಪ್ರಾಮುಖ್ಯವನ್ನು ಕೊಟ್ಟ ಕೀರ್ತಿ ನಮ್ಮವರದು. ಆದರೆ ಇದು ಪುರಾಣದ ಕಥೆ. ಈಗಿನ ನಮ್ಮ ಪಾಡು ಹೇಗಿದೆ? ಆ ಕಲಾ ಕಾಮಧೇನುವಿನ ಬಾಲದ ತುದಿಗೂದಲು ಮಾತ್ರ ಇನ್ನೂ ಉದುರದೆ ಅಂಟಿಕೊಂಡಿದೆ, ಅಷ್ಟೆ. ಈಗ ನಮ ಬೇಕಾಗಿರುವುದೂ ಸಾಕಾಗಿರುವುದೂ ಕಲೆಯೂ ಅಲ್ಲ, ಶಾಸ್ತ್ರವೂ ಅಲ್ಲ ಶಾಸ್ತ್ರಕ್ಕೆಷ್ಟು ಕಲೆ. ನಮ್ಮ ಮದುವೆ ಮುಂಜಿಗಳಿಗೆ ಮೇಳ ಈಗಲೂ ಬೇಕು. ಆದರೆ ಅದು ಎಷ್ಟು ಅಪಸ್ವರ ಅವಲಯಗಳ ಮುದ್ದೆಯಾಗಿದ್ದರೂ ಪರವಾ ಇಲ್ಲ. ಪೂಜೆಗೆ ತರುವ ಹೂವು ನಿರ್ಗಂಧವಾದರೂ ದುರ್ಗಂಧವಾದರೂ ಒಂದೇ. ಬಾರಿಸುವ ಗಂಟೆ ಹೆಬ್ಬೆಟ್ಟಿನ ಗಾತ್ರವಿದ್ದು ಲೊಡಲೊಡ ಒಡಕುಸದ್ದು ಮಾಡುತ್ತಿದ್ದರೂ ನಮ್ಮ ಕಿವಿ ನೆಮ್ಮದಿಯಾಗಿಯೇ ಇರುವುದು. ಮನೆಯ ಮುಂದಿನ ರಂಗೋಲಿಯಲ್ಲಿ ರೂಪುರೇಷೆ ಏನೂ ಇಲ್ಲದಿದ್ದರೂ ಲಕ್ಷಣಕರವೇ. ಒಂದು ವೇಳೆ ಇದಕ್ಕಿಂತಲೂ ಉತ್ತಮವಾದ ಕಲಾದೃಷ್ಟಿಯನ್ನು ಎಂದಾದರೂ ಯಾವುದರಲ್ಲಾದರೂ ತೋರಿಸಿದರೆ ಅದು ನಮ್ಮ ಸ್ವಾನುಭವಕ್ಕಾಗಿ ಅಲ್ಲ, ಮತ್ತೆ ಪರರ ಪ್ರೀ ಸಂಪಾದನೆಗಾಗಿ.

ಹೀಗಾಗಬಾರದು. ನಮ್ಮ ದೇಶ, ನಮ್ಮ ಜಾತಿ ಬಲಿಷ್ಠವಾಗಬೇಕಾದ ಪ್ರತಿಷ್ಠಾರ್ಹವಾಗಬೇಕಾದರೆ, ನೀತಿಮಂತವಾಗಬೇಕಾದರೆ, ಸ್ವತಂತ್ರವಾಗಬೇಕಾ ದರೆ—ಈ ನಿಷ್ಕಲತೆ ತೊಲಗಬೇಕು. ಮೊದಲು, ನಡೆಯುವ ನಡೆ, ಆಡುವ ಆಟ ನುಡಿಯುವ ಮಾತು, ನೆನೆಯುವ ಭಾವ—ಇವುಗಳೆಲ್ಲಾ ಕಲಾದೃಷ್ಟಿಯ ಅ ಕಾರಕ್ಕೆ ಒಳಪಡಬೇಕು. ಜೀವನವೇ ಲಯಬದ್ಧವಾಗಿ ಒಟ್ಟಂದದಿಂದ ಶೋಭಿ ಬೇಕು. ಅದೇ ನಿಜವಾದ ಸಂಸ್ಕೃತಿಯ ಕುರುಹು, ಸರಸ್ವತೀ ದೇವಿಯ ಆರಾಧನೆ.

— ರಾಳ್ಳಪಲ್ಲಿ ಅನಂತಕೃಷ್ಣಶರ್ಮ

# ಪ್ಲೇಟೋವಿನ ಕಲಾವಿಮರ್ಶೆ

ಪ್ಲೇಟೋವಿನ ತತ್ವಶಾಸ್ತ್ರದಲ್ಲಿ ವಿಚಿತ್ರವಾದ ಒಂದು ಸಂಗತಿಯನ್ನು ನಾವು ಗಮನಿಸಬೇಕಾಗಿದೆ. ಸೌಂದರ್ಯವನ್ನೂ ಸಮುಗಟ್ಟನ್ನೂ ಸಮತಾಳವನ್ನೂ ಇಷ್ಟು ಪ್ರಶಂಸೆಮಾಡಿ ತನ್ನ ತತ್ವಶಾಸ್ತ್ರದ ತಳಹದಿಯನ್ನಾಗಿ ಮಾಡಿದ ಪ್ಲೇಟೋ ಕಾವ್ಯ ಮತ್ತು ಕಲೆಗಳನ್ನು ಹೆಚ್ಚು ಪೂಜ್ಯಭಾವನೆಯಿಂದ ಆದರಿಸುವನೆಂದು ನಾವು ಎಣಿಸಬಹುದಲ್ಲವೆ? ಹಾಗಾದರೆ ನಮ್ಮ ಎಣಿಕೆ ತೀರಾ ತಪ್ಪಾಗುವುದು. ಪ್ಲೇಟೋವಿನ ಆದರ್ಶರಾಜ್ಯದಲ್ಲಿ ಕಾವ್ಯಕ್ಕೂ ಕಲೆಗಳಿಗೂ ಸ್ಥಾನವೇ ಇಲ್ಲ, ಸ್ಥಾನವಿದ್ದರೂ ಅದು ಖಳನ ಪಾತ್ರವನ್ನು ವಹಿಸುವುದೇ. "ಆದರ್ಶರಾಜ್ಯ" ಎಂಬ ಸಂವಾದದಲ್ಲಿ ಕವಿಗಳನ್ನೂ ಕಲಾವಿದರನ್ನೂ—ಅವರ ಜಾಣ್ಮೆಗೂ ಅದ್ಭುತ ಶಕ್ತಿಗೂ ಮೆಚ್ಚಿ ಅವರಿಗೆ ತಲೆವಾಗಿ ಅವರ ಕೊರಳಿಗೆ ಹಾರಹಾಕಿ ಬಹು ಮರ್ಯಾದೆಯಿಂದ ಕೈಹಿಡಿದು ಕರೆದುಕೊಂಡು ಹೋಗಿ—ರಾಜ್ಯದ ಎಲ್ಲೆಯಿಂದಾಚೆಗೆ ಸಾಗಿಸಿ ಬರಬೇಕೆಂದು ಹೇಳುತ್ತಾನೆ. ಪ್ರಪಂಚದ ಅತ್ಯುತ್ತಮ ಕಲಾವಿದರಲ್ಲಿ ತಾನೇ ಒಬ್ಬನಾಗಿದ್ದು, ಪ್ಲೇಟೋ ಕಲಾವಿದರನ್ನು ಕಿವಿ ಹಿಂಡಬೇಕೆಂದು ಹೇಳಿದರೆ ಇದು ಸೋಜಿಗವಾದ ಸಂಗತಿಯೇ, ಮತ್ತು ಇದಕ್ಕೆ ಅವನ ಕಾರಣವೇನಿರಬಹುದೆಂದು ತಿಳಿಯುವುದು ಆವಶ್ಯಕವಾಗಿರುವುದು.

ಪ್ಲೇಟೋ ಬಹುವಿಧವಾಗಿ ತನ್ನ ಕಾಲದ ಗ್ರೀಸ್‌ದೇಶದ ಕಲಾಪ್ರಪಂಚದಲ್ಲಿ ಕಂಡುಬಂದ ಸ್ಥಿತಿಗತಿಗಳನ್ನು ಕುರಿತೇ ಉದ್ಗಾರ ತೆಗೆಯುವುದು. ಆತನ ಕಾಲದ ಕಲಾಕೋವಿದರು—ಅದರಲ್ಲಿಯೂ ನಾಟಕ ಕರ್ತೃಗಳು—ಜೀವನದ ಗಂಭೀರವಾದ ಅನ್ವೇಷಣೆಯನ್ನು ತ್ಯಜಿಸಿ, ಗುರುತರವಾದ ಗುರಿಗಳನ್ನು ತೊರೆದು, ಕೇವಲ ಅಲ್ಪ ವಿನೋದಗಳಿಗೂ ಹುರುಳಿಲ್ಲದ ಹಾಸ್ಯಕ್ಕೂ ಇಳಿದಿದ್ದರು. ರುದ್ರನಾಟಕಗಳೂ ಕೂಡ ತಮ್ಮ ಗೌರವಗುಣಗಳನ್ನು ಮರೆತು ಪೈಶಾಚಿಕ ಪ್ರಸಂಗಗಳಾಗಿ ಪರಿಣಮಿಸಿದ್ದುವು. ಇಂತಹ ಕಲೆಗಳಿಂದ ಜನತೆಯ ಮೇಲೆ ಆಗುವ ಪರಿಣಾಮ ಶೋಚನೀಯವಾದುದೇ ಹೊರತು ಶುಭವಾದುದಲ್ಲವೆಂದು ಪ್ಲೇಟೋ ತೀರ್ಮಾನಿಸಿದನು. ಇದರಿಂದ ಕಲೆಯ ಶ್ರೇಷ್ಠತೆಯನ್ನು ಅದರಿಂದುಂಟಾಗುವ ಪರಿಣಾಮ ಫಲದಿಂದ ನಿರ್ಧರಿಸಬೇಕೆಂದು ಹೇಳಿದ ಹಾಗಾಯಿತು. ಪ್ಲೇಟೋವಿನ ಕಲಾಖಂಡನೆಗೆ ನೈತಿಕವಾದುದೊಂದು, ತಾತ್ವಿಕವಾದುದೊಂದು—ಈ ರೀತಿಯಾಗಿ ಎರಡು ಕಾರಣಗಳಿದ್ದುವು. "ಅಯಾನ್" ಎಂಬ ಸಂವಾದದಲ್ಲಿ ಸಾಕ್ರಟೀಸನು ಕಾವ್ಯದ ವಿಮರ್ಶೆ ಮಾಡುತ್ತಾ ಆವೇಶಬಲದಿಂದ ಕಾವ್ಯ ಹುಟ್ಟುತ್ತದೆಯೇ ವಿನಾ ಜ್ಞಾನಬಲದಿಂದ ಅಥವಾ ಬುದ್ಧಿಪೂರ್ವಕವಾಗಿ ಅಲ್ಲ ಎಂದು ತೀರ್ಮಾನಿಸಿದ್ದನು. ಕವಿ ತಾನು ಹೇಳುತ್ತಿರುವುದೇನೆಂಬುದು ತನಗೇ ಗೊತ್ತಿಲ್ಲದವನ ಸ್ಥಿತಿಯಲ್ಲಿರುವನು. ಈ ಕಾರಣದಿಂದ ಆತನು ಹೇಳುವುದು ಆಕಸ್ಮಾತ್ತಾಗಿ ಸತ್ಯವಾಗಿರಬಹುದು, ಮಿಥ್ಯ

ವಾಗಿರಲಾರದೆನ್ನಲು ಆಧಾರ ಕಡಮೆ. ಹ್ರಸ್ವದಲ್ಲಿ, ಕವಿ ಜ್ಞಾನಿಯಲ್ಲ ಎಂ
ಸಾಕ್ರಟೀಸನ ನಂಬಿಕೆ. ಆದರೆ ಕಲಾವಿದನು ಅನೀತಿಯನ್ನು ಪ್ರತಿಪಾದಿಸ
ತ್ತಾನೆಂದು ಸಾಕ್ರಟೀಸನು ತಿಳಿದಿರಲಿಲ್ಲ. ಈಗ ಪ್ಲೇಟೋ ಕವಿಯ ಮೇಲೆ ಹ
ಮೊದಲನೆಯ ಅಪಾದನೆಯೇ ಇದು. "ಆದರ್ಶ ರಾಜ್ಯ" ಎಂಬ ಸಂವಾದ
ಪೂರ್ವಾರ್ಧದಲ್ಲಿ ಈ ವಿಷಯ ಚರ್ಚಿಸಲ್ಪಟ್ಟಿರುವುದು. ಪುರಪಾಲಕರ ವಿದ್ಯಾ
ಅವರನ್ನು ಸಚ್ಛೀಲರನ್ನಾಗಿಮಾಡುವ ಘನೋದ್ದೇಶವನ್ನು ಹೊಂದಿರುವುದ
ಸುಳ್ಳು, ಮೋಸ, ಕ್ರೂರತನ, ಕಾಮ, ಕ್ರೋಧ, ಮುಂತಾದ ದುರ್ಗುಣಗಳನ್ನ
ವರ್ಣಿಸುವ ಹೋಮರ್, ಹೆಸಿಯಡ್, ಎಸ್ಕಿಲಸ್ ಆದಿಯಾದ ಕವಿಗಳ ಕಾವ್ಯಗ
ವಿದ್ಯಾರ್ಥಿಗಳಿಗೆ ಬೋಧಿಸಲು ಯೋಗ್ಯವಾದುವಲ್ಲ. ಚಿಕ್ಕಂದಿನಲ್ಲಿ ಬಾಲಕನ
ಮನಸ್ಸು ಹೇಳಿದ್ದನ್ನು ಹಿಡಿಯುವ ಮೃದು ರೀತಿಯಲ್ಲಿರುವುದರಿಂದ ಆಗ ಕಲ್ತಿ
ಪಾಠಗಳು ಶಾಶ್ವತವಾಗಿ ನಿಂತುಹೋಗಿ ಜನ್ಮಾಂತ್ಯದವರೆಗೂ ಆತ್ಮದ ಮೇಲೆ ಶ್ವಾ
ಸಂಸ್ಕಾರವನ್ನು ಬೀರುವುವು. ಇಂಥ ಸುಸಮಯದಲ್ಲಿ ದೇವತೆಗಳು ಪರಸ್ಪ
ಕಚ್ಚಾಡುವರೆಂದೂ, ಪರದಾರ ಪರಧನಗಳಿಗೆ ಆಸೆಪಡುವರೆಂದೂ, ಜನರನ್ನು ಮೋ
ಪಡಿಸುವರೆಂದೂ, ಇನ್ನೂ ನಾನಾವಿಧದ ಮಾನವ ದೌರ್ಬಲ್ಯ ದೌರ್ಜನ್ಯಗಳನ್ನ
ಅವರಲ್ಲಿ ಆರೋಪಿಸಿ ಬಾಲಕರಿಗೆ ಕತೆ ಹೇಳಿದರೆ, ಬಾಲಕರು ಇಂಥ ಹೇ
ಗುಣಗಳನ್ನು ತಾವು ಕಲಿತು ಅವುಗಳಿಗೆ ದೇವತೆಗಳ ಅನುಮತಿ ಇರುವುದೆಂ
ನಂಬುವುದೇನಾಶ್ಚರ್ಯ? ಇಂಥವರಿಗೆ ಗುರುಹಿರಿಯರಲ್ಲಿ ಭಕ್ತಿಭಾವವೂ ದೊ
ಪಾಲಕರಲ್ಲಿ ಗೌರವವೂ ಹೇಗೆ ಬಂದೀತು? ಇಷ್ಟೇ ಅಲ್ಲ, ಕವಿ ಗಾರುಡವಾದಿಯ
ಅನುಕರಣಪ್ರಿಯನು, ಅವನಲ್ಲಿ ಸ್ವತಂತ್ರವಾದ ನಿರ್ಮಾಪಕಶಕ್ತಿ ಇಲ್ಲವೆಂ
ಪ್ಲೇಟೋವಿನ ಅಭಿಮತ. ಈ ಅನುಕರಣಭಾವ (mimetics) ಪ್ಲೇಟೋ
ಹಿಂದೆಯೇ ಬಹು ಪುರಾತನಕಾಲದಿಂದಲೂ ಗ್ರೀಕರ ನಾಗರಿಕತೆಯಲ್ಲಿ ಬೇರೂ
ಕೊಂಡಿದ್ದಂತೆ ಕಾಣುತ್ತದೆ. ನೃತ್ಯಗಳಲ್ಲಿ, ಆಟಪಾಟಗಳಲ್ಲಿ, ಕರಡಿ, ಕುದು
ತೋಳ ಮುಂತಾದ ಪ್ರಾಣಿಗಳಂತೆಯೋ ಅಥವಾ ಪಕ್ಷಿಗಳಂತೆಯೋ ವೇಷ ಧ
ಅವುಗಳ ಕಂಠವನ್ನು ಇಲ್ಲವೆ ನಡಗೆಯನ್ನು ಅನುಕರಿಸುವುದು ಎಲ್ಲಾ ಜನಾ
ಗಳಲ್ಲಿಯೂ ಉಂಟು. ಶಿಲ್ಪ, ಚಿತ್ರಕಲೆ, ಇವುಗಳನ್ನು ಪ್ರಾಕೃತಿಕ ಪದಾರ್ಥಗ
ಅಥವಾ ಮಾನವ ಜೀವನದ, ಅನುಕರಣವೆನ್ನಬಹುದು. ಕವಿಯೂ ಹೀಗೆಯ
ಮಾನವಜೀವನವನ್ನನುಕರಿಸುವ—ಛಂದೋಬದ್ಧವಾದ ಭಾಷೆಯಲ್ಲಿ ಕೇ
ಮಾಡುವ—ಒಬ್ಬ ಕಸಬುದಾರ. ಆದರೆ ಇಲ್ಲಿ ಒಂದು ವಿಶೇಷವುಂಟು. ಪ್ರ
ಯೊಬ್ಬನೂ ತನಗನುಗುಣವಾದ ಒಂದೇ ಕೆಲಸವನ್ನು ಮಾಡಿದರೆ ಅದರಲ್ಲಿ ಹೆ
ಪರಿಶ್ರಮ ಪಡೆಯುವಂತೆ, ಕವಿಯೂ ಒಂದೇ ಗುಣ ಅಥವಾ ಭಾವವನ್ನು ಅನು
ಸಿದರೆ ಅವನ ಕಾವ್ಯ ಉತ್ತಮವಾದುದಾಗುವುದು. ಅದುಬಿಟ್ಟು ಒಳ್ಳೆಯದ
ಕೆಟ್ಟದೆಂಬ ಭೇದವಿಲ್ಲದೆ ಸಕಲವಿಧವಾದ ಪಾತ್ರಗಳನ್ನೂ ಕವಿ ನಾಟಕದ

ತರುವುದರಿಂದಲೂ ಸರಳವಾದ, ಪುರಪಾಲಕರಿಗೆ ಬೇಕಾದ ಶಾಂತಿಶೌರ್ಯಗಳೆಂಬೆರಡು ಪ್ರಧಾನ ರಸಗಳನ್ನು ಮಾತ್ರ ಉದ್ಬೋಧಿಸುವ ಸಂಗೀತವನ್ನು ಬಿಟ್ಟು, ನಾನಾವಿಧದ ಭಾವ ರಾಗಗಳನ್ನುದ್ರೇಕಿಸುವ ಮಿಶ್ರಜಾತಿಯ ಸಂಗೀತವನ್ನೂ ಶೈಲಿಯನ್ನೂ ಉಪಯೋಗಿಸುವುದರಿಂದಲೂ, ಪ್ರೇಕ್ಷಕರ ಮನಸ್ಸು ಕಳವಳಗೊಂಡು ಯಾವ ಗುಣವನ್ನು ಅನುಕರಿಸಬೇಕು, ಯಾವುದನ್ನು ಬಿಡಬೇಕು ಎಂಬ ಸಂದೇಹದಲ್ಲಿ ಅವರ ಆತ್ಮ ಸಿಲುಕಿಬೀಳುತ್ತದೆ. ಈ ಕಾರಣದಿಂದ ಪ್ರಹಸನ ರುದ್ರನಾಟಕಗಳೆರಡನ್ನೂ ತ್ಯಜಿಸಿ ಸದ್ಗುಣಗಳನ್ನೇ ಬೋಧಿಸುವ ವೀರ ಕಾವ್ಯಗಳನ್ನು ಮಾತ್ರ (epic) ಇಟ್ಟುಕೊಳ್ಳಬೇಕೆಂದು ಪ್ಲೇಟೋ ಅಭಿಪ್ರಾಯಪಡುತ್ತಾನೆ. ಇಲ್ಲಿಯವರೆಗೂ ಅನುಕರಣವೆಂದರೆ ನಾವು ಮೆಚ್ಚುವ ಭಾವಗುಣಶೈಲಿಯನ್ನೇ ನಮ್ಮ ಜೀವನದಲ್ಲಿಯೂ ಅನುಸರಿಸಿ ನಮ್ಮಾತ್ಮವನ್ನೂ—ಶೀಲವನ್ನೂ—ತದನುಗುಣವಾಗಿಯೇ ಸುಧಾರಿಸುವುದೆಂದು ಪ್ಲೇಟೋ ಅರ್ಥಮಾಡಿದನು. ಆಗಿನ ಕಾಲದಲ್ಲಿ ರೂಢಿಯಲ್ಲಿದ್ದ ಕಾವ್ಯಗಳು ಸಚ್ಛೀಲದ ಅನುಕರಣಕ್ಕೆ ಅನುಕೂಲವಾಗಿರಲಿಲ್ಲವಾದುದರಿಂದ ಪ್ಲೇಟೋ ಅವುಗಳನ್ನೆಲ್ಲಾ ದೂರಮಾಡಬೇಕೆಂದನು.

"ಆದರ್ಶರಾಜ್ಯ," ಎಂಬ ಸಂವಾದದ ಉತ್ತರಾರ್ಧದಲ್ಲಿ (ಹತ್ತನೆಯ ಪುಸ್ತಕದಲ್ಲಿ) ಅನುಕರಣದ ಅರ್ಥವೇ ವ್ಯತ್ಯಾಸವಾಗುವುದು. ಜನತೆಯ ಮೇಲೆ ಕಲೆಯಿಂದುಂಟಾಗುವ ನೈತಿಕ ಸಂಸ್ಕಾರದ ವಿಚಾರವೇ ಇಲ್ಲಿ ಬರುವುದಿಲ್ಲ—ಕಲೆಯ ಸ್ವಭಾವ, ಸ್ವರೂಪ, ಈ ವಿಚಾರವಾದ ತಾತ್ವಿಕ ಅಥವ ಆಧ್ಯಾತ್ಮಿಕ ಪ್ರಶ್ನೆಯೇ ಪ್ರಧಾನವಾಗುವುದು. ಪ್ಲೇಟೋವಿನ ಸ್ಥಿತಿ ತತ್ವಶಾಸ್ತ್ರದ (ontology, metaphysics) ಪ್ರಕಾರವಾಗಿ ಸಾರ್ವತ್ರಿಕಗಳಾದ ಸಾಮಾನ್ಯಗಳೇ ಸತ್ಯ ಸತ್ತನ್ನುಳ್ಳುವು, ಪ್ರತ್ಯೇಕಗಳು ಪರಿಣಾಮಹೊಂದುವ, ದೋಷಭರಿತವಾದ ಮಾಯಾಸತ್ತನ್ನುಳ್ಳುವು. ಸಾಮಾನ್ಯ ಚಿಂತನೆಯೇ ಮೋಕ್ಷಸಾಧನವೆಂದು ನಂಬಿದ್ದ ಪ್ಲೇಟೋ ಕಲೆಯನ್ನು ನಿರಾಕರಿಸಿದ್ದು ಆಶ್ಚರ್ಯವೇನೂ ಇಲ್ಲ. ಏಕೆಂದರೆ ಕಲೆ ಪ್ರತ್ಯೇಕವನ್ನು ಅವಲಂಬಿಸಿರತಕ್ಕದು, ಪ್ರತ್ಯೇಕದ ಹೊಕ್ಕಳು ಹುರಿಯಿಂದ ಪೋಷಿಸಲ್ಪಡತಕ್ಕದು. ಮೇಲಿನ ತುದಿಯಲ್ಲಿ—ಅಗ್ರಸ್ಥಾನದಲ್ಲಿ—ಸಾರ್ವತ್ರಿಕವಾದ ಹಾಸಿಗೆ ಅಥವಾ ಮಂಚವೆಂಬ ಸಾಮಾನ್ಯವಿದೆಯೆಂದಿಟ್ಟುಕೊಳ್ಳೋಣ. ಇದಕ್ಕಿಂತ ಕೆಳಗೆ ಆ ಸಾಮಾನ್ಯದ ಮಾದರಿಯ ಮೇಲೆ ಬಡಗಿ ತಯಾರುಮಾಡಿದ ಮರದ ಪ್ರತ್ಯೇಕ ಮಂಚವಿದೆ; ಎಲ್ಲಕ್ಕಿಂತಲೂ ಕೆಳಗೆ ಈ ಪ್ರತ್ಯೇಕದ ಮಾದರಿಯನ್ನನುಸರಿಸಿ ಚಿತ್ರಗಾರನು ಬರೆದಿರುವ ಚಿತ್ರದ ಮಂಚವಿದೆ. (ಸಾಮಾನ್ಯಗಳು ಹೀಗೆ ಪ್ರತ್ಯೇಕಗಳಿಂದ ಬೇರೆಯಾಗಿರುವುವೆಂದು ಪ್ಲೇಟೋವಿನ ಅರ್ಥವಲ್ಲ. ಭಾವ ವಿವರಣೆಯ ಸಲುವಾಗಿ ಹೀಗೆ ಹೇಳಬಹುದಷ್ಟೆ). ಪ್ರತ್ಯೇಕವೇ ಸಾಮಾನ್ಯದ ಅನುಕರಣ (ಇಲ್ಲಿ ಅನುಕರಣವೆಂದರೆ ಇದ್ದುದನ್ನು ಇದ್ದಹಾಗೆ 'ನಕಲು' ಮಾಡುವುದೆಂದು ತಿಳಿಯಬೇಕು), ಇನ್ನು ಕಲೆ ಇಂತಹ ನಕಲಿನ ನಕಲು,

ಅನುಕರಣದ ಅನುಕರಣ. ಅಂದಮೇಲೆ ಕಲೆ ಸತ್ಯಸತ್ವಕ್ಕಿಂತಲೂ ಮ
ಮೆಟ್ಟಲು ಕೀಳಾದ ಸತ್ವವನ್ನುಳ್ಳದು, ಎಂದು ಹೇಳಿದಹಾಗಾಯಿತು. ಪ್ರತ್ಯೇ
ಸಾಮಾನ್ಯವನ್ನು ವಿಕ್ಷೇಪಗೊಳಿಸುತ್ತದೆ, ಇನ್ನು ಕಲೆ ಇಂಥ ವಿಕ್ಷೇಪದ
ವಿಕ್ಷೇಪ; ಏಕೆಂದರೆ ಚಿತ್ರಗಾರನು ಪದಾರ್ಥವನ್ನು ಇರುವ ಹಾಗೆ ಚಿತ್ರಿಸು
ದಿಲ್ಲ, ತನ್ನ ಮನಸ್ಸಿಗೆ—ಯಾವುದೊ ಒಂದು ವಿಶೇಷವಾದ ದೃಷ್ಟಿಗೆ—ಅ
ಕಂಡುಬರುವಂತೆ ಚಿತ್ರಿಸುತ್ತಾನೆ. ಅಲ್ಲದೆ ಕಾವ್ಯ ಮನುಷ್ಯನ ಜ್ಞಾನವ
ವೃದ್ಧಿಗೊಳಿಸುವುದಿಲ್ಲ; ಐಂದ್ರಿಯಕಸತ್ತ್ವನ್ನುಳ್ಳ ಕಲ್ಪನಾಶಕ್ತಿಯನ್ನೂ ಕಾ
ವಾಸನೆಗಳನ್ನೂ ಪ್ರಕೋಪಗೊಳಿಸಿ ಆತ್ಮಕ್ಕೆ ಅಶಾಂತಿಯನ್ನು ತರುತ್ತದೆ. ಆದ
ರಿಂದ ದೇವತೆಗಳನ್ನೂ ಸತ್ಪುರುಷರನ್ನೂ ಹೊಗಳುವ ಸ್ತೋತ್ರಗಳನ್ನುಳಿದು ಮ
ಯಾವ ವಿಧವಾದ ಕಾವ್ಯಕಲೆಗಳೂ ಆದರ್ಶ ರಾಜ್ಯದಲ್ಲಿ ತಲೆಯೆತ್ತಕೂಡದು.

ಕಾವ್ಯವೇ ಅನುಕರಣವೆಂದು ಹೇಳಿದ ಮೇಲೆ ಸ್ತೋತ್ರರೂಪವಾದ ಕಾವ್ಯ
ಅನುಕರಣವಾಯಿತಲ್ಲವೆ? ಅದನ್ನು ಮಾತ್ರ ಪ್ಲೇಟೋ ಹೇಗೆ ಒಪ್ಪಿದನು? ಇದನ್ನ
ಪರಿಶೀಲಿಸಿದರೆ ಪ್ಲೇಟೋವಿನಲ್ಲಿ ಮೊದಲಿಂದ ಕೊನೆಯವರೆಗೂ ಒಂದೇ ವಿಧವಾ
ಅಭಿಪ್ರಾಯವನ್ನು ಹುಡುಕುವ ಪ್ರಯತ್ನ ಮಾಡುವುದು ಹುಚ್ಚುತನವೆಂ
ಕಾಣುತ್ತದೆ. ಪ್ರಾಯಶಃ ಆತನು ಅನುಕರಣದಲ್ಲಿ ಯಥಾರ್ಥ ಅನುಕರ
ಅಯಥಾರ್ಥ ಅನುಕರಣವೆಂದು ಭೇದಮಾಡಿರಬೇಕು. ಯಾವ ಕವಿ ಸಾಮಾ
ಗಳ ಪ್ರಭೆಯನ್ನು ಕಣ್ಣಾರೆ ಕಂಡು, ಸತ್ಯಸ್ವರೂಪವನ್ನು ತಾನೇ ಮನಗಂ
ಸೌಜನ್ಯದ ಗುಣಕರ್ಮಗಳನ್ನೆಲ್ಲಾ ತನ್ನ ಕಾವ್ಯದಲ್ಲಿ ಅನುಕರಣ ಮಾಡುವು
ಜೊತೆಗೆ, ಅವುಗಳನ್ನು ತನ್ನ ದಿನಜೀವನದಲ್ಲಿಯೇ ಅಭ್ಯಾಸಮಾಡಿ ಅನುಕ
ತ್ತಾನೋ, ಆ ಕವಿಯ ಅನುಕರಣವನ್ನು ಯಥಾರ್ಥ ಅನುಕರಣವೆಂದು ಕ
ಬಹುದು. ಸ್ಟ್ರಾಬೋ, ಮಿಲ್ಟನ್ ಇಂಥ ಉದ್ದಾಮಕವಿಗಳೂ ಕೂಡ
ಅರ್ಥವನ್ನೇ ಅನುಮೋದಿಸಿರುವರು: ಸದ್ಗುಣಿಯೇ ಸತ್ಕಾವ್ಯವನ್ನು ಬರೆ
ಬಲ್ಲನು. ಇಂಥ ಸತ್ಯದ ಅರಿವಿಲ್ಲದೆ, ಸ್ವಂತ ಜೀವನದಲ್ಲಿ ಸತ್ಯದ ಅನುಭವವಿಲ್ಲ
ಕೇವಲ ಅಭಿಮತ—ಅಜ್ಞಾನ—ಪೂರ್ವಕವಾಗಿ ಬರೆದ ಕಾವ್ಯ ಅಯಥಾ
ಅನುಕರಣವೆನಿಸುವುದು. ಹೋಮರ್ ಮುಂತಾದ ಕವಿಗಳನ್ನೆಲ್ಲಾ ಪ್ಲೇಟೋ
ಅಯಥಾರ್ಥ ಅನುಕರಣದಲ್ಲಿ ಸೇರಿಸಿದನು. ಈ ದೃಷ್ಟಿಯಿಂದ ನಾವು ನೋಡಿದ
ಪ್ಲೇಟೋವಿನಲ್ಲಿ ಅಸಮಂಜಸತೆ ಇಲ್ಲವೆಂದು ಕಾಣುವುದಲ್ಲದೆ ಆತನು ಖ
ಖಂಡನಾಪ್ರಿಯನಲ್ಲ, ರಚನಾತ್ಮಕ ವಿಮರ್ಶಕನೆಂದು ತೋರುವುದು. ಕವಿಯೇ
ದವನು ತಾತ್ವಿಕನಂತೆಯೇ ಅವಿಚ್ಛಿನ್ನವಾಗಿ ಸುಧಾರಣೆ ಹೊಂದುತ್ತಿರುವ
ಶೀಲಯುತ ವ್ಯಕ್ತಿತ್ವವನ್ನೇ—ಆತ್ಮೀಯತೆಯನ್ನೇ—ಪ್ರದರ್ಶಿಸಲು ಶಕ್ತನಾ
ಬೇಕು. ಸತ್ಯವನ್ನೂ ಸೌಂದರ್ಯವನ್ನೂ ಒಂದುಗೂಡಿಸುವ ಇಂಥ ದಿವ್ಯ ಕಾ
ವನ್ನು ಆದರ್ಶರಾಜ್ಯದ ಕವಿಗಳು ಬರೆಯಲು ಶಕ್ತರಾಗಿರುವರು.

ಪರಂತು ಆದರ್ಶರಾಜ್ಯದಲ್ಲಿ ಕವಿಗಳು—ಕಲಾವಿದರು—ಸರ್ವಥಾ ಇರಲಾಗದೆಂದು ಪ್ಲೇಟೋ ಹೇಳಲಿಲ್ಲ. ಅವರ ಕಲಾಕೃತಿಗಳು ಸಚ್ಛೀಲವನ್ನು ಬೋಧಿಸುವಹಾಗಿದ್ದರೆ ಅವರು ನಿಲ್ಲಬಹುದು. "ದಿ ಲಾಸ್" ಅಥವಾ "ಶಾಸನಗಳು" ಎಂಬ ನಾಮಾಂಕಿತದಿಂದ ಬರೆದ ಕಡೆಯ ಸಂವಾದದಲ್ಲಿಯೂ ಪ್ಲೇಟೋ ಸಾಧುತ್ವ ಸಮಿತಿಯ (Censorship) ನಿಬಂಧನೆಗಳಿಗೆ ಒಪ್ಪುವಹಾಗಿದ್ದರೆ ಕವಿಗಳು (ರುದ್ರನಾಟಕದವರೇ ಆಗಲಿ, ಪ್ರಹಸನದವರಾಗಲಿ) ರಾಜ್ಯದಲ್ಲಿರಬಹುದೆಂದು ಹೇಳುತ್ತಾನೆ. ಒಟ್ಟಿನಲ್ಲಿ ಪ್ಲೇಟೋ ಕಲೆಗೆ ಸ್ವತಂತ್ರ ಸ್ಥಾನವನ್ನು ಕೊಡದಿದ್ದರೂ ಅದಕ್ಕೆ ಬಲು ಘನವಾದ ಉದ್ಯೋಗವನ್ನೇ ನಿಯಮಿಸುತ್ತಾನೆ. ಪ್ಲೇಟೋ ಕಲೆಯನ್ನು ನಿಕೃಷ್ಟವಾಗಿ ಕಾಣುತ್ತಾನೆಂಬ ಭಾವ ಶುದ್ಧ ತಪ್ಪು: ಆಧ್ಯಾತ್ಮಿಕ ದೃಷ್ಟಿಯಲ್ಲಿ ಅದು ತತ್ವಜ್ಞಾನದ ಮೆಟ್ಟಲಿಗೆ ಹತ್ತಲಾರದಾದರೂ ಜನಜೀವನದಲ್ಲಿ—ಸಮಾಜಜೀವನದಲ್ಲಿ—ವಿದ್ಯಾಭ್ಯಾಸಕ್ರಮದಲ್ಲಿ—ಅದು ಹೊಂದಿರುವ ಪ್ರಾಮುಖ್ಯತೆಯನ್ನು ಮತ್ತೆ ಯಾವ ಶಿಕ್ಷಣವಿಭಾಗವೂ ಹೊಂದಿರುವುದಿಲ್ಲ. ಕಲೆಯಿಂದಲೇ ಆತ್ಮಪ್ರಕರ್ಷವುಂಟಾಗಬೇಕೆಂದು ಆತನ ನಂಬಿಕೆ; ದೇಹಿಯಾದ ಆತ್ಮನ ಶಿಕ್ಷಣದಲ್ಲಿ ಪ್ರಥಮ ಮತ್ತು ಪ್ರಧಾನ ಭಾಗ ಸಂಗೀತದ್ದು (ಸಂಗೀತದಲ್ಲಿ ಸಾಹಿತ್ಯವೂ ಸೇರಿರುವುದು), ಎರಡನೆಯ ಭಾಗ ಅಂಗಸಾಧನೆಗೆ ಸೇರಿದುದು. ಲಾವಣ್ಯ ಸೌಂದರ್ಯಗಳನ್ನು ಬೀರುವ ಕಲಾಪ್ರದರ್ಶನಗಳಿಂದೊಪ್ಪುವ ಸನ್ನಿವೇಶದಲ್ಲಿ ಯುವಕರು ವಾಸಮಾಡಿದ್ದೇ ಆದರೆ, ಅವರು ಆರೋಗ್ಯಕರವಾದ ಪ್ರದೇಶದಲ್ಲಿ ವಾಸಮಾಡುವರು; ಪ್ರತಿಯೊಂದು ದಿಕ್ಕಿನಿಂದಲೂ ಹರಿದುಬರುವ ಶುಭ್ರವಾದ ಶುಭವಾದ ಜಲವನ್ನು ಪಾನಮಾಡುವರು; ಹಿತಕರವಾದ ಪ್ರದೇಶಗಳಿಂದ ಆರೋಗ್ಯವನ್ನು ಬೀಸುವ ಶೀತಲ ಮಾರುತನಂತೆ ಉತ್ತಮ ಕಲಾಕೃತಿಗಳಿಂದ ಹೊರಸೂಸಿ ಪಸರಿಸುವ ಸೌಜನ್ಯ ತರಂಗಗಳು ಅವರ ಕರ್ಣನಯನಗಳನ್ನು ಚುಂಬಿಸುವುವು: ಇದರಿಂದ ಅವರು ತಮಗೆ ಗೋಚರವಿಲ್ಲದಂತೆಯೇ ಕ್ರಮೇಣ ಸಮತಾಳ, ಸಮುಗಟ್ಟು, ಕ್ರಮ, ಸಮೀಚೀನತೆ ಮೊದಲಾದ ಭಾವಗಳನ್ನು ತಮ್ಮ ಆತ್ಮನಲ್ಲೇ ಆವಾಹನೆ ಮಾಡಿಕೊಂಡು ಅವುಗಳಲ್ಲಿರುವ ಚಿತ್ಪ್ರಕಾಶದ ನಿಜವಾದ ಸೌಂದರ್ಯವನ್ನು ಪ್ರೀತಿಸಿ ತಾವದನ್ನು ಹೋಲಲು, ಅದರೊಡನೆ ಏಕೀಭವಿಸಲು, ಪ್ರಯತ್ನಪಡುವರು. ಜನತೆಯ ಮೇಲೆ ಕಲೆಯಿಂದ ಇಷ್ಟು ಘನತರವಾದ ಸಂಸ್ಕಾರವುಂಟಾಗಬಹುದು, ಎಂದು ಪ್ಲೇಟೋ ನಂಬಿರುವಲ್ಲಿ ಕಲೆಯನ್ನೇಕೆ ಆತನು ಶತ್ರುವನ್ನಾಗಿ ಭಾವಿಸುತ್ತಾನೆ? ಕಲೆಯನ್ನೇ ಅಲ್ಲ—ಸಾಮಾಜಿಕ ಸುಧಾರಣೆಗೆ ನೆರವಾಗದ, ನೀತಿನಿಯಮಗಳಿಗೆ ನಿಲುಕದ, ಕಟ್ಟಿಲ್ಲದ ಕಲೆಯನ್ನು ಆತನು ಕಂಡು ಹೆದರುತ್ತಾನೆ ಅಷ್ಟೆ.

ಸ್ವಭಾವತಃ ತಾನೆ ಕವಿ. ಹೇರಳವಾಗಿ ಪದ್ಯಗಳನ್ನು ಬರೆದಿದ್ದನೆಂದು ಡಯೋಜನೀಸ್ ಲಾರ್‌ಷಿಯಸ್ ಎಂಬ ಗ್ರಂಥಕರ್ತನು ನಮಗೆ ತಿಳಿಸುತ್ತಾನೆ.

ಇದರ ನಿಜಾಂಶ ಹೇಗಿದ್ದರೂ ಕಾವ್ಯವನ್ನು ತಾನು ಬಹುವಾಗಿ ಪ್ರೀತಿಸುತ್ತೇನೆಂ
ತಾನೇ ಹೇಳಿಕೊಂಡಿರುತ್ತಾನೆ*, ಮತ್ತು ನಾಟಕರೂಪದ ಹಾಗೂ ಪುರಾಣ
ರೂಪದ ಸಾಹಿತ್ಯವನ್ನು ಇವನಷ್ಟು ಅಂದವಾದ ಶೈಲಿಯಲ್ಲಿ ಬರೆದವರು ಪ
ಯಾರೂ ಇಲ್ಲವೆಂದೇ ಹೇಳಬಹುದು. ಇಷ್ಟಾದರೂ ಕಾವ್ಯಕಲೆಗಳ ವಿಷಯದ
ಪ್ಲೇಟೋ ಭ್ರಾಂತಿಮೋಹಿತನೆಂದೂ ಪೈತ್ಯಹಿಡಿದವನೆಂದೂ ಕೆಲವರು ವಿಮರ್ಶಕ
ಹೇಳಿರುವರು. ಬುದ್ಧಿಬಲವನ್ನೂ ಭಾವಬಲವನ್ನೂ ತ್ರಾಸಿನಲ್ಲಿ ತೂಗಿ ಬು
ಬಲವೇ ಹೆಚ್ಚೆಂದು ತೀರ್ಮಾನಮಾಡಿದ ಬುದ್ಧಿ ಪ್ರಮಾಣವಾದಿಯನ್ನು (Ratio
list) ಭ್ರಾಂತಿಮೋಹಿತನೆಂದು ಕರೆಯುವುದು ಎಷ್ಟುಮಟ್ಟಿಗೆ ಸಮಂಜಸವ
ನಾವು ಕಾಣೆವು. ಕಲೆಯೇ ಆದ್ಯಂತಜ್ಞಾನವೆಂದು ಘೋಷಿಸುವವರ ಗುಂಪಿನ
ಪ್ಲೇಟೋ ಸೇರಿಲ್ಲ, ನಿಜ; ಆದರೂ ಜ್ಞಾನದ ಆದಿ ಅದಾಗಬಹುದೆಂದು ಅವನ
ಒಪ್ಪುತ್ತಾನೆ. "ಶಾಸನಗಳು" ಎಂಬ ಸಂವಾದದಲ್ಲಿ ರುದ್ರನಾಟಕ ಕವಿಗಳ
ಶಾಸನಕರ್ತರು ಈ ಭರವಸೆಯನ್ನು ಕೊಡುತ್ತಾರೆ: "ನಾವೇ ಪ್ರಪಂಚದ
ಅತ್ಯಂತ ಸುಂದರವಾದ ನಾಟಕದ ಕವಿಗಳು, ಏಕೆಂದರೆ ನಮ್ಮ ರಾಜ್ಯ ಅತ್ಯಂ
ಸುಂದರವಾದ ಜೀವನದ ಅನುಕರಣ. ನಿಮ್ಮ ಕವಿತೆಗಳು ನಮ್ಮ ಕಾವ್ಯದಷ್ಟು
ಚೆನ್ನಾಗಿವೆ, ಅಥವಾ ಇನ್ನೂ ಉತ್ತಮವಾಗಿವೆ, ಎಂದು ತೋರಿಸಬಲ್ಲವರಾದ
ನಿಮಗೆ ಒಂದು ಹಿಮ್ಮೇಳವನ್ನು ಕೊಡುತ್ತೇವೆ".

ಅನುಕರಣವೆಂದರೆ ವಸ್ತುವಿನ 'ನಕಲು' ಅಥವಾ 'ಪ್ರತಿಕೃತಿ' ಮಾಡ
ವುದು, ಎಂದು ಪ್ಲೇಟೋ ಭಾವಿಸಿದುದು ತಪ್ಪು. ಹಾಗಿಟ್ಟುಕೊಂಡರೂ ಅ
ಕನಿಷ್ಠವೆಂದೇಕೆ ಹೇಳಬೇಕು? ಚಿತ್ರದಲ್ಲಿದ್ದ ದ್ರಾಕ್ಷಿ ಗೊಂಚಲನ್ನು ಕಂಡು ಹಕ್ಕಿ
ಗಳು ಭ್ರಮಿಸಿ ಬಂದು ಕುಟುಕಿದುವಂತೆ! ಆದರೆ ರಸಿಕರು—ವಿದ್ಯಾವಂತರು
ಯಾವಾಗಲೂ ಅನುಕರಣವೆಂದರೆ ಪ್ರಕೃತಿಯಲ್ಲಿ ಅಂತರ್ಭೂತವಾಗಿರುವ ಧ್ಯೇಯ
ವನ್ನು—ರೂಪ ಪೂರ್ಣವನ್ನು—ಪ್ರದರ್ಶಿಸುವುದೆಂದೇ ತಿಳಿದುಕೊಂಡಿರುತ್ತಾರೆ
ಕಲೆಯನ್ನೂ ನೀತಿಯನ್ನೂ ಕಲಸುಮೇಲೋಗರಮಾಡಿ ನೀತಿಪ್ರತಿಪಾದನಮಾಡಬಲ್ಲ
ಕಲೆಯೇ ಕಲೆಯೆಂದು ಹೇಳಿದುದು ಪ್ಲೇಟೋ ಮಾಡಿದ ಎರಡನೆಯ ತಪ್ಪು. ಈ
ವಿಷಯದಲ್ಲಿ ಆಧುನಿಕ ಜ್ಞಾನಿಯಾದ ಟಾಲ್‌ಸ್ಟಾಯ್ ಎಂಬುವನು ಪ್ಲೇಟೋನಿ
ಗಿಂತ ಹೆಚ್ಚು ದೋಷಿ. ವಿಜ್ಞಾನದಂತೆಯೇ ಕಲೆಯೂ ಮಾನವನ ಜೀವನಕ್ಕೂ
ಪ್ರಗತಿಗೂ ಪ್ರಾಮುಖ್ಯವಾದುದೆಂದು ತಿಳಿದಿದ್ದರೂ ಕೂಡ ಈತನು ಸಾಹಿತ್ಯವನ್ನು
ನೀತಿಯ ಮಾನದಂಡದಿಂದ ಅಳೆಯಬೇಕೆನ್ನುವ ವಿಪರೀತವನ್ನು ಮಾತ್ರ ಬಿಡಲಿಲ್ಲ
ಕಲೆ ಮಾನವನ ಧರ್ಮಕ್ಕೆ ಅನುಕೂಲವಾಗಿರಬೇಕೆಂದು ಈತನು ಬಗೆದು ತಜ್ಞ
ಕಾಲದ ಕಲಾಕೃತಿಗಳೊಂದೂ ಈ ಧ್ಯೇಯವನ್ನು ಸಾಧಿಸುವುದಿಲ್ಲವೆಂದೇ

* "ಆದರ್ಶರಾಜ್ಯ": ೫೯೫ ಬಿ (ಡೇವೀಸ್ ಮತ್ತು ವಾಘನ್)

ಸಾರಿದನು. ಕಲೆಯಿಂದ ನಾವು ಪಡೆಯುವ ಆನಂದವನ್ನು ಲೆಕ್ಕಿಸದೆ ಅದನ್ನು ಹೀಯಾಳಿಸಿದುದು ಪ್ಲೇಟೋವಿನ ಮೂರನೆಯ ತಪ್ಪು. ಸುಖದ ವಿಷಯದಲ್ಲಿ ಪ್ಲೇಟೋವಿನ ಅಭಿಪ್ರಾಯವನ್ನು ನಾವು ಪರಿಶೀಲಿಸಿದ್ದೇವೆ—ಅದನ್ನು ಸಹಿಸುವುದೇ ಕಷ್ಟ ಅವನಿಗೆ: ಅನೇಕವೇಳೆ ಅದನ್ನು ತಿರಸ್ಕರಿಸಿ ದೂಷಿಸುತ್ತಾನೆ. ಆದರೆ ರಸಾನುಭವದ ಶುದ್ಧ ಆನಂದ ಸುಖಕ್ಕಿಂತಲೂ ಬೇರೆಯಾಗಿರಬಹುದೆಂದು ಆತನ ಮನಸ್ಸಿಗೇ ಹೊಳೆಯುವುದಿಲ್ಲ. ಅರಿಸ್ಟಾಟಲನು ಈ ಆನಂದವನ್ನೇ ತನ್ನ ಕಲಾವಿಮರ್ಶೆಯ ತಳಹದಿಯನ್ನಾಗಿ ಮಾಡಿದನು.

ಪ್ಲೇಟೋವಿನಲ್ಲಿ ಈ ಕೊರತೆಗಳನ್ನೆಲ್ಲಾ ನಾವು ಧಾರಾಳವಾಗಿ ಒಪ್ಪಬಹುದು. ಆದರೂ ಇಷ್ಟು ಹೇಳಿದ ಮೇಲೆಯೂ ಕಾವ್ಯಪ್ರಿಯರಾಗಲಿ ಕಲಾವಿಮರ್ಶಕರಾಗಲಿ ಪ್ಲೇಟೋವಿನ ತತ್ವಶಾಸ್ತ್ರವನ್ನಾಗಲಿ ಕಲಾವಿಮರ್ಶೆಯನ್ನಾಗಲಿ ಅಲ್ಲಗಳೆಯುವ ಹಾಗಿಲ್ಲ. ಕಲೆಯನ್ನು ಸಂಪೂರ್ಣವಾಗಿ ನೀತಿಗೆ ಅಧೀನವನ್ನಾಗಿ ಮಾಡಿದುದರಲ್ಲಿ ಪ್ಲೇಟೋ ಪಕ್ಷಪಾತಿಯಾಗಿ ಕಾಣಬಹುದು. ಆದರೂ ಕಲೆಗೂ ನೀತಿಗೂ ಸಂಬಂಧವೇ ಇಲ್ಲವೆಂದು ನಂಬುವ ನಮ್ಮ ಕಾಲದವರೆಲ್ಲರೂ ಪ್ಲೇಟೋವಿನ ಮಾತನ್ನು ಸ್ಮರಣೆಗೆ ತಂದುಕೊಳ್ಳಬೇಕು: "ಜೀವನವೇ" ಅತ್ಯುತ್ತಮವಾದ ಮತ್ತು ಸುಂದರತಮವಾದ ನಾಟಕ. ಅದರ ಕವಿಗಳಾದ ಅಥವಾ ಪಾತ್ರಧಾರಿಗಳಾದ ನಾವು ಅಯೋಗ್ಯವಾದ ಅನುಕರಣಕ್ಕೆ ಅಥವಾ ಪ್ರದರ್ಶನಕ್ಕೆ ಸಮ್ಮತಿಪಡಕೂಡದು. "ಯಾರೇ ಆಗಲಿ ಅತಿಶಯವಾದ ರೀತಿಯಲ್ಲಿ ಸುಜನನಾಗಿರದಿದ್ದರೆ ಅತಿಶಯವಾದ ರೀತಿಯಲ್ಲಿ ಸುಕವಿಯಾಗಿರಲಾರ" ಎಂಬ ಷೆಲ್ಲಿಯ (ಪ್ಲೇಟೋವಿನ ಕಲಾವಿಮರ್ಶೆಯನ್ನು ಖಂಡಿಸುವ ಸಂದರ್ಭದಲ್ಲಿಯೇ ಆಡಿದ) ಮಹಾವಾಕ್ಯವನ್ನು ಅವರು ಮರೆಯಕೂಡದು. ಈ ಮಾತಿನ ಅರ್ಥವನ್ನು ಹೇಳಬೇಕಾದರೆ, ಸೌಜನ್ಯತೆಯೇ ಶ್ರೇಷ್ಠಕಲೆಯ ಆಧಾರ, ಎಂದು ಹೇಳಬೇಕಲ್ಲದೆ, ಆಧುನಿಕರಲ್ಲಿ ಕೆಲವರು ಹೇಳುವಂತೆ ಕೇವಲ ಕಲಾದೃಷ್ಟಿಯಲ್ಲಿ ಅಗ್ಗಳಿಕೆ ಪಡೆದ ಕಲೆಯೆಲ್ಲವೂ ಸ್ವತಏವ ಒಳ್ಳೆಯದೆಂದು ಹೇಳಲಾಗದು. ಕಲೆಗೂ ನೀತಿಗೂ ಸಾಮಾನ್ಯ ನೀತಿಬೋಧಕರೂ ಸಾಧಾರಣ ಕಲೋಪಾಸಿಗಳೂ ಅರಿಯಲಾಗದ ಮೇಲ್ಮಟ್ಟದಲ್ಲಿ ನಿಕಟಸಂಬಂಧ ಇದ್ದೇ ಇರುವುದು. ಇದನ್ನು ಮರೆತು ಕಲೆಗೂ ನೀತಿಗೂ ಸಂಬಂಧವೇ ಇಲ್ಲವೆಂದು, ಅಥವಾ ಅತಿಶಯದ ಕಲೆ ಎನಿಸಿಕೊಂಡದ್ದೆಲ್ಲಾ ಧರ್ಮಸಾರಭೂತವಾದ ಕಲೆ ಎಂದು, ಹೇಳಿದರೆ ಅದು ತಪ್ಪಾಗುವುದು. ಕಲಾದೃಷ್ಟಿಯಲ್ಲಿ ಉತ್ತಮ ಸಂಗೀತಗಾರನೆನಿಸಿಕೊಂಡವನೊಬ್ಬನು ಹೇಯವಾದ ಜೀವನವನ್ನು ನಡಸುತ್ತಿರುವನೆಂದೂಹಿಸೋಣ. ಇಲ್ಲಿ ಅವನ ಕಲೆ ನಿಜವಾಗಿಯೂ ಶ್ರೇಷ್ಠವಾದ ಕಲೆಯಲ್ಲ ಎಂದು ಹೇಳೋಣವೇ, ಅಥವಾ ನಮ್ಮ ಧರ್ಮಜೀವನದ ದೃಷ್ಟಿ ಸಂಕುಚಿತವಾದದ್ದು ಎಂದು ತಿಳಿಯೋಣವೆ? ಇಂತಹ ಸಂದರ್ಭಗಳಲ್ಲಿ ನಾವು ಸಾಕ್ರಟೀಸನಲ್ಲಿ ಕಂಡ ಸೌಂದರ್ಯಜಿಜ್ಞಾಸೆಯನ್ನು ಮನನಮಾಡುವುದು

ಒಳ್ಳೆಯದು. ಇದೂ ಹೋಗಲಿ, ಉಳಿದ ಮಾತೆಲ್ಲವೂ ಹೋಗಲಿ.; ಯಾವ ಶ್ರೇಷ್ಠ ಕವಿ ತಾನೆ ಪ್ಲೇಟೋವಿನ ಚಿತ್ರಪ್ರಧಾನವಾದವನ್ನು—ಸಾಮಾನ್ಯವಾದವನ್ನು—ಸತ್ಯಸೌಂದರ್ಯ ಸೌಜನ್ಯ ಮೊದಲಾದ ಪರಮ ಧ್ಯೇಯಗಳ ಆರಾಧನೆಯನ್ನು—ನಿರಾಕರಿಸಲಾಗುವುದು? ಧ್ಯೇಯಧರ್ಮಗಳ ಪ್ರೇರಣೆಯಿಲ್ಲದ ಯಾವ ವಿಮರ್ಶಕನು ತಾನೇ ತನ್ನ ಕೆಲಸವನ್ನು ತೃಪ್ತಿಕರವಾಗಿ ನಡಸಬಲ್ಲನು? "ಯಾರೇ ಆಗಲಿ ತಕ್ಕಮಟ್ಟಿಗೆ ಪ್ಲೇಟೋವಿನ ಅನುಯಾಯಿಯಾಗಿಲ್ಲದಿದ್ದರೆ ಸಾಹಿತ್ಯದ ಸೌಂದರ್ಯ ಅವನಿಗೆ ಗೋಚರವಾಗುವುದಿಲ್ಲ." ಹೀಗೆಂದು ಪ್ರಖ್ಯಾತ ಕಾವ್ಯ ವಿಮರ್ಶಕರಾದ ಪ್ರೊ. ಸೆಯಿಂಟ್ಸ್‌ಬರಿಯವರು ಹೇಳಿರುವರು.

ಪ್ರತ್ಯೇಕದ ಮುಖಾಂತರವಾಗಿಯೇ ನಮಗೆ ಸಾಮಾನ್ಯದ ಸ್ಮೃತಿ ಬರುವುದೆಂದು ಹೇಳಿದ ಪ್ಲೇಟೋ ಕಲೆಯೆಂಬುದು ಪ್ರತ್ಯೇಕದ ಮೂಲಕ ಪುರುಷನನ್ನು ಸಾಮಾನ್ಯಕ್ಕೊಯ್ಯುವ ಆರೋಹಣಪಥವೆಂದು ಏಕೆ ತಿಳಿಯಲಿಲ್ಲ? ಕಲೆಯ ವೈಯಕ್ತಿಕ ವೈಲಕ್ಷಣ್ಯವೇ ಇದಕ್ಕೆ ಕಾರಣ. ಪ್ಲೇಟೋವಿನ ಮತದಂತೆ, ಕಲೆಗೆ ಪ್ರತ್ಯೇಕವೇ ಪ್ರಾಮುಖ್ಯವಾದದು, ಸಾಮಾನ್ಯದ ಜೀವವೇ ಪ್ರತ್ಯೇಕವೆಂದು ಅದು ತಿಳಿಯುತ್ತದೆ. ಪ್ರತ್ಯೇಕವಿರುವುದರಿಂದ ಸಾಮಾನ್ಯವಿದೆಯೆಂದು ಅದರ ಭಾವನೆ. ಕಲಾವಿದನ ನೆಲೆಯೇ ಪ್ರತ್ಯೇಕ, ಅದು ಅದೃಶ್ಯವಾಯಿತೆಂದರೆ ಅವನಿಗೆ ನಿಲ್ಲಲು ನೆಲವಿಲ್ಲ. ಯಾವ ವಸ್ತು, ಭಾವ, ರಾಗ, ಸಂಭವಗಳನ್ನು ಪ್ರದರ್ಶಿಸಬೇಕಾದರೂ ಆತನು ಪ್ರತ್ಯೇಕದ ಪಡಿಯಚ್ಚಿನಮೇಲೆಯೇ ಕೆಲಸ ಮಾಡಬೇಕು. ಆದುದರಿಂ ಪ್ರತ್ಯೇಕ ಆತನ ದೃಷ್ಟಿಯಲ್ಲಿ ಒಂದು ಅಪೂರ್ವವಾದ ಸತ್ತ್ವನ್ನೂ ಶ್ರೇಷ್ಠತೆಯನ್ನೂ ಹೊಂದಿರುವುದು. ಪ್ರತ್ಯೇಕದ ಸತ್ವ ಬಹು ಕೀಳಾದುದೆಂದು ಭಾವಿಸಿದ ಪ್ಲೇಟೋ ಕಲೆಯನ್ನು ನೆರಳಿನ ನೆರಳು, ವಿಕ್ಷೇಪದ ವಿಕ್ಷೇಪ, ಎಂದು ಕರೆದುದು ಅತಿಶಯವೇನೂ ಅಲ್ಲ.

ಅರಿಸ್ಟಾಟಲನು ಪ್ಲೇಟೋವಿನ ಕಲಾವಿಮರ್ಶೆಯನ್ನು ಖಂಡಿಸಿ, ಕ ಪ್ರತ್ಯೇಕದ ಪೂಜೆಯಲ್ಲ, ವಿಜ್ಞಾನದಂತೆ, ತತ್ವದಂತೆ, ಶಾಶ್ವತವಾದ ಸಾರ್ವತ್ರಿಕವಾ ಭಾವಗಳನ್ನು, ಮಾದರಿಗಳನ್ನು ನಿರೂಪಿಸುವುದೇ ಕಲೆಯ ನಿಜವಾದ ಗು ಎಂದು ನಾವು ಹಿಂದೆಯೇ ಸೂಚಿಸಿದಂತೆ ನಿರ್ಧರಿಸಿ ಕಲೆಯನ್ನು ಪ್ಲೇಟೋವಿ ಸಾಮಾನ್ಯವಾದಕ್ಕೆ ಅನುಗೊಳಿಸಿದನು.

— ಕೆ. ಆರ್. ಶ್ರೀನಿವಾಸಯ್ಯಂಗಾ

# ಸಂಸ್ಕೃತಿ ಎಂದರೇನು?

ಮನುಷ್ಯಶಿಶು ಇತರ ಪ್ರಾಣಿಗಳ ಶಿಶುಗಳಿಗಿಂತ ಬಹು ದುರ್ಬಲವಾದುದು. ಶಿಶುವು ಸರ್ವಾಂಗ ಸಂಪೂರ್ಣವಾಗಿದ್ದರೂ ಅದು ಎದು ಓಡಾಡುವುದಕ್ಕೆ ಎರಡು ವರ್ಷವಾದರೂ ಬೇಕು. ಹಾಗೆ ಎದ್ದು ಓಡಾಡುವುದಕ್ಕೆ ಮುಂಚೆ ಎಷ್ಟೋಸಲ ಎದ್ದು ಬಿದ್ದು ಪ್ರಯತ್ನಮಾಡಿ ಕೊನೆಗೆ ಸ್ವತಂತ್ರವಾಗಿ ಓಡಾಡಲು ಶಕ್ತವಾಗುತ್ತದೆ. ನಮಗೆಲ್ಲಾ ಓಡಾಡುವುದು ಬಹಳ ಅಭ್ಯಾಸವಾಗಿರುವುದರಿಂದ, ಅದನ್ನು ಕಲಿಯುವಾಗ ಪಟ್ಟ ಶ್ರಮವೆಲ್ಲ ಮರೆತುಹೋಗಿದೆ. ಆದರೂ ಇಂದಿನ ನಮ್ಮ ನಡೆಗೆ, ಓಡಾಟಕ್ಕೆ ಹಿಂದೆ ಆರಂಭದಲ್ಲಿ ಮಾಡಿದ ಹಲವಾರು ಅಲ್ಲ, ನೂರಾರು ಪ್ರಯತ್ನಗಳು ಕಾರಣ.

ಹಾಗೆಯೇ ತೋಟಕ್ಕೆ ಹೋಗಿ. ಅಲ್ಲಿ ತೆಂಗಿನಮರ ನೋಡಿ. ಫಲಭರಿತವಾಗಿ ನಿಂತಿದೆ. ತೋಟದ ಸೌಭಾಗ್ಯ ಲಕ್ಷ್ಮಿಯೇ ಆ ರೂಪಿನಿಂದ ನಿಂತಂತಿದೆ. ಆ ಭಾರಿಯ ಗುಂಬ, ಅದು ನಿಂತಿರುವ ವೈಖರಿ, ದಪ್ಪ ಎಳನೀರು, ಕಾಯಿ, ಕುರುಬೆ, ಹೊಂಬಾಳೆ, ಗರಿ ಎಲ್ಲವೂ ಆ ಗಿಡ ಎಳೆತನದಲ್ಲಿ ಪಡೆದ ಆರೈಕೆಯನ್ನು ತೋರಿಸುತ್ತಿವೆ; ಬಾಯಿಬಿಟ್ಟು ಹೇಳಿಕೊಳ್ಳುತ್ತಿವೆ.

ಹೀಗೆ ಹಲವಾರು ಪ್ರಯತ್ನಗಳ, ಹಲವಾರು ವರ್ಷಗಳ ಆರೈಕೆಯ ಫಲವಾಗಿ ಮನುಷ್ಯರಲ್ಲಿ ಒಂದು ಹೊಂದಾಣಿಕೆ, ಒಂದು ಹೆಚ್ಚುತನ, ಒಂದು ಹಿರಿಯತನ ಕಾಣಿಸುತ್ತದೆ. ಆ ಹೊಂದಾಣಿಕೆ, ಆ ಹೆಚ್ಚಳ, ಆ ಹಿರಿಯತನ ಮೂರೂ ಸೇರಿ ಮುಪ್ಪುರಿಗೊಂಡ ಮನೋಭಾವ ಸಂಸ್ಕೃತಿ.

"ಸಂಸ್ಕೃತಿ ಎನ್ನುವ ಮಾತು ಈಚಿನದು. ಇಂಗ್ಲಿಷಿನ 'ಕಲ್ಚರ್' ಎಂಬ ಮಾತಿಗೆ ಸಂವಾದಿಯಾಗಿ ಬಂದಿರುವುದು. ಇದಕ್ಕಿಂತ ವಿನಯ ಎನ್ನುವುದು ಸರಿ. ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಕಾಲಿದಾಸನು 'ಪ್ರಜಾನಾಂ ವಿನಯಾಧಾನಾತ್ ರಕ್ಷಣಾತ್ ಭರಣಾದಪಿ| ಸಪಿತಾ ಪಿತರಸ್ತಾಸಾಂ ಕೇವಲಂ ಜನ್ಮಹೇತವಃ' ಎಂಬ ಶ್ಲೋಕದಲ್ಲಿ ಈ ಮಾತನ್ನು ಉಪಯೋಗಿಸಿದ್ದಾನೆ" ಎನ್ನುವವರೂ ಇದ್ದಾರೆ. ಹೊಸ ಮಾತು ಎಂದು ನಾವು ನೂಕಬೇಕಾಗಿಲ್ಲ. ಹಳೆಯ ಮಾತು ಎಂದು ಹೆಚ್ಚು ಆದರ ತೋರಿಸಬೇಕಾಗಿಲ್ಲ. ನಮಗೆ ಸಂಸ್ಕೃತಿ, ವಿನಯ, ಎರಡೂ ಇರಲಿ.

ಈ ಗುಣ ಎಲ್ಲರಿಗೂ ಇರಬೇಕು. ನಾವು ಹಾಕಿದ ಮರಗಳು ಸೊಂಪಾಗಿ ಬೆಳೆದು ನಲಿಯುತ್ತಿದ್ದರೆ ಅದೊಂದು ಸೌಭಾಗ್ಯವಲ್ಲವೆ? ಅಂತಹ ಸೌಭಾಗ್ಯವು ಯಾರಿಗೆ ಬೇಡ? ಅದರಿಂದಲೇ ಅದನ್ನು ಕುರಿತು ವ್ಯಾಖ್ಯಾನ ಮಾಡಬೇಕಾದ ಆವಶ್ಯಕತೆ.

ಗರಡಿಯ ಮನೆಯಲ್ಲಿ ಹಲವು ವರ್ಷ ಚೆನ್ನಾಗಿ ಸಾಮು ಮಾಡಿದವನು

ನಡೆಯುವುದೇ ಒಂದು ಸೊಗಸು. ಆ ಮೈಯನ್ನು ಹೊತ್ತು, ಮಹಡಿಯ ಭಾರವನ್ನೆಲ್ಲಾ ಹೊತ್ತಿರುವ ಕಂಭಗಳ ಹಾಗೆ ಆ ಕಾಲುಗಳು ಜಗ್ಗುಹಾಕಿಕೊಂಡು ನಡೆಯುತ್ತಿದ್ದರೆ ನೋಡುವುದಕ್ಕೆ ಒಂದು ಸಂತೋಷ. ಹಾಗೆ ಆ ಸಂಸ್ಕೃತಿಯ ಮೊದಲನೆಯ ಗುಣ ಇತರರಿಗೆ ಸಂತೋಷವನ್ನು ಉಂಟುಮಾಡುವುದು
" ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರ ಪೂಜನಂ."

ಮೊದಲು ಹೊಂದಾಣಿಕೆ, ಹೆಚ್ಚುತನ, ಹಿರಿಯತನ ಇವು ಮೂರು ಇರಬೇಕು ಸಂಸ್ಕೃತಿಯಲ್ಲಿ ಎಂದಿದೆ. ಅದಕ್ಕೆ ಹಿಂದಿನ ಒಂದು ಕಥೆ ನೆನೆ ಕೊಳ್ಳೋಣ. ಒಬ್ಬ ತಂದೆ ತನ್ನ ಮಗನನ್ನು ಓದುವುದಕ್ಕೆ ಹಿರಿಯರ ಬಳಿ ಕಳುಹಿಸಿದ. ಅವನು ಅಲ್ಲಿ ಓದಿ ವಿದ್ಯೆಯನ್ನು ಗಳಿಸಿ ಹಿಂತಿರುಗಿ ಬಂದ. ಅವನಿ ಯೋಚನೆಯಾಯಿತು: "ನಾನು ವಿದ್ಯಾವಂತ, ನಮ್ಮಪ್ಪನಿಗೆ ನಾನು ನಮಸ್ಕಾ ಮಾಡಬೇಕೋ ಬೇಡವೋ ?" ಎಂದು.

ತಂದೆ ಬುದ್ಧಿವಂತ. ಮಗನ ಮುಖ ನೋಡುತ್ತಲೂ ಆತನಿಗೆ ತಿಳಿ ಹೋಯಿತು, ಮಗನ ಮನಸ್ಸಿನಲ್ಲಿರುವ ಸಂಕಟ. ತಾನೇ ಎದ್ದುಬಂದು ಮಗನನ್ನ ಹೊಗಳಿದ: "ಅಪ್ಪಾ ನಿನ್ನಂತಹ ಮಗ ಹುಟ್ಟಿ ನಮ್ಮ ಕುಲ ಪಾವನವಾಯಿತ ನಿನ್ನ ಹಾಗೆ ಓದಿದವರು ಯಾರು?" ಎಂದು.

ಮಗನಿಗೆ ಸಂತೋಷವಾಯಿತು. ಕತೆ ಅಲ್ಲಿಗೆ ಬಿಡೋಣ. ಇವರಿಬ್ಬರ ಯಾರು ಸಂಸ್ಕೃತಿ ಸಂಪನ್ನರು ? ವಿನಯವುಳ್ಳವರು ಯಾರು ? ತಾನು ವಿದ್ಯಾವಂ ನೆಂದುಕೊಂಡ ಮಗನೋ ? ಬುದ್ಧಿವಂತನಾಗಿ ಮಗನಿಗೆ ಬಂದ ಸಂಕಟವನ ಕಳೆದ ತಂದೆಯೋ ? ತಂದೆಯ ನಡೆಯಲ್ಲಿ ಹೊಂದಾಣಿಕೆ, ಹೆಚ್ಚಳ, ಹಿರಿಯತ ಮೂರೂ ಇಲ್ಲವೇನು ? ಮಗನದು ವಿದ್ಯೆ; ಇನ್ನೂ ಅರಗದ ಅನ್ನದಂತೆ ಅದ ತಂದೆಯದು ಸಂಸ್ಕೃತಿ; ಅರಗಿದ ಅನ್ನದಂತೆ ಆಚಾರದಲ್ಲಿ ಪರಿಣಾಮವಾಗಿರು ವಿದ್ಯೆ.

ಈ ಮಾತುಬಂದಿರುವಾಗಲೇ ಇನ್ನೂ ಒಂದು ಮಾತು ಹೇಳೋ ಇಂಗ್ಲಿಷಿನಲ್ಲಿ "ಜಂಟಲ್‌ಮ್ಯಾನ್" ಎಂಬ ಒಂದು ಪದವಿದೆ. ನಾವು ಅದ ದೊಡ್ಡವನು, ದೊಡ್ಡ ಮನುಷ್ಯ, ಮಹನೀಯ ಎಂದು ಮುಂತಾಗಿ ಹೇಳುತ್ತೇ ನಮ್ಮ ಮನಸ್ಸಿನಲ್ಲಿ ಎಷ್ಟೋ ಭಾವಗಳೂ ಅರ್ಥಗಳೂ ಇವೆ. ಮಕ್ಕಳು ಏನ ನೋವು ಎನ್ನುವಂತೆ ನಾವೂ ಹಿರಿಯರಾದರೂ ಸರಿಯಾದ ಮಾತು ಇಲ್ಲದೆ ಕೆಲ ವೇಳೆ ಒದ್ದಾಡುತ್ತೇವೆ. ಹಾಗೆ ಒದ್ದಾಡಿಸುವ ಅರ್ಥಗಳ ಮಾತುಗಳಲ್ಲಿ, ಇ ಒಂದು. ಆ ವಿಶಾಲವಾದ ಅರ್ಥವನ್ನು ಒಂದು ಮಾತಿನಿಂದ ಗುರುತಿಸಬೇಕೆಂ ಸಂಸ್ಕೃತಿ ಎನ್ನುತ್ತೇವೆ. ಆನೆಯ ಫೋಟೋ ಜೇಬಿನಲ್ಲಿದೆ ಎಂದು ಆನೆಯ ಜೇಬು ಹಿಡಿಸುತ್ತದೆ ಎನ್ನುವುದಕ್ಕೆ ಆದೀತೆ ? ಹಾಗೆ ಸಂಸ್ಕೃತಿ ಎಂದು ಮೂರಕ್ಷ ನುಡಿ ನುಡಿದರೂ ಅದರ ಅರ್ಥ ಬಹಳ ದೊಡ್ಡದು. ಬದುಕಿರುವ ಮ

ಬೆಳೆಯುತ್ತಲೇ ಇರುವಂತೆ, ಸಂಸ್ಕೃತಿಯ ಅರ್ಥ ದಿನದಿನಕ್ಕೂ ಬೆಳೆಯುತ್ತಲೇ ಇರುತ್ತದೆ. ಅದನ್ನು ಬೆಳೆಸುವುದು ಆತ್ಮಪರೀಕ್ಷೆ. ಹೆಂಗುಸರು ಗಳಿಗೆಗೊಂದು ಸಲ ಕನ್ನಡಿ ನೋಡಿಕೊಳ್ಳುವಂತೆ, ಮನುಷ್ಯ ದಿನದಿನವೂ ಅಲ್ಲ, ದಿನಕ್ಕೆ ಹಲವು ಸಲ ತಾನು ಸರಿಯಾಗಿದ್ದೇನೆಯೋ ಎಂದು ಪರೀಕ್ಷೆ ಮಾಡಿಕೊಳ್ಳಬೇಕು. ಹಾಗೆ ಪರೀಕ್ಷೆ ಮಾಡುತ್ತಾ ಮಾಡುತ್ತಾ ತನ್ನ ನಡತೆಯನ್ನು ತಿದ್ದಿಕೊಳ್ಳಬೇಕು. ಅಂತರಂಗವನ್ನು ಶುದ್ಧಿಮಾಡಿಕೊಳ್ಳಬೇಕು. ಹಾಗೆ ಶುದ್ಧೀಕರಣ ಮಾಡಿಕೊಂಡ ಅಂತರಂಗದಲ್ಲಿ ಸಾಣೆಗೆ ಹಿಡಿದ ವಜ್ರದ ಕಾಂತಿಯಂತೆ ಒಂದು ಹೊಸ ಕಾಂತಿ ಹುಟ್ಟುತ್ತದೆ. ವಜ್ರದ ಕಾಂತಿಗಿಂತ ಸಹಜವಾಗಿ, ತಿಳಿನೀರಿಗಿಂತ ತಿಳಿಯಾಗಿ, ಶುಚಿಯಾಗಿ, ರುಚಿಯಾಗಿ, ಹಿತವಾಗಿ, ಮಿತವಾಗಿ, ಪರಿಪಕ್ವವಾಗಿ, ಯಾರಿಗೂ ಬೇಡವಾಗದೆ ಇರುವ ಮನೋಭಾವ, ಅದರಿಂದ ಮೂಡಿದ, ಅದರಿಂದ ಪ್ರೇರಿತ ವಾದ ನಡೆ, ಇವೆರಡೂ ಸಂಸ್ಕೃತಿಯ ಗುರುತುಗಳು.

ಮನೋಭಾವ, ಆಚರಣೆ, ಎರಡು ಎಂದು ಹೇಳುವುದರಲ್ಲಿ ಅರ್ಥವಿದೆ. ಆಚರಣೆಯಿಂದ ಸಹಜವಾಗಿ ಶುದ್ಧವಾಗಿ ಪ್ರಿಯವಾಗುವಂತೆ ಇದ್ದು, ಮನೋ ಭಾವದಲ್ಲಿ ಕ್ರೂರವಾಗಿಯೇ ಇದ್ದುಕೊಂಡಿರುವ ಬೇಟೆಗಾರನ ಮನೋಭಾವವೂ ಇದೆ. ಅದು ಸಂಸ್ಕೃತಿಯಲ್ಲ. ಒಂದು ಶ್ಲೋಕದಲ್ಲಿ, "ನವನೀತ ಸಮಾಂ ವಾಣೀಂ ಕೃತ್ವಾ ಚಿತ್ತಂ ತು ನಿರ್ದಯಂ" ಎಂದು ಹೇಳಿದೆ ; ಇನ್ನೊಂದು ಕಡೆ "ಕ್ಷಾರಂ ನೀರಂ ಚ ಶೀತಲಂ ಭವತಿ" ಎಂದು ಹೇಳಿದೆ. ಎಂದರೆ ಮಾತು ಬೆಣ್ಣೆ ಯಂತೆ, ಮನಸ್ಸು ಕಲ್ಲಿನಂತೆ ; ನೀರು ಉಪ್ಪಾದಷ್ಟೂ ತಣ್ಣಗಿರುತ್ತದೆ ಎಂದು ಅರ್ಥ. ಅದು ಸಂಸ್ಕೃತಿಯೇನು ? ಪ್ರವಾಹಕ್ಕೆ ಸಿಕ್ಕಿದ ಕಲ್ಲು ನುಣುಪಾಗುತ್ತದೆ: ಆದರೆ ಮೆತ್ತಗಾಗುವುದಿಲ್ಲ. ನುಣ್ಣಗೂ ಇದ್ದು ಮೆತ್ತಗೂ ಇದ್ದು ಕಲ್ಲೂ ಆಗಿರುವುದು ಸಂಸ್ಕೃತಿ.

ಈ ಸಂಸ್ಕೃತಿಯ ಹೆಚ್ಚಳ, ಹೆಚ್ಚುಗಾರಿಕೆಯೆಂದರೆ ಅದು ಮೆಟ್ಟಿಲು ಮೆಟ್ಟಿಲಾಗಿ ಮೇಲಕ್ಕೆ ಮೇಲಕ್ಕೇ ಹೋಗುತ್ತಿರುವುದು. ಒಂದು ಕಥೆ ಕೇಳಿ : ಒಬ್ಬನು ತಿರುಪಕ್ಕೆ ಬರುತ್ತಿದ್ದ. ಒಬ್ಬರು ಅವನನ್ನು ಕರೆದು ಹೇಳಿದರು : "ಅಯ್ಯಾ ಯಾಕೆ ಈ ಅವಮಾನದ ಕೆಲಸ ? ಇಲ್ಲಿಂದ ನೂರು ಮೈಲಿ ಹೋದರೆ ಅಲ್ಲಿ ತಾಮ್ರ ಭೂಮಿಯಿದೆ. ಹೋಗಿ ತಾಮ್ರ ತುಂಬಿಕೊಂಡು ಬಂದು ಪಾತ್ರೆ ಪದಾರ್ಥ ಮಾಡಿ ಮಾರಿ ಮಾನವಾಗಿ ಜೀವಿಸಬಾರದೇ ?" ಎಂದರು. ಆಗಲಿ ಎಂದು ಭಿಕ್ಷುದವನು ತಾಮ್ರ ಭೂಮಿಗೆ ಹೋದ.

ಅಲ್ಲಿದ್ದವರು "ಇನ್ನೂ ನೂರು ಮೈಲಿ ಹೋಗು, ಅಲ್ಲಿ ಬೆಳ್ಳಿ ಸಿಕ್ಕುತ್ತದೆ" ಎಂದರು. ಅಲ್ಲಿಗೆ ಹೋದ. ಅಲ್ಲಿದ್ದವರು "ಇನ್ನು ನೂರು ಮೈಲಿ ಹೋದರೆ ಅಲ್ಲಿ ಚಿನ್ನದ ಭೂಮಿಯಿದೆ" ಎಂದರು. ಅಲ್ಲಿಗೂ ಹೋದ. ಅವರು "ಇನ್ನು ನೂರು ಮೈಲಿ ಹೋದರೆ ಅಲ್ಲಿ ರತ್ನ ಭೂಮಿಯಿದೆ. ಒಂದೋ ಎರಡೋ ತಂದರೂ ಸುಖವಾಗಿರಬಹುದು" ಎಂದರು.

ಸಂಸ್ಕೃತಿ ಹೀಗೆ ಉತ್ತರೋತ್ತರಣಿ ಎಂದರೆ ಮುಂದು ಮುಂದಕ್ಕೆ ಹೋ,ನ
ಹೋಗುತ್ತಾ ನದಿಯ ಹಾಗೆ ವಿಶಾಲವೂ ಆಳವೂ ಆಗುತ್ತದೆ. ಈ ನಾ
ಘಟ್ಟಗಳನ್ನು ಬಲ್ಲವರು ಕಾಮ, ಅರ್ಥ, ಧರ್ಮ, ಮೋಕ್ಷ ಎಂದು ಕರೆದಿದ್ದಾ
ಮೋಕ್ಷವು ನದಿಯು ಸಮುದ್ರವನ್ನು ಸೇರಿ ಸಮುದ್ರವಾಗುವ ಹಾಗೆ. ಆ ಮಾ
ನಮಗೆ ಬೇಡ. ನಾವು ಬದುಕಬೇಕು ಎನ್ನುವವರು. ಹಸನಾಗಿ ಬಾಳ್ವೆ
ಸಾಗಿಸಬೇಕು ಎನ್ನುವವರು. ನಮಗೆ ತ್ರಿವರ್ಗ ಎಂದರೆ ಧರ್ಮಾರ್ಥ ಕಾಮಗಳು
ಸಾಕು. ಆದರೆ ಕಾಳಿದಾಸನು ಹೇಳುವಂತೆ ಅವುಗಳಲ್ಲಿ ಪರಸ್ಪರ ಬಾಧೆಯಿಲ್ಲ
ಬೇಕು. ಒಂದಕ್ಕಾಗಿ ಒಂದನ್ನು ಬಿಡಬೇಕಾಗಿ ಬರದಂತೆ, ಒಂದರಿಂದ ಇನ್ನೊಂದ
ಲೋಪವಿಲ್ಲದಂತೆ, ಪರಸ್ಪರ ಬಾಧೆಯಿಲ್ಲದಂತೆ, ಒಂದಕ್ಕೊಂದು ಹೊಂದಿಕೊಳ್ಳುವ
ಜೀವನವನ್ನು ನಯವಾಗಿ ಸಾಗಿಸಿಕೊಂಡು ಹೋಗುವುದು ಸಂಸ್ಕೃತಿ. ಇ

ಇದಿಷ್ಟೂ ತನ್ನ ವಿಚಾರವಾಯಿತು. ಆದರೆ ಮನುಷ್ಯ ಏಕಾಕಿಯಾ
ವುದು, ಒಬ್ಬಂಟಿಗನಾಗಿರುವುದು ಸಾಧ್ಯವಿಲ್ಲ. ಹಾಗೆ ಒಂಟಿಯಾಗಿರುವವ
ಒಂಟಿ ಮರಕ್ಕೆ ಬರುವ ಗಾಳಿಯ ಭೀತಿಯ ಹಾಗೆ ಕಷ್ಟಗಳು ಹೆಚ್ಚು. ಅಷ್ಟೇ ಇ
ಒಂಟಿ ಸಲಗನ ಹಾಗೆ ಅವನಿಂದ ಸಮಾಜಕ್ಕೆ ಭೀತಿಯೂ ಹೆಚ್ಚು. ಆದರಿಂದ
ತಿಳಿದವರು ಹೇಳುವುದು "ಕುಟುಂಬಿ, ಗೃಹಸ್ಥ, ಒಂಟಿ ಶೊಂಟಿಗಿಂತ ಉತ್ತಮ
ಎಂದು. ನಮ್ಮವರು ಕುಟುಂಬಿಗೆ ಗೌರವ ಹೆಚ್ಚಾಗಿ ಕೊಡುವುದಕ್ಕೆ ಕಾರಣವಿ

ಕುಟುಂಬದಲ್ಲಿ ಇರುವವರೆಲ್ಲ ಒಂದೇ ಸಮ. ಆದರೂ ಹಸ್ತದಲ್ಲಿರುವ ಐ
ಬೆರಳುಗಳ ಹಾಗೆ. ಐದೂ ಬೆರಳೇ! ಆದರೂ ಒಂದಕ್ಕೊಂದಕ್ಕೆ ವ್ಯತ್ಯಾಸವಿ
ದೊಡ್ಡದಿದೆ; ಚಿಕ್ಕದಿದೆ. ಹೆಬ್ಬೆರಳು ಎಲ್ಲಾ ಬೆರಳುಗಳ ಜೊತೆಯಲ್ಲೂ ಸೇರಬೇ
ಅದು ಎಲ್ಲದಕ್ಕಿಂತ ಬಲವಾಗಿದ್ದರೂ ಎಲ್ಲದರ ಜೊತೆಯಲ್ಲೂ ಸೇರುತ್ತ
ದುಡಿಯುತ್ತದೆ. ನೀವು ಮುಷ್ಟಿ ಕಟ್ಟಿದಾಗ ಬೇರೆ ನಿಲ್ಲಬಲ್ಲದು — ಆದ
ನಿಲ್ಲುವುದಿಲ್ಲ. ಹಾಗೆ ಇರಬೇಕು ಕುಟುಂಬಿ. ಕುಟುಂಬದಲ್ಲಿ ಹಿರಿಯರುಂಟು; ಕಿರಿ
ರುಂಟು; ಹಿರಿಯರು,ಕಿರಿಯರು, ಎಲ್ಲರನ್ನೂ ಹೊಂದಿಕೊಂಡು ಹೋಗುವುದು ನ
ಸಂಸ್ಕೃತಿ. ಮಾನವನ ಹುಟ್ಟುಗುಣ. ಈಗಲೋ? ಎಂದರೆ, ವಿದ್ಯಾಭ
ವ್ಯಕ್ತಿಯ ಪ್ರತ್ಯೇಕತ್ವವನ್ನು ಬೆಳೆಸಿ, ಅವನು ಕುಟುಂಬ ದ್ರೋಹಿಯಾಗುವ
ಮಾಡುತ್ತಿದೆ. ತಾನು ಹುಟ್ಟಿಬೆಳೆದ ಕುಟುಂಬಕ್ಕೇ ನೀರು ತಿದ್ದುವ
ಸಮಾಜಕ್ಕೆ ಉಪಕಾರಿಯಾಗುವನೆ?

ಕುಟುಂಬ ಸಮಾಜದ ಮೂಲ. ಅದೇ ಸಮಾಜದ ಯೂನಿಟ್ಟು. ಕುಟು
ಗಳೆಂಬ ಇಟ್ಟಿಗೆ ಇಟ್ಟು ಕಟ್ಟಿರುವ ಗೋಡೆ ಒಂದು ಕುಲ. ಈ ಕುಲಗಳೆಲ್ಲ
ಆಗಿರುವುದು ಸಮಾಜ. ಆದರಿಂದ ಮನುಷ್ಯನು ಕುಟುಂಬ, ಕುಲ, ಸಮಾ
ಮೂರಕ್ಕೂ ಹೊಂದಿಕೊಂಡು ನಡೆಯಬೇಕು. ನಡೆ, ಆಚಾರ, ಯಾವಾಗ
ಒಂದೇ ಸಮನಾಗಿ, ನಲ್ಲಿಯ ನೀರಿನ ಹಾಗೆ ಇರಲು ಸಾಧ್ಯವಿಲ್ಲ. ಹಿರಿಯ

ನದಿಯು ಒಂದು ಕಡೆ ಆಳವಾಗಿ, ಇನ್ನೊಂದು ಕಡೆ ಆಳವಿಲ್ಲದೆ, ಒಂದೆಡೆ ಅಗಲವಾಗಿ, ಇನ್ನೊಂದೆಡೆ ಕಿರಿದಾಗಿ ಹರಿಯುವಂತೆ, ವ್ಯವಹಾರದಲ್ಲಿ ಒಬ್ಬನೇ ವ್ಯಕ್ತಿ ಮೂರು ವಿಧವಾಗಿಯಾದರೂ ವರ್ತಿಸಬೇಕಾಗುತ್ತದೆ. ತಾನು ತನ್ನ ಸುಖವೆಂದಾಗ ಅದನ್ನು ಮುಚ್ಚಿಕೊಳ್ಳುತ್ತಾನೆ. ಸಹಜವಾಗಿ ನಾಚಿಕೊಳ್ಳುತ್ತಾನೆ. ಅದೇ ಕಾಮ. ಅದಿಲ್ಲದಿದ್ದರೆ ಜೀವನ ಸರಸ್ವತೀ ನದಿಯಾಗುತ್ತದೆ. ಮರುಭೂಮಿಯಾಗುತ್ತದೆ. ಜೀವನವೆಂಬ ವೃಕ್ಷ ನಲಿದು ಬೆಳೆದಲ್ಲದೆ ಅದು ಮುಂದಕ್ಕೆ ಹೋಗುವಂತಿಲ್ಲ. ವೃದ್ಧಿಯಿಲ್ಲ. ಹಾಗೆಂದು ತನ್ನ ಸುಖಕ್ಕಾಗಿ ಇತರರೆಲ್ಲರನ್ನೂ ಬಲಿಹುಯ್ಯುವ ರಾಕ್ಷಸನೂ ಆಗಬಾರದು. ಸಮಾಜದಲ್ಲಿ ರಾಕ್ಷಸನಿಗೆ ಸ್ಥಾನವಿಲ್ಲ. ಅದನ್ನೇ ಪುರಾಣಗಳೆಲ್ಲ ಸಾರುತ್ತಿರುವುದು. ಭಕ್ತನಿಗೆ ಸ್ಥಾನವುಂಟು. ರಾಕ್ಷಸನಿಗೆ ಇಲ್ಲ. ವೈಕುಂಠ ಕೈಲಾಸಗಳಲ್ಲೂ ರಾಕ್ಷಸನ ದುರ್ವೃತ್ತ, ಕೆಟ್ಟ ನಡತೆ, ವರದಿಯಾಗಿ ಹರಿಹರರು ಇಳಿದು ಬಂದು ಅವನನ್ನು ಧ್ವಂಸಮಾಡುತ್ತಾರೆ.

ಕಾಮವು ಮನುಷ್ಯನ ವೈರಿ. ಯಾವಾಗ? "ಪರಮ ಪೂಜ್ಯವಾದುದು ಇದೇ! ಇದನ್ನು ಬಿಟ್ಟರೆ ಇನ್ನಿಲ್ಲ" ಎಂದು ಅದನ್ನು ಆರಾಧಿಸಿದಾಗ. ಯಯಾತಿಯೂ ಭೂಲೋಕ ಚಕ್ರವರ್ತಿ. ಅವನು ತನ್ನನ್ನು ಯಾರು ಏನು ಬೇಡಿದರೆ ಅದನ್ನು ಕೊಡಬಲ್ಲವನು. ಅವನಿಗೆ ಇಬ್ಬರು ಮಡದಿಯರು. ಅಸುರ ಗುರುವಿನ ಮಗಳು ದೇವಯಾನಿ; ಅಸುರ ಚಕ್ರವರ್ತಿಯ ಮಗಳು ಶರ್ಮಿಷ್ಠೆ. ಅವರಿಬ್ಬರಲ್ಲಿಯೂ ಒಂದು ದಿವ್ಯ ಸಹಸ್ರ ವರ್ಷಗಳು ಯಥೇಚ್ಛವಾಗಿ ಕಾಮವನ್ನು ಅನುಭವಿಸಿ ತೃಪ್ತನಾಗದೆ ಗಾದೆಯನ್ನು ಹೇಳಿದ: "ನ ಜಾತು ಕಾಮಃ ಕಾಮೇನ ಉಪಭೋಗೇನ ಶಾಮ್ಯತಿ। ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ॥" "ಕಾಮವು ಯಾವಾಗಲೂ ಯಾವ ಭೋಗದಿಂದಲೂ ಶಾಂತವಾಗುವುದಿಲ್ಲ; ಹವಿಸ್ಸನ್ನು ಸ್ವೀಕರಿಸಿದ ಅಗ್ನಿಯಂತೆ ಮತ್ತೆ ಪ್ರಜ್ವಲಿಸುತ್ತದೆ" ಎಂದು ಇದರ ಅರ್ಥ.

ಅದರಿಂದಲೇ ಭಗವದ್ಗೀತೆಯಲ್ಲಿ ಕಾಮವನ್ನು, "ಶತ್ರುಃ ದುರಾಸದಃ" "ಕೈಗೆ ಸಿಕ್ಕದ ಶತ್ರು"ವೆಂದುದು. ಇದೇ ಅರ್ಥವನ್ನು ಮಹಾಭಾಗವತವು ಕಾಮ ಗೀತೆಯಲ್ಲಿ ಹೇಳಿದೆ: ಅಲ್ಲಿ ಕಾಮವು "ಯಾರು ನನ್ನನ್ನು ಯಾವುದರಿಂದ ತುಳಿಯುವೆನು ಎನ್ನುವರೋ ಅದರಲ್ಲಿಯೇ ನಾನು ಇರುತ್ತೇನೆ" ಎಂದು ಹೇಳುತ್ತದೆ.

ಇಂತಹ ಕಾಮವನ್ನು ಮಿತ್ರನನ್ನು ಮಾಡಿಕೊಳ್ಳುವ ಉಪಾಯವನ್ನು ಭಗವಂತನು ಹೇಳಿದ: "ಇಂದ್ರಿಯಾಣಿ ಮನೋ ಬುದ್ಧಿಃ ತಸ್ಯಾಧಿಷ್ಠಾನ ಮುಚ್ಯತೇ" ಕಾಮವು ಇಂದ್ರಿಯ ಮನೋಬುದ್ಧಿಗಳಲ್ಲಿದ್ದು ನಮ್ಮನ್ನು ದಾರಿ ಹಿಡಿಸುತ್ತದೆ. ಆದರೆ "ಧರ್ಮಾವಿರುದ್ಧಃ ಕಾಮೋಽಸ್ಮಿ ಭೂತೇಷು" ಭೂತ ಭೂತದಲ್ಲಿಯೂ ಇರುವ ಕಾಮವು ಧರ್ಮಕ್ಕೆ ಅವಿರುದ್ಧವಾದರೆ ಅದು ದೈವವಾಗುತ್ತದೆ. ನಮ್ಮನ್ನು ಕಾಪಾಡುತ್ತದೆ.

ಭಕ್ತನಿಗೂ ರಾಕ್ಷಸನಿಗೂ ಅಷ್ಟು ವ್ಯತ್ಯಾಸವಿಲ್ಲ. ಪೋಲೀಸನಿಗೂ ಕಳ್ಳನಿಗೂ ಇರುವಷ್ಟು, ಅಷ್ಟೆ! ಮರ್ಯಾದೆ ಕಾಪಾಡಬೇಕು. ಅದು ಸರಕಾರದ ಕರ್ತವ್ಯ. ಅದನ್ನು ನಿರ್ವಹಿಸುವುದಕ್ಕೆ ಸರಕಾರ ಪೋಲೀಸರನ್ನು ಸಂಬಳ ಕೊಟ್ಟು ಇಟ್ಟಿದೆ. ಮರ್ಯಾದೆಯನ್ನು ಮುರಿಯುವುದಕ್ಕೆ ಹೊಂಚಿ ಕಾದಿರುವವನು ಕಳ್ಳ. ... ಮರ್ಯಾದೆಯನ್ನು ಕಾಪಾಡುವುದು ಧರ್ಮ. ಧರ್ಮವನ್ನು ಹೀಗೆಂದು ಬೆರಳಿಟ್ಟು ತೋರಿಸುವುದು ಯಾರಿಗೂ ಸಾಧ್ಯವಿಲ್ಲ. ಒಂದೇ ಮಾತಿನಲ್ಲಿ ಹೇಳಬೇಕಾದರೆ ಎಂದರೆ, ಸತ್ಯವೇ ಧರ್ಮ. ಆದರೆ ಸತ್ಯವು ತನ್ನನ್ನೂ ಕೊಲ್ಲಬಾರದು; ಇತರರನ್ನೂ ಕೊಲ್ಲಬಾರದು ಹಾಗಿರಬೇಕು. ಮಹಾಭಾರತದಲ್ಲಿ ಅತಿ ಅತಿ ಮಾಡಿ ಆರಾಧಿಸ... ತ್ರೀನೆಂದು ಸತ್ಯವನ್ನೂ ಕೊಂದು ಕೆಟ್ಟುಹೋದ ಕಥೆಗಳು ಬರುತ್ತವೆ. ... ಕರ್ಣನ ಕಥೆ ಕೇಳಿಲ್ಲವೆ? ವಿಟ್ಠಲನಿಗೆ ಉಡುದಾರ ಮಾಡಿದ ಅಕ್ಕಸಾಲೆಯ ... ಕೇಳಿಲ್ಲವೆ? ಹಾಗೆ.

ಧರ್ಮ ಏಕಮುಖವಾಗಿಲ್ಲ. ಭಗವಾನ್ ವ್ಯಾಸರು ಮಹಾಭಾರತದಲ್ಲಿ ... ಅರ್ಥವನ್ನು ಸಾವಿರಾರು ವರ್ಷಗಳ ಹಿಂದೆ ಹೇಳಿದರು: "ನೈಕೋ ಋಷಿರ್ಯಸ್ಯ ಮತಂ ಪ್ರಮಾಣಂ" ಎಂದು: "ಧರ್ಮವನ್ನು ಋಷಿಗಳು ಹೇಳಬೇಕು. ಆ... ಒಬ್ಬ ಋಷಿಯ ಮಾತನ್ನು ಇನ್ನೊಬ್ಬ ಋಷಿಯು ಅಂಗೀಕರಿಸುವುದಿಲ್ಲ" ಎಂಬ... ಇದರ ಅರ್ಥ.

ಹಾಗೆಯೇ "ಯೋ ಧರ್ಮಃ ಧರ್ಮಾಂತರಂ ಬಾಧತೇ ನ ಸ ಧರ್ಮಃ" ಎಂಬುದು ಇನ್ನೊಂದು ಸೂತ್ರ: "ಧರ್ಮವು ಧರ್ಮವನ್ನು ಬಾಧಿಸಬಾರದು" ಎಂದು ಅದರ ಅರ್ಥ.

ಅದೆಲ್ಲಕ್ಕಿಂತ ಹೆಚ್ಚಾಗಿ ಇದೇ ಧರ್ಮ ಎಂಬ ವಿಷಯವಾಗಿ ಜಿಜ್ಞಾಸೆ ಮಾಡ... ಯಬೇಕು. ಶ್ರುತಿ ಸ್ಮೃತಿಗಳೂ ಪುರಾಣಗಳು ಎಲ್ಲವೂ ಒಪ್ಪಿದ್ದರೂ ಕೊನೆಗೆ ಪ್ರಮಾಣ ಆತ್ಮತೃಪ್ತಿ; ತನ್ನ ಮನಸ್ಸು ಒಪ್ಪಬೇಕು. ಆ ಮನಸ್ಸು ವಿಚಾರ... ಶುದ್ಧವಾಗಿ ಧರ್ಮ ಕಾಮವಾಗಿ, ಡಂಭಾದಿ ದೋಷರಹಿತವಾಗಿದ್ದರೆ, ಅದು ... ಅಂತಹ ಆರ್ಯ ಮನಸ್ಸು ಒಪ್ಪಿದರೆ ಅದು ಧರ್ಮ. "ಸತಾಂ ಹಿ ಸಂದೇಹ ಪದೇಷು ವಸ್ತುಷು ಪ್ರಮಾಣಮಂತಃಕರಣ ಪ್ರವೃತ್ತಯಃ", ಸತ್ಪುರುಷರಿಗೆ ಸಂ... ಬಂದಾಗ, ಅವರ ಮನಸ್ಸು ಹೇಳುವುದೇ ಧರ್ಮ. ಆದರೆ ಈ ಸೂತ್ರ ಅನ್ವಯವಾಗು... ವುದು ಸತ್ಪುರುಷರಿಗೆ; ಇತರರಿಗಲ್ಲ. ಅದು ನೆನಪಿರಬೇಕು. ಸತ್ಪುರುಷನು ... ಆಚಾರದಿಂದ ಮನೋಭಾವದಿಂದ "ಸರ್ವಭೂತಹಿತೇರತಃ" ಆಗಿರಬೇಕು. ಅದು ಸತ್ಪುರುಷನ ಲಕ್ಷಣ.

ಇದೆಲ್ಲವನ್ನೂ ಪರ್ಯಾಲೋಚಿಸಿ ಭಾಗವತವು ಹೇಳಿತು: "ಧರ್ಮ ಮೂಲಂ ಹಿ ಭಗವಾನ್ ಸರ್ವವೇದಮಯೋ ಹರಿಃ ಸ್ಮೃತಂ ಚ ತದ್ವಿದಾಂ ರಾಜನ್ ಯೇನ ಚಾತ್ಮಾ ಪ್ರಸೀದತಿ" "ಧರ್ಮದ ಮೂಲವು ಶ್ರೀಹರಿಯು. ಆತನ ವಾಕ್ಯ...

ಶ್ರುತಿ ಸ್ಮೃತಿಗಳು ಪ್ರಮಾಣವು. ಆತನಿಗೂ ತನಗೂ ಒಪ್ಪಿಕೆಯಾದುದೇ ಧರ್ಮವು."

ಮನುಷ್ಯನಿಗೆ ಇನ್ನೊಂದು ಹುಟ್ಟುಗುಣವಿದೆ. ಅದು ಸಂಗ್ರಹ. "ಇರಲಿ, ಯಾವೊತ್ತಿಗಾದರೂ ಬೇಕಾಗುತ್ತದೆ" ಎಂದು ಎತ್ತಿಟ್ಟುಕೊಳ್ಳುವುದು. ಅದೇ ಅರ್ಥ, ಈಗಿನ ಮಾತಿನಲ್ಲಿ ಹಣ, ಆಸ್ತಿ. ತಿರ್ಯಗ್ಜಂತುಗಳಲ್ಲಿಯೂ ಈ ಗುಣವಿದೆ. ಆದರೆ ಮನುಷ್ಯರಲ್ಲಿ ಇರುವಷ್ಟು ಇಲ್ಲ. ಇದು ಹೆಚ್ಚಾದರೆ ಲೋಭ. ಲೋಭ ದುರ್ಗುಣ. ಅದರಿಂದ ತಿಳಿದವರು "ಅದಕ್ಕೊಂದು ಮಿತಿಯಿರಲಿ" ಎಂದರು. ತನ್ನ ಹೊಟ್ಟೆಯು ತುಂಬುವುದಕ್ಕೆ ಬೇಕಾದಷ್ಟನ್ನು ತೆಗೆದುಕೊಳ್ಳಲು ಎಲ್ಲರಿಗೂ ಅಧಿಕಾರವುಂಟು. ಅದು ಅವನಿಗೆ ಸ್ವಂತ. ಅದಕ್ಕಿಂತ ಹೆಚ್ಚಾಗಿ ತೆಗೆದುಕೊಂಡರೆ, ಆಶಿಸಿದರೆ, ಅವನು ಕಳ್ಳನು; ಅವನು ಶಿಕ್ಷೆಗೆ ಅರ್ಹನಾಗುವನು. ಇದು ವ್ಯಕ್ತಿ ಧರ್ಮ.*

ವ್ಯಕ್ತಿ ವ್ಯಕ್ತಿಯೂ ಈ ಸೂತ್ರವನ್ನು ಹಿಡಿದು ನಡೆದರೆ ಸಮಾಜದಲ್ಲಿ ತಿಕ್ಕಾಟವು ಬಂದೀತೆ ?

ಈ ಧರ್ಮಾರ್ಥಕಾಮಗಳು ಮೂರಕ್ಕೂ ಮಿತಿಯಿರಬೇಕು. ಒಂದಕ್ಕಾಗಿ ಇನ್ನೊಂದು ಬಲಿಕೊಡಬಾರದು.

ಅದಕ್ಕೊಂದು ಕಥೆ. ಪುರೂರವನು ಜಗತ್ತಿನಲ್ಲಿ ಆಗಿ ಹೋದ ಚಕ್ರವರ್ತಿಗಳಲ್ಲಿ ಒಬ್ಬನು. ಆತನು ಒಂದು ಸಲ ಸ್ವರ್ಗಕ್ಕೆ ಹೋದ. ಅಲ್ಲಿ ಧರ್ಮ, ಅರ್ಥ, ಕಾಮ ಮೂವರೂ ಪ್ರತ್ಯಕ್ಷವಾಗಿ ಕಾಣಿಸಿಕೊಂಡರು. ಈ ಮೂವರಲ್ಲಿ ಧರ್ಮನು ಜ್ಯೇಷ್ಠನು ಎಂದು ಪುರೂರವನು ಆತನಿಗೆ ಮಾತ್ರ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದನು. ಉಳಿದವರಿಗೆ ಕೋಪ ಬಂತು. ಅವರು ಶಾಪ ಕೊಟ್ಟರು. ಕಾಮನ ಶಾಪದಿಂದ ಸ್ತ್ರೀವಿರಹ ಬಂತು. ಅರ್ಥನ ಶಾಪದಿಂದ ಲೋಭ ಬಂತು. ಕಾಮ ಕ್ರೋಧ ಲೋಭಗಳು ನರಕ ದ್ವಾರಗಳಂತೆ. ಅಂತಹ ನರಕವೂ ಪುರೂರವನಿಗೆ ಬಂತು. ಅದರಿಂದ ಮೂರನ್ನೂ ಆನೆಗೆ ಅಂಕುಶವಿಟ್ಟು ಆಳುವಂತೆ ಆಳಬೇಕು. ಆಗ ಕುಟುಂಬದಲ್ಲಿ ಸೌಖ್ಯ, ಸಮಾಜದಲ್ಲಿಯೂ ಸೌಖ್ಯ.

ಕೊನೆಯದಾಗಿ ಇನ್ನೊಂದು ಮಾತು. ಅದು ಜಗತ್ತಿಗೆ ಸಂಬಂಧಪಟ್ಟಿದು. ವ್ಯಕ್ತಿಯ ಮಾತಾಯಿತು; ಕುಟುಂಬದ ಮಾತಾಯಿತು; ಸಮಾಜದ ಮಾತಾ

* "ನೈನಃ ಪ್ರಾಪ್ನೋತಿ ವೈ ವಿದ್ವಾನ್ ಯಾವದರ್ಥ ಪರಿಗ್ರಹಃ ‖ ಅಧಿಕಂ ಯೋऽಭಿಕಾಂಕ್ಷೇತ ಸಸ್ತೇನೋ ದಂಡಮರ್ಹತಿ ‖"—ತಿಳಿದವನು ತನಗೆ ಬೇಕಾದಷ್ಟು ಮಾತ್ರ ತೆಗೆದುಕೊಂಡರೆ ಪಾಪವಿಲ್ಲ. ದುರಾಸೆಯಿಂದ ಹೆಚ್ಚು ಬೇಕೆಂದವನು ಕಳ್ಳನು. ದಂಡನೆಗೆ ಯೋಗ್ಯನು—ಎಂದು ಭಾಗವತವು ಹೇಳಿದೆ. (ಎಂಟನೆಯ ಸ್ಕಂಧ. ಹತ್ತೊಂಬತ್ತನೆಯ ಅಧ್ಯಾಯ, ಹದಿನೇಳನೆಯ ಶ್ಲೋಕ).

ಯಿತು; ಇನ್ನು ಜಗತ್ತಿನ ಮಾತು. ಜಗತ್ತು ಆಗಿರುವುದು ಸತ್ತ್ವರಜಸ್ತ
ಗುಣಗಳು ಹೆಚ್ಚು ಕಡಿಮೆಯಾದಾಗ. ಹಿಂದಿನವರು ರೋಗ ಬಂದಿಜೆ
ವುದಕ್ಕೆ ಬದಲಾಗಿ ಪ್ರಕೃತಿ ಕೆಟ್ಟಿದೆ ಎನ್ನುತ್ತಿದ್ದರು. ದೇಹ ಪ್ರಕೃತಿಯಲ್ಲಿ
ಪಿತ್ಥ ಕಫಗಳು, ಜಗತ್ಪ್ರಕೃತಿಯಲ್ಲಿ ಸತ್ತ್ವರಜಸ್ತಮೋಗುಣಗಳು. ಶಾಸ್ತ್ರಗ
ಗುಣಸಾಮ್ಯ, ಗುಣವ್ಯತಿರೇಕ ಎಂಬ ಎರಡು ಮಾತುಗಳಿವೆ. ಗುಣಸಾಮ್ಯ
ಸೌಖ್ಯ, ಗುಣವ್ಯತಿರೇಕದಲ್ಲಿ ದುಃಖ. ಅದನ್ನು ಈಗಿನ ಮಾತಿನಲ್ಲಿ ಹೇಳಬ
ಎಂದರೆ "Finding the balance". ಸಮುದ್ರದಲ್ಲಿ ಪ್ರವಾಹಗಳಿವೆ. ಅವು
ಪ್ರವಾಹವಾಗಿರಬಹುದು, ಬಹಿಃಪ್ರವಾಹವಾಗಿರಬಹುದು. ಕೆಳಕ್ಕೆಳೆಯುವ
ಯಿರಬಹುದು. ಮೇಲಕ್ಕೆ ಹಾರುವ ಚಿಲುಮೆ (Fountain) ಇರಬಹು
ಇವೆಲ್ಲವನ್ನೂ ತಪ್ಪಿಸಿಕೊಂಡು ನಾವೆ ನಡೆಸುವವನು ಜಾಣ, ಧೀರ.
ಎಂದರೆ ಧೀ ಎಂದರೆ ಬುದ್ಧೀಂದ್ರಿಯಗಳ ಸಂಚರಣ, ಅದಕ್ಕೆ ವಶವಾಗದಂತೆ
ಯನ್ನು ರಾತಿ ಎಂದರೆ ಆತ್ಮವಶದಲ್ಲಿಟ್ಟುಕೊಂಡು ನಡೆಯುವವನು ಧೀರ. ಅ
ಧೀರನು 'ನ ಶೋಚತಿ' ದುಃಖಕ್ಕೆ ಸಿಕ್ಕುವುದಿಲ್ಲ; ತನಗೂ ದುಃಖವಿಲ್ಲದೆ, ಇತರ
ತನ್ನಿಂದ ದುಃಖವಾಗದಂತೆ, ವರ್ತಿಸುವವನು ಧೀರ. ಅವನೇ ಭಗವದ್ಗೀ
ಸ್ಥಿತಪ್ರಜ್ಞ, ಪಂಡಿತ, ಸಂನ್ಯಾಸಿ, ಗುಣಾತೀತ. ಇವನು ಶ್ರೇಷ್ಠ. ಅವನ
ನಮಗೆ ಪ್ರಮಾಣ. "ಯದ್ಯದಾಚರತಿ ಶ್ರೇಷ್ಠಃ, ತತ್ತದೇವೇತರೋ ಜ
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥" ಅವನಂತೆ ಇತ
ನಡೆಯುವರು, ಅವನು ಸರಿಯೆಂದುದನ್ನು ಲೋಕವು ಸರಿಯೆನ್ನುವುದು. ಹಿ
ಸಲಗನ ಹಿಂದೆ. ಸಲಗ ತಪ್ಪುದಾರಿ ಹಿಡಿದರೆ, ತಪ್ಪು ಯಾರದು?

ಕೊನೆಯದಾಗಿ ಉಪನಿಷತ್ತಿನ ಕಥೆಯೊಂದು ಹೇಳಿ ಮುಗಿಸೋಣ.
ದಾನವ ಮಾನವರು ದೇವದೇವನ ಬಳಿಗೆ ಹೋಗಿ ತಮ್ಮನ್ನು ಉದ್ಧರಿ
ಉಪದೇಶವೊಂದನ್ನು ಕೊಡು ಎಂದರು. ಆತನು ಆಗಲಿ ಎಂದು "ದ" ಎಂ
ಅದು ಮೂವರಿಗೂ ಮೂರು ರೀತಿಯಾಗಿ ಅರ್ಥವಾಯಿತು. ದೇವತೆಗಳು ಭ
ಪ್ರಿಯರು; ಅವರಿಗೆ ದಮ್ಯಧ್ವಂ ಎನ್ನಿಸಿತು. ದಮ್ಯಧ್ವಂ ಎಂದರೆ ಬಿಗಿಹಿಡಿ
ಎಂದು. ದಾನವರು ನಿರ್ದಯರು, ಹಿಂಸಾಪ್ರಧಾನ ಜೀವಿಗಳು; ಅವರಿಗೆ ದಯ
ಎನ್ನಿಸಿತು. ದಯೆಯಿರಲಿ ಎಂದು ಅದರ ಅರ್ಥ. ಮಾನವರು ಲೋಭಿ
ಸಂಗ್ರಹಿಗಳು. ಅವರಿಗೆ ದತ್ತ ಎನ್ನಿಸಿತು. ದಾನಮಾಡಿ ಎಂದರ್ಥವಾ
ಈ "ದ" ಇದು ನಮ್ಮ ಸಂಸ್ಕೃತಿಯ ಮೂಲ. ಈ "ದ"ಗೆ ಒಂದೇ ಅರ್ಥ
ಇನ್ನೂ ಅರ್ಥವಿದೆಯೆಂದು ತಿಳಿದುಕೊಂಡು, ನಾನು ಹಿಡಿದ ಮೊಲಕ್ಕೆ ಮ
ಕಾಲಾದರೂ ನಾಲ್ಕು ಕಾಲಿನ ಮೊಲಗಳಿಲ್ಲದೇ ಇಲ್ಲ ಎಂದು ಇತರರ ಜೊತೆ
ಸುಖವಾಗಿ ಸಂತೋಷವಾಗಿ ಇರುವುದು ನಮ್ಮ ಸಂಸ್ಕೃತಿ. ಇದರ ಮೂಲವ
"ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರ ಪೂಜನಂ" "ಇ

ಸಂತೋಷವಾಗಲಿ; ಅದರಿಂದ ಈಶ್ವರ ತೃಪ್ತಿಯಾಗಲಿ" ಎಂಬುದು. ಈಶ್ವರ ತೃಪ್ತನಾದರೆ ಏನುಂಟು ಏನಿಲ್ಲ?*

— ದೇವುಡು ನರಸಿಂಹಶಾಸ್ತ್ರಿ

## ಕನಸು ಎಂದರೇನು?

ಈ ಸುಪ್ತಚೇತನದಲ್ಲಿ ಹುದುಗಿಹೋದ ಅನೇಕ ಅಭಿಲಾಷೆಗಳು ಹೇಗಾದರೂ ಮಾಡಿ ಹೊರಕ್ಕೆ ಬಂದು ಪೂರ್ಣವಾಗಬೇಕೆಂದು ತವಕಪಡುತ್ತಿರುತ್ತವೆ. ಅವು ಹಾಗೆ ಬರಲು ಒಂದು ಅವಕಾಶವೆಂದರೆ ನಾವು ನಿದ್ರಿಸುತ್ತಿರುವಾಗ. ಆಗ ಅವು ಕನಸಿನ ರೂಪದಲ್ಲಿ ನಮಗೆ ಗೋಚರವಾಗುತ್ತವೆ.

ಆದರೆ ನಮಗೆ ಬೀಳುವ ಕನಸುಗಳೆಲ್ಲಕ್ಕೂ ಸುಪ್ತಚೇತನದಲ್ಲಿರುವ ಆಸೆಗಳೇ ಕಾರಣವೆಂದು ಹೇಳಲಾಗುವುದಿಲ್ಲ. ನಮ್ಮ ಪೂರ್ವಿಕರು ಹೇಳಿರುವಂತೆ ದೈಹಿಕ ಕಾರಣದಿಂದಲೂ ಕನಸು ಬೀಳಬಹುದು. ಹೊದೆದುಕೊಂಡಿರುವ ಬಟ್ಟೆಯು ನಿದ್ರೆಯಲ್ಲಿ ಜಾರಿಹೋಗಿರುವಾಗ ನಿರ್ವಾಣದಲ್ಲಿದ್ದಂತೆ ಕನಸು ಕಾಣುವುದೂ, ಅಜೀರ್ಣದಿಂದ ಅಥವಾ ಹೃದಯದಲ್ಲಿ ದೋಷವಿರುವುದರಿಂದ ತಾನು ಹಾರಾಡುವಂತೆ ಕಾಣುವುದೂ ಈ ರೀತಿಯ ಕನಸುಗಳಿಗೆ ನಿದರ್ಶನಗಳು. ಇವುಗಳಿಗೆ ಅರ್ಥವಿಲ್ಲ—ಇವು 'ವಿತಥ'ಗಳು. ಈ ಕನಸುಗಳಲ್ಲಿ ಪ್ರಚೋದನೆಗೆ ಕಾರಣವಾದ ವಸ್ತುಗಳು ರೂಪಾಂತರಗೊಂಡಿವೆ. ಇದೊಂದು ಸ್ವಾರಸ್ಯವಾದ ಸಂಗತಿ. ಆದರೆ ಕೆಲವು ಕನಸುಗಳಲ್ಲಿ ರೂಪಾಂತರವೇ ಆಗಿರುವುದಿಲ್ಲ. ಮುಚ್ಚುಮರೆ ಇಲ್ಲದೆ ನಿಜರೂಪದಲ್ಲೇ ಕಾಣಿಸಿಕೊಳ್ಳುವುವು. ಕೆಲವು ವರ್ಷಗಳ ಹಿಂದೆ ಉತ್ತರ ಧ್ರುವವನ್ನು ಹುಡುಕಿಕೊಂಡು ಹಲವರು ಸಾಹಸಿಗರು ಹೊರಟರಷ್ಟೆ. ಅವರು ಧ್ರುವವನ್ನು ಮುಟ್ಟಿ ಹಿಂತಿರುಗುತ್ತಿದ್ದಾಗ ಅವರಲ್ಲಿದ್ದ ಆಹಾರವೆಲ್ಲವೂ ಮುಗಿದುಹೋಗಿದ್ದುದರಿಂದ ಹಸಿವೆಯಿಂದ ಸಂಕಟಪಡಬೇಕಾಗಿ ಬಂತು. ಆ ಸಂದರ್ಭದಲ್ಲಿ ಅವರು ತಮ್ಮ ಪಟ್ಟಣದಲ್ಲಿ ಭವ್ಯವಾದ ಉಪಹಾರ ಗೃಹದಲ್ಲಿ ಕುಳಿತು, ಸೊಗಸಾದ ಔತಣವನ್ನು ಸವಿದಂತೆ ಕನಸುಕಾಣುತ್ತಿದ್ದರಂತೆ! ಇದರಲ್ಲಿ ರೂಪಾಂತರವಿಲ್ಲ. ಬಯಕೆ ರೂಪ ಮರೆಸಿಕೊಳ್ಳದೆ ಹಾಗೆಯೇ ಕನಸಿನಲ್ಲಿ ಪೂರ್ಣಗೊಂಡಿದೆ. ಕಳೆದ

---

*ಹೋಲಿಸಿ: ಅಯಂ ನಿಜಃ ಪರೋವೇತಿ ಗಣನಾ ಲಘು ಚೇತಸಾಂ ।
ಉದಾರ ಚರಿತಾನಾಂತು ವಸುಧೈವ ಕುಟುಂಬಕಂ ॥ —ಸುಭಾಷಿತ

ಯೂರೋಪಿನ ಮಹಾ ಸಂಗ್ರಾಮದಲ್ಲಿ ಫ್ರೆಂಚ್ ಮತ್ತು ಇಂಗ್ಲಿಷ್ ಸೈನಿಕ ಒಟ್ಟಿಗೆ ಸೇರಿ ಜರ್ಮನಿಯೊಡನೆ ಹೋರಾಡುತ್ತಿದ್ದರಷ್ಟೆ. ಆಗ ಇಂಗ್ಲಿಷ್ ಸೈನಿಕ ಅನೇಕರಿಗೆ ಕನಸಿನಲ್ಲಿ ಯುದ್ಧವು ನಿಂತುಹೋದಂತೆಯೂ ತಾವು ತಮ್ಮ ಊ ಹೋಗಿ ಹೆಂಡತಿ ಮಕ್ಕಳನ್ನು ಕಂಡಂತೆಯೂ ಸ್ವಪ್ನವಾಗುತ್ತಿದ್ದಿತಂತೆ! ಜಾಗ್ರದವ ಯಲ್ಲಿ ಬಂದ ಬಯಕೆ ಆರೂಪಗೊಳ್ಳದೆ ಸ್ವಪ್ನದಲ್ಲಿ ಸಾರ್ಥಕ್ಯವನ್ನು ಹೊಂದಿ ಇನ್ನೊಂದು ವಿಷಯ : ಫ್ರೆಂಚರು ಸ್ವಲ್ಪವೂ ಮರೆಮಾಚದೆ ತಮ್ಮ ಬಯಕೆಯನ್ನ ಎಲ್ಲರೆದುರಿಗೂ ಬೀರಾಡಿ, ಗೋಳಾಡಿ, ಬಯಕೆಯ ಕಾವು ಆರುವಂತೆ ಮಾಡಿ ತ್ತಿದ್ದರು. ಆದುದರಿಂದ ಅವರಿಗೆ ಕನಸುಗಳು ಹೆಚ್ಚಾಗಿ ಬೀಳುತ್ತಿರಲಿ ಇಂಗ್ಲಿಷಿನವರಾದರೋ ಏನೋ ಒಂದು ತೆರನಾದ ಬಿಗುಮಾನದಿಂದ ಅ ಬಯಕೆಗಳನ್ನು ನುಂಗಿಕೊಂಡುಬಿಡುತ್ತಿದ್ದರು; ಇದರ ಪರಿಣಾಮವಾಗಿ ಅವ ಕನಸುಗಳು ಹೆಚ್ಚಾಗಿ ಬೀಳುತ್ತಿದ್ದವು; ಅವರು ನುಂಗಿಕೊಂಡ ಬಯಕೆ ಸ್ವಪ್ನದಲ್ಲಿ ಸಾರ್ಥಕ್ಯವನ್ನು ಹೊಂದುತ್ತಿದ್ದವು.

ಇಲ್ಲಿ ವಿವರಿಸಿರುವ ಕನಸನ್ನು ನೋಡಿ. ದೈಹಿಕವಾದ ಪ್ರಚೋದನೆ ರೂಪಾಂತರಗೊಂಡು ತನ್ನ ರೂಪವನ್ನು ಸಂಪೂರ್ಣವಾಗಿ ಮರೆಯಿಸಿಕೊಂಡಿ

ನನಗೆ ಚೆನ್ನಾಗಿ ತಿಳಿದವರೊಬ್ಬರು ಒಂದು ರಾತ್ರಿ ನಿದ್ರಿಸುತ್ತಿದ್ದರು. ಅ ಬಹಳ ಚಳಿಯಾಗಿರಬೇಕು. ಅವರು ಚಳಿಯನ್ನು ತಡೆಯಲಾರದೆ ಕೈಗಳೆರಡನ್ನ ಕಾಲುಗಳ ನಡುವೆ ಸೇರಿಸಿ ದೇಹವನ್ನು ಆದಷ್ಟು ಮುದುರಿಕೊಂಡು ಮಲಗಿ ರಂತೆ. ಆಗ ಅವರಿಗೆ ಒಂದು ಕನಸು ಬಿತ್ತು.

"ತಾವು ಎಲ್ಲಿಗೋ ಹೋಗುತ್ತಿದ್ದಾರೆ. ಆಗ ಅವರೆದುರಿಗೆ ಕಳ್ಳರು ಬ ಇವರ ಕೈಗಳೆರಡನ್ನೂ ಬಲವಾಗಿ ಹಿಡಿದುಕೊಂಡಿದ್ದಾರೆ. ಇವರು ಬಿಡಿಸಿಕೊ ಬೇಕೆಂದು ಎಷ್ಟು ಪ್ರಯತ್ನಿಸಿದರೂ ಆಗಲಿಲ್ಲ. ಇವರು ಆಗ ಯಾರಾದ ಸಹಾಯಕ್ಕೆ ಬನ್ನಿ ಎಂದು ಗಟ್ಟಿಯಾಗಿ ಕೂಗಿಕೊಂಡರು'. ಕನಸು ಇ ವಸ್ತುತಃ ನೋಡಿದರೆ, ಹಾಗೆ ಮುದುರಿಕೊಂಡು ಮಲಗಿದ್ದ 'ಪ್ರಾಣಿ' ಕೈಗಳ ಕಾಲನಡುವಿನಿಂದ ಬಿಡಿಸಿಕೊಳ್ಳಲು ಮಹತ್ತರವಾದ ಪ್ರಯತ್ನ ಮಾಡುತ್ತಿ ಹಾಗೆಯೇ ಏನೇನೋ ಅಪಸ್ವರವಾಗಿ ಕೂಗುತ್ತಲೂ ಇದೆ!! ಈ ಕನಸಿನ ಅಂಗಾಂಗಗಳ ಇರುಕು ಇಕ್ಕಟ್ಟುಗಳು ವಿರೂಪಗೊಂಡಿರುವುದು ಎದ್ದು ಕಾಣು

ಹೀಗೆಯೇ ಈ ತೆರನಾದ ಕನಸುಗಳು ಅನೇಕವಿವೆ. ಒಬ್ಬರು ಒ ಮಹಡಿಯ ಮೇಲೆ ಮಲಗಿದ್ದರು. ಬಹಳ ಸೆಕೆಯಾದುದರಿಂದ ಕಿಟಕಿ ಬಾಗಿಲನ್ನು ತೆರೆದಿದ್ದರು. ಆ ಕಿಟಕಿಯ ಮುಂದುಗಡೆ ಟೆಲಿಗ್ರಾಫ್ ತಂತಿ ಹ ಹೋಗುತ್ತಿತ್ತು. ರಾತ್ರಿ ನಿಶ್ಶಬ್ದವಾಗಿದ್ದಾಗ ಆ ತಂತಿಯು ಅಲುಗಾಡಿ 'ಝ ಎಂದು ಶಬ್ದಮಾಡುತ್ತಿತ್ತು. ಇವರಿಗೆ ಕನಸಿನಲ್ಲಿ, ತಾವು ಎಲ್ಲಿಯೋ ಕಾ ಹೋಗುತ್ತಿದ್ದಂತೆಯೂ ಆಗ ಅನೇಕ ಜೇನು ನೊಣಗಳು 'ಝೋಂ'ಕರಿ

ಬಂದು ಇವರನ್ನು ಮುತ್ತಿದಂತೆಯೂ, ಇವರು ಆ ನೊಣಗಳ ಕಾಟದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿ ಕೈಗಳನ್ನು ತಲೆಯ ಸುತ್ತಮುತ್ತ ತಿರುಗಿಸಿದಂತೆಯೂ ಕಂಡಿತಂತೆ! ಅಷ್ಟೇ ಅಲ್ಲ. ಇವರು ನಿಜವಾಗಿಯೂ ಕೈಗಳನ್ನು ತಿರುಗಿಸಿ, ಸೊಳ್ಳೆಪರದೆಯನ್ನೆಲ್ಲಾ ಮುದುರಿ, ಕಿತ್ತು ಎಚ್ಚರಗೊಂಡರಂತೆ!!

ಆದುದರಿಂದ ದೈಹಿಕವಾದ ಪ್ರಚೋದನೆಗಳು ಕನಸಿನಲ್ಲಿ ಕಾಣುವ ವಿಷಯಗಳಿಗೆ ಕಾರಣಗಳಾಗಿರಬಹುದು. ಆದರೆ ಕನಸು ಬಿದ್ದಾಗಲೆಲ್ಲಾ (ಮಾನಸಿಕ ಪ್ರಚೋದನೆಗಳಿಂದ ಕನಸು ಬಿದ್ದಾಗಲೂ ಸಹ) ಪ್ರಚೋದಿತ ವಿಷಯಗಳು ರೂಪಾಂತರಗೊಂಡು ಹೊರಬೀಳುವುವು. ನಾವು ಗಮನಿಸಬೇಕಾದ ಕನಸುಗಳೆಲ್ಲವುಗಳಲ್ಲಿಯೂ ಹಾಗೆ ರೂಪಾಂತರವಾಗುವುದರಿಂದ, ಅದು ಏಕೆ ಹಾಗಾಗಬೇಕೆಂಬುದನ್ನು ನಾವು ಪರಿಶೀಲಿಸಬಹುದು.

ಫ್ರಾಯ್ಡನು ಇದರ ಅರ್ಥವನ್ನು ಒಂದು ತತ್ವರೂಪದಲ್ಲಿ ಹೇಳಿರುವನು—'ಕನಸು ನಮ್ಮ ನಿದ್ರೆಗೆ ಭಂಗಬರದಂತೆ ನೋಡಿಕೊಳ್ಳುವ ಪೋಷಕ[1].' ಅಂದರೆ ನಾವು ನಿದ್ರೆಮಾಡುವಾಗ ದೇಹದ ಆರೋಗ್ಯಕ್ಕೆ ಅವಶ್ಯಕವಾಗಿ ಬೇಕಾಗಿರುವ ವಿಶ್ರಾಂತಿಯನ್ನು ಹೊಂದಬೇಕೆಂಬುದು ಪ್ರಕೃತಿನಿಯಮ. ಆದರೆ ನಾವು ಬಯಸಿದ ಬಯಕೆಗಳೂ ನಮ್ಮನ್ನು ಕಾಡುತ್ತಿರುವ ಕೆಲವು ಆಲೋಚನೆಗಳೂ ಅಭಿಪ್ರಾಯಗಳೂ ನಿದ್ರೆ ಬಾರದಂತೆ ಮಾಡುತ್ತವೆ. ಇವು ಕನಸಿನಲ್ಲಿ ತಮ್ಮ ನಿಜ ರೂಪದಲ್ಲಿ ಬಂದರೆ ನಮಗೆ ನಿದ್ರಾಭಂಗವಾಗುವ ಸಂಭವವಿದೆ. ಅದೇ ಬಯಕೆಗಳೂ ರೂಪಾಂತರಗೊಂಡು ಕನಸಿನ ಸಾಮಗ್ರಿಗಳಾಗಿ ಹೋದರೆ, ನಮ್ಮ ನಿದ್ರೆಗೆ ಭಂಗವಿಲ್ಲ. ಆ ಬಯಕೆಗಳ ಸಾರ್ಥಕವೆಲ್ಲವೂ ಕನಸಿನಲ್ಲಿಯೇ ಆಯಿತೆ ವಿನಾ ಜಾಗ್ರದವಸ್ಥೆಯಲ್ಲಲ್ಲ. ಆದುದರಿಂದ ನಾವು ನಿದ್ರಿಸಲೂಬಹುದು. ಅಂತೆಯೇ ಈ ಬಯಕೆಗಳು ತಮ್ಮ ಸಾರ್ಥಕ್ಯವನ್ನು ಹೊಂದಲೂಬಹುದು. ಕನಸು ಕಾಣುವ ಶಕ್ತಿ ಪ್ರಕೃತಿದೇವಿ ನಮಗೆ ಪ್ರದಾನಮಾಡಿರುವ ವರ ವಿಶೇಷ!

ಹೀಗೆ ಕನಸುಗಳಲ್ಲಿ ಬಯಕೆಗಳು ರೂಪಾಂತರಗೊಂಡಿರುವುದರಿಂದ ನಮಗೆ ಜಾಗ್ರದವಸ್ಥೆಯಲ್ಲಿ ಸಂಕಟವನ್ನುಂಟುಮಾಡಿದ ಆ ಬಯಕೆಗಳೇ ಇವು ಎಂಬುದು ನಮ್ಮ ಮನಸ್ಸಿಗೆ ಗೋಚರವಾಗದೆ, ನಾವು ಆ ಸಂಕಟವನ್ನು ಅನುಭವಿಸದೆ, ನಿದ್ರೆಯ ಸುಖವನ್ನು ಸವಿಯುವೆವು. ಇದಕ್ಕೆ ಉದಾಹರಣೆಗಾಗಿ ಇನ್ನೊಂದು ಕನಸನ್ನು ಇಲ್ಲಿ ನಿರೂಪಿಸಬಹುದು.

ನನ್ನ ಸ್ನೇಹಿತರಾದ ಮ|| ರಾ|| 'ಜಿ.ಹ.' ಎಂಬುವರು ಒಂದು ಪ್ರಾತಃಕಾಲ ಮೈಸೂರಿನಿಂದ ಹಾಸನಕ್ಕೆ ರೈಲಿನಲ್ಲಿ ಒಟ್ಟಿಗೆ ಪ್ರಯಾಣ ಮಾಡಬೇಕೆಂದು ಏರ್ಪಾಡು ಮಾಡಿಕೊಂಡೆವು. 'ಜಿ.ಹ.'ರವರು ಮರುದಿನ ಬೆಳಗ್ಗೆ ಮುಂಚಿತವಾಗಿ ಎದ್ದು ಬರಬೇಕೆಂದು ನನಗೆ ಹಿಂದಿನ ರಾತ್ರಿಯೇ ತಿಳಿಸಿದ್ದರು. ನಾನು ಮಲಗಿಕೊಳ್ಳು

[1] Dream is the guardian of sleep.

ವಾಗ ' ಅಲಾರಂ ' ಗಡಿಯಾರದಲ್ಲಿ ಬೆಳಗ್ಗೆ ನಾಲ್ಕು ಗಂಟೆಗೆ ಗಂಟೆ ಬಾರಿಸುವಂ ಮುಳ್ಳನ್ನು ತಿರುಗಿಸಿಟ್ಟು ಮಲಗಿಕೊಂಡೆ. ರಾತ್ರಿ ಮಲಗುವುದಕ್ಕೆ ಸ್ವಲ್ಪ ತ ವಾಯಿತು. ನಿದ್ರೆ ಬಹುಸುಖವಾಗಿ ಪ್ರಾರಂಭವಾಗಿ, ಅಖಂಡವಾಗಿ ನಾಲ ಗಂಟೆಯುವರೆಗೂ ಸಾಗಿತ್ತು. ಆಗ ಒಂದು ಕನಸು ಬಿತ್ತು.

" ಬೆಳಗಾಗಿದೆ. ಆದರೆ ನನಗಿನ್ನೂ ಎಚ್ಚರವಿಲ್ಲ. ಹೊರಗಡೆ ಯಾರೋ ಬೈಸಿಕಲ್ ಗಂಟೆಯನ್ನು ಬಿಡದೆ ಬಾರಿಸುತ್ತಿದ್ದಾರೆ. ನಾನು ಎದ್ದು ಹೋ ನೋಡಿದರೆ ನನ್ನ ಸ್ನೇಹಿತರಾದ ' ಜಿ.ಹ. 'ರವರು. 'ಏನ್ರಿ' ಎಂದು ನಾನು ಕೇಳಿ ಅವರು, ' ಪರವಾಗಿಲ್ಲ, ನಿದ್ದೆಮಾಡಿ. ಬೆಳಗ್ಗೆ ಹೊರಡುವುದು ಬೇಡ. ಮಧ್ಯಾ ಹೊರಡೋಣವಂತೆ. ನೀವು ನಿದ್ರೆಮಾಡಿ ' ಎಂದು ಹೇಳಿದರು. ನಾನು ಪು ಬಂದು ಮಲಗಿ ನಿದ್ರೆಮಾಡಿದೆ. "

ಇದಿಷ್ಟೂ ಕನಸು. (ಆದರೆ ದೈವವಶಾತ್ " ಅಲಾರಮು "ನ್ನು ಕೇ ಇನ್ನೊಬ್ಬರು ಎಬ್ಬಿಸಿದುದರಿಂದ, ಆ ಹೊತ್ತು ನಿಜವಾಗಿ ನಾನು ' ಜಿ.ಹ.'ರೊ ರೊಡನೆ ರೈಲಿನಲ್ಲಿ ಹೊರಡಲು ಸಾಧ್ಯವಾಯಿತು !) ನಿದ್ರೆಮಾಡಬೇಕೆಂಬ ಪ್ರಕೃತಿಯ ಕಟಾಕ್ಷ. ಗಡಿಯಾರ ತನ್ನ ಕೆಲಸವನ್ನು ತಾನು ಮಾಡಿತು. ಆ ಆ ಇಂದ್ರಿಯ ಪ್ರಚೋದನೆಯು ಪ್ರಕೃತಿದೇವಿಯ ವರಪ್ರಸಾದ ಮಹಿಮೆಯಿ ರೂಪಾಂತರಗೊಂಡು ಕನಸಾಗಿ ಪರಿಣಮಿಸಿತು.

ಹಾಗಾದರೆ ಕನಸು ಬಿದ್ದಾಗಲೆಲ್ಲಾ ನಿದ್ರಾಭಂಗವಾಗುವುದಿಲ್ಲವೆಂದ ಕೆಲವು ಕನಸುಗಳು ಬಿದ್ದರೆ ಎಂತಹ ನಿದ್ರೆಗಾದರೂ ಭಂಗಬರುತ್ತದೆ. ಯಾವುದ ದೆವ್ವನೋ ಪಿಶಾಚಿಯೋ ನಮ್ಮ ಕತ್ತನ್ನು ಹಿಸುಕಿದಂತೆ ಕನಸಾದರೆ ಎ ವಾಗುವುದಿಲ್ಲವೇ ? ಆದರೆ ಇಂತಹ ಸಂದರ್ಭಗಳಲ್ಲಿ ನಮ್ಮ ಮನಸ್ಸು ತೋ ಗೊಳಿಸುತ್ತಿರುವ ಆ ಅಭಿಪ್ರಾಯುಗಳನ್ನು ಉಲ್ಲಾಸದಾಯಕಗಳಾಗುವಂತೆ ರ ಗೆಡಿಸಲಾರದೆ ಹೋಯಿತು. ಆ ಅಭಿಪ್ರಾಯಗಳೇ ವಿಜಯಿಗಳಾದುವು.

ಆದುದರಿಂದ ಪ್ರಚೋದಿತವಾದ ವಿಷಯುಗಳೂ ಬಯುಕೆಗಳೂ ಆಶಯುಗ ಕನಸಿನಲ್ಲಿ (ದೈಹಿಕವಾದುದಾಗಲಿ, ಮಾನಸಿಕವಾದುದಾಗಲಿ) ರೂಪಾಂ ಗೊಳ್ಳುವುವು.

ಹೀಗೆ ರೂಪಾಂತರಗೊಳ್ಳುವುದಕ್ಕೆ ಇನ್ನೊಂದು ಬಲವಾದ ಕಾರಣವುಂಟೆಂ ಫ್ರಾಯ್ಡನು ಹೇಳಿರುವನು. ತೃಪ್ತಿಹೊಂದಲಾರದ ಬಯಕೆಗಳನ್ನು ನಾವು ಪ್ರಬ ಚಿತ್ತದಿಂದ ಸುಪ್ತಚೇತನಕ್ಕೆ ತಳ್ಳಿರುವುದರಿಂದ ಅವೆಲ್ಲವೂ ಆ ಸುಪ್ತಚೇ ವಿಭಾಗದಲ್ಲಿದ್ದುಕೊಂಡು ಸಮಯುವರಿತು ಮುಂದೆ ನುಗ್ಗಿ ಮನಸ್ಸಿನ ರಂ ಬಂದು ಸಾರ್ಥಕ್ಯವನ್ನು ಪಡೆಯಬೇಕೆಂದು ತವಕಪಡುತ್ತಿರುತ್ತವೆ. ಚೇತನಕ್ಕೂ ಮನಸ್ಸಿನ ರಂಗಮಂಟಪಕ್ಕೂ ನಡುವೆ ಈ ಬಯುಕೆಗಳನ್ನು ಮುಂ

ಬಿಡದೆ ತಡೆದಿರುವ ಒಂದು ತತ್ವವಿದೆ. ಇದಕ್ಕೆ ಫ್ರಾಯ್ಡನು ಸೆನ್ಸಾರ್ (Censor)* ಎಂದರೆ ದಂಡಧಾರಿ ಎಂದು ಹೆಸರಿಟ್ಟಿರುವನು.

ಈ ದಂಡಧಾರಿ ಸುಪ್ತಚೇತನದಿಂದ ಹೊರಕ್ಕೆ ಬಂದು ನಲಿದಾಡಬೇಕೆಂದಿರುವ ಅಭಿಪ್ರಾಯಗಳನ್ನು ತಡೆಗಟ್ಟಿ ಮನಸ್ಸಿಗೆ ನೋವುಂಟಾಗದಂತೆ ಮಾಡಿರುತ್ತಾನೆ. ಆದರೆ ಕಾರಣಾಂತರದಿಂದ ಇವನು ವೈಮರೆತಿದ್ದಾಗ, ಈ ಅಭಿಪ್ರಾಯಗಳು ಮುಂದೆ ನುಗ್ಗಿ ಬರುವುದುಂಟು. ನಮಗೆ ವಿಶೇಷವಾಗಿ ಜ್ವರಬಂದಾಗ ಅಥವಾ ಕೆಲವು ಮನೋಜಾಡ್ಯಗಳು ಪಾಪ್ತವಾದಾಗ (ಉದಾ : ಹಿಸ್ಟೀರಿಯಾ) ಈ ತತ್ವದ ಕೈ ತಪ್ಪುತ್ತದೆ. ಆ ಸಮಯದಲ್ಲಿ ದಮನಶಕ್ತಿ ಕಡಮೆಯಾಗುವುದರಿಂದ ಸುಪ್ತ ಚೇತನದಲ್ಲಿ ಹುದುಗಿರುವ ಅಭಿಪ್ರಾಯಗಳು ಮೇಲಕ್ಕೆ ಬರಬಹುದು. ಉದಾಹರಣಾರ್ಥವಾಗಿ, ಮನಸ್ಸಿನಲ್ಲಿ ಅಭಿಪ್ರಾಯಗಳು ಮುಂದೆ ಬಂದು ನಲಿದಾಡುವ ಸ್ಥಳವೊಂದಿದೆ ಎಂದು ಇಟ್ಟುಕೊಳ್ಳೋಣ. ಇದನ್ನು ನಾಟಕದ ರಂಗಸ್ಥಳಕ್ಕೆ ಹೋಲಿಸಬಹುದು. ನಾಟಕದ ಧಾರಿಗಳೆಲ್ಲ ವೇಷ ವರ್ಣ ಮುಂತಾದವುಗಳನ್ನು ಬದಲಾಯಿಸುವುದಕ್ಕೋಸ್ಕರ ಏರ್ಪಟ್ಟ ನೇಪಥ್ಯಮಂದಿರ (Green-Room)ವೇ ಸುಪ್ತಚೇತನದ ವಿಭಾಗ. ಇವೆರಡರ ನಡುವೆ ನಾಟಕದ ಸಂಚಾಲಕನು ಕುಳಿತು ಯಾರು ಯಾರನ್ನು ರಂಗಸ್ಥಳಕ್ಕೆ ಬಿಡಬೇಕೋ ಅವರನ್ನು ಬಿಡುತ್ತಿರುವನು. ಇವನೇ ದಂಡಧಾರಿ (Censor). ಆದರೆ ನೇಪಥ್ಯಮಂದಿರದಲ್ಲಿ ಇನ್ನು ಕೆಲವರು ಇದ್ದಾರೆ. ಅವರಿಗೂ ರಂಗಸ್ಥಳಕ್ಕೆ ನುಗ್ಗಿಬಂದು ನಲಿದಾಡಬೇಕೆಂಬ ಆಸೆಯಿದೆ. ಆದರೆ ಅವರನ್ನು ಅಯೋಗ್ಯರೆಂದು ರಂಗಸ್ಥಳಕ್ಕೆ ಬಾರದಂತೆ ಈ ಮೊದಲೇ ನೇಪಥ್ಯಕ್ಕೆ ತಳ್ಳಿದ್ದಾರೆ. ಇವರನ್ನು ದಮನಮಾಡಲ್ಪಟ್ಟ ಅಯೋಗ್ಯವಾದ ಬಯಕೆಗಳಿಗೂ ಒತ್ತಾಯಗಳಿಗೂ ಮತ್ತು ಅಭಿಪ್ರಾಯಗಳಿಗೂ ಹೋಲಿಸಬಹುದು. ಅವರಂತೆಯೇ 'ಇವೂ ಸಹ ರಂಗಭೂಮಿಗೆ ಬರಲು ತವಕಪಡುತ್ತವೆ. ದಂಡಧಾರಿ ಬಹಳ ಆಯಾಸದಿಂದ ಬಳಲಿದ್ದಾಗ, ಅವು ಮುಂದೆ ನುಗ್ಗಿಬರುವುದುಂಟು— ಜ್ವರಬಂದಾಗ ಸನ್ನಿಯಲ್ಲಿ (ಡಿಲೀರಿಯಂ) ಹುಚ್ಚು ಹುಚ್ಚಾಗಿ, ಹರಟುವುದಿಲ್ಲವೆ?—ಇವೆಲ್ಲ ಅಂತಹ ಸಂದರ್ಭಗಳು. ಆದರೆ, ಇನ್ನೊಂದು ವಿಧದಲ್ಲಿಯೂ ಈ ಬಯಕೆಗಳು ತಮ್ಮ ನಿಜರೂಪದಲ್ಲಿ ಬಂದರೆ ದಂಡಧಾರಿಯು ತಡೆಯುವುದರಿಂದ ವೇಷವನ್ನು ಬದಲಾಯಿಸಿಕೊಂಡು ಅಂದರೆ ರಂಗಸ್ಥಳಕ್ಕೆ ಬರಲು ಯೋಗ್ಯರಾದವರಂತೆ ಬಣ್ಣದ ಬಟ್ಟೆ ಹಾಕಿಕೊಂಡು ಮುಂದೆ ಬರಬಹುದು. ದಂಡಧಾರಿ ' ಇವರೂ

---

*ಅಂಚೆ ಇಲಾಖೆಯಲ್ಲಿ ಇಂತಹವನೊಬ್ಬ ಅಧಿಕಾರಿಯಿರುವನು. ಯುದ್ಧದ ಸಮಯದಲ್ಲಿ ಇವನ ಪ್ರಾಬಲ್ಯ ಹೆಚ್ಚು. ತನ್ನ ದೇಶದಿಂದ ಹೊರದೇಶಕ್ಕೆ ಹೋಗುವ ಪತ್ರಗಳಲ್ಲಿ ದೇಶದ ನೆಮ್ಮದಿಗೆ ತೊಂದರೆಯನ್ನುಂಟುಮಾಡಬಹುದಾದ ವಿಷಯಗಳಿದ್ದಲ್ಲಿ ಅವನು ಆ ಪತ್ರಗಳನ್ನು ಮುಂದಕ್ಕೆ ಹೋಗದಂತೆ ತಡೆದುಬಿಡುವನು.

ಯಾವುದೋ ಪಾತ್ರವಹಿಸಿದ್ದಾರೆ' ಎಂದು ಅವುಗಳನ್ನು ತಡೆಯದೇ ಬಿ
ಬಿಡುವನು. ಹೀಗೆ ಅವು ರೂಪಾಂತರಗೊಳ್ಳದಿದ್ದರೆ ಸುಪ್ತಚೇತನದಿಂದ ಮನಸ್ಸಿ
ರಂಗಸ್ಥಳಕ್ಕೆ ಬಂದು ಸಾರ್ಥಕ್ಯವನ್ನು ಹೊಂದಲು ಆಗುತ್ತಿರಲಿಲ್ಲ. ಆದುದರಿಂದ
ರೂಪಾಂತರವಾಗಬೇಕಾಯಿತು. ನಿಜರೂಪಿನಲ್ಲಿ ಆಗದಿದ್ದರೆ ಅವುಗಳ
ದಂಡಧಾರಿ ಸುಪ್ತಚೇತನದಿಂದ ಹೊರಕ್ಕೆ ಬಿಡುತ್ತಿರಲಿಲ್ಲ.

ಜಾಗ್ರದವಸ್ಥೆಯಲ್ಲಿ ಈಡೇರದ ಬಯಕೆಗಳು ಕನಸಿನಲ್ಲಿ ಈಡೇರಿದ
ಸೂಚಿಸಲ್ಪಡುತ್ತವೆ. ಆದರೆ ಹಾಗೆ ಈಡೇರುವ ಬಯಕೆಗಳು ತಮ್ಮ ನಿಜರೂ
ನಲ್ಲಿಯೇ ಕನಸಿಗೆ ಬಂದರೆ ನಿದ್ರಾಭಂಗವಾಗಬಹುದು, ಮನಸ್ಸಿಗೆ ಸಂಕಟವ
ಬಹುದು. ಆದುದರಿಂದ ಈ ಬಯಕೆಗಳನ್ನು ಸುಪ್ತಚೇತನದಿಂದ ಹೊ
ಬಿಡದಿರುವ ತತ್ವವೊಂದುಂಟು. ಆದರೆ, ಈ ಬಯಕೆಗಳು ರೂಪಾಂತರಗೊ
ಕನಸಿನಲ್ಲಿ ಹೊರಬೀಳುವುವು. ನಿದ್ರಾಭಂಗವಾಗಬಾರದೆಂದು ಬಯಕೆ
ರೂಪಾಂತರಗೊಳ್ಳುವುದು ಒಂದು ಜಾತಿಯ ಕನಸುಗಳಲ್ಲಿ (ಮನಸ್ಸಿನಲ್ಲಿ ಪ್ರ
ದಿಸಲ್ಪಟ್ಟವು); ನಿದ್ರಾಭಂಗವಾಗಬಾರದೆಂದು ಐಂದ್ರಿಯಿಕ ಪ್ರಚೋದನೆ
ರೂಪಾಂತರಗೊಳ್ಳುವುದು ಇನ್ನೊಂದು ಜಾತಿಯ ಕನಸುಗಳಲ್ಲಿ. ಈ ಕನಸುಗ
ಗೂಢಾರ್ಥವಿಲ್ಲ.

—ಎನ್. ಎಸ್. ನಾರಾಯಣಶಾಸ್ತ್ರಿ

## ತತ್ವಶಾಸ್ತ್ರದ ದೃಷ್ಟಿ

ಒಂದಾನೊಂದು ಕಾಲದಲ್ಲಿ ತತ್ವಶಾಸ್ತ್ರವು ಶಾಸ್ತ್ರಗಳಲ್ಲೆಲ್ಲಾ ಹಿರಿದಾಗಿ
ತಾತ್ವಿಕರು ಅದಕ್ಕಾಗಿ ಪ್ರಾಣಕೊಡಲು ಸಿದ್ಧರಾಗಿದ್ದರು. ಚಕ್ರವರ್ತಿಗಳು ಅ
ತಮ್ಮ ಸಾಮ್ರಾಜ್ಯಕ್ಕಿಂತಲೂ ಮಿಗಿಲೆಂದು ಎಣಿಸಿದ್ದರು. ಧರ್ಮಾಧಿಕಾರಿ
ಮಠಾಧಿಪತಿಗಳೂ ತಾತ್ವಿಕರ ಮರೆಯಲ್ಲಿ ಜೀವಿಸುತ್ತಿದ್ದರು., ಹೀಗಿದ್ದ ತತ್ವಶಾ
ಇಂದು ಇರಬೇಕೆ ಬೇಡವೆ ಎಂಬ ಬಿಕ್ಕಟ್ಟಿಗೆ ಸಿಕ್ಕಿದೆ.

ತಾತ್ವಿಕರನ್ನಲ್ಲದೆ ಇನ್ನು ಯಾವ ಶಾಸ್ತ್ರಜ್ಞರನ್ನಾದರೂ ಇಂಥ
ಕೇಳಿದ್ದರೆ ಅವರು ಭೂಮಿಗೆ ಇಳಿದುಹೋಗುತ್ತಿದ್ದರು. ಆದರೆ ಈ ಪ್ರಶ್ನೆ ಇ
ತಾತ್ವಿಕರಿಗೆ ಬಹಳ ಉತ್ತೇಜನಕರವಾಗಿದೆ. ಏಕೆಂದರೆ, ಹೊಸ ಹೊಸ ಪ್ರಶ್ನೆಗ
ಹಾಕುವುದೇ ತತ್ವಶಾಸ್ತ್ರದ ಜೀವಾಳ. ವಿಚಾರಶಕ್ತಿ ತೂಕಡಿಸುತ್ತಿದ್ದರೆ ಅ
ಎಚ್ಚರಗೊಳಿಸುವುದು ತತ್ವಶಾಸ್ತ್ರದ ಕರ್ತವ್ಯ. ಇಂದು ಇಂಥ ಪ್ರಶ್ನೆ ಹು
ವುದನ್ನು ನೋಡಿದರೆ ತತ್ವಶಾಸ್ತ್ರವು ಒಂದು ನವಚೈತನ್ಯವನ್ನು ಪಡೆದಿದೆ

ಹೇಳಬೇಕು. ಹಿಂದೆ ಹೀಗೆ ತತ್ವಶಾಸ್ತ್ರವು ತನ್ನನ್ನು ತಾನೇ ಎಚ್ಚರಿಸಿಕೊಂಡಿದೆ; ಆದರೆ ಎಂದೂ ಇಷ್ಟು ಸ್ಪಷ್ಟವಾಗಿ ಎಚ್ಚರಿಸಿಕೊಂಡಿರಲಿಲ್ಲ. ಈ ಜಾಗೃತಿ ಆಧುನಿಕ ತತ್ವಶಾಸ್ತ್ರದ ವೈಶಿಷ್ಟ್ಯ. ಅದರ ಮೊದಲ ಆಚಾರ್ಯನು ಡೇಕಾರ್ಟ್. ಯಾವುದನ್ನೇ ಆಗಲಿ ಸಂಶಯದ ಒರೆಗಲ್ಲಿಗೆ ಇಡದೆ ನಂಬಬೇಡ ಎಂಬುದು ಅವನು ಹಾಕಿದ ಸೂತ್ರ. ಭೂಮಿ, ಅಂತರಿಕ್ಷ, ಇಹ, ಪರ, ಹಿಂದಿನದು, ಇಂದಿನದು ಎಲ್ಲ ವಿಚಾರವಾಗಿಯೂ ಸಂಶಯಪಡು; ಇನ್ನು ಸಂಶಯಪಡುವುದಕ್ಕೆ ಸಾಧ್ಯವಿಲ್ಲ ಎನ್ನುವವರೆಗೂ ಸಂಶಯಪಡು ಎಂದು ಬೋಧಿಸಿದನು. ಆದರೆ ಇವನು ತನ್ನ ಸಂಶಯತತ್ವ ಘೋಷಣವನ್ನು ಅಷ್ಟು ನಿಷ್ಠೆಯಿಂದ ಅನುಸರಿಸಿದನೆಂದು ಹೇಳುವುದಕ್ಕಾಗುವುದಿಲ್ಲ. ಎಲ್ಲರ ವಿಚಾರವಾಗಿಯೂ ಸಂಶಯಪಡಬಹುದು. ಆದರೆ ಸಂಶಯಪಡುವವನು ಉಂಟೆಂಬ ವಿಚಾರದಲ್ಲೇ ಸಂಶಯಪಡುವುದಕ್ಕೆ ಆಗುವುದಿಲ್ಲವೆಂಬ ಸಿದ್ಧಾಂತಕ್ಕೆ ಬಹಳ ಜಾಗ್ರತೆಯಾಗಿ ಬಂದುಬಿಟ್ಟನು. ಸಂಶಯದ ಹಿಂದೆ ಸಂಶಯಾತ್ಮನಿದ್ದಾನೆಂದು ಸಾಧಿಸಲು ಇಷ್ಟೇ ಸಾಲದು. ಸಂಶಯದಿಂದ ಸಂಶಯಭಾವವಿರುವುದೆಂದು ಮಾತ್ರ ಸ್ಪಷ್ಟಪಡುತ್ತದೆ. ಇದು ಬರಿಯ ಪುನರುಕ್ತಿ. ಆದರೆ ಡೇಕಾರ್ಟನು ಬಹಳ ಚಮತ್ಕಾರವಾಗಿ ಸಂಶಯಭಾವವನ್ನು ಆತ್ಮಜ್ಞಾನವಾಗಿ ತಿರುಗಿಸಿಬಿಟ್ಟನು. ಹಾವಾಡಿಗನು "ಏನೂ ಇಲ್ಲ ನೋಡಿ" ಎಂದು ಬಟ್ಟೆಯನ್ನು ಒದರಿ ಕೈಚಳಕದಿಂದ ಬುಟ್ಟಿಯಲ್ಲಿರುವ ಮಾವಿನ ಗಿಡವನ್ನು ಬಟ್ಟೆಯ ಒಳಕ್ಕೆ ಬರಿಸುವಂತೆ ಡೇಕಾರ್ಟನೂ ಯಾವ ದೇವರನ್ನು ಸಂಶಯಗ್ರಸ್ತವಾದ ವಿಷಯವೆಂದು ಪ್ರಾರಂಭದಲ್ಲಿ ಹೊರಹಾಕಿದನೋ ಅದನ್ನೇ ಕೊನೆಗೆ ಆತ್ಮಚೈತನ್ಯನಲ್ಲಿ ಅಡಗಿರುವ ಸ್ವತಸ್ಸಿದ್ಧವಾದ ಭಾವನೆಯೆಂದು, ಸರಿಯಾದ ಆಧಾರಗಳನ್ನು ಕೊಡದೆಯೇ, ಸಾರಿಬಿಟ್ಟನು. ಇದರಿಂದ ಡೇಕಾರ್ಟನ ಸಂಶಯವಾದವು ಕೊನೆಯಲ್ಲಿ ನಿರ್ವಿಚಾರವಾದವಾಗಿ ಪರಿಣಮಿಸಿತು. ಈ ನಿರ್ವಿಚಾರ (Dogmatism) ವಾದವನ್ನು ತಡೆಗಟ್ಟಲು ಇನ್ನು ಕೆಲವು ಆಧುನಿಕರು ಇಂದ್ರಿಯಾನುಭವವನ್ನು ಮೂಲವಾಗಿ ಇಟ್ಟುಕೊಂಡು ಅದರಲ್ಲಿ ಯಾವುದು ನಿಸ್ಸಂದೇಹವಾದುದು ಎಂಬುದನ್ನು ಹುಡುಕಲು ಹೊರಟರು. ಇಂದ್ರಿಯಾನುಭವದ ಒಂದೊಂದಂಶವನ್ನೂ ವಿಭಜನೆಮಾಡಿ ಅದರಲ್ಲಿ ಆತ್ಮವನ್ನಾಗಲಿ, ಭೌತವಸ್ತುವನ್ನಾಗಲಿ, ದೇವರನ್ನಾಗಲಿ ಕಾಣಲಾಗದೆ ಕೊನೆಯಲ್ಲಿ ಅವರು ಶೂನ್ಯವಾದಕ್ಕಿಳಿಯಬೇಕಾಯಿತು.

ಹೀಗೆ ಅನುಭವವನ್ನು ವಿಭಜನೆಮಾಡಿ ಒಂದನ್ನೊಂದರಿಂದ ಬೇರ್ಪಡಿಸುತ್ತ ಬಂದರೆ ಕೊನೆಯಲ್ಲಿ ಅವುಗಳನ್ನು ಒಂದುಗೂಡಿಸುವ ಸಂಬಂಧವೇ ಕೈಬಿಟ್ಟು ಹೋಗುತ್ತದೆ. ಹಾಗೆ ಒಂದುಗೂಡಿರುವ ಸಂಬಂಧವೇ ಮುಖ್ಯ; ಅನುಭವದಲ್ಲಿ ಕಂಡುಬರುವ ವೈವಿಧ್ಯ ಅನಾವಶ್ಯಕ; ವಿಶೇಷಾಂಶಗಳನ್ನು ಹೊರದೂಡುತ್ತ ಬಂದರೆ ಅನುಭವವು ಬರಿದಾಗಿ ಗೊಡ್ಡುಬೀಳುತ್ತದೆ. ಇವೆರಡು ವಿಧಾನಗಳೂ ಸರಿಯಲ್ಲ. ಒಂದುಗೂಡಿಸುವ ತತ್ವದ ಆಧಾರವಿಲ್ಲದ ಅನುಭವ ಕುರುಡು, ವೈವಿಧ್ಯವಿಲ್ಲದ

ಅನುಭವ ಬರದು. ಆದುದರಿಂದ ಇಮಾನ್ಯುಯಿಲ್ ಕ್ಯಾಂಟ್ ಎಂಬ ಜರ್ಮನ ತಾತ್ವಿಕನು ನಿಜವಾದ ತತ್ವಮಾರ್ಗವು ಸಂಶಯಮಾರ್ಗವೂ ಅಲ್ಲ, ನಿಶ್ಚಂ ಮಾರ್ಗವೂ ಅಲ್ಲ, ಸಂಯೋಜನೆಯ ಮಾರ್ಗವೂ ಅಲ್ಲ, ವಿಭಜನೆಯ ಮಾರ್ಗ ಅಲ್ಲ; ಸಂಶೋಧನೆಯ ಮಾರ್ಗವೇ ನಿಜವಾದ ವಿಮರ್ಶಮಾರ್ಗವೆಂದು (Cri cism) ಸಾರಿದನು. ಅನುಭವವನ್ನು ಬಿಟ್ಟು ಆದರ ಹೊರಗೆ ಏನಿದೆಯೆಂ ಊಹಿಸಿಕೊಂಡು ಪ್ರಯತ್ನಿಸುವುದು ತಪ್ಪುದಾರಿ. ಆಗ ಅರಿಯದುದರ ಮೂಲ ತಿಳಿವನ್ನುಂಟುಮಾಡಲು ಪ್ರಯತ್ನಮಾಡಿದಂತಾಗುವುದು. ಅನುಭವದಲ್ಲಿ ಹೊಕ್ಕು ಆದರ ಆದ್ಯಂತವನ್ನು ವಿಚಾರಮಾಡುವುದೇ ನಿಜವಾದ ತತ್ವಶಾಸ್ತ್ರ ದಾರಿ. ತಿಳಿಯದುದರಿಂದ ತಿಳಿವನ್ನೇರ್ಪಡಿಸಲು ಹೊರಡುವುದು ತಕ್ಕಮಾಗ ತಿಳಿದುದರ ತಳಹದಿಯ ಮೇಲೆ ತಿಳಿವಳಿಕೆಯನ್ನು ಬೆಳಸುವುದು ಸಾಧುಮಾ ಸಾಧುಮಾರ್ಗವನ್ನು ಹಿಡಿದವರು ಇರುವುದೆಲ್ಲಾ ಇಷ್ಟೆ, ಇನ್ನು ಬೇರೆ ಇಲ್ಲ ಎಂ ಹೇಳುವ ಹಠವಾದಿಗಳಲ್ಲ. ಇದೂ ಇಲ್ಲ, ಆದೂ ಇಲ್ಲ, ಯಾವುದೂ ಇಲ್ಲ ಎಂ ಹೇಳುವ ವೈನಾಶಿಕರೂ ಆಗುವುದಿಲ್ಲ. ಅನುಭವದಲ್ಲಿ ಸತ್ಯವೂ ಇದೆ ಮಿಥ್ಯ ಇದೆ; ಕನಸೂ ಅನುಭವವೇ; ಹುಚ್ಚೂ ಅನುಭವವೇ; ಭೌತಜ್ಞಾನವೂ ಭವವೇ; ಬ್ರಹ್ಮಜ್ಞಾನವೂ ಅನುಭವವೆ. ಆದುದರಿಂದ ಒಂದನ್ನು ಆಯ್ದುಕೊಂ ಇದೇ ಸತ್ಯ, ಇನ್ನೆಲ್ಲಾ ಮಿಥ್ಯ ಎಂದು ಹೇಳುವಹಾಗಿಲ್ಲ. ಅನುಭವ ವನ್ನೂ ವಿಮರ್ಶೆಮಾಡಿ ಎಲ್ಲದರ ಅರ್ಥ ತಿಳಿಸುವ ತತ್ವವನ್ನು ಕಂಡುಹಿಡಿಯ ಯತ್ನಿಸಬೇಕು. ಇದನ್ನು ಸೂತ್ರಿಸುವುದು ಸುಲಭ, ಆದರೆ ಸಾಧಿಸುವು ಕಷ್ಟ. ಇದನ್ನು ಬೋಧಿಸಿದ ಕ್ಯಾಂಟನೇ ಅದನ್ನು ಅನುಷ್ಠಿಸಲಾರದೆ ಹೋದ ಅವನ ಅನುಯಾಯಿಯಾದ ಹೆಗೆಲ್ಲನು ಅದನ್ನು ಅರ್ಥಮಾಡಿಕೊಂ ಬೆಳೆಸಲು ಭಗೀರಥ ಪ್ರಯತ್ನಮಾಡಿದನು. ಆ ಪ್ರಯತ್ನದ ಫಲವಾಗಿ ಅವನ ಶಾಸ್ತ್ರವು ಮಹಾಮೇರುವಿನಂತೆ ಬೆಳೆಯಿತು. ಆದರೆ ಅದು ಪೂರ್ಣವಾಯಿತೆ ಹೇಳುವಹಾಗಿಲ್ಲ. ಅನುಭವದ ಎಲ್ಲ ಅಂಶಗಳನ್ನೂ ಸಮ್ಯಗ್ದೃಷ್ಟಿಯಿಕೆ ನೋಡಲು ಪ್ರಯತ್ನಿಸಿದರೂ, ಅವನ ಮನಸ್ಸು ಒಂದು ಸಲ ತರ್ಕದ ಕಡೆ ತೂಗುತ್ತದೆ, ಇನ್ನೊಂದು ಸಲ ಮತದ ಕಡೆಗೆ ತೂಗುತ್ತದೆ; ಒಂದು ಸೌಂದರ್ಯದ ಕಡೆಗೆ ತೂಗುತ್ತದೆ, ಇನ್ನೊಂದು ಸಲ ಧರ್ಮದ ಕಡೆಗೆ ತೂಗು ಆದುದರಿಂದ ಕೆಲವರು ಅವನನ್ನು ವಿಜ್ಞಾನವಾದಿಯೆಂದು ಕರೆಯುವರು; ಇ ಕೆಲವರು ಬ್ರಹ್ಮವಾದಿಯೆಂದು ಕರೆಯುವರು; ಇನ್ನು ಕೆಲವರು ಮಾಯಾ ಯೆಂದು ಕರೆಯುವರು. ಇಂಥ ಭಿನ್ನಾಭಿಪ್ರಾಯಗಳಿಂದ ನೋಡಿದರೆ ಒ ವಿಷಯ ವ್ಯಕ್ತವಾಗುವುದು. ಅನುಭವವನ್ನು ಸಮತಾದೃಷ್ಟಿಯಿಂದ ನೋಡಿ ಅಂಶಗಳನ್ನೂ ಸಮನ್ವಯಮಾಡಲು ಪ್ರಯತ್ನಮಾಡಿದರೂ ಆ ಕೆಲಸ ಅವ ಸಮರ್ಪಕವಾಗಿ ಸಾಗಲಿಲ್ಲವೆಂಬುದು. ಆದರೆ ಹೆಗೆಲ್ಲಿನ ಅಭಿಮಾನಿಗಳು

ತತ್ವ ವಿಜ್ಞಾನವಾದವೂ ಹೌದು, ಬ್ರಹ್ಮವಾದವೂ* ಹೌದು; ಆದುದರಿಂದ ಅದು ಸರ್ವತೋಮುಖವಾದ ವಾದ, ಸರ್ವಸಮ್ಮತವಾದ ವಾದ ಎಂದು ಹೇಳುವರು. ಹೀಗೆ ಹೇಳುವವರು ಕೇವಲ ಹೆಗೆಲ್ಲಿನ ಅನುಯಾಯಿಗಳು.

ಹೆಗೆಲ್ಲಿನ ಕಾಲದಿಂದೀಚೆಗೆ ತತ್ವಶಾಸ್ತ್ರ ಚರಿತ್ರೆಯಲ್ಲಿ ಈ ಸಮನ್ವಯವಾದಕ್ಕೆ ವಿರೋಧ ಬಹಳ. ಒಬ್ಬೊಬ್ಬ ತಾತ್ವಿಕನೂ ಅನುಭವದ ಒಂದೊಂದು ಅಂಶವನ್ನೋ, ವಸ್ತುವನ್ನೋ, ವಿಷಯವನ್ನೋ, ವಿಧಾನವನ್ನೋ ಹಿಡಿದು ಅದನ್ನೇ ಬ್ರಹ್ಮಾಂಡದ ಬೀಗದ ಕೈಯಾಗಿ ಉಪಯೋಗಿಸಲು ಪ್ರಯತ್ನ ಮಾಡಿರುತ್ತಾನೆ. ಷೋಪನ್ ಹೋರನು ಚೈತನ್ಯವನ್ನು ಬಿಟ್ಟು, ಸುಪ್ತಚಿತ್ರವೇ ಪ್ರಪಂಚದ ಮೂಲವೆಂದು ವಾದಮಾಡಿ ಜುಗುಪ್ಸೆಯೇ ಜೀವನದ ಅವಸಾನವೆಂದು ಸಾರಿರುವನು. ಬರ್ಗ್ ಸನ್ನನು ತರ್ಕದ ಮಾರ್ಗವನ್ನು ಬಿಟ್ಟು ತತ್ವಶಾಸ್ತ್ರಕ್ಕೆ ಪ್ರತಿಭಾನದ (Intuition) ದಾರಿಯೇ ನಿಜವಾದ ದಾರಿಯೆಂದು ಕೇವಲ ನಿರ್ವಿಚಾರವಾದಿಯಾಗಿ ಬಿಟ್ಟನು. ಹರ್ಬರ್ಟ್ ಸ್ಪೆನ್ಸರ್, ಕಾಮ್ಟೆ ಮುಂತಾದವರು ಕೇವಲ ವಿಜ್ಞಾನ ಮಾರ್ಗವನ್ನು ಹಿಡಿದು ತತ್ವಶಾಸ್ತ್ರವನ್ನು ಬರಿಯ ವಿಜ್ಞಾನದ ಮುದ್ದೆಯಾಗಿ ಮಾಡಿಬಿಟ್ಟರು. ಬಟ್ರ್ರಂಡ್ ರಸಲ್ ಮುಂತಾದವರು ತತ್ವಶಾಸ್ತ್ರವನ್ನು ಒಂದು ವಿಧವಾದ ಗಣಿತ ತರ್ಕವಾಗಿ ಮಾಡಿರುತ್ತಾರೆ. ಇದನ್ನೆಲ್ಲಾ ನೋಡಿ ಅಮೆರಿಕದ ಸುಪ್ರಸಿದ್ಧ ತಾತ್ವಿಕನಾದ ವಿಲಿಯಂ ಜೇಮ್ಸನು ಆದ್ಯಂತದಲ್ಲಿ ಸತ್ಯ ಒಂದೇ ಎಂದು ಹೇಳುವುದು ಕಷ್ಟ; ಸತ್ಯವು ಅನೇಕಾಂತವಾಗಿರುವುದು, ಆದುದರಿಂದ ಇದೇ ಸತ್ಯವೆಂದು ವಾದಿಸುವುದು ಮೂಢತನ, ಯಾವುದು ಯಾವ ಯಾವ ವ್ಯವಹಾರಕ್ಕೆ ಆಗತ್ಯವೋ ಅದು ಆಯಾ ವ್ಯವಹಾರದೃಷ್ಟಿಯಿಂದ ಸತ್ಯ ಎಂದು ವಾದಿಸಿದನು.

ಹೀಗೆ ತತ್ವಶಾಸ್ತ್ರದ ಪಾಳೆಯದಲ್ಲಿ ವಿಶೇಷವಾದ ಭಿನ್ನತೆ ಮತ್ತು ವಿವಾದಗಳು ಹುಟ್ಟಿದುದರಿಂದ ಅದು ಕನ್ನಡಿಗರು ಹೇಳುವಂತೆ "ಜಿಜ್ಞಾಸ"ವಾಗಿ ಪರಿಣಮಿಸಿದೆ. ಆದುದರಿಂದಲೆ, ಇದು ಏಕಿರಬೇಕು, ಇದರಿಂದ ಏನು ಪ್ರಯೋಜನ ಎಂದು ಜನರು ಕೇಳುತ್ತಿರುವುದು. ಈ ಪ್ರಶ್ನೆ ಹುಟ್ಟಿರುವುದು ತತ್ವಶಾಸ್ತ್ರದ ಒಳ್ಳೆಯದಕ್ಕಾಗಿಯೇ ಹೊರತು ಕೆಟ್ಟದ್ದಕ್ಕಲ್ಲ. ಇದರಿಂದ ತತ್ವಶಾಸ್ತ್ರಜ್ಞರು ಸ್ವಲ್ಪ ಎಚ್ಚರಗೊಳ್ಳು ವುದಕ್ಕೆ ಅವಕಾಶ ಒದಗಿದೆ. ಆಕ್ಸ್‌ಫರ್ಡಿನ ತಾತ್ವಿಕರು ಕೇಂಬ್ರಿಡ್ಜಿನ ತಾತ್ವಿಕರನ್ನು ಮರೆತು ತಮ್ಮದೇ ಒಂದು ದಾರಿಯನ್ನು ಹಿಡಿದು ಹೋಗುವುದು ಸರಿಯೇ, ಅಮೆರಿಕಾದವರು ಯೂರೋಪಿನವರನ್ನು ಮರೆತು ತಮ್ಮದೇ ಒಂದು ಜಾಡು ಹಿಡಿದು ಹೋಗುವುದು ಸಾಧುವೇ, ಪಾಶ್ಚಾತ್ಯರು ಪೌರಸ್ತ್ಯರ ಕಡೆಗೆ ಬೆನ್ನು ತಿರುಗಿಸಿ ತಮ್ಮ ತತ್ವವೇ ತತ್ವವೆಂದು ತಿಳಿದಿರುವುದು ಯುಕ್ತವೇ ಎಂದು ಸ್ವಲ್ಪ

---

*ಹೆಗೆಲ್ಲನು ಬ್ರಹ್ಮ ಎಂಬ ಪದವನ್ನು ಉಪಯೋಗಿಸಿದನೆಂದು ತಿಳಿಯಕೂಡದು. ಅವನ Absolute ಎಂಬುದಕ್ಕೆ ಬ್ರಹ್ಮ ಎಂಬುದನ್ನು ಸಮಾನಪದವಾಗಿ ಉಪಯೋಗಿಸಿದೆ.

ಮಟ್ಟಿಗೆ ವಿಚಾರಮಾಡುವಂತಾಗಿದೆ. ತತ್ವಶಾಸ್ತ್ರವು ವಿಜ್ಞಾನಿಗಳ ವೇಶ್ಯೆಯ
ಇಲ್ಲ ಮತದ ಮನೆವಾರ್ತೆಯವನೇ, ರಾಜಕಾರಣನಾದ ಕೈಕೆಲಸದವಳೇ, ಎ
ಪ್ರಶ್ನೆ ಮೂಡುತ್ತದೆ. ಇದರಿಂದ ತಾತ್ವಿಕರ ಮನಸ್ಸು, ಆತ್ಮಗೌರವ ಆತ್ಮನಿಷ್ಠ
ಕಡೆ ತಿರುಗಿದೆ. ತತ್ವಶಾಸ್ತ್ರದ ಬಾಳೇನು, ಬಯಕೆ ಏನು, ಅದು ಬದುಕುವು
ಹೇಗೆ, ಅದು ಜೀವನದಲ್ಲಿ ಪರಿಣಾಮಕಾರಿಯಾಗುವುದೆಂತು, ಎಂದು ತಾತ್ವಿಕ
ವಿಚಾರ ಮಾಡತೊಡಗಿದ್ದಾರೆ.

ಯಾವನು ಸ್ವತಂತ್ರನೋ ಅವನು ರಾಜ; ತನ್ನನ್ನು ತಾನು ಯಾವ
ಮರೆಯುವನೋ ಅವನು ದಾಸ. ಯಾವನು ಸತ್ಯವಂತನೋ ಅವನು ಶಕ್ತಿವ
ಯಾವನು ತನ್ನನ್ನೂ ಇತರರನ್ನೂ ವಂಚಿಸಲು ಯತ್ನಿಸುವನೋ ಅವನು ನಿಸ್ತೇಜ
ಹೀಗೆ ಮನುಷ್ಯನ ವಿಚಾರವಾಗಿ ಹೇಳಿದುದು ಶಾಸ್ತ್ರಗಳಿಗೂ ಅನ್ವಯಿಸುತ್ತ
ಯಾವ ಶಾಸ್ತ್ರವು ಒಂದು ಗುರಿಯಿಟ್ಟುಕೊಂಡು ಪ್ರಾಮಾಣಿಕವಾಗಿ ಮ
ಪ್ರತಿಷ್ಠೆಯಿಲ್ಲದೆ ಕೆಲಸಮಾಡಲು ಪ್ರಯತ್ನಿಸುತ್ತದೆಯೋ ಅದು ಬೆಳೆಯುತ್ತ
ತನ್ನ ಧ್ಯೇಯವನ್ನು ಬಿಟ್ಟು, ತಾನೇ ಕಷ್ಟಪಟ್ಟು ಕೆಲಸಮಾಡದೆ, ಇತರರ ಕ
ದಿಂದ ತನ್ನ ಮನೆ ತುಂಬಿಸಿಕೊಳ್ಳಲು ಪ್ರಯತ್ನಪಟ್ಟರೆ, ಇತರರ ಸೆರಗು ಹಿ
ಮುಂದೆ ಹೋಗಲು ಯತ್ನಿಸಿದರೆ, ಅದು ಬೆಳೆಯುವುದೂ ಇಲ್ಲ, ಅದಕ್ಕೆ ಗೌರವ
ಇಲ್ಲ. ಭೌತಶಾಸ್ತ್ರ ಬೆಳೆದಿರುವುದು, ಅದು ಪರಿಣಾಮಕಾರಿಯಾಗಿರುವುದು, ಅ
ಅವಿಚ್ಛಿನ್ನವಾದ ಮತ್ತು ಪ್ರಾಮಾಣಿಕವಾದ ದುಡಿತದಿಂದ; ಅದು ದುಡಿಯ
ದನ್ನು ಬಿಟ್ಟು ಗಣಿತದ ಬಲದಿಂದಲೇ ಬದುಕುತ್ತೇನೆಂದು ಹೊರಟರೆ ಬಂಜ
ಹೋಗುತ್ತದೆ. ತತ್ವಶಾಸ್ತ್ರವು ಹಿಂದೆ ಹಿರಿದಾಗಿದ್ದುದು, ಅದರ ಪ್ರಾಮಾಣಿ
ಯಿಂದ ಮತ್ತು ಸಾಹಸದಿಂದ. ವಿಮರ್ಶೆ, ವಿಚಾರಪರತೆ, ಮನೋವೈಶ
ಸಮತಾಭಾವ, ಸಮ್ಯಗ್ದರ್ಶನ, ಇವು ಸಾಕ್ರಟೀಸ್, ಪ್ಲೇಟೋ, ಸ್ಪಿನೋ
ಇಂಥವರಲ್ಲಿ ಮೂರ್ತಿಮತ್ತಾಗಿದ್ದುವು. ಅವರು ಹೇಳಿದುದನ್ನು ಒಪ್ಪಲಿ ಬಿ
ಅವರನ್ನು ಅಲಕ್ಷ್ಯದಿಂದ, ಅಗೌರವದಿಂದ, ನೋಡುವುದು ಅಸಾಧ್ಯ. ಅ
ಹೇಳಿದುದನ್ನು ಕೇಳಿದವರ, ಅವರು ಬರೆದುದನ್ನು ಓದಿದವರ, ಮನಸ್ಸು
ಗೊಳ್ಳುತ್ತದೆ; ಚಿತ್ತಸ್ಥೈರ್ಯ ಹೊಂದುತ್ತದೆ; ಅಂತಃಕರಣ ಪರಿಶುದ್ಧವಾಗು
ತೇಜಸ್ಸು ವೃದ್ಧಿಯಾಗುತ್ತದೆ; ಉತ್ಸಾಹವು ಉಕ್ಕಿ ಹರಿಯುತ್ತದೆ;
ಶಾಂತಿಯುಂಟಾಗುತ್ತದೆ. ಇಂದು ತತ್ವಶಾಸ್ತ್ರವು ದುಃಸ್ಥಿತಿಗೆ ಇಳಿದಿರುವುದು
ಸಹಜವಾಗಿ ಇರಬೇಕಾದ ಗುಣಗಳನ್ನು ಕಳೆದುಕೊಂಡಿರುವುದರಿಂದ. ತತ್ವಶಾ
ಬರಿಯ ಚಮತ್ಕಾರವಲ್ಲ. ಅದರ ಜೀವಾಳ ಸತ್ಯಶ್ರದ್ಧೆ; ಕುರುಡು ಪ್ರೇಮ
ಎಚ್ಚರಗೊಂಡಿರುವ ಶ್ರದ್ಧೆ. ನಿಜವಾದ ತಾತ್ವಿಕನಿಗೆ ಸತ್ಯದ ಮುಂದೆ ಯಾ
ಇಲ್ಲ. ಅವನಿಗೆ ತನ್ನ ಜನ, ತನ್ನ ಮತ, ತನ್ನ ಪ್ರಾಣ—ಎಲ್ಲವನ್ನೂ ಸತ್ಯ
ತ್ಯಜಿಸುವ ಮನೋದಾರ್ಢ್ಯವಿದೆ. ಇದನ್ನೇ ನಮ್ಮವರು "ಇಹಾಮುತ್ರ ಫಲ

ಕೈಯಿರಾಗ " ಎಂದು ಹೇಳುವುದು. ಹೀಗೆ ಹೇಳಿದ ಮಾತ್ರಕ್ಕೆ ತಾತ್ವಿಕರು ಹಾಲು
ಹಾ, ತುಪ್ಪ ಹಣ್ಣು ಹಂಪಲು ಭಕ್ಷ್ಯಭೋಜ್ಯಗಳ ಸವಿಯನ್ನಾಗಲಿ, ದಾಂಪತ್ಯ ಜೀವನದ
ನಿಷ್ಠೆಸುಖವನ್ನಾಗಲಿ, ತಮ್ಮ ಪೌರಹಕ್ಕುಗಳ ಸಾಧನೆಯನ್ನಾಗಲಿ ಉಪೇಕ್ಷೆಮಾಡುವ
ಕುವುಂದಲ್ಲ. ಮಾನುಷ ಜೀವನದ ಸುಖಗಳನ್ನೂ ದುಃಖಗಳನ್ನೂ ಚೆನ್ನಾಗಿ
ತಾತ್ವಿಕರನುಭವಿಸಿಯೂ ಅವಕ್ಕೋಸ್ಕರ ಸತ್ಯವನ್ನು ತ್ಯಜಿಸದವರು ; ಸುಖದ ಸವಿಯನ್ನು
ಸವಿದೂ ಅದಕ್ಕೆ ಮನಸೋಲದವರು ; ಕಷ್ಟಗಳ ಸಂಕಟವನ್ನು ಅನುಭವಿಸಿಯೂ
ಮಾನಿದಕ್ಕೆ ಕುಗ್ಗದವರು, ಜಗ್ಗದವರು. ನಿಜವಾದ ತಾತ್ವಿಕರು ಎಲ್ಲ ಅನುಭವ
ಕ್ತಿವಗಳನ್ನೂ ಅನುಭವಿಸಿ ಆದರಲ್ಲಿ ಯಾವುದು ನಿತ್ಯವಾದುದು, ಯಾವುದು ಅನಿತ್ಯ
ಸ್ತೇಬಾದುದು ಎಂಬುದನ್ನು ತಿಳಿದಿರತಕ್ಕವರು. ಇಂಥ ತಿಳಿವಳಿಕೆಯನ್ನು ಸಾಕ್ರಟೀಸನು
ಸುಪ್ತಪಡೆದಿದ್ದನು. ತಾನು ಯಾವ ಸತ್ಯಧರ್ಮಗಳಿಗಾಗಿ ಪ್ರಾಣವನ್ನು ತ್ಯಜಿಸಿದನೋ
ಮವು ನಿತ್ಯವಾದವುಗಳು ಎಂದು ಪೂರ್ಣವಾಗಿ ನಂಬಿದ್ದನು. ಅವನ ಚರಿತ್ರೆಯನ್ನು
ಯುತ್ತುದಿದವನಿಗೆ ಇಂದೂ ಸಾಕ್ರಟೀಸನ ಆತ್ಮ ಬದುಕಿದೆ ಎಂದು ಚೆನ್ನಾಗಿ ಅರಿವಾಗು
ರ ಕ್ತ್ತದೆ. ಇನ್ನು ಹತ್ತುಸಾವಿರ ವರುಷಗಳಾದ ಮೇಲೆ ಸಾಕ್ರೇಟಿಸನ ಚರಿತ್ರೆಯನ್ನು
ಹಿಸಿದಿದಾಗಲೂ ಇದೇ ಭಾವನೆ ಉಂಟಾಗುವುದು. ನಿತ್ಯವಾದುದು ಎಂಬುದರ
ಗಾರನಿರೂಪಣೆ ಶತಮಾನದಿಂದ ಶತಮಾನಕ್ಕೆ ಬದಲಾಯಿಸಲಿ, ನಮ್ಮ ತತ್ವ ಸಾಕ್ರಟೀಸನ
ತು, ತ್ವದಿಂದ ಬೇರೆಯಾಗಲಿ ; ಆದರೆ ತಾತ್ವಿಕನೆಂದೆನಿಸಿಕೊಳ್ಳಬೇಕಾದರೆ ಅವನ
ಡಿಯಸತ್ಯಶ್ರದ್ಧೆ, ಧರ್ಮಶ್ರದ್ಧೆ ನಮಗಿರುವುದು ಅತ್ಯಾವಶ್ಯಕ. ಎಲ್ಲ ಕಾಲಕ್ಕೂ
ಎಂಜರಬೇಕಾದುದು ಸತ್ಯ ಧರ್ಮಗಳ ಅರಿವು. ಈ ಅರಿವು ತತ್ವಶಾಸ್ತ್ರದ ಜೀವ,
ಮಾಣಿದಿಲ್ಲದ ತತ್ವವು ಬರಿಯ ಬೂಟಾಟಿಕೆ. ಆ ಅರಿವಿನಿಂದ ಬೆಳಗಾದ ತತ್ವವು
ವೈಶಮತ್ಕಾರವಾದ ತರ್ಕದಿಂದ ಎಷ್ಟು ಅಲಂಕೃತವಾದರೂ ಅದು ಶೃಂಗಾರಮಾಡಿದ
ಪ್ರಸ್ನೋಸವದಂತೆಯೇ.

ತತ್ವಜ್ಞಾನಿಯಾಗಲು ಬರಿಯ ಶ್ರದ್ಧೆಯಿದ್ದರೆ ಸಾಲದು. ಕೆಲವು ಸಾಧನಗಳೂ
ಬೇಕು. ಅವು ಯಾವುವೆಂದರೆ ; ಶಮದಮಾದಿ ಸಾಧನ ಚತುಷ್ಟಯಗಳು. ಇವು
ಅನಾವಶ್ಯಕವೆಂಬುದು ಸಾಮಾನ್ಯವಾಗಿ ಪಾಶ್ಚಾತ್ಯ ತತ್ವಜ್ಞರ ಅಭಿಪ್ರಾಯ.
ಸತ್ಯವನ್ನು ಕಂಡುಹಿಡಿಯಲು ಬುದ್ಧಿ ಚುರುಕಾಗಿರಬೇಕು. ತರ್ಕ ಸರಿಹೋಗ
ಬೇಕು. ಶಮದಮಗಳೇತಕ್ಕೆ ಎಂದು ಅವರು ಕೇಳುತ್ತಾರೆ. ಭಾರತೀಯ
ತಾತ್ವಿಕರಿಗೆ ಮತವೂ ತತ್ವಶಾಸ್ತ್ರವೂ ಒಂದೇ ಆಗಿರುವುದರಿಂದ ಹೀಗೆ ಹೇಳುತ್ತಾರೆ;
ತತ್ವಶಾಸ್ತ್ರವು ಮತದಿಂದ ಬೇರೆಯಾಗಿರಬೇಕು. ಹಾಗಿರುವುದೇ ಅದರ ಅಭಿವೃದ್ಧಿಗೆ
ಆಧಾರಭೂತವಾದದ್ದು ಎಂದು ಪಾಶ್ಚಾತ್ಯರು ಹೇಳುವುದು ವಾಡಿಕೆಯಾಗಿದೆ.
ಈಗ ಆಧುನಿಕ ಭಾರತೀಯ ತಾತ್ವಿಕರೂ ಅವರ ಪಲ್ಲವಿಯನ್ನೇ ಹಿಡಿದು ಹಾಡು
ತ್ತಿದ್ದಾರೆ.

ಪಾಶ್ಚಾತ್ಯ ಮತ್ತು ಭಾರತೀಯ ತಾತ್ವಿಕರ ಈ ವಾದವನ್ನು ಸ್ವಲ್ಪ ವಿಚಾರ

ಮಾಡುವುದು ಆವಶ್ಯಕ. ಭಾರತೀಯ ತಾತ್ತ್ವಿಕರು ಶಮದಮಾದಿಸಾಧನಗ
ಆವಶ್ಯಕವೆಂದು ಹೇಳಿದಾಗ ಅವರು ದೇವತಾರ್ಚನೆ, ದೇವತಾರಾಧನೆ, ದಾನಧ
ಮಾಡುವುದು—ಇವು ತತ್ತ್ವಾನ್ವೇಷಣಕ್ಕೆ ಸಹಕಾರಿಗಳೆಂದು ಹೇಳಿಲ್ಲ. ಹ
ಹೇಳಿದ್ದರೆ ಅವರು ತತ್ತ್ವಶಾಸ್ತ್ರವನ್ನೂ ಮತವನ್ನೂ ಒಂದುಮಾಡಿದಂತಾಗುತ್ತ
ಭಾರತೀಯರಿಗೆ ತತ್ತ್ವಶಾಸ್ತ್ರವು ಬರಿಯ ಈಶ್ವರನಲ್ಲಿ ಭಕ್ತಿಯಲ್ಲ; ಹಾಗಿದ್ದಿ
ಸಾಂಖ್ಯರಲ್ಲಿ, ಬೌದ್ಧರಲ್ಲಿ ನಿರೀಶ್ವರ ತತ್ತ್ವಕ್ಕೆ ಅವಕಾಶವೆಲ್ಲಿರುತ್ತಿತ್ತು? ಶಮದಮ
ಗಳನ್ನು ಅವರು ಹೇಳಿರುವುದು ತತ್ತ್ವಾನ್ವೇಷಣಕ್ಕೆ ಪೋಷಕವಾಗಿ, ಅದು
ಹೊಂದಲೆಂಬ ಉದ್ದೇಶದಿಂದ. ಶಮದಮಾದಿ ಸಾಧನವಿಲ್ಲದಿದ್ದರೆ ತತ್ತ್ವಜ್ಞ
ಅಸಹನೆ, ಅಹಂಕಾರ, ಪೂರ್ವಗ್ರಹ, ಅಭಿಮಾನಗಳಿಗೆ ಮನಸೋತು
ಅಭಿಮಾನ ಅಹಂಕಾರಗಳಿಗನುಸಾರವಾಗಿ ವಾದವನ್ನು ಬೆಳಸುವ ಸ
ಹೆಚ್ಚು. ಬ್ರ್ಯಾಡ್ಲೆ ಹೇಳುವಂತೆ ನಾವು ಯಾವುದನ್ನು ಸ್ವಾಭಾವಿಕವಾಗಿ ನ
ತ್ತೇವೆಯೋ ಅಂಥ ನಂಬಿಕೆಗಳಿಗೆ ಕುಕಾರಣಗಳನ್ನು ಕಂಡುಹಿಡಿಯು
ತತ್ತ್ವಶಾಸ್ತ್ರದ ಕೆಲಸವಾಗುತ್ತದೆ. ಎಷ್ಟು ವಿಚಾರನಿಷ್ಠರಾದರೂ ಎಷ್ಟು ಶುದ್ಧಾ
ಕರಣರಾದರೂ, ಪ್ಲೇಟೋ, ಸ್ಪಿನೋಸಾ ಇಂಥ ತಾತ್ತ್ವಿಕರು ಕೂಡ
ಅಭಿಮಾನಗಳಿಗೆ ಮನಸೋತಿದ್ದಾರೆ. ಹೀಗಿರುವಲ್ಲಿ ಅಂತಃಕರಣಶುದ್ಧಿ ಅನಾವ
ವೆಂದು ಹೇಳುವುದು ಶುದ್ಧ ಅವಿವೇಕ. ಈ ವಿವೇಕವಿಲ್ಲದುದರಿಂದಲೇ ಸಾಮ
ವಾಗಿ ಪಾಶ್ಚಾತ್ಯ ತಾತ್ತ್ವಿಕರು ಅಭಿಮಾನ ಮತ್ತು ಅಂಧಶ್ರದ್ಧೆಗಳಿಗೆ ಮನಸೋ
ವುದು. ಸಾಮಾನ್ಯವಾಗಿ ಪಾಶ್ಚಾತ್ಯ ತಾತ್ತ್ವಿಕರು ಕ್ರೈಸ್ತಮತಕ್ಕೆ ಶರಣ
ಜೇಮ್ಸ್ ವಾರ್ಡ್, ಪ್ರಿಂಗಲ್ ಪ್ಯಾಟಿಸನ್, ಮುಂತಾದವರು ಕ್ರೈಸ್ತ
ನಿರೂಪಣೆ ಮಾಡುವಾಗ ಕ್ರೈಸ್ತಮತೋದ್ಧಾರಕ್ಕಾಗಿಯೇ ಕಂಕಣ ಕಟ್ಟಿರುವ
ಕಾಣುತ್ತಾರೆ. ಕೊನೆಗೆ ಹೆಗೆಲ್ಲನು ಕೂಡ ಮತತತ್ತ್ವ ರಾಜಕೀಯತತ್ತ್ವ ವಿ
ಗಳಲ್ಲಿ ಕ್ರೈಸ್ತಮತಪಕ್ಷಪಾತಿಯಾಗಿಯೂ, ಜರ್ಮನ್ ರಾಜಕೀಯ ಪಕ್ಷ
ಯಾಗಿಯೂ ವಾದಮಾಡುತ್ತಾನೆ.

ಆಧುನಿಕ ತಾತ್ತ್ವಿಕರು ವಿಶೇಷವಾಗಿ ವಿಶ್ವವಿದ್ಯಾನಿಲಯಗಳ ಮತ್ತು
ಕೀಯ ಸಂಸ್ಥೆಗಳ ಆಸರೆಯಲ್ಲಿ ಜೀವಿಸುವವರಾಗಿರುತ್ತಾರೆ. ಆದುದರಿಂದ
ತಾವಿರುವ ಸನ್ನಿವೇಶಕ್ಕೆ ತಕ್ಕಂತೆ ಆಲೋಚಿಸಬೇಕಾಗಿದೆ. ತತ್ತ್ವಶಾಸ್ತ್ರವು ಪಾ
ದೇಶಗಳಲ್ಲಿ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಿದೆ. ಜೀವನದಲ್ಲಿ ಸ
ದೃಷ್ಟಿಯನ್ನು ಅಂಕುರಗೊಳಿಸಿ ಅದನ್ನು ವಿಕಸಿಸುವುದರ ಬದಲು ಅದು
ಶ್ರದ್ಧೆಗಳಿಗೂ ಮತ್ತು ಸಂಕುಚಿತ ಭಾವನೆಗಳಿಗೂ ವಕಾಲತ್ತು ವಹಿಸಿದೆ. ಜೀ
ಮುನ್ನೋಟವನ್ನೂ ಮುಂದೋಟವನ್ನೂ ತಡೆದು ನಿಲ್ಲಿಸಿಬಿಟ್ಟಿದೆ; ಇದಕ್ಕೆ
ವಾದ ಕಾರಣ ಅಂತಃಕರಣ ಶುದ್ಧಿಯಿಲ್ಲದಿರುವುದು: ತತ್ತ್ವಶಾಸ್ತ್ರಜ್ಞರು
ಹೃದಯವುಳ್ಳವರಾಗಿಲ್ಲದಿರುವುದು.

ತಾತ್ವಿಕನ ಬುದ್ಧಿ ಚುರುಕಾಗಿದ್ದಮಾತ್ರಕ್ಕೇ, ತರ್ಕ ತೀಕ್ಷ್ಣವಾಗಿದ್ದಮಾತ್ರಕ್ಕೇ, ಅವನಿಗೆ ಸತ್ಯಬೋಧೆಯಾಗುವುದೆಂದು ಹೇಳುವುದಕ್ಕಾಗುವುದಿಲ್ಲ. ಬುದ್ಧಿಚಾತುರ್ಯ, ತರ್ಕಮಾಡುವ ಶಕ್ತಿ ಇವು ಇಬ್ಬಾಯ ಅಲಗುಗಳು. ಸುಳ್ಳಾದುದಕ್ಕೆ ನಿಜದ ತೋರಿಕೆಯನ್ನು ಕೊಡಬಹುದು; ಸತ್ಯವಾದುದನ್ನು ಸಂಶಯಾಸ್ಪದವನ್ನಾಗಿ ಮಾಡಬಹುದು; ಸುಳ್ಳನ್ನು ಸುಳ್ಳೆಂದೂ ನಿಜವನ್ನು ನಿಜವೆಂದೂ ಸ್ಥಾಪಿಸಬಹುದು. ತರ್ಕ ಯಾವ ರೀತಿಯಲ್ಲಿ ಉಪಯೋಗವಾಗುತ್ತದೆ ಎಂಬುದು ಆಯಾ ವ್ಯಕ್ತಿಯ ಅಂತಃಕರಣವೃತ್ತಿಯನ್ನು ಅನುಸರಿಸುತ್ತದೆ. ಇದು ಶುದ್ಧವಾದುದೂ ಸತ್ಯಶಾಂತಿಗಳನ್ನೂ ಬಯಸುವುದೂ ಆದರೆ ಅದಕ್ಕೆ ತಕ್ಕಂತೆ ಬುದ್ಧಿ ಕೆಲಸಮಾಡುತ್ತದೆ. ಇದು ಬರಿಯ ವಾದವಲ್ಲ, ಸತ್ಯವೆಂಬುದನ್ನು ಒರೆಹಚ್ಚಿ ತೋರಿಸಬಹುದು. ಸಾಮಾನ್ಯವಾಗಿ ಪೌರಸ್ತ್ಯ ದೇಶಗಳ ತತ್ವವಿಚಾರ ಮಾಡುವಾಗ ಪಾಶ್ಚಾತ್ಯ ತಾತ್ವಿಕರ ಅಂತರಂಗ ಯಾವ ರೀತಿಯಿದೆ? ಹಾಗೆಯೇ ಪಾಶ್ಚಾತ್ಯ ತತ್ವಗಳನ್ನೂ ವಿಚಾರ ಮಾಡುವಾಗ ಪ್ರಾಚ್ಯತಾತ್ವಿಕರ ಅಂತರಂಗ ಯಾವ ರೀತಿಯಿದೆ? ಕೇವಲ ಪೈಪೋಟಿಯ ಪ್ರತಿಷ್ಠೆ ಇಬ್ಬರ ವಾದದಲ್ಲೂ ಎದ್ದುಕಾಣುತ್ತದೆ. ಹಿಂದೂದರ್ಶನಗಳನ್ನು ಒಳಹೊಕ್ಕು ನೋಡಿ ಅವುಗಳ ಜೀವಾಳವನ್ನು ತಿಳಿದ ಪಾಶ್ಚಾತ್ಯ ತಾತ್ವಿಕರು ಅತಿವಿರಳ; ಹಾಗೆಯೇ ಪಾಶ್ಚಾತ್ಯ ತಾತ್ವಿಕರ ಅಂತರ್ಯವನ್ನು ತಿಳಿದು ಅದನ್ನು ನಿಷ್ಕಲ್ಮಷ ಮನಸ್ಸಿನಿಂದ ಚಿತ್ರಿಸಿರುವ ಪೌರಸ್ತ್ಯ ತಾತ್ವಿಕರೂ ಅತಿವಿರಳ. ತಮ್ಮ ತಮ್ಮ ಪ್ರತಿಷ್ಠೆಯನ್ನು ಸಾಧಿಸಲು ಹೊರಟಿರುವವರೇ ಹೆಚ್ಚು. ಇಲ್ಲಿ ವ್ಯಕ್ತಿಗಳ ಹೆಸರನ್ನು ಹೇಳುವುದು ಅನಾವಶ್ಯಕ. ಪೂರ್ವದೇಶಗಳಲ್ಲಿಯಾಗಲಿ, ಪಶ್ಚಿಮದೇಶಗಳಲ್ಲಿಯಾಗಲಿ ತಾತ್ವಿಕರು ತಮ್ಮ ಶಾಸ್ತ್ರಪುಷ್ಟಿಗಾಗಿ ಇರಬೇಕಾದ ಜೀವನ ಧರ್ಮವನ್ನು ಆಚರಿಸದೆ ಇರುವುದರಿಂದಲೇ ಎರಡು ದೇಶಗಳಲ್ಲೂ ತತ್ವಜ್ಞರ ಮಾತಿಗೆ ಬೆಲೆ ಇಲ್ಲದಂತೆ ಆಗಿದೆ. ಆದುದರಿಂದ ತತ್ವಶಾಸ್ತ್ರವು ತಲೆ ಎತ್ತಬೇಕಾದರೆ ಅದರ ಉಪಾಸಕರ ಮನೋಧರ್ಮ ಮಾರ್ಪಡಬೇಕು; ಅವರು ಶುದ್ಧಸತ್ವರಾಗಬೇಕು. ಶುದ್ಧಸತ್ವವಿರುವವರ ಮಾತು ತರ್ಕಶುದ್ಧವಾದರೆ ಆಗ ಅದು ಶುದ್ಧಸತ್ಯವಾಗಿ ಪರಿಣಮಿಸುತ್ತದೆ.

ಇದುವರೆಗೂ ತತ್ವಶಾಸ್ತ್ರದಲ್ಲಿ ವ್ಯಕ್ತಿತ್ವಕ್ಕೂ ವಾದಕ್ಕೂ ಇರುವ ಸಂಬಂಧವನ್ನು ವಿಚಾರಮಾಡಿದುದಾಯಿತು. ಇನ್ನು ತತ್ವಶಾಸ್ತ್ರ ಮತ್ತು ವಿಜ್ಞಾನ, ತತ್ವಶಾಸ್ತ್ರ ಮತ್ತು ಮತ— ಈ ವಿಚಾರಗಳಲ್ಲಿ ಆಧುನಿಕ ದೃಷ್ಟಿವೈಶಿಷ್ಟ್ಯವನ್ನು ವಿಶದಪಡಿಸಬಹುದು.

—ಜಿ. ಹನುಮಂತರಾವ್

ಮುದ್ದಣನ ಯಶಸ್ಸು ಹಬ್ಬಿ ಹರಡಿ ನಿಲ್ಲುವುದಕ್ಕೆ ಅವನ ಪಾತ್ರ, ...ದೇ ವರ್ಣನೆ ಯಾವುದೂ ಊರೆಗೋಲಲ್ಲ. ಅವನ ಗದ್ಯದ ಥಾಟ ಮತ್ತು ಮುದ್ದಟ್ಟೆ? ಮನೋರಮಾ ಪ್ರಕರೀ ಇವೆರಡೇ ಆ ಪರಾಕ್ರಮ ಪೌರುಷವನ್ನು ಹೊಂದಿದ್ದ... ಹಿಂದಿನ ಗದ್ಯವಾವುದರಲ್ಲಿಯೂ ಇಲ್ಲದ, ಆಶಾಜನಕವಾದ, ಮೋಹಕರ... ಸರಣಿ ಅಥವಾ ವಿನ್ಯಾಸವು "ರಾಮಾಶ್ವಮೇಧ"ದ ಒಂದು ಹೊಳಪು. ವಿ...ಂಗೆ ವಾಗಿ, ಸಂಕೋಚವಾಗಿ, ಏರಿ, ಇಳಿದು, ಬಾಲಕೇಳಿಯಾಡಿ, ವೃದ್ಧಗಾಂಭೀ... ವನ್ನು ತೋರಿ, ನಾನಾಮಾರ್ಗಗಳನ್ನು ಹೊಕ್ಕು ಗದ್ಯಗತಿಯು ವೈವಿಧ್ಯ... ಹೃದಯಂಗಮವಾಗಿದೆ. ಕೆಲವು ವೇಳೆ ಪರ್ವತದಲ್ಲಿ ಉದ್ಭವಿಸಿ ಬಂಡೆ... ಬಂಡೆಗೆ ಲಂಘಿಸಿ ಭೋರ್ಗುಟ್ಟುವ ಝುರಿಯಂತೆ ಘುಮ್ಮಿಕ್ಕಿಘುಮ್ಮಿಕ್ಕಿ ಹೊ... ಆಟೋಪ; "ಬಱುಮುಱುಕದಿಂ ಮನದೆ ಕುದಿವರ್ ಫಲಂಬರೊಳರ್. ತಿಟ್ಟೀ... ಸಾಪೆಯೆನೆ ಮೂಗುವಟ್ಟಿರ್ಪರ್. ಈತಂಗಳ್ಗುಪಚಾರಂ ಪ್ರೇತೋಪಚಾರ... ಕೂಟಂ ಕಾಲಕೂಟಂ; ನುಡಿ ಬಡಿ; ನೋಟಂ ಕಾಟಂ", "ಕೇಳಿಲೆ ರಾ... ನಿನ್ನ ಹಯಮಂ ಗಿಯಮಂ ನಾಂ ಕಟ್ಟಿದೆನಿಲ್ಲ. ಕಿಱಿಯನಱಿಯದೆ ಕಟ್ಟಿದನ... .... ಈಗಳ್ ನಿಮ್ಮನಿದಿರ್ಚುವೊಡಾದೆಂ. ಎಮಗಜ್ಜಂ ಬಿಲ್ಲೋಜಂ. ಕಾಡೊ... ಪುಟ್ಟಿದೆವು. ಅಬ್ಬೆಯ ಪರಕೆ, ಮುತ್ತಯ್ಯನ ಕಾಪು, ಕೆಳೆಯರ ನಲ್ಮೆ, ಪಿತೃ... ರೊಲ್ಮೆ, ಎಮಗೀವಗೆಯ ಬಲ್ಪನೊಡರ್ಚಿತ್ತು". ಆಗಾಗ ಸಮಭೂಮಿಯ... ಸುಭಿಕ್ಷಗೈಯುವ ಉಪನದಿಯಂತೆ ಶಾಂತ ಮಧುರ ಕಲಕಲರವದಿಂದ ಸುಕೇ... ಹರಿಯುವ ಚೆಲುವು: "ಸುಖದುಃಖಂಗಳ್ ಪಗಲಿರುಳಂತೆವೋಲ್ ... ದೊಳ್ ವರ್ತಿಸಿರ್ಕುಂ. ಇವಱೊಳೆನಗಲ್ಕಿಱು ಪೋಯ್ತು. ಶ್ರೀ ರಾಮನಡ... ಯೊಂದೇ ಶಾಶ್ವತಂ. ಆತನ ನಾಮಸ್ಮರಣೆಯೆ ಎನಗೆ ಬಟ್ಟೆ. ಹೇ ಕಲ್ಯಾಣ... ನೀನೆನ್ನಂ ಕೈವಿಡದಿರಯ್. ಹೇ ಜಗದೊಡೆಯ! ದೆಸೆಗೆಟ್ಟೆನ್ನಂ ಮಱೆಯದಿರ... ಅಲ್ಲಲ್ಲಿ ಅಗಲ ಆಳಗಳನ್ನು ಅಧಿಕಮಾಡಿಕೊಂಡು ಶುಭ್ರನೀಲದಿಂದಾವೃ... ಅಗಾಧವಾಗುವ ಸರೋವರ ಸೌಂದರ್ಯ: "ಅನಿತಱೊಳ್ ನೀಲಿಯ ಕಥೆ... ದೊಳಟ್ಟಿದ ಪಂದಿಯ ತೊವಲಂ ಮುಸುಂಕಿಟ್ಟು ಮೆಯ್ದೋಱದೆ ಲೋಕಮಂ... ಲ್ಕೆಂದು ಬಂದ ಮಂದೇಹರಾಕ್ಷಸನೆನೆ ಕಟ್ತಲೆಯೆತ್ತಂ ಪರ್ಬಿದುದು." "ಎಳ... ಪೊಸವೆಳಗಿಂಗೆ ಸೊಂಪೇಱಿನಳನಳಿಪ ತಾವರೆಯಂತೆ, ಕಡುಸುಗ್ಗಿಯ ಭರಕೆ ...ಕೊನೆವೆರ್ಚುವ ಮಾಮರನಂತೆ, ತಕ್ಕಿನ ಸೋನೆಯ ಮೆಲ್ಸರಿಗೆ ಸುಱುವಿಟ್ಟ... ಚಳಿಪಪೊಂಬಾಳೆಯಂತೆ, ಕುವರಂ ನವಯೌವನದೊದವಿಂಗೆ ನೆಱೆವೆಱ... ತುಂಬಿ ತೇರಿದೊಂದು ಮೆಯ್ಸಿರಿಯಿಂ ಸೊಗಯಿಸಿದನಪ್ಪುದುಂ." ಒಂದೇ ... ಗಮನಭೇದಗಳ ಪುಟ್ಟ ಮೆರವಣಿಗೆಯೂ ಉಂಟು: "ನಲ್ಮೆಮಿಗೆ ಪೆತ್ತ ...

ಲಲೀಲೆಯಂ ಕಾಣದ ಕಣ್ಗಳಿವು ಪೀಲಿಯ ಕಣ್ಗಳಾಗವೆ? ಅಕ್ಕಟಾ! ಗನಂ ಪಡೆಯದೆ ನರಕಮಂ ಪುಗುವೊಂದು ಭಾಗ್ಯಮಂ ಬಿದಿಯನ್ನೊಳಡರ್ಚಿ ದೇ! ನೂಱಿಱನೇಂ? ಇಹಕಂ ಪರಕಂ ಪೆಱಗಾದ ಬೂತಾದೆಂ; ಅಯ್ಯ, ಮುಂತೇಂ ಟ್ಟೆ? ಸುಟ್ಟಿಸಿ ತೋಱ!" ಒಂದೊಂದು ಸಂದರ್ಭದಲ್ಲಿ ನಡೆದು, ನಡೆವುದು ಕಾಗಿ ಓಡಿ, ಓಡುವುದು ಸಾಕಾಗಿ ಹಾರಿ, ಅಡಿಅಡಿಗೂ ಹುರುಪು ಹೆಚ್ಚುವ ಕೀತನ ಶಬ್ದಗುಂಫನವು ಕಡು ರಮಣೀಯವಾಗಿದೆ: "ಕುತ್ತೆಸಳಿಂ ತೀವಿದ ಂಗೇದಗೆಯಿಂ, ಮುಗುಳ್ತ ಪಾರಿಜಾತದಿಂ, ಪೂತ ಮಂದಾರದಿಂ, ಉಳ್ಳಲರ್ದ ರಹೊನ್ನೆಯಿಂ, ನನೆಯೇಱದ ಸುರಯಿಯಿಂ, ಬಕುಳದಿಂ ಸಿರಿಸದಿಂ, ನ್ನಾಗದಿಂ ಸೊಗಯಿಸಿ ತೋರ್ಕುಂ. ಕೊನರಿಲ್ಲದ, ಮಿಡಿಯಿಲ್ಲದ ಕಸುರ್ಗಾ ಯಿಲ್ಲದ, ದೋರೆವಣ್ಣಿಲ್ಲದ, ತನಿವಣ್ಣಿಲ್ಲದ ಮರಂಗಳಿಲ್ಲಾ ಬನದೊಳ್". ಹೊನ್ನೆಲನಂ ಕಿನ್ನೆಲನಂ ಬಾನಂ ತಾನಂತುಟೊಂದು ಮೈಮೆಯಿಂ ಕಾವದೇವಂ ತಿಟ್ಟೀಳ್ವ ಜನ್ನದ ಮಾನ್ಯದ ಹೊನ್ನದ ಕುದುರೆ ಕಣಾ". ಇನ್ನೊಂದು ಅನುಪಮ ಸಜ್ಞಾದ ಅಭ್ಯಾಸವೂ ಮುದ್ದಣನ ಛಂದೋ ಬೊಕ್ಕಸದಲ್ಲಿದೆ. ಪ್ರಕರಣವೊಂದನ್ನು ಲೆ ರ‍್ಮುಗಿಯಿಸುವಾಗ ಎರಡು ಸಣ್ಣ ಪದಗಳನ್ನು ಕೊನೆಯಲ್ಲಿ ನಿಲ್ಲಿಸಿ, ಪ್ರಾಸ ಪ್ಪದನರೋಹಿತನಿಂದ ಅವೆರಡಕ್ಕೂ ಪಾಣಿಗ್ರಹಣಮಾಡಿಸಿ, "ಇನ್ನು ಮಂಗಳವನ್ನು ಕಾಡೊಡಿಯಾಯ್ತು, ಕೈಕೊಂಡ ಕಾರ್ಯ ಸಮಾಪ್ತವಾಯ್ತು, ಒಳಿತಾಯ್ತು" ಎಂಬ ್ತ, ಸಿತೃಪ್ತಸಂಭಾವನೆಯನ್ನು ನಮಗೆ ನೀಡುತ್ತಾನೆ: "ಕೆಲಕೆಲರ್ ವಿಷ್ಣು ಮಿಯರೂಪ್ಯಮಂ ಪೊಂದಿದರ್, ಕೆಲಕೆಲರ್ ಪೊಂದಿ, ವಿಷ್ಣು ಲೋಕಕ್ಕೆಯ್ದಿದರ್, ಂದ. ಲಕೆಲರ್ ಪುರುಷೋತ್ತಮನ ಸೇವೆಯೊಳೆ ನಿಂದರ್, ಕೆಲಕೆಲರ್ ಬಂದರ್" ರ್ ಇಂತು ಲಕ್ಷ್ಮಣಂ ಪಾಷಾಣಕಠಿನಹೃದಯನ್ನೆಸೆ! ಎಂತುಂ ಕುಱು ಪೋದುದೇ? ಾಮನನದೊಳ್ ಮಮ್ಮಲ ಮಱುಗಿದಂ, ನೊಂದಂ, ಬೆಂದಂ." ಮುದ್ದಣನ ್ಯಣಾಮಾನ್ಯ ಇತಿವೃತ್ತಚಿತ್ರಕ್ಕೆ ಸೊಬಗಿನ ಒಳಕಟ್ಟು ಈ ಗದ್ಯಥಾಟಿ.

ದಿರಿ ಇನ್ನು ಉಳಿದಿರುವ ಹೊರಕಟ್ಟನ್ನು ಪ್ರಸ್ತಾವಿಸೋಣ. ನಿಜವಾಗಿಯೂ ಾವ್ಯನೂಲ್ಯವಾದ ಮುದ್ದಣ–ಮನೋರಮಾ ಸಂವಾದರೂಪದ ಹಂಚಿಕೆಯಲ್ಲಿ ಕಥೆಯನ್ನು ಹರಿಸಿಕೊಂಡು ಹೋಗುವ ಚಿತ್ರವು ಅವನಿಗೆ ಸರಸ್ವತಿಯ ವರದ ುಂಸ್ತದಿಂದಲೇ ಒದಗಿರಬೇಕು. ಆದರೆ ಮೇಲಿನ ಸಂದೇಶ ಬಂದಮಾತ್ರಕ್ಕೆ ಎಳಸೂಚಿತಫಲ ಸಂದಂತಾಗಲಿಲ್ಲ. ಹಾಳತವಾದ ಬಣ್ಣಬಣ್ಣದ ವಿವರಗಳನ್ನು ಆರಿಸಿ ಕ್ಕೆಂದು, ಎಲ್ಲವನ್ನೂ ಹವಣಾಗಿ ಪೋಣಿಸಿ, ದಿವ್ಯಪ್ರೇರಣೆಯನ್ನು ಸಮಗ್ರ ವಿಟ್ಟದಿರುವುದು ಮುದ್ದಣನ ಹೃದಯ, ರಸಿಕತೆ, ಸಾಹಿತ್ಯಸತ್ವಗಳಿಗೆ ಸಾಕ್ಷಿ. ಜೀವನೆಸಗಿರುವ ಈ—ಕವಿಸೃಷ್ಟಿಯಲ್ಲ—ಕಲಾಚೋದ್ಯವನ್ನು ಕುರಿತು ನಾವು ಎಷ್ಟು ದೇ ಕೊಂಡಾಡಿದರೂ ತಡೆಯಿಲ್ಲ, ಕಡೆಯಿಲ್ಲ; ಕನ್ನಡ ಲೇಖನ ರಾಶಿಯಲ್ಲಿ ಅದು ದ್ಧ ನವೀನಮಾರ್ಗ, ವ್ಯಕ್ತಿವಿಶಿಷ್ಟವಾದ ಏಕಮಾರ್ಗ. ಪ್ರತಿಭಾ ಗಗನದಲ್ಲಿ

ಎಲ್ಲಿಯೋ ಮಬ್ಬುಮಬ್ಬಾಗಿ ಮಿಣುಕುತ್ತಿದ್ದ ಒಂದು ವಿಚಿತ್ರ ಸಣ್ಣ ತಾರಾ
ನೆಲೆಯನ್ನು ಕಂಡುಹಿಡಿದು, ಅದರ ಕುರುಹು, ದೂರ, ವರ್ಣ, ವೇಗ, ತೇಜ
ತೂಕವೆಲ್ಲವನ್ನೂ ಚೆಚ್ಚರದಿಂದ ಲೆಕ್ಕಿಸಿ ಪಟ್ಟಿಮಾಡಿಟ್ಟಿರುವುದು ಅವನ ಕೋಹಜ
ಎಂದಿಗೂ ಬಾಡದ ವಿಜಯಮಾಲೆ. ಕಾವ್ಯದ ಹತ್ತನೆಯ ಒಂದು ಭಾಗ ತ್ರಿ,
ಮಾತ್ರ ಅದು ಬಳಸಿಕೊಂಡಿತಲ್ಲ ಎಂದು ನನಗೆ ಪರಿತಾಪ. "ಮುಂದಿ
ಮುಂತೇಂ!", "ಎಲೆ ಜಾಣ! ಅದೆಂತು?" ಎನ್ನುವ ಕಥೆಯ ಕೊಂಡಿಗಳಂದ
ಬಿಟ್ಟರೆ ಮುದ್ದಣ–ಮನೋರಮಾ ಪ್ರಣಯಪ್ರಕರಣದಲ್ಲಿ ಹದಿನಾರು ಸನ್ನಿ
ಗಳಿವೆ. ಅವುಗಳಲ್ಲಿ ಚಿತ್ರವಿಚಿತ್ರವು ತಾನೇತಾನಾಗಿ ತಾಂಡವವಾಡುತ್ತಿ
ಮೂರು ಪಂಕ್ತಿಯಲ್ಲಿ ಮುಗಿಯುವುದೊಂದಾದರೆ ನಾಲ್ಕು ಪುಟಗಳ ಲ್ಲಿ
ಇನ್ನೊಂದು. ಎರಡು ಮೂರು ಪುಟ ಕೆಲವಕ್ಕೆ; ಮತ್ತೆ ಕೆಲವಕ್ಕೆ ಮು
ಮೂರನೆಯ ಒಂದು ಭಾಗ ಸಾಕು. ಇದು ಬಹಿರಾಕಾರದ ಬಗೆಯಾಗಾ
ಎರಡರಲ್ಲಿ ಕರುಣೆ ಶೋಕಗಳು ಕಿಕ್ಕಿರಿದು ತುಂಬಿವೆ. ಒಂದರಲ್ಲಿ ಆಶ್ಚರ್ಯವನ್ನು
ಅರಳಿದ ನೇತ್ರ: ಮತ್ತೊಂದರಲ್ಲಿ ಹುಬ್ಬುಗಂಟಿಕ್ಕಿ ಹಲ್ಲುಕಡಿಯುವ ಕ್ರೋಧ
ಒಂದೆರಡರಲ್ಲಿ ಕಪಟ ಜುಗುಪ್ಸೆಯು ರೆಪ್ಪೆಯ ಭಾರದ ಕಣ್ಣನ್ನೊರಸುತ್ತಾ ಮುಚ
ಸುತ್ತದೆ; ಒಂದೆರಡರಲ್ಲಿ ನೈಜಹರ್ಷವು ಹಾಡುತ್ತ ನರ್ತಿಸುತ್ತದೆ. ನಾಲ್ಕ ಡು
ಬೆಳ್ಳನೆಯ ಹಾಸ್ಯತರಂಗ; ಒಂದೆರಡನ್ನುಳಿದು ಎಲ್ಲದರಲ್ಲಿಯೂ ಎಲ್ಲ ರ,
ಅಚ್ಚ ಶೃಂಗಾರದ ಪ್ರಸಾರ. ಒಂದುಸಾರಿ ಯಾವುದೋ ಗಹನದ ಗುಟ್ಟನ್ನು ನನು
ಮಾಡುವವನಂತೆ ನಟಿಸಿ, ಮನೋರಮೆಯ ಉತ್ಸುಕತೆಯನ್ನು ಬೆಳೆಸಿ, ಲಿಲ್ಲ
ಒಳಗೊಳಗೇ ನಗುತ್ತ ಭವತಿಭಿಕ್ಷಾಂದೇಹಿ ಎಂಬ "ಕಬ್ಬಿಗರ ಸಪ್ತಾಕ್ಷರಿ" ಮನ
ಉಚ್ಚರಿಸಿ, ಮುದ್ದಣನು ಪ್ರಿಯೆಯನ್ನು ಸೋಲಿಸುವನು. ಮರುಕ್ಷ ಣೂ
ಮನೋರಮೆಯು ವ್ರತದ ವಿಚಾರವನ್ನೆತ್ತಿ, ಗಂಡನ ಬಾಯಲ್ಲಿ ನೀರೂ ಡನ
ಭಕ್ಷ್ಯದಾಸೆಯನ್ನು ನಿರವಿಸಿ, ಆದರೆ ಉಪವಾಸವಿದ್ದ ಹೊರತು ವ್ರತವಾ ನಾವ
ನಿಯಮ ಹೇಳಿ ಮುದ್ದಣನನ್ನು ಸೋಲಿಸಿ ಮುಯ್ಯಿಗೆ ಮುಯ್ಯಿ ತೀರಿಸಿ ಟ್ಟು
ವಳು. ಕೆಲವು ದೃಶ್ಯಗಳು ಕಥೆಯಲ್ಲಿ ಬರುವ ಉಪಾಖ್ಯಾನಗಳಿಗೆ ಹಿಮ
ಮತ್ತೆ ಕೆಲವು ಅವುಗಳ ಮೇಲಣ ಟೀಕೆಗಳು; ಕಥೆಯಿಂದ ಹುಟ್ಟಿದರೂ ಡಿದ
ವಾಗಿ ಜರುಗುವವು ಕೆಲವು. ಮನೋರಮೆಯು ಒಂದು ಸಮಯದಲ್ಲಿ ರಾಣಿ
ಮುದ್ದಣನಿಂದ ಆರಾಧಿಸಿಕೊಳ್ಳುವ ದೇವಿ; ಇನ್ನೊಂದರಲ್ಲಿ ನಾಥನಿಂದ ದರೂ
ಕಲಿಯುವ ಮುಗ್ಧೆ; ಮತ್ತೊಂದು ಘಳಿಗೆ ಗಂಡನ ಪ್ರೇಮದ ಬಯ್ಗುಳಕ್ಕೆ ಯೊ
ಳಾದ ಹೆಂಡತಿ; ಅಲ್ಲಿ ಮಾತಿಗೆ ಮಾತು ತಗಲುವುದರಿಂದ ಚಟಪಟ ಸದ್ದು, ಘ
"ಮಕ್ಕಳ ಸೆರಗಿಲ್ಲದ ಸಾಸ"ದ ಬೆರಗಿನಿಂದ ಅಥವಾ "ಅಳಲ್ ಕೊರಳನ್" ಗ
ವುದರಿಂದ ನಾಲಗೆಯೇ ಅಲ್ಲಾಡದ ಮೌನ. ಅನೇಕ ಸಂದರ್ಭಗಳಲ್ಲಿ ಗಳ
ನಾಯಿಕೆಯರ ಅನಂತ ಅಭಿನಯ; ಒಂದೊಂದು ಹೊತ್ತು ಮು

ಣಿ ಪೌರಾಣಿಕನ ಪೀಠ, ಮನೋರಮೆಗೆ ಶ್ರೋತೃವಿನ ನವ್ಯಾಸನ. ಒಂದೆಡೆ ಮಿಥ್ಯಾ
ವೇಗ, ಕೋಪವಿದ್ದರೆ ಇನ್ನೊಂದೆಡೆ ಠಕ್ಕಿನ ತಾತ್ಸಾರ; ಮತ್ತೆ ಎರಡಕ್ಕೂ ಈಡಾಗಿ
ರ ಕೋಮಲಜತೆಯ ಉತ್ಕರ್ಷ. ಹೀಗೆ ಹದಿನಾರರಲ್ಲಿಯೂ ಹದಿನಾರು ತರಹದ ಚಿತ್ತ
ಭಾಗಿತ್ವ, ದೇಶಿ, ಅಲಂಕಾರ ಚೂಟಿಗಳು ಅವರ್ಣನೀಯವಾಗಿ ಸ್ಫುರಿಸಿವೆ. ತನ್ಮ
ಮುಂತಾದವಿಭೇದಗಳ ಮರೆಯಲ್ಲಿ ಎಲ್ಲವೂ ಪ್ರತಿಪಾದಿಸುವ ಹಿತವಾದ ಮುಖ್ಯತತ್ತ್ವ
ಂಡಿಗುಂಡೇ; ಗೃಹಸ್ಥ ಸಂಸಾರದ ಗಂಡಹೆಂಡಿರ ಸಾತ್ವಿಕಪ್ರಣಯ. ಶೃಂಗಾರ
ರು ಹಾಸ್ಯಗಳಲ್ಲಿ ಹಚ್ಚ ಹೊಸ ಚಿಹ್ನೆ, ಹಸನು, ಸಭ್ಯ ಸುರಸತ್ವ, ಬಗೆಬಗೆಯ ಬೆಡಗು,
ವಾಡುಂಪು, ನಿಷ್ಕಳಂಕ ಮೃದುತ್ವ—ಇವು ನಮಗೆ ಬೇಕಾದರೆ ಕನ್ನಡ ಕವಿವೀಧಿ
ಗಳ ಲ್ಲಿ ಮುದ್ದಣನದೊಂದೇ ಅಂಗಡಿ. "ಈವಗೆಯ" ದಾಂಪತ್ಯ ನಾಟಕವು
ವಕ್ಕೆ ಮುಂತಿಲ್ಲ ಪಿಂತಿಲ್ಲಮೆಂದಾಯ್ತು"; "ಬಲ್ಸೊಗಸು, ಬಲ್ಸೊಗಸು!"
ಗೆಯ ನಾಟಕದಲ್ಲಿ ಯಾವಾಗಲೂ ಜೀವಂತವಾಗಿರಲರ್ಹವಾದ ಆ ಎರಡು ಪಾತ್ರ
ಷ್ಟಿಯನ್ನು ಸ್ಥೂಲವಾಗಿಯೂ ಸೂಕ್ಷ್ಮವಾಗಿಯೂ ಹೇಗೆ ಕೆತ್ತಿದ್ದಾನೆ ಪರಿಭಾವಿಸಿ.
ವ ಮುದ್ದಣನು ಪಂಡಿತ, ರಸಿಕ, ಕವಿ; ಜಾತಿವಾಚಾಳತೆಗನುಸಾರವಾಗಿ ನೂರಾರು
ಮಪದ, ವಿಶೇಷಣ, ಸಮಾಸಗಳಿಂದ ಕಾಂತೆಯನ್ನು ಪೂಜಿಸುವನು, ಉಪಚಾರ
ಡುವನು, ದೂರುವನು, ಗದರಿಕೊಳ್ಳುವನು. ಅಲ್ಲದೆ ಗಂಡಸು; ಗಂಡಸಿನ
ರ, ಸ್ವಾತಂತ್ರ್ಯ, ಸ್ವಾಮಿತ್ವಗಳ ಕಡಗ ವಸ್ತ್ರ ಕಿರೀಟಗಳನ್ನು ಆಗಾಗ ಧರಿ
ವನು. ಆದರೂ ಅವನಲ್ಲಿ ಮನೋರಮೆಯೇ ತನ್ನ ಮನೋವಲ್ಲಭೆಯೆಂಬ
ಲಿಲ್ಲದ ನಿಶ್ಶಂಕೆಯ ಭಾವನೆ. ಅವಳಾದರೋ ಏಕಾಂತದಲ್ಲಿದ್ದರೂ ಪ್ರಾಣ
ಮನ ಪಕ್ಕದಲ್ಲಿ ಕುಳಿತಿದ್ದರೂ ಒಂದೊಂದು ವೇಳೆ ಬಾಯಿಬಿಟ್ಟು ಮಾತನಾಡಿ
ರೂ ತಾನು ಪರಾಧೀನೆ, ಗೃಹಿಣಿ, ಹೆಂಗಸೆಂಬುದನ್ನು ಮರೆಯಲಾರಳು.
ಡನ ಮನೆಗೆ ಬಂದು ಕೆಲವು ವರ್ಷಗಳು ಕಳೆದುಹೋಗಿದ್ದರೂ ಇನ್ನೂ ಬಾಲಿಕಾ
ಭಾವವು ಅವಳಿಂದ ದೂರವಾಗಿಲ್ಲ. ಸಲಿಗೆಯನ್ನು ತೆಗೆದುಕೊಂಡು ಸಲಿಗೆಯನ್ನು
ಟ್ಟು ನಗುಮುಖನಾಗಿದ್ದರೂ ಮುದ್ದಣನು ಮೇಧಾವಿ, ಕಬ್ಬಿಗ, ಅಶೇಷ
ಮಾಸ್ಪದನೆಂದು ಪೂಜ್ಯಭಾವ ಅವಳಲ್ಲಿ; ಅದರೊಂದಿಗೆ ಅಂಥವನನ್ನು
ಡಿದ ಸೌಭಾಗ್ಯಕ್ಕೆ ಸಂತುಷ್ಟಿ. ಅವರಿಬ್ಬರಿಗೂ ರೂಪಾಯಿನಲ್ಲಿ ಹದಿ
ರಾಣೆಯ ಜಾತಕಾನುಕೂಲ. ಪೂರ್ವದ ಕಟ್ಟುಕಟ್ಟಳೆಗಳಿಗೆ ಶಿಷ್ಟ ದಾಸ
ದರೂ ಆಧುನಿಕರಿಗೆ ಶ್ಲಾಘ್ಯಮಾದರಿಗಳು.

ಈ ಸಲ್ಲಾಪ ಸಂವಾದ ವಿಷ್ಕಂಭಗಳಿಂದ ಕವಿಯು ಪಡೆಯಬಹುದಾದ
ಪ್ರಯೋಗಗಳು ಅನೇಕ. ಕಥೆಯು ಬಯಲಗಳೆಯಾಗದೆ ಸ್ವಲ್ಪಮಟ್ಟಿಗೆ ಕಾರ್ಯ
ಘನತ್ವ, ಸ್ಪರ್ಶಾರ್ಹತೆಯನ್ನು ಹೊಂದುತ್ತದೆ. "ಏನೆಲಗೆ ಕಡೆಗೆ ಹುಂಗುಟ್ಟಿದೆ
ಮಿ ಗುಮ್ಮನಿರ್ಪಯ್" "ಅಂತೇಂ! ಮಾದೇವಂ ರಾಯುಂಗೆಂತಳಿಯನಾದಂ",
ಗಳಜಾತೆಂ ಹಸುವಂ ಕಟ್ಟಿದ ಬಾಲರಾರೆಂಬುದಂ", "ಎನ್ನೊಡೆಯ, ನೀನು

ಮೆಂತು ಕಲ್ಮನನಾದ್ಯೆ?"—ಮುಂತಾದ ವಚನಗಳಿಂದ ಕಥೆಯು ಹಾಗೆ ಆ
ಹೀಗೆ ನಡೆಯಿತು ಎಂಬ ನೀರಸ ಕಥನವಾಗದೆ ನಮ್ಮಿಂದ ಆಸಕ್ತಿಯನ್ನು ಕೊ
ಸಜೀವ ಘಟನಾಸಮೂಹವಾಗುತ್ತದೆ. ಮನಸ್ಸಿಗೆ ತೋಚಿದುದನ್ನು ಮುಚ್ಚು
ಯಿಲ್ಲದೆ ಒದರಿ, ಮನೋರಮೆಯು ಪಾತಕರ ಮತ್ತು ಜನಸಾಮಾನ್ಯದ ಪ್ರ
ಯಂತಿರುವಳೆಂಬುದು ಸಕಲರಿಗೂ ತಿಳಿದಿದೆ. "ಸುಡು ಸುಡು ನಿನ್ನ
ಗುದುರೆಯಂ;" "ಏತಱ ಸೀತಾರಾಮಂ . . . ಆ ಕಲ್ಲೆರ್ದೆಯಂ ರಾವ
ಭೀಮನೋ?" ಎಂಬ ರೋಷದ ನುಡಿಗಳನ್ನಾಡಿ ನಮ್ಮ ಒಡಲಿನಲ್ಲಿರುವ
ವನ್ನು ಹೊರಗೆಳೆದು ಕಡಮೆಮಾಡಿ, ನಮ್ಮನ್ನು ಸಮರ್ಥಿಸುವುದರಿಂದ
ನಮಗೆ ಶಾಶ್ವತ ಸಹೋದರಿ. ಇಷ್ಟೇ ಅಲ್ಲ. ಈ ದೃಶ್ಯಗಳಿಂದ ಹಲವು ಪ್ರಸ್ನ
ಗಳನ್ನು ಕುರಿತು ರುಚಿಕರವಾದ ವಿಡಂಬನಕ್ಕೆ ಕವಿಗೆ ಅವಕಾಶ ದೊ
"ಇದು ಸಕ್ಕದದೊಂದು ಚೆಲ್ವು!" "ಱಂತದು ಪಾಡಿನ ಜೋಡಿನ ದಾಟ
"ಕೇಳ್ವರ್ಗೆ ಮನಕ್ಕೆ ಬಾರದೊಡಕ್ಕುಮೆ?" ಭವತಿ ಭಿಕ್ಷಾಂದೇಹಿಯ
ಯಾದರೂ "ತಮ್ಮೊಂದೆ ನುಡಿಯ ಬಲ್ಪಿಂ ಮೂಜಗಮನುಱಿಯಿಸುಮಱ
ಪೊಗಟ್ವಿ ತೆಗಟ್ವಿ ಕೊಳ್ವಾಳ್ವ" "ಸಿಂಗರದ ಬಣ್ಣಗಬ್ಬಿಗ"ರಿಗೇನು ಕೃ
ಕಥಾವಸ್ತುವಿಗೆ ಅಪ್ರಕೃತವೆಂದು ತೋರಿದರೂ ಓದುವವರಿಗೆ ಸುಖವ
ತನ್ಮೂಲಕ ಆವಶ್ಯಕವಾಗುವ ನಾನಾ ರಾಗಗಳನ್ನು ಕವಿಯು ಹೀಗೆ ಉ
ಮಾಡಬಹುದು.

—ಎಸ್. ವಿ. ರಂಗ

## ಆಧುನಿಕ ರಾಜಕೀಯ ತತ್ವಗಳು

### ೧. ನಿಕೊಲೋ ಮ್ಯಾಕಿಯವೆಲ್ಲಿ—'ಇಟೆಲಿಯ ಕೌಟಿಲ

ಮಧ್ಯಯುಗವು ಹದಿನೈದನೆಯ ಶತಮಾನಕ್ಕೆ ಕೊನೆಗಂಡಿತು. ಅ
ಕೊನೆಗೆ ಕ್ರೈಸ್ತ ಜಗದ್ಗುರುವಾದ ಪೋಪನನ್ನು ಒಂದೊಂದು ಕಡೆ
ಜನರು ಪ್ರತಿಭಟಿಸಲು ಪ್ರಾರಂಭಿಸಿದರು. ಈ ಪ್ರತಿಭಟನೆಯು ಮ
ಮೊದಲು ಹುಟ್ಟಿದುದು ವಿಜ್ಞಾನಕ್ಷೇತ್ರದಲ್ಲಿ. ಸೂರ್ಯನು ಭೂಮಿಯ
ಸುತ್ತುವುದಿಲ್ಲ. ಆದರ ಬದಲಾಗಿ ಭೂಮಿಯು ಸೂರ್ಯನ ಸುತ್ತ
ಎಂಬ ವೈಜ್ಞಾನಿಕ ತತ್ವವನ್ನು ಸಾರಿ ಕೊಪರ್ನಿಕಸ್ಸನು ವಿಜ್ಞಾನ ವಿ
ಕ್ರೈಸ್ತವೇದದ ಪ್ರಾಮಾಣ್ಯವನ್ನು ಮುರಿದನು. ಗೆಲಿಲಿಯೋ,
ಮುಂತಾದವರು ಕೂಡ ವಿಚಾರ ಸ್ವಾತಂತ್ರ್ಯದ ಪತಾಕೆಯನ್ನು ಎತ್ತಿ

ರಾಜಕೀಯದಲ್ಲಿ ಕೂಡ ಪ್ರಜೆಗಳೂ ಪ್ರಭುಗಳೂ ಪೋಪನ ಅಧಿಕಾರವನ್ನು ಪ್ರತಿಭಟಿಸಿ ತಮ್ಮ ರಾಷ್ಟ್ರಸ್ವಾತಂತ್ರ್ಯವನ್ನು ಸಾಧಿಸಲು ಮೊದಲು ಮಾಡಿದರು. ರಾಜಕೀಯ ತತ್ವಜ್ಞರು ರಾಜಕೀಯ ರೀತಿನೀತಿಗಳನ್ನು ವ್ಯವಹಾರ ದೃಷ್ಟಿಯಿಂದ ಸಿದ್ಧಿಯ ಪ್ರಮಾಣಕ್ಕನುಗುಣವಾಗಿ ವಿಮರ್ಶಿಸತೊಡಗಿದರು. ಇಂಥವರಲ್ಲಿ ಇಟಲಿಯ ದೇಶದ ತಾತ್ವಿಕನಾದ ನಿಕೊಲೋ ಮ್ಯಾಕಿಯವೆಲ್ಲಿ ಮೊದಲನೆಯವನು. ಇವನ ರಾಜನೀತಿ ಗ್ರಂಥದ ಹೆಸರು "ಪ್ರಿನ್ಸ್" (ರಾಜಕುಮಾರ). ಇದನ್ನು ಇವನು ತನ್ನ ದೇಶದ ರಾಜಕುಮಾರನ ಉಪಯೋಗಕ್ಕಾಗಿ ಬರೆದುದರಿಂದ ಆ ಹೆಸರನ್ನು ತನ್ನ ಗ್ರಂಥಕ್ಕೆ ಕೊಟ್ಟನು. ಇಂಗ್ಲೆಂಡ್, ಫ್ರಾನ್ಸ್, ದೇಶಗಳಂತೆಯೇ ತನ್ನ ಮಾತೃಭೂಮಿಯಾದ ಇಟಲಿಯು ಪೋಪನ ಅಧಿಕಾರದಿಂದ ಬಿಡುಗಡೆ ಹೊಂದಿ ಸ್ವತಂತ್ರ ರಾಷ್ಟ್ರವಾಗಲು ತನ್ನ ದೇಶದ ರಾಜನು ಯಾವ ನೀತಿಯನ್ನು ಅನುಸರಿಸಬೇಕೆಂಬುದನ್ನು ಇಲ್ಲಿ ನಿರೂಪಿಸಿರುವನು. ಈ ನೀತಿಯ ಮುಖ್ಯ ಗುರಿ—ರಾಜಬಲ ಅಥವಾ ಪ್ರಭುತ್ವ ಪಾರಮ್ಯ. ಒಂದು ದೇಶದ ಪ್ರಭುತ್ವವು ಸ್ವತಂತ್ರವಾಗಿರಬೇಕಾದರೆ ಅದಕ್ಕೆ ಇತರ ದೇಶಗಳನ್ನು ಇದಿರಿಸುವಷ್ಟು ಬಲವಿರಬೇಕು. ಪ್ರಭುತ್ವನೀತಿಯೇ ಅಂತಿಮ ನೀತಿಯಾಗಬೇಕು; ಮತಧರ್ಮಗಳು ಅದರ ನೆರಳಿನಲ್ಲಿ ಬಾಳಬೇಕು. ಮತವಾಗಲಿ ಧರ್ಮವಾಗಲಿ ರಾಜಕೀಯದಲ್ಲಿ ಒಡಕು ಹುಟ್ಟಿಸದಂತೆ, ಪ್ರಭುತ್ವದ ಬಲವನ್ನು ಕುಗ್ಗಿಸದಂತೆ ಅವುಗಳನ್ನು ಬಲವಾಗಿ ಅದುಮಿ ಇಟ್ಟಿರಬೇಕು. ವ್ಯವಹಾರ ಕಾರ್ಯದೃಷ್ಟಿಯಿಂದ ಅಂದರೆ ದೇಶದ ಸ್ವಾತಂತ್ರ್ಯ ಮತ್ತು ಏಳಿಗೆಯ ದೃಷ್ಟಿಯಿಂದ ಮತಧರ್ಮಗಳಿಗೆ ವಿರುದ್ಧವಾದ ನೀತಿಯನ್ನು ಅನುಸರಿಸಬೇಕಾದ ಆವಶ್ಯಕತೆ ಕಂಡುಬಂದಲ್ಲಿ ಅದನ್ನೇ ಪರಮ ನೀತಿಯಾಗಿ ಅನುಸರಿಸಬೇಕು. ರಾಜ್ಯವು ಬಲಗೊಳ್ಳಲು ರಾಜನು ಯಾರ ಪ್ರಾಣವನ್ನು ತೆಗೆಯಲೂ ಹಿಂಜರಿಯಬಾರದು, ಯಾವ ಹೀನವಾದ ಮೋಸ ಮಾಡಲು ಹಿಂತೆಗೆಯಬಾರದು. ಪಾಪ ಭೀತಿ ಎಂಬುದನ್ನು ಮನಸ್ಸಿನಿಂದ ದೂರಮಾಡಬೇಕು. ಸಾವಿರ ಸುಳ್ಳನ್ನಾದರೂ ಹೇಳಿ ಒಂದು ಮದುವೆಯನ್ನು ಮಾಡಿಸಬೇಕು ಎಂದು ನಮ್ಮಲ್ಲಿ ಜನರು ಹೇಳುವುದಿಲ್ಲವೆ? ಹಾಗೆಯೆ ಸಾವಿರ ಕೊಲೆಗಳನ್ನು ಮಾಡಿ ಸಾಮ್ರಾಜ್ಯವನ್ನು ಸ್ಥಾಪಿಸಬೇಕು ಎಂಬುದು ಮ್ಯಾಕಿಯವೆಲ್ಲಿಯ ನೀತಿ.

ನಮ್ಮ ದೇಶದ ರಾಜನೀತಿಜ್ಞನಾದ ಕೌಟಿಲ್ಯನ ನೀತಿಗೆ ಇವನ ನೀತಿಯನ್ನು ಹೋಲಿಸುವುದುಂಟು. ಪ್ರಭುತ್ವಶಕ್ತಿಯೇ ದೇಶದಲ್ಲಿ ಪರಮ ಶಕ್ತಿಯಾಗಿರಬೇಕು, ರಾಜಕೀಯದಲ್ಲಿ ಮತಧರ್ಮಗಳಿಗಿಂತಲೂ ವ್ಯವಹಾರದೃಷ್ಟಿಯೇ ಮೇಲಾಗಬೇಕು ಎಂಬ ವಿಚಾರಗಳಲ್ಲಿ ಇಬ್ಬರಿಗೂ ಸಾಮ್ಯವಿದೆ. ಆದರೆ ಕೌಟಿಲ್ಯನ ಪ್ರತಿಭೆಗೂ ಮ್ಯಾಕಿಯವೆಲ್ಲಿಯ ಪ್ರತಿಭೆಗೂ ಅಜಗಜಾಂತರ ವ್ಯತ್ಯಾಸವಿದೆ. ಕೌಟಿಲ್ಯನ ರಾಜನೀತಿ ಮ್ಯಾಕಿಯವೆಲ್ಲಿಯ ತತ್ವಕ್ಕಿಂತಲೂ ಆಳವಾದುದು, ಮತ್ತು ವಿಶಾಲವಾದುದು; ಅಲ್ಲದೆ ಸಾಮಾನ್ಯವಾಗಿ ಅದು ಧರ್ಮಕ್ಕೆ ವಿರೋಧವಾದುದಲ್ಲ;

ಅದು ಬರಿಯ "ಉದ್ಧೃತದಂಡ" ಪ್ರಶಂಸೆಯೂ ಅಲ್ಲ. ರಾಜನು ಧರ್ಮಿಷ್ಠರನ್ನು ಯೋಗ್ಯರಾದ ಪ್ರಜೆಗಳನ್ನೂ ಸ್ವಲ್ಪವೂ ಹಿಂಸಿಸಕೂಡದು. ಹಾಗೆ ಮಾಡಿದ ತಾನೂ ತನ್ನ ರಾಜ್ಯವೂ ಹಾಳಾಗುವುದು ನಿಶ್ಚಯ. ರಾಜನು ಪ್ರತಿ ನಿಮಿಷದಲ್ಲಿ ತನ್ನ ರಾಗದ್ವೇಷಗಳನ್ನು ತುಳಿಯುತ್ತಿರಬೇಕು, ಯುಕ್ತವಾದ ರೀತಿಯಲ್ಲಿ ಮಾತ್ರ ದಂಡವನ್ನು ಉಪಯೋಗಿಸಬೇಕು; ಶಿಷ್ಟರನ್ನು ಪಾಲಿಸುವಾಗ ಅವನ ಧರ್ಮ ಚೈತನ್ಯ ಬಹು ಎಚ್ಚತ್ತಿರಬೇಕು. ದುಷ್ಟರನ್ನು ನಿಗ್ರಹಿಸುವಾಗ, ಶತ್ರುವನ್ನು ಗೆಲ್ಲುವಾಗ ದಯಾದಾಕ್ಷಿಣ್ಯಗಳಿರಬಾರದು; ಸುಳ್ಳು ಹೇಳಬಾರದು, ಮೋಸ ಮಾಡ ಬಾರದು ಎಂಬ ಧಾರ್ಮಿಕ ಭಾವಗಳನ್ನು ಬದಿಗಿಡಬೇಕು; ದುಷ್ಟಪತನ, ಶತ್ರು ನಾಶ—ಇವನ್ನೇ ಗುರಿಯಿಟ್ಟು ಸಾಧಿಸಬೇಕು. ಇದು ಧರ್ಮರಾಜ್ಯ ನೀತಿಯೂ ಅಲ್ಲ, ರಾಮರಾಜ್ಯ ತತ್ವವೂ ಅಲ್ಲ; ಇದು ಹಿರಿಯವೆನ್ನಿಸಿಕೊಂಡಿರುವ ರಾಷ್ಟ್ರಗಳು ಇಂದು ಆಚರಣೆಯಲ್ಲಿಟ್ಟುಕೊಂಡಿರುವ ತತ್ವ. ಈ ತತ್ವದಿಂದಲೇ ಈ ರಾಷ್ಟ್ರಗಳು ಪ್ರಬಲವಾಗಿರುವುದು; ತಮ್ಮ ಪ್ರಾಬಲ್ಯವನ್ನು ಉಳಿಸಿಕೊಂಡಿರುವುದು. ಆದ ಇಂದಿನ ರಾಜಕಾರ್ಯಪಟುಗಳು ಮಾತ್ರ ಮುಚ್ಚುಮರೆಯಿಲ್ಲದೆ ತಮ್ಮ ಅಂತರಂಗ ವನ್ನು ಹೇಳಿ ಬಿಡುವುದಿಲ್ಲ. ಸಾಧ್ಯವಾದ ಮಟ್ಟಿಗೂ ಅವರು ತಮ್ಮ ನೀತಿಗೆ ಧರ್ಮದ ಬಣ್ಣವನ್ನು ಕೊಡಲು ಪ್ರಯತ್ನಪಡುತ್ತಾರೆ. ಆದರೆ ಕೌಟಿಲ್ಯನು ಮಾತ್ರ ಇದನ್ನು ಸ್ಪಷ್ಟವಾಗಿ ಸಾರಿರುತ್ತಾನೆ.

ಮ್ಯಾಕಿಯವೆಲ್ಲಿಯ ರಾಜಕೀಯ ಅಭಿಪ್ರಾಯಗಳನ್ನು ವಿದ್ವಾಂಸರು ಬಹು ವಾಗಿ ಖಂಡಿಸುತ್ತಾರೆ. ಗುರಿ ಒಳ್ಳೆಯದಾಗಿದ್ದರೆ ಅದನ್ನು ಸಾಧಿಸಲು ಕೆಟ್ಟದಾದ ಉಪಾಯ ಹೇಗಾದರೂ ಇರಬಹುದೆಂಬ ವಾದ ಬಹಳ ಅಪಾಯಕರವೆಂಬುದು ಒಂದು ಆಕ್ಷೇಪ. ಧರ್ಮ ದೃಷ್ಟಿಯಿಂದ ನಿಷಿದ್ಧವಾದುದು ರಾಜಕೀಯ ದೃಷ್ಟಿ ಯಿಂದಲೂ ನಿಷಿದ್ಧವಾದುದೇ ಎಂಬುದು ಇವರ ಮತ. ಮ್ಯಾಕಿಯವೆಲ್ಲಿಯು ಕಾಪಟ್ಯಕ್ಕೂ ರಾಜತಂತ್ರಕ್ಕೂ ಇರುವ ಸೂಕ್ಷ್ಮವಾದ ವ್ಯತ್ಯಾಸವನ್ನು ಗಮನಿಸ ದಿರುವುದು ಇನ್ನೊಂದು ಆಕ್ಷೇಪ.

ಈ ಸಂದರ್ಭದಲ್ಲಿ ಮುಖ್ಯವಾಗಿ ನಾವು ಗಮನಿಸಬೇಕಾದುದು ಇಷ್ಟು: ಧರ್ಮದ ಹೆಸರಿನಲ್ಲಿ ಲೌಕಿಕ ವ್ಯವಹಾರವು ಕೆಟ್ಟುಹೋಗಬಾರದು. ಹಾಗೆಯೇ ರಾಷ್ಟ್ರದ ಪ್ರಾಬಲ್ಯದ ಹೆಸರಿನಲ್ಲಿ ವ್ಯಕ್ತಿಗಳ ಧಾರ್ಮಿಕ ಮತ್ತು ಮತಜೀವನಕ್ಕೆ ಚ್ಯುತಿ ಬರಬಾರದು. ಲೌಕಿಕ ದೃಷ್ಟಿಯಿಂದ ರಾಷ್ಟ್ರದ ಐಕಮತ್ಯವೂ ಸ್ವಾತಂತ್ರ್ಯವೂ ಎಷ್ಟು ಮುಖ್ಯವಾದುವೋ, ಧಾರ್ಮಿಕ ದೃಷ್ಟಿಯಿಂದ ನ್ಯಾಯವೂ ಸತ್ಯವೂ ಅಷ್ಟೇ ಮುಖ್ಯವಾದುವು. ಇವೆರಡನ್ನೂ ಸಾಧಿಸುವ ಸಮನ್ವಯ ದೃಷ್ಟಿ ಆವಶ್ಯಕ.

## ೨. ಬೋಡಿನ್ ಮತ್ತು ಗ್ರೋಷಿಯಸ್ ಪ್ರಭುತ್ವ ತತ್ವ

ಪ್ರಜೆಗಳಿಲ್ಲದೆ ರಾಜ್ಯವಿಲ್ಲ. ಪ್ರಜೆಗಳಿಗಾಗಿ ರಾಜ್ಯ. ಪ್ರಜೆಗಳ ಸೌಖ್ಯ

ಶಾಂತಿಗಳನ್ನು ಕಾಪಾಡುವುದು ರಾಜ್ಯಸಂಸ್ಥೆಯ ಮುಖ್ಯ ಕರ್ತವ್ಯ. ಯಾವಾಗಲೂ ಶತ್ರುಭಯವಿದ್ದರೆ ಜನರು ನೆಮ್ಮದಿಯಾಗಿ ಬಾಳಲಾರರು. ರಾಷ್ಟ್ರವನ್ನು ಶತ್ರುಗಳ ಬಾಧೆಯಿಂದ ಕಾಪಾಡಲು ಶಕ್ತಿಬೇಕು; ಇದೇ ದಂಡಶಕ್ತಿ. ಎಲ್ಲರ ಕೈಯಲ್ಲೂ ಈ ದಂಡವಿದ್ದರೆ ರಾಜ್ಯದಲ್ಲಿ ಕ್ಷೋಭೆ ಏಳುವುದು. ಇದನ್ನು ಕೇಂದ್ರೀಕರಿಸಿ ಕ್ರಮವಾದ ರೀತಿಯಲ್ಲಿ ಉಪಯೋಗಿಸುವ ಅಧಿಕಾರ ಒಬ್ಬಾತನಲ್ಲಿ ಅಥವಾ ಒಂದು ಸಂಸ್ಥೆಯಲ್ಲಿ ಸಮಾವೇಶವಾಗಿರಬೇಕು. ಇಂತಹ ಅಧಿಕಾರಕ್ಕೆ ಪ್ರಭುತ್ವವೆಂದು ಹೆಸರು. ರಾಜಕೀಯದಲ್ಲಿ ಇದೇ ಪರಮ ಅಧಿಕಾರವಾಗಿರಬೇಕು. ಈ ಅಧಿಕಾರವು ಒಬ್ಬನಲ್ಲಿ ಅಥವಾ ಒಂದು ಮಂಡಲಿಯಲ್ಲಿ ಕೇಂದ್ರೀಕೃತವಾಗಿದ್ದರೂ ಅದರ ದರ್ಪ ದೇಶದಾದ್ಯಂತವೂ ಆವರಿಸಬೇಕು. ಹೀಗೆ ಆಗಬೇಕಾದರೆ ಪ್ರಭುತ್ವದವರು ತಮಗೆ ವಿಧೇಯರಾದ ಸಾವಿರಾರು ಅಧಿಕಾರಿಗಳನ್ನು ನಿಯಾಮಕ ಮಾಡಿಕೊಂಡು ಅವರ ಮೂಲಕ ತಮ್ಮ ಅಧಿಕಾರವು ದೇಶದ ಆದ್ಯಂತವೂ ವ್ಯಾಪಿಸಿರುವಂತೆ ಮಾಡಬೇಕು. ಈ ಅಧಿಕಾರ ಎರಡು ವಿಧವಾಗಿದೆ; ಒಂದು ವಿಧಾಯಕಾಧಿಕಾರ, ಇನ್ನೊಂದು ನಿರೋಧಕಾಧಿಕಾರ; ದೇಶದ ನೆಮ್ಮದಿಗೆ ಬೇಕಾದ ಕಾನೂನನ್ನು ಮಾಡುವುದು, ಅದಕ್ಕೆ ಪ್ರತಿಬಂಧಕರಾದವರನ್ನು ದಂಡಿಸುವುದು. ಎಲ್ಲವೂ ಪ್ರಭುತ್ವದ ವಿಧಿನಿಷೇಧಗಳಿಗೆ ಒಳಪಡುವುವು. ಆದರೆ ಪ್ರಭುತ್ವ ಮಾತ್ರ ಎಲ್ಲ ವಿಧಿ ನಿಷೇಧಗಳಿಗೆ ಮೀರಿದುದು. ಇಂಥವು ಪ್ರಭುತ್ವವಿಲ್ಲದ ರಾಷ್ಟ್ರ ರಾಷ್ಟ್ರವಲ್ಲ. ರಾಷ್ಟ್ರವು ರಾಷ್ಟ್ರವೆನ್ನಿಸಿಕೊಳ್ಳಬೇಕಾದರೆ ಅದರಲ್ಲಿ ಇಂಥ ಪರಮ ಪ್ರಭುತ್ವವಿರಬೇಕು. ಇದನ್ನು ಮ್ಯಾಕಿಯವೆಲ್ಲಿಯು ಸೂಚಿಸಿದ್ದನು. ಈ ಸಿದ್ಧಾಂತವನ್ನು ವಿಸ್ತರಿಸಿ ಯುಕ್ತಾಯುಕ್ತ ವಿವೇಚನೆಯೊಡನೆ ಪ್ರತಿಪಾದಿಸಿದವನು ೧೬ನೆಯ ಶತಮಾನದ ಜೀನ್ ಬೋಡಿನ್ ಎಂಬ ಫ್ರಾನ್ಸಿನ ರಾಜನೀತಿಜ್ಞ. ಇವನು ರಾಷ್ಟ್ರತತ್ವ ಚರಿತ್ರೆಯಲ್ಲಿ ಪ್ರಭುತ್ವಸಿದ್ಧಾಂತದ ಜನಕನೆಂದು ಹೆಸರುವಾಸಿಯಾಗಿರುತ್ತಾನೆ.

ಬೋಡಿನ್ನನು ಕೇವಲ ತಾತ್ವಿಕ ದೃಷ್ಟಿಯಿಂದ ಪ್ರಭುತ್ವ ಸಿದ್ಧಾಂತವನ್ನು ವಿಮರ್ಶಿಸಿ ರಾಜಕೀಯ ನೀತಿಗೆ ಒಂದು ಕಳೆಯನ್ನು ಕೊಟ್ಟನು. ರಾಷ್ಟ್ರದ ಸ್ವಾತಂತ್ರ್ಯವನ್ನು ಅಳೆಯಲು ಅಳತೆಯ ಕೋಲೊಂದನ್ನು ನಿರ್ಮಿಸಿದನು. ಒಂದು ರಾಷ್ಟ್ರವು ನಿಜವಾಗಿ ಸ್ವತಂತ್ರವಾದುದೇ ಇಲ್ಲವೇ ಎಂಬುದನ್ನು ಇದರ ಸಹಾಯದಿಂದ ತೀರ್ಮಾನಿಸಬಹುದು. ಪ್ರಭುತ್ವವು ರಾಜ ಪ್ರಭುತ್ವವಾಗಬಹುದು, ಅಥವಾ ಪ್ರಜಾಪ್ರಭುತ್ವವಾಗಬಹುದು. ಪ್ರಭುತ್ವವು ಯಾವುದರಲ್ಲೇ ಕೇಂದ್ರೀಕೃತವಾಗಿರಲಿ ಅದು ಮೇಲೆ ವಿವರಿಸಿದ ಲಕ್ಷಣಗಳನ್ನು ಪಡೆದಿರಬೇಕು. ೧) ಅದು ಸ್ವತಂತ್ರಾಧಿಕಾರವಾಗಿರಬೇಕು. ಹೊರದೇಶದ ಎಳತಕ್ಕೆ ಅಥವಾ ಸೆಳೆತಕ್ಕೆ ಸ್ವಲ್ಪವೂ ಒಳಪಡಕೂಡದು. ೨) ಅದರಲ್ಲಿ ಒಗ್ಗಟ್ಟು ಇರಬೇಕು. ಒಬ್ಬನಲ್ಲಿರಲಿ, ಸಾವಿರ ಜನರಲ್ಲಿರಲಿ, ಅವರಲ್ಲಿ ಒಡಕು ಇರಕೂಡದು. ಒಂದು ದೇಶದಲ್ಲಿ ಎರಡು ಪ್ರಭುತ್ವಗಳಿದ್ದರೆ ಅಲ್ಲಿ ಅಂತಃಕಲಹ ತಪ್ಪಿದುದಲ್ಲ. ದೇಶದೊಳಗೆ ಅದು

ಅಭೇದ್ಯವಾದುದಾಗಿಯೂ, ದೇಶದ ಹೊರಗೆ ಅಜೇಯವಾದುದಾಗಿಯೂ ಇದ್ದ ಆಗ ಅದು ಹದಿನಾರಾಣೆಯ ಪ್ರಭುತ್ವವೆನ್ನಿಸಿಕೊಳ್ಳುವುದು. ಇಂದಿನ ವಿಶಿ (Vichy) ಪ್ರಭುತ್ವವನ್ನು ಉದಾಹರಣೆಗಾಗಿ ತೆಗೆದುಕೊಂಡು ಪ್ರಭುತ್ವ ಲಕ್ಷಣವನ್ನು ಸ್ಪಷ್ಟಪಡಿಸಬಹುದು. ಈಗ (೧೯೪೧) ಫ್ರಾನ್ಸಿನ ವಿಶಿ ಸರ್ಕಾರವು ಪ್ರಭುತ್ವ ಉಳ್ಳದ್ದೆ ಎಂದು ಪ್ರಶ್ನಿಸಿದರೆ ಇಲ್ಲವೆಂದೇ ಹೇಳಬೇಕಾಗುವುದು. ಏಕೆಂದರೆ ವಿಶಿ ಸರ್ಕಾರಕ್ಕೆ ಸ್ವತಂತ್ರ ಸರ್ಕಾರವಿಲ್ಲ. ಅದು ಜರ್ಮನ್ ಪ್ರಭುತ್ವದ ಆಡಳಿತಕ್ಕೆ ಒಳಗಾಗಿದೆ. ತನ್ನದಲ್ಲದ, ಅಂದರೆ ಬೇರೆಯವರ, ಅಧಿಕಾರವನ್ನು ಅದು ಎಂದು ಒಪ್ಪಿಕೊಂಡಿತೋ ಅಂದು ಫ್ರಾನ್ಸ್ ತನ್ನ ಪ್ರಭುತ್ವಕ್ಕೆ ತಿಲಾಂಜಲಿ ಕೊಟ್ಟಂತಾಯಿತು. ಹೀಗೆಯೇ ಪರಾಧೀನವಾದ ಇತರ ಐರೋಪ್ಯ ರಾಷ್ಟ್ರಗಳೂ ತಮ್ಮ ಪ್ರಭುತ್ವವನ್ನು ಕಳೆದುಕೊಂಡಿವೆಯೆಂದು ಭಾವಿಸಬೇಕಾಗಿದೆ. ಹದಿನಾರಾಣೆಯ ಪ್ರಭುತ್ವಕ್ಕೆ ಇಂದು ಯುನೈಟೆಡ್‌ಸ್ಟೇಟ್ಸ್, ಇಂಗ್ಲೆಂಡ್ ಮತ್ತು ರಷ್ಯಾ ಪ್ರಭುತ್ವಗಳು ಉತ್ತಮ ನಿದರ್ಶನಗಳು.

ಹೀಗೆ ಹದಿನೇಳನೆಯ ಶತಮಾನದಲ್ಲಿ ಬೋಡಿನ್ ಪ್ರತಿಪಾದಿಸಿದ ಪ್ರಭುತ್ವ ತತ್ವವು ಇಂದಿನವರೆಗೂ ಅಚ್ಚಳಿಯದೆ ರಾಜಕೀಯ ನೀತಿಯ ಪ್ರಥಮ ತತ್ವವಾಗಿ ನಿಂತಿದೆ.

ಆದರೆ ಇತ್ತೀಚಿನ ಕೆಲವು ಆಧುನಿಕ ರಾಜ್ಯಶಾಸ್ತ್ರಜ್ಞರು ಕೆಲವು ಕಾರಣಗಳಿಂದ ಈ ಪ್ರಭುತ್ವಸಿದ್ಧಾಂತವನ್ನು ಒಪ್ಪುವುದಿಲ್ಲ. ಪ್ರಭುತ್ವವು ಏಕಮುಖವಾಗಿಯೂ ಏಕಕೇಂದ್ರವುಳ್ಳದ್ದಾಗಿಯೂ ಇರುವುದು ಒಂದು ದೋಷವೆಂದೂ, ಇದು ಬಹುಮುಖಗಳುಳ್ಳದ್ದಾಗಿಯೂ ಅನೇಕ ಕೇಂದ್ರಗಳುಳ್ಳದ್ದಾಗಿಯೂ ಇರಬೇಕೆಂಬ ವಾದ ತಲೆಯೆತ್ತುತ್ತಿದೆ. ಪ್ರಭುತ್ವವು ಬರಿಯ ನ್ಯಾಯವಿಧಾಯಕ ದುಷ್ಟನಿರೋಧಕ ಪ್ರಭುತ್ವವಾಗಿದ್ದರೆ ಸಾಲದು. ಅದು ದೇಶದ ಆರ್ಥಿಕಶಕ್ತಿಯನ್ನೂ, ಸಾಮಾಜಿಕ ಬಲವನ್ನೂ, ಧಾರ್ಮಿಕಸತ್ವವನ್ನೂ ಗಳಿಸುವ ಪ್ರಭುತ್ವವಾಗಿರಬೇಕು. ಆದುದರಿಂದ ಅದಕ್ಕೆ ಅನೇಕ ಕೇಂದ್ರಗಳಿರಬೇಕು. ಆರ್ಥಿಕ ಸಂಸ್ಥೆಗಳ ಒಂದು ಕೇಂದ್ರವೂ, ಸಾಮಾಜಿಕ ಸಂಸ್ಥೆಗಳ ಇನ್ನೊಂದು ಕೇಂದ್ರವೂ, ಧಾರ್ಮಿಕಸಂಸ್ಥೆಗಳ ಮತ್ತೊಂದು ಕೇಂದ್ರವೂ ಇರಬೇಕು. ಆದರೆ ಏಕಕೇಂದ್ರ ಪ್ರಭುತ್ವತತ್ವಕ್ಕೆ ದೊರೆತಿರುವಷ್ಟು, ಬಹುಮತ ಈ ವಾದಕ್ಕೆ ದೊರೆತಿಲ್ಲ. ಇದಕ್ಕೆ ಕಾರಣವೇನೆಂದರೆ ಈಗಿನ ಪರಿಸ್ಥಿತಿಗಳಲ್ಲಿ ಇಂಥ ಪ್ರಭುತ್ವವು ಕಾರ್ಯರೂಪಕ್ಕೆ ಬರುವುದು ಕಷ್ಟಸಾಧ್ಯವಾಗಿರುವುದೇ ಆಗಿದೆ. ಹೀಗೆಂದ ಮಾತ್ರಕ್ಕೆ ಸರ್ವಾಧಿಕಾರ ಪ್ರಭುತ್ವವೂ, ಬಂಡವಾಳಗಾರರ ದಾಸ್ಯದಲ್ಲಿರುವ ಪ್ರಭುತ್ವವೂ, ಸೈನ್ಯಬಲ ಪ್ರಧಾನವಾದ ಯೋಧ ಪ್ರಭುತ್ವವೂ ಸಾಮಾಜಿಕ ಸಂಸ್ಥೆಗಳ ಸತ್ವವನ್ನೆಲ್ಲಾ ಹೀರಿ ಅವಗಳನ್ನು ನಿತ್ರಾಣವಾಗಿ ಮಾಡುವುದು ನ್ಯಾಯವೆಂದು ಹೇಳಲಾಗುವುದಿಲ್ಲ.

ಪ್ರಭುತ್ವ ಶಕ್ತಿಯು ಬಹುಕೇಂದ್ರವಾಗಿರಬೇಕೆಂಬ ವಾದ ಕೇವಲ ಇಂದಿನದೇ ಅಲ್ಲ. ಅದನ್ನು ಹದಿನೇಳನೆಯ ಶತಮಾನದಲ್ಲೇ ಹ್ಯೂಗೋ ಗ್ರೋಷಿಯಸ್ ಎಂಬ

ರಾಜಕೀಯ ತಾತ್ವಿಕನು ಸೂಚಿಸಿದ್ದನು. ಸ್ವತಂತ್ರವಾದ ಅಧಿಕಾರವೇ ನಿಜವಾದ ಪ್ರಭುತ್ವ ಎಂಬ ಬೋಡಿನಿನ ತತ್ವವನ್ನು ಗ್ರೋಷಿಯಸ್ಸನು ಒಪ್ಪಿಕೊಂಡರೂ ಆ ಪ್ರಭುತ್ವವು ಏಕಕೇಂದ್ರದಲ್ಲಿ ಅಡಗಿರಬೇಕೆಂಬುದನ್ನು ಒಪ್ಪಲಿಲ್ಲ. ಅದು ಅನೇಕ ಕೇಂದ್ರಗಳುಳ್ಳದ್ದಾಗಿರಬೇಕೆಂಬುದು ಗ್ರೋಷಿಯಸ್ಸಿನ ವಾದ. ಇಷ್ಟೂ ಅಲ್ಲದೆ ಪ್ರಭುತ್ವ ಶಕ್ತಿಯು ಜನತೆಯ ಸಮ್ಮತಿಯ ಮೇಲೆ ನಿಲ್ಲಬೇಕು. ಪ್ರಭುತ್ವ ಶಕ್ತಿಯು ಮನುಷ್ಯನ ಸಾಮಾಜಿಕ ಜೀವನದಲ್ಲಿ ಹುಟ್ಟಿದ ನೈಸರ್ಗಿಕ ಶಕ್ತಿ ಎಂದು ಭಾವಿಸಿದುದು ಇವನ ರಾಜಕೀಯ ತತ್ವದ ಇನ್ನೊಂದು ವೈಶಿಷ್ಟ್ಯ. ಮನುಷ್ಯನು ಸಹಜವಾಗಿ ಸಮಾಜಜೀವಿಯಾದುದರಿಂದ ಸಣ್ಣ ಕೂಟಗಳಿಂದ ಪ್ರಾರಂಭಮಾಡಿ ನಾಗರಿಕತೆಯ ಹಂತವನ್ನು ಹತ್ತುತ್ತಾ ಕೊನೆಗೆ ರಾಜ್ಯಸಂಸ್ಥೆ ಎಂಬ ವಿಶಾಲವಾದ ಸಮಾಜವನ್ನು ಏರ್ಪಡಿಸಿಕೊಳ್ಳುವನು. ಸಮಾಜದಲ್ಲಿ ವ್ಯಕ್ತಿಗಳಿಗಿರುವ ಪರಸ್ಪರ ಸಂಪರ್ಕಗಳನ್ನು ನ್ಯಾಯಬದ್ಧವಾಗಿ ನಡೆಸುವ ಏರ್ಪಾಡಿಗೆ ವ್ಯಕ್ತಿಗಳೆಲ್ಲರೂ ಒಪ್ಪಿಗೆ ಯನ್ನೀಯುವರು. ಇದರಿಂದ ಪ್ರಭುತ್ವ ಶಕ್ತಿಯು ನಿರ್ಮಾಣವಾಗುವುದು ಜನತೆಯು ಈ ಪ್ರಭುತ್ವ ಶಕ್ತಿಯನ್ನು ತನ್ನಲ್ಲಿಯೇ ಉಳಿಸಿಕೊಂಡು ಜವಾಬ್ದಾರಿ ಯುಳ್ಳ ನ್ಯಾಯಾಧೀಶರ ಮೂಲಕ ಸಮಾಜದಲ್ಲಿ ನ್ಯಾಯವನ್ನು ಸಲ್ಲಿಸುವ ಏರ್ಪಾಡನ್ನು ಮಾಡಬಹುದು. ಅಥವಾ ಪ್ರಭುತ್ವ ಶಕ್ತಿಯನ್ನು ತಮಲ್ಲಿ ಶ್ರೇಷ್ಠ ನೆಂದು ಎಣಿಸಲ್ಪಟ್ಟ ಒಬ್ಬ ರಾಜನಿಗೆ ಧಾರೆಯೆರೆದು ಆತನ ಶಾಸನಕ್ಕೆ ಒಳಪಡುವ ಏರ್ಪಾಡು ಮಾಡಬಹುದು. ಇದನ್ನು ರಾಜನು ದುರುಪಯೋಗಪಡಿಸಿದರೆ ಅವನಿಂದ ಪುನಃ ಜನತೆಯು ಪ್ರಭುತ್ವ ಶಕ್ತಿಯನ್ನು ಹಿಂತೆಗೆದುಕೊಳ್ಳಬಹುದು.

ಅಂತರ್ರಾಷ್ಟ್ರೀಯ ತತ್ವವನ್ನು ರಾಜನೀತಿಯ ಮುಖ್ಯವಾದ ಅಂಗವನ್ನಾಗಿ ಪ್ರತಿಪಾದಿಸಿದ ಹಿರಿಮೆ ಗ್ರೋಷಿಯಸನಿಗೆ ಸೇರಿದೆ. ಗ್ರೋಷಿಯಸನನ್ನು ಅಂತ ರ್ರಾಷ್ಟ್ರೀಯ ವಾದದ ಜನ್ಮದಾತನೆಂದು ಚರಿತ್ರಕಾರರು ವರ್ಣಿಸಿರುವರು. ಅಂತ ರ್ರಾಷ್ಟ್ರೀಯ ಶಾಸನ ಶಾಸ್ತ್ರ ನಿರ್ಮಾಪಕನೆಂದೂ ಹೆಸರುವಾಸಿಯಾಗಿದ್ದಾನೆ. ರಾಷ್ಟ್ರ ಗಳೆಲ್ಲಾ ಒಂದು ನ್ಯಾಯಸಂಸ್ಥೆಗೆ ಕಟ್ಟುಬಿದ್ದು ಶಾಂತಿಸಾಧನೆ ಮಾಡಬೇಕೆಂಬುದೇ ಇವನ ತತ್ವ.

ರಾಷ್ಟ್ರರಾಷ್ಟ್ರಗಳ ಪರಸ್ಪರ ಸಂಬಂಧಗಳನ್ನು ನಿರ್ಧರಿಸುವ ಅಂತರ್ರಾಷ್ಟ್ರೀಯ ವಿಧಿಯನ್ನೂ ಅಂತರ್ರಾಷ್ಟ್ರೀಯ ಕಾನೂನನ್ನೂ ಒಪ್ಪಿದರೆ ಪ್ರಭುತ್ವ ಪಾರಮ್ಯಕ್ಕೆ ಹಾನಿಬರುವುದಿಲ್ಲವೆ ಎಂದು ಪ್ರಶ್ನೆ ಹುಟ್ಟುವುದು ಸಹಜವಾಗಿದೆ. ಇಂಥ ಸಂಸ್ಥೆಯು ರಾಷ್ಟ್ರಗಳ ಒಪ್ಪಿಗೆಯಿಂದಲ್ಲದೆ ಯಾವುದೋ ಒಂದು ರಾಷ್ಟ್ರದ ಬಲಾತ್ಕಾರದಿಂದ ಏರ್ಪಟ್ಟರೆ ಅಂಥ ಅಂತರ್ರಾಷ್ಟ್ರೀಯ ಸಂಸ್ಥೆಯಿಂದ ಅದನ್ನು ಸೇರದ ಸಣ್ಣ ಸಣ್ಣ ರಾಷ್ಟ್ರಗಳ ಪ್ರಭುತ್ವಪಾರಮ್ಯಕ್ಕೆ ಧಕ್ಕೆ ಬರುವುದು ಖಂಡಿತ. ಆದರೆ ರಾಷ್ಟ್ರಗಳೆಲ್ಲಾ ಸಮಾನ ರಾಷ್ಟ್ರಗಳಾಗಿದ್ದು, ನ್ಯಾಯಪರವಾದುವುಗಳಾಗಿದ್ದು ತಾವಾಗಿಯೇ ಸ್ವತಂತ್ರವಾಗಿ ಒಪ್ಪಿ ಅಂತರ್ರಾಷ್ಟ್ರೀಯ ಸಂಸ್ಥೆಗೆ ಸೇರಿದರೆ ಅವು ತಮ್ಮ ದೇಶದ ಒಳ ಆಡಳಿತದಲ್ಲಿ ತಮ್ಮ ಪ್ರಭುತ್ವ ಪಾರಮ್ಯವನ್ನು ಉಳಿಸಿಕೊಂಡೇ ಸೇರುವುವು.

ಗ್ರೋಷಿಯಸ್‌ನ ಧ್ಯೇಯವನ್ನು ಸುಲಭವಾಗಿ ಸಾಧಿಸಬಹುದೆಂದು ಯಾರೂ ಹೇಳಲಾರರು. ರಾಷ್ಟ್ರಗಳಿಗೆ ಅಂತರ್ರಾಷ್ಟ್ರೀಯ ಮನೋಭಾವ ಸುಲಭವಾಗಿ ಬರತಕ್ಕದ್ದಲ್ಲ. ಇಂಥ ಧ್ಯೇಯಸಾಧನೆಗೆ ಬೇಕಾದ ಸತ್ವಶುದ್ಧಿಯನ್ನು ಪ್ರಪಂಚದ ರಾಷ್ಟ್ರಗಳು ಇನ್ನೂ ಪಡೆದಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ಹೇಳಿದಾಗ ಇಂದಿನ ರಾಷ್ಟ್ರಗಳು ಇನ್ನೂ ಅಂತರ್ರಾಷ್ಟ್ರೀಯ ವಿಚಾರಗಳಲ್ಲಿ ಅನಾಗರಿಕ ಸ್ಥಿತಿ ಯಲ್ಲಿವೆ, ಎಂದ ಹಾಗಾಯಿತೇ ಹೊರತು ಗ್ರೋಷಿಯಸ್‌ನ ಧ್ಯೇಯ ಅಸಾಧ್ಯ ವಾದುದೆಂದು ಹೇಳಿದ ಹಾಗಾಗಲಿಲ್ಲ. ಗ್ರೋಷಿಯಸ್‌ನ ಅಂತರ್ರಾಷ್ಟ್ರೀಯ ಧ್ಯೇಯ ಇಂದಿಗೂ ನ್ಯಾಯಸಮ್ಮತವಾಗಿದೆ; ಆದರೆ ಆದನ್ನು ಸಾಧಿಸಲು ಬೇಕಾದ ಸತ್ವಶುದ್ಧಿ ರಾಷ್ಟ್ರಗಳಲ್ಲಿ ಇನ್ನೂ ಮೂಡಿಲ್ಲ.

## ೩. ಹಾಬ್ಸ್, ಲಾಕ್ ಮತ್ತು ರೂಸೋ
## ರಾಷ್ಟ್ರನಿರ್ಮಾಣ ಮತ್ತು ಸಾಮಾಜಿಕ ಒಡಂಬಡಿಕೆ

ಪ್ರಭುತ್ವವು ಅನಾದಿಯಾಗಿ ನಡೆದುಕೊಂಡು ಬಂದುದೇ ಅಥವಾ ಜನರು ತಮ್ಮ ಕ್ಷೇಮಲಾಭಕ್ಕಾಗಿ ಮಾಡಿಕೊಂಡ ಒಂದು ಒಡಂಬಡಿಕೆಯ ಪರಿಣಾಮವೇ? ಈ ಪ್ರಶ್ನೆಯು ಹದಿಮೂರನೆಯ ಶತಮಾನದಲ್ಲೇ ರಾಜಕೀಯ ತತ್ವದಲ್ಲಿ ತಲೆ ಹಾಕಿತು. ಲಾಂಗ್ವೆ ಮತ್ತು ಬೆಲ್ಲಾರ್ಮೈನ್ ಇವರು ಕ್ರೈಸ್ತ ಧರ್ಮದಲ್ಲಿ ಮತ್ತು ರೋಮನ್ ನ್ಯಾಯದಲ್ಲಿ ಅಡಗಿದ್ದ ಒಡಂಬಡಿಕೆಯ ತತ್ವವನ್ನು ರಾಜಕೀಯ ತತ್ವವಾಗಿ ಉಪಯೋಗಿಸಿಕೊಂಡರು. ಆದರೆ ಒಡಂಬಡಿಕೆಯ ತತ್ವವು ಪ್ರಾಬಲ್ಯಕ್ಕೆ ಬಂದುದು ಹದಿನೇಳನೆಯ ಮತ್ತು ಹದಿನೆಂಟನೆಯ ಶತಮಾನಗಳಲ್ಲಿ. ಇದರ ಪ್ರಸಿದ್ಧ ಪ್ರತಿಪಾದಕರು ಇಂಗ್ಲೆಂಡಿನ ರಾಜಕೀಯ ತಾತ್ವಿಕರಾದ ಹಾಬ್ಸ್, ಲಾಕ್ ಮತ್ತು ಫ್ರಾನ್ಸಿನ ಸಾಹಿತಿಯೂ ತಾತ್ವಿಕನೂ ಆದ ರೂಸೋ.

ಇವರ ರಾಜಕೀಯ ತತ್ವಕ್ಕೆ ಎರಡು ಭಾವಗಳು ಮೂಲವಾದುವು: ೧) ಅರಾಜಕೀಯ ಸ್ಥಿತಿ ಅಥವಾ ಸ್ವಾಭಾವಿಕ ಪರಿಸ್ಥಿತಿ ಮತ್ತು ಆಜನ್ಮಸಿದ್ಧವಾದ ಹಕ್ಕುಗಳು. ೨) ರಾಷ್ಟ್ರವೂ ಪ್ರಭುತ್ವವೂ ಹುಟ್ಟಿದುದು ಸಾಮಾಜಿಕ ಒಡಂಬಡಿಕೆಯಿಂದ.

ಮಾನವನು ಸ್ವಾಭಾವಿಕವಾಗಿ ರಾಜಕೀಯ ಪ್ರಾಣಿ. ರಾಜಕೀಯದ ಮೂಲಕ ತನ್ನ ಜೀವನವನ್ನು ಸುಗಮವಾಗಿ ಮಾಡಿಕೊಳ್ಳುವ ಹಕ್ಕುಭಾಧ್ಯತೆಗಳು ಅವನಿಗೆ ಸ್ವಾಭಾವಿಕವಾದುವು ಎಂಬ ಅರಿಸ್ಟಾಟಲಿನ ತತ್ವವನ್ನು ಈಗಾಗಲೇ ಪರಿಚಯ ಮಾಡಿಕೊಂಡಿದ್ದೇವಷ್ಟೆ. ಇಲ್ಲಿ " ಸ್ವಾಭಾವಿಕವಾಗಿ " ಎಂಬ ಪದವನ್ನು ನ್ಯಾಯವಾದುದು, ಯುಕ್ತವಾದುದು, ಆವಶ್ಯಕವಾದುದು, ಬುದ್ಧಿಸಮ್ಮತವಾದುದು ಎಂಬ ಅರ್ಥದಲ್ಲಿ ಅವನು ಉಪಯೋಗಿಸಿರುವನು. ಆದರೆ ಹಾಬ್ಸ್, ಲಾಕ್, ರೂಸೋ ಇವರು ಸಮಾಜದ ಸ್ವಾಭಾವಿಕ ಪರಿಸ್ಥಿತಿ, ಮಾನವನ ಸ್ವಾಭಾವಿಕ

ಹಕ್ಕುಗಳು ಎಂಬ ಪದಗಳನ್ನು ಅರಾಜಕೀಯ ಮಾನವ ಸ್ಥಿತಿ, ಆ ಸ್ಥಿತಿಯಲ್ಲಿ ಮಾನವನು ಪಡೆದಿದ್ದ ಹಕ್ಕುಗಳು ಎಂಬ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಒಂದು ಅರ್ಥದಲ್ಲಿ ಸ್ವಾಭಾವಿಕವಾದುವು ಎಂದರೆ ಬುದ್ಧಿಸಮ್ಮತವಾದುವು; ಇನ್ನೊಂದು ಅರ್ಥದಲ್ಲಿ ಸ್ವಾಭಾವಿಕವಾದುವು ಎಂದರೆ ಅನಾಗರಿಕ ಅಥವಾ ಅರಾಜಕೀಯ ಸ್ಥಿತಿಗೆ ಸಂಬಂಧಪಟ್ಟವು. ಈ ಪದಗಳ ಅರ್ಥಭೇದಗಳು ತತ್ವಭೇದಗಳಾಗಿ ಪರಿಣಮಿಸಿವೆ. ಆಧುನಿಕ ಒಡಂಬಡಿಕೆಯ ತತ್ವ ಅರಿಸ್ಟಾಟಲಿನ ತತ್ವಕ್ಕೆ ವಿರೋಧವಾದುದು. ಅರಿಸ್ಟಾಟಲಿನ ಪ್ರಕಾರ ರಾಷ್ಟ್ರವು ಮಾನವನ ಜೀವನಕ್ಕೆ ಹತ್ತಿಬಂದುದು; ಹಾಬ್ಸ್ ಮುಂತಾದವರ ಪ್ರಕಾರ ಇದು ಈಚೆಗೆ ಒಡಂಬಡಿಕೆಯಿಂದ ಹುಟ್ಟಿದುದು. ಅಂದರೆ ಈ ಆಧುನಿಕ ತಾತ್ವಿಕರು ಮಾನವನ ಚರಿತ್ರೆಯಲ್ಲಿ ಎರಡು ಪರಿಸ್ಥಿತಿಗಳು ಇದ್ದಂತೆ ಹೇಳಿದ ಹಾಗಾಯಿತು. ಒಂದು ಸಮಾಜದ ಆದಿಯಲ್ಲಿ ಇದ್ದ ಅನಾಯಕ ಸ್ಥಿತಿ; ಇನ್ನೊಂದು ಇದಾದ ತರುವಾಯ ಹುಟ್ಟಿದ ನಾಯಕನುಳ್ಳ ಅಂದರೆ ಪ್ರಭುವುಳ್ಳ ರಾಷ್ಟ್ರೀಯ ಸ್ಥಿತಿ. ಮೊದಲನೆಯ ಸ್ಥಿತಿಯಿಂದ ಜನರು ಎರಡನೆಯ ಸ್ಥಿತಿಗೆ ಹೇಗೆ ಬಂದರು ಎಂಬುದೇ ಈ ತಾತ್ವಿಕರ ಮುಖ್ಯಪ್ರಶ್ನೆ.

ಇದಕ್ಕೆ ಹಾಬ್ಸ್, ಲಾಕ್, ರೂಸೋ—ಈ ಮೂವರೂ ಬೇರೆ ಬೇರೆ ಉತ್ತರಗಳನ್ನು ಕೊಡುವರು. ಅವು ಬೇರೆ ಬೇರೆಯಾಗುವುದಕ್ಕೆ ಅನಾಗರಿಕ ಸ್ಥಿತಿಯ ವಿಚಾರವಾಗಿ ಅವರು ಹೊಂದಿದ್ದ ಭಿನ್ನಭಾವನೆಗಳೇ ಕಾರಣ.

ಸಮಾಜದ ಆರಂಭದಲ್ಲಿ ಮಾನವನಿದ್ದ ಸ್ಥಿತಿಯನ್ನೂ ಅದರಿಂದ ರಾಷ್ಟ್ರ ವೇರ್ಪಟ್ಟದ್ದನ್ನೂ ಹಾಬ್ಸ್ ಈ ರೀತಿ ನಿರೂಪಿಸಿರುವನು: " ಈ ಅರಾಜಕೀಯ ಸ್ಥಿತಿಯಲ್ಲಿ ಮಾನವನಿಗೆ ಯಾವ ನಿರ್ಬಂಧವೂ ಇಲ್ಲದೆ, ಪ್ರತಿಯೊಬ್ಬನೂ ತನ್ನ ಇಚ್ಛೆ ಬಂದ ಹಾಗೆ ನಡೆಯುತ್ತಿದ್ದನು. ಆದರೆ ಸ್ವಾತಂತ್ರ್ಯಕ್ಕೆ ಹತ್ತರಷ್ಟು ಪ್ರಾಣಭಯವೂ ಇತ್ತು. ಇಂತಹ ಸ್ಥಿತಿಯಲ್ಲಿ ಇದ್ದ ಸ್ವಾತಂತ್ರ್ಯವನ್ನಾದರೂ ಅನುಭವಿಸುವುದು ಹೇಗೆ? ಈ ಸ್ವಾಭಾವಿಕ ಸ್ಥಿತಿಯನ್ನು ಹಾಬ್ಸ್ ಹೇಯವಾದುದು, ಮೃಗಪ್ರಾಯವಾದುದು, ನಶ್ವರವಾದುದು ಎಂದು ವರ್ಣಿಸಿರುವನು. ಈ ಪರಿಸ್ಥಿತಿಯಲ್ಲಿ ಶಾಂತಿ ಇರಲು ಸಾಧ್ಯವಿಲ್ಲ. ಪ್ರತಿಯೊಬ್ಬನೂ ಇತರರ ಮೇಲೆ ಬಿದ್ದು ಅವರ ಪ್ರಾಣವನ್ನು ತೆಗೆಯಲು ಅಥವಾ ಆಸ್ತಿಯನ್ನು ದೋಚಿಕೊಂಡು ಹೋಗಲು ಹೊಂಚುಹಾಕುತ್ತಿರುವನು. ಈ ಭಯೋತ್ಪಾದಕ ಸ್ಥಿತಿಯಿಂದ ತಪ್ಪಿಸಿಕೊಂಡು ನೆಮ್ಮದಿಯಾಗಿ ಬಾಳುವುದು ಹೇಗೆ ಎಂಬುದು ದೊಡ್ಡ ಸಮಸ್ಯೆಯಾಯಿತು. ಇಂತಹ ಸ್ಥಿತಿಯನ್ನು ಕೊನೆಗಾಣಿಸಬೇಕೆಂದು ಎಲ್ಲರೂ ಬಯಸಿ ತಮ್ಮ ವ್ಯಕ್ತಿಗತವಾದ ಸ್ವಾತಂತ್ರ್ಯವನ್ನೂ ಹಕ್ಕುಗಳನ್ನೂ ಬಿಟ್ಟುಕೊಡುವೆವೆಂದು ಎಲ್ಲರೂ ಒಪ್ಪಂದಕ್ಕೆ ಬಂದು ತಮ್ಮಲ್ಲಿ ಒಬ್ಬನನ್ನು ಅಥವಾ ಒಂದು ಸಭೆಯನ್ನು ಚುನಾಯಿಸಿ ಅವನ ಅಥವಾ ಆ ಸಭೆಯ ಶಾಸನದಂತೆ ನಡೆದುಕೊಳ್ಳುವೆವೆಂದು ಎಲ್ಲರೂ ಒಂದು ಒಪ್ಪಂದಕ್ಕೆ ಸಹಿ ಹಾಕಿದರು. ಹೀಗೆ ಸಮಾಜ ನಿರ್ಮಾಣವಾಯಿತು;

ಎಲ್ಲರೂ ಸೇರಿ ಮಾಡಿಕೊಂಡ ಈ ಒಪ್ಪಂದ ನ್ಯಾಯಬದ್ಧವಾಯಿತು. ಇದರಿಂ ಜಾರಿಕೊಳ್ಳಲು ಯಾರಿಗೂ ಹಕ್ಕಿಲ್ಲದಂತಾಯಿತು. ಈ ಒಪ್ಪಂದಕ್ಕೆ ವಿರೋಧವಾ ವರ್ತಿಸಿದವರನ್ನು ಶಿಕ್ಷೆಗೆ ಗುರಿಮಾಡಿ ದಾರಿಗೆ ತರುವ ಪ್ರಯತ್ನಗಳು ನಡೆದುವು. ಆಗ ಮಾಡಿಕೊಂಡ ಒಪ್ಪಂದದ ಫಲವಾಗಿ ರಾಜ್ಯಸಂಸ್ಥೆಯು ಹುಟ್ಟಿತು. ಒಪ್ಪಂದಕ್ಕೆ ವಿರೋಧವಾಗಿ ಎಂದು ಮನುಷ್ಯರು ನಡೆಯುವರೋ ಅಂ ಕ್ರಾಂತಿಯಾಗುವುದು. ಕಳೆದುಹೋಗಿದ್ದ ಭಯೋತ್ಪಾದಕ ನೈಸರ್ಗಿಕ ಸ್ಥಿತಿಯು ಆ ಕ್ರಾಂತಿಯಿಂದ ಪುನಃ ತಲೆದೋರುವುದು. ಆದುದರಿಂದ ಇದು ಪು ತಲೆದೋರದ ಹಾಗೆ ಮಾಡಲು ಜನರು ಪ್ರಭುತ್ವಶಕ್ತಿಗೆ ತಲೆಬಾಗಿ ಅದರ ಶಾಸ ಗಳನ್ನು ಪಾಲಿಸಬೇಕಾದುದು ಪ್ರಜಾಧರ್ಮ. ಆಜನ್ಮಸಿದ್ಧವಾದ ತಮ್ಮ ಹಕ್ಕು ಗಳನ್ನು ಬಿಟ್ಟುಕೊಟ್ಟು ಜನರು ಗಳಿಸಿದ ನ್ಯಾಯಸಂಸ್ಥೆಯು ರಾಜ್ಯಸಂಸ್ಥೆ—ಇ ಹಾಬ್ಸನ ತರ್ಕ. ಈ ತರ್ಕವು ಸ್ಟೂಯರ್ಟರ ನಿರಂಕುಶ ಪ್ರಭುತ್ವ ತತ್ವಕ್ಕೆ ಬೆಂಬಲವಾಯಿತು.

ಲಾಕನ ಅಭಿಪ್ರಾಯದಲ್ಲೂ, ಮಾನವನು ತನ್ನ ನೈಸರ್ಗಿಕ ಸ್ಥಿತಿಯ ಸಂಪೂರ್ಣವಾಗಿ ಸ್ವಾತಂತ್ರ್ಯ ಹೊಂದಿದ್ದನು. ಯಾರೊಬ್ಬರ ಆಜ್ಞೆಗೂ ಒಳಗಾಗ ತನಗೆ ಇಷ್ಟಬಂದಂತೆ ತನ್ನ ತನುಮನಧನಗಳನ್ನು ಉಪಯೋಗಿಸಿಕೊಳ್ಳ ಸ್ವಾತಂತ್ರ್ಯ ಅವನಿಗಿತ್ತು. ಇದಲ್ಲದೆ ಈ ಪರಿಸ್ಥಿತಿಯಲ್ಲಿ ಎಲ್ಲರೂ ಸಮಾ ರಾಗಿದ್ದರು. ಈ ಅಭಿಪ್ರಾಯಗಳಲ್ಲಿ ಲಾಕನಿಗೂ ಹಾಬ್ಸನಿಗೂ ವ್ಯತ್ಯಾ ಸವಿರಲಿಲ್ಲ. ಆದರೆ ಹಾಬ್ಸನು ಹೇಳುವಂತೆ ನೈಸರ್ಗಿಕ ಸ್ಥಿತಿಯಲ್ಲಿ ಮನುಷ್ಯ ನಯನೀತಿಗಳಿಲ್ಲದೆ ಕಾಡುಮೃಗಗಳಂತೆ ಕಚ್ಚಾಡುತ್ತಿದ್ದರೆಂದು ಲಾಕನು ನಂಬಲಿ ಆ ಸ್ಥಿತಿಯಲ್ಲಿ ರಾಜ್ಯಸಂಸ್ಥೆ ಇರಲಿಲ್ಲವೆಂದು ಹೇಳಬಹುದೇ ಹೊರತು ಸಮಾಜ ಇರಲಿಲ್ಲವೆಂಬುದಾಗಲಿ ಕಟ್ಟುಕಾಯಿದೆಗಳು ಇರಲಿಲ್ಲವೆಂದಾಗಲಿ ಹೇಳುವುದು ತಪ್ಪು ಎಂದು ಭಾವಿಸಿದ್ದನು. ಅಲ್ಲದೆ ಸಮಾನತೆಗೆ ಲಾಕನು ನಿಷ್ಕೃಷ್ಟವಾ ಅರ್ಥವನ್ನೂ ಕೊಟ್ಟನು. ದೇಹದಾರ್ಢ್ಯದಲ್ಲಾಗಲಿ, ಬುದ್ಧಿಶಕ್ತಿಯಲ್ಲಾಗ ಅಥವಾ ಆಸ್ತಿಪಾಸ್ತಿಗಳಲ್ಲಿಯಾಗಲಿ ನೈಜಸ್ಥಿತಿಯಲ್ಲಿರುವಾಗ ಎಲ್ಲರೂ ಸಮಾ ರಲ್ಲ; ಇತರರ ಆಡಳಿತಕ್ಕೆ ಒಳಗಾಗದೆ ತಮಗೆ ಇಷ್ಟಬಂದಂತೆ ವರ್ತಿಸು ಸ್ವಾತಂತ್ರ್ಯ ಮಾತ್ರ ಎಲ್ಲರಿಗೂ ಸಮವಾಗಿತ್ತು. ಪ್ರತಿಯೊಬ್ಬನೂ ಸಮಾ ಸ್ವಾತಂತ್ರ್ಯವುಳ್ಳವನಾಗಿರಬೇಕಾದರೆ ಅವನು ಇತರರು ತನ್ನಂತೆಯೇ ಸ್ವತಂತ್ರ ಎಂಬ ತತ್ವವನ್ನು ಅಂಗೀಕರಿಸಬೇಕು—ಗೌರವಿಸಬೇಕು. ಈ ನ್ಯಾಯವನ್ನು ಆಚರಣೆಗೆ ತರಬಲ್ಲ ನ್ಯಾಯಾಧೀಶನಿಲ್ಲದಿದ್ದುದೇ ಈ ಅರಾಜಕೀಯ ಸ್ಥಿತಿ ಒಂದು ಕೊರತೆ. ಇಂಥಾ ನ್ಯಾಯಾಧೀಶನನ್ನು ಏರ್ಪಡಿಸಿದಾಗ ಶಿಸ್ತು ಹುಟ್ಟಿ ಆದರೆ ಪ್ರತಿವ್ಯಕ್ತಿಗೂ ತನ್ನ ಪ್ರಾಣ, ಮಾನ, ಆಸ್ತಿಪಾಸ್ತಿಗಳನ್ನು ಉಳಿಸಿಕೊಳ್ಳ ಸ್ವಾತಂತ್ರ್ಯ ಆಜನ್ಮಸಿದ್ಧವಾದುದು; ಅದನ್ನು ಕಸಿದುಕೊಳ್ಳುವ ಅಧಿಕಾ

ಯಾರಿಗೂ ಯಾವ ಸರ್ಕಾರಕ್ಕೂ ಇಲ್ಲ. ತಮ್ಮ ಸ್ವಾತಂತ್ರ್ಯದ ಹಕ್ಕನ್ನು ಸ್ಥಾಪಿಸಲು ಇಂಗ್ಲೆಂಡಿನ ಪ್ರಜೆಗಳು ಎಬ್ಬಿಸಿದ ರಾಜಕೀಯ ಕ್ರಾಂತಿಗೆ ಲಾಕನ ತತ್ವ ಬೆಂಬಲಕೊಟ್ಟಿತು.

ರೂಸೋವು ಮಾನವನ ನೈಸರ್ಗಿಕ ಸ್ಥಿತಿಯನ್ನು ವಿವರಿಸುವುದರಲ್ಲಿ ಲಾಕನಿಗಿಂತಲೂ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿರುತ್ತಾನೆ. ಲಾಕನ ಅಭಿಪ್ರಾಯದಲ್ಲಿ ನೈಸರ್ಗಿಕ ಸ್ಥಿತಿ ಶಾಂತಿಯುತವಾದದ್ದಾದರೆ, ರೂಸೋವಿನ ಅಭಿಪ್ರಾಯದಲ್ಲಿ ಅದು ಆನಂದಯುತವಾದದ್ದಾಗಿತ್ತು. ಎಲ್ಲರೂ ಸ್ವತಂತ್ರರಾಗಿದ್ದರೂ ಯಾರಿಗೂ ದುರಾಶೆ ಇರಲಿಲ್ಲ. ಪ್ರಕೃತಿಮಾತೆಯು ನೀಡಿದ್ದನ್ನು ಸಂತೋಷದಿಂದ ಸ್ವೀಕರಿಸಿ ನಿಶ್ಚಿಂತೆಯಾಗಿ ಹಸುಮಕ್ಕಳಂತೆ ಬಾಳುತ್ತಿದ್ದರು. ಮನುಷ್ಯರ ಪರಸ್ಪರ ಸಂಬಂಧ ಸ್ನೇಹಪೂರಿತವಾಗಿತ್ತು. ಎಲ್ಲರೂ ಸ್ವತಂತ್ರರೂ ಸಮಾನರೂ ಆಗಿದ್ದುದಲ್ಲದೆ ಸಹೋದರ ಭಾವದಿಂದಲೂ ವರ್ತಿಸುತ್ತಿದ್ದರು. ಸಮಾಜದ ಈ ಸರಳತೆಯು ಕ್ರಮೇಣ ಹೋಗಿ ಅನೇಕ ತೊಡಕುಗಳು ಒದಗಿದವು. ಜನಸಂಖ್ಯೆ ಹೆಚ್ಚಿತು. ಪ್ರತಿಯೊಬ್ಬರೂ ಪ್ರತ್ಯೇಕವಾಗಿ ಆಸ್ತಿಗಳಿಸಲು ಮೊದಲು ಮಾಡಿದರು; ಲೇವಾದೇವಿ ಮತ್ತು ವ್ಯಾಪಾರ ಪ್ರಾರಂಭವಾದವು. ಇವುಗಳ ಪರಿಣಾಮವಾಗಿ ಕೆಲವರು ತಮ್ಮ ಸ್ವಾತಂತ್ರ್ಯವನ್ನು ಹೆಚ್ಚಿಸಿಕೊಂಡರು; ಅನೇಕರು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡರು. ಸ್ವಾತಂತ್ರ್ಯಪ್ರಿಯರಾದ ಮಾನವರು ತಮ್ಮ ಆಜನ್ಮಸಿದ್ಧವಾದ ಹಕ್ಕುಗಳನ್ನು ಉಳಿಸಿಕೊಳ್ಳುವ ಏರ್ಪಾಡುಮಾಡಿದರು: ಈ ಏರ್ಪಾಡೇ ಸಾಮಾಜಿಕ ಒಪ್ಪಂದದ ಏರ್ಪಾಡು. ಈ ಒಪ್ಪಂದದಿಂದ ರಾಜ್ಯದ ಉತ್ಪತ್ತಿಯಾಯಿತು. ರಾಜ್ಯವು ಹುಟ್ಟಿದುದು ಜನತೆಯ ಸಮ್ಮತಿಗನುಸಾರವಾಗಿ. ಒಂದು ರಾಜ್ಯಸಂಸ್ಥೆ ಪ್ರಜೆಗಳ ಒಪ್ಪಿಗೆಯನ್ನು ಪಡೆಯದ ಪಕ್ಷದಲ್ಲಿ ಪ್ರಜೆಗಳು ಅದಕ್ಕೆ ವಿಧೇಯರಾಗಿರಬೇಕಾಗಿಲ್ಲ ಎಂಬುದನ್ನು ಸ್ಥಾಪಿಸುವುದೇ ರೂಸೋವಿನ ಒಪ್ಪಂದ ತತ್ವದ ಉದ್ದೇಶ. ಪ್ರಭುಶಕ್ತಿಗೆ ಪ್ರಜೆಗಳ ಸಂಕಲ್ಪವೇ ನಿಜವಾದ ಆಸರೆ; ಜನತೆಯ ಸಾಮೂಹಿಕ ಸಂಕಲ್ಪವನ್ನು ನೆರವೇರಿಸುವುದೇ ಸರ್ಕಾರದ ಕರ್ತವ್ಯ. ಯಾವ ಏರ್ಪಾಟು ಪ್ರಜೆಗಳ ಸೌಖ್ಯಕ್ಕೆ ಸಾಧಕವಾಗುವುದೋ ಅದು ಪ್ರಜಾಸಂಕಲ್ಪಕ್ಕೆ ಅನುಸಾರವಾದದ್ದೆಂದು ರೂಸೋವಿನ ಅಭಿಮತ. ಸರ್ಕಾರವು ಪ್ರಜಾಸಂಕಲ್ಪವನ್ನು ನೆರವೇರಿಸದೆ ಇದ್ದ ಪಕ್ಷದಲ್ಲಿ ಜನರು ತಾವು ಸರ್ಕಾರಕ್ಕೆ ಕೊಟ್ಟ ಪ್ರಭುತ್ವವನ್ನು ತೆಗೆದುಹಾಕಿ ಆ ಪ್ರಭುತ್ವವನ್ನು ತಾವೇ ವಹಿಸಿಕೊಳ್ಳಬಹುದು. ರೂಸೋವಿನ ಈ ವಾದವು ೧೮ನೆಯ ಶತಮಾನದ ಫ್ರಾನ್ಸಿನ ಮಹಾಕ್ರಾಂತಿಗೆ ಉತ್ತೇಜಕವಾಯಿತು. "ಸ್ವಾತಂತ್ರ್ಯ, ಸಮಾನತೆ, ಭ್ರಾತೃಭಾವ"—ರೂಸೋವಿನ ಈ ಮಾತು ಆ ಕ್ರಾಂತಿಯ ಕೂಗಾಯಿತು.

ಈ ಮೂವರ ರಾಜಕೀಯ ತತ್ವಗಳನ್ನು ಬೇರೆಬೇರೆ ವಿಮರ್ಶೆಮಾಡಲು ಇಲ್ಲಿ ಅವಕಾಶವಿಲ್ಲ. ಆದರೆ ಈ ಮೂರಕ್ಕೂ ಸಾಮಾನ್ಯವಾಗಿರುವ ಕೆಲವು ಅಂಶಗಳನ್ನು ಮಾತ್ರ ಇಲ್ಲಿ ವಿಮರ್ಶಿಸಿದೆ.

ಹಿಂದೆ ಯಾವುದೋ ಒಂದು ಕಾಲದಲ್ಲಿ ಸಾಮೂಹಿಕ ಒಡಂಬಡಿಕೆ ಏರ್ಪಟ್ಟಿತ್ತೆಂಬುದಕ್ಕೆ ಚರಿತ್ರೆಯಲ್ಲಿ ಆಧಾರವಿಲ್ಲ. ಎಲ್ಲಿಂದ ಎಲ್ಲಿಯವರೆಗೆ ಹೋಗಿ ಮಾನವನು ಯಾವ ಕಾಲದಲ್ಲೂ ಅರಾಜಕೀಯ ಸ್ಥಿತಿಯಲ್ಲಿದ್ದಂತೆ ಕಾಣಬರು ದಿಲ್ಲ. ಕೇವಲ ಹಿಂದುಳಿದ ಕಾಡುಜನರಲ್ಲಿ ಕೂಡ ರಾಜಕೀಯ ಭಾವ ರಾಜಕೀಯ ವ್ಯವಸ್ಥೆ ಇದೆ; ಕಾಡುಜನರ ವಾಸ್ತವಸ್ಥಿತಿಗೂ ಹಾಬ್ಸ್ ರೂಸೋ ಚಿತ್ರಕ್ಕೂ ಬಹಳ ವ್ಯತ್ಯಾಸವಿದೆ. ಹಾಬ್ಸ್ ಹೇಳುವಂತೆ ಕಾಡುಮನುಷ್ಯ ಕ್ರೂರಿಯ ಕಪಟಿಯೂ ಆಗಿರಲಿಲ್ಲ; ರೂಸೋ ಹೇಳುವಂತೆ ಶೀಲವಂತನೂ ಸಮತಾಭಾ ವುಳ್ಳವನೂ ಆಗಿರಲಿಲ್ಲ. ನಮ್ಮಲ್ಲಿರುವಂತೆ ಕಾಡುಜನರಲ್ಲೂ ಕಾಮಕ್ರೋಧ ಮ ಮಾತ್ಸರ್ಯಗಳು ಇದ್ದವು; ನಮ್ಮಲ್ಲಿರುವಂತೆ ಅವರಲ್ಲೂ ಧರ್ಮ, ಕಲೆ, ಮತಗಳ ಆಸಕ್ತಿ—ಇವು ಇದ್ದವು; ನಮ್ಮಲ್ಲಿರುವಂತೆ ಅವರಲ್ಲೂ ಪ್ರಭುತ್ವವಿತ್ತು. ಆದ ಅವರ ರಾಷ್ಟ್ರವು ನಮ್ಮ ರಾಷ್ಟ್ರಗಳಂತೆ ದೊಡ್ಡ ರಾಷ್ಟ್ರಗಳಾಗಿಯೂ ಇರಲಿಲ್ಲ ನಮ್ಮಲ್ಲಿರುವಂತೆ ಪ್ರಭುತ್ವದ ಕೆಲಸ ಕಾರ್ಯಗಳು ಅನೇಕಮುಖವಾಗಿಯೂ ಇರಲಿಲ್ಲ.

ಅರಾಜಕೀಯ ಸ್ಥಿತಿಯಲ್ಲಿ ಮಾನವನು ಕೆಲವು ಸ್ವಾಭಾವಿಕವಾದ ಹಕ್ಕುಗಳನ್ನು ಪಡೆದಿದ್ದನು ಎಂದು ಹೇಳುವುದು ಸರಿಯಲ್ಲ. ರಾಜಕೀಯ ಆವರಣ ಮೂಲಕವಲ್ಲದೆ ಜನರಿಗೆ ಹಕ್ಕುಗಳೂ ಇಲ್ಲ, ಬಾಧ್ಯತೆಗಳೂ ಇಲ್ಲ. ಆದ ಸ್ವಾಭಾವಿಕವಾದವು ಎಂದರೆ ನ್ಯಾಯವಾದುವು, ಮಾನವ ಜೀವನಕ್ಕೆ ಅಗತ್ಯ ವಾದುವು ಎಂದು ತಿಳಿಯುವುದಾದರೆ ಖಂಡಿತವಾಗಿಯೂ ಪ್ರತಿಯೊಬ್ಬ ಸಾಮಾಜಿ ನಿಗೂ ಆಜನ್ಮಸಿದ್ಧವಾದ ಹಕ್ಕುಗಳಿವೆ.

ಒಡಂಬಡಿಕೆಯ ತತ್ವದಲ್ಲಿ ಒಂದು ಮುಖ್ಯ ಸತ್ಯಾಂಶವಿದೆ. ಪ್ರಭುತ್ವ ನಿಲ್ಲಬೇಕಾದುದು ಜನರ ಸಮ್ಮತಿಯ ಮೇಲೆ. ಆದರೆ ಈ ಸಮ್ಮತಿಯು ಒಂದು ಒಡಂಬಡಿಕೆಯ ಮೂಲಕ ವ್ಯಕ್ತವಾಗಬೇಕಾದುದಿಲ್ಲ. ಆಧುನಿಕ ಚರಿತ್ರೆಯಲ್ಲಿ ಆ ವಿಧವಾದ ಒಡಂಬಡಿಕೆಗಳ ಒಂದೆರಡು ಉದಾಹರಣೆಗಳಿವೆ. ಆದರೆ ಸಾಮಾನ್ಯ ವಾಗಿ ಪ್ರಜೆಗಳ ಸಮ್ಮತಿಯು ಅವ್ಯಕ್ತವಾಗಿಯೇ ಇರುತ್ತದೆ.

ರೂಸೋ ಈ ಸಮ್ಮತಿಯನ್ನು ಜನರ ಸಾಮಾನ್ಯ ಸಂಕಲ್ಪ* ಎಂದು ಕರೆಯುವನು. ಈ ಸಂಕಲ್ಪವೇ ನಿಜವಾದ ಪ್ರಭುತ್ವವೆಂದು ಅವನ ಅಭಿಪ್ರಾಯ

---

* 'ಸಾಮಾನ್ಯ' ಎಂಬುದು ಒಂದು ಪಾರಿಭಾಷಿಕ ಪದ. ಜನರ ಸಾಮಾನ್ಯ ಸಂಕಲ್ಪ ಎಂದರೆ ಬಹುಮತದಿಂದ ಹೊರಬಿದ್ದ ಸಂಕಲ್ಪವೆಂದು ತಿಳಿಯಕೂಡದು. ಜನರ ನಿಜವಾ ಅಭ್ಯುದಯಕ್ಕೆ ಕಾರಣವಾದ ಸಂಕಲ್ಪವನ್ನು ಮಾತ್ರ ಜನರ ಸಾಮಾನ್ಯ ಸಂಕಲ್ಪವೆಂದು ತಿಳಿಯ ಬೇಕು. ಬಹುಮತದಿಂದ ಸಂಕಲ್ಪವಾದುದು ಜನರ ಅಭ್ಯುದಯಕ್ಕೆ ಕಾರಣವಾಗದಿರಬಹುದು. ಹೆಚ್ಚುಜನ ಒಂದು ವಿಷಯವನ್ನು ಒಪ್ಪಿದ ಮಾತ್ರಕ್ಕೆ ಅದು ಸತ್ಯವೂ ನ್ಯಾಯವೂ ಆಗಲೇ ಬೇಕಾದುದಿಲ್ಲ. ಮುಖ್ಯವಾಗಿ ಆ ಸಂಕಲ್ಪ ನ್ಯಾಯವಾದುವಾಗಬೇಕಾದರೆ ಅದು ಬುದ್ಧಿ ಸಮರ್ಪಕವಾಗಿರಬೇಕು.

ಜನರೇ ಪ್ರಭುಗಳು, ಅವರ ಸಂಕಲ್ಪವೇ ಪ್ರಭುತ್ವ ಎಂಬುದು ಬರಿಯ ಧ್ಯೇಯ; ಅಂಥಾ ಪ್ರಭುತ್ವ ಪ್ರಜಾಪ್ರಭುತ್ವವಿರುವ ದೇಶಗಳಲ್ಲೂ ಸಿದ್ಧಿಯಾಗಿದೆಯೆಂದು ಹೇಳಲಾಗುವುದಿಲ್ಲ. ಆದರೂ ಪ್ರಜೆಗಳ ಸಂಕಲ್ಪವೇ ಪ್ರಭುತ್ವ ಎಂಬ ಧ್ಯೇಯ ಆಧುನಿಕ ರಾಜಕೀಯ ತತ್ವಶಾಸ್ತ್ರದಲ್ಲಿ ಅತ್ಯಂತ ಪರಿಣಾಮಕಾರಿಯಾಗಿದೆ.

—ಎಂ. ಯಾಮುನಾಚಾರ್ಯ

# ಹಣ ಪ್ರಪಂಚ

ಆಕಾಂಕ್ಷೆ: ಹಣ ಎಂದರೇನು? ಅದರ ಉತ್ಪತ್ತಿ ಹೇಗೆ? ಆವಶ್ಯಕತೆ ಉಪಯೋಗಗಳೇನು? ಅಳತೆ ಹೇಗೆ? ಅದನ್ನು ಸಂಗ್ರಹಿಸುವ ಬಗೆ ಯಾವುದು? ಜನಜೀವನದಲ್ಲಿ ಹಣದ ಪ್ರಭಾವದಿಂದ ಯಾವ ಹೆಚ್ಚು ಕಡಮೆ, ಮೇಲು ಬೀಳು ಉಂಟಾಗುವುವು? ಹಣದ ಸಂಗ್ರಹದಲ್ಲಿಯೂ ಹಂಚಿಕೆಯಲ್ಲಿಯೂ ಯಾವ ನಿಯಮಗಳನ್ನು ಅನುಸರಿಸುವುದು ಮೇಲು? ಅದರ ಮೂಲಕ ಕೈಗಾರಿಕೆ, ವ್ಯಾಪಾರ, ಸಂಪದಭಿವೃದ್ಧಿ ಮುಂತಾದವು ಹೇಗೆ ನಡೆಯುವುವು? ಜನರೂ ಸಂಸ್ಥೆಗಳೂ ಸರಕಾರದವರೂ ಹಣ ಸಂಗ್ರಹ ಕಾರ್ಯದಲ್ಲಿ ಹೇಗೆ ಬೆರೆಯುತ್ತಾರೆ? ಅವರಲ್ಲಿ ಯಾವ ಸಂಬಂಧಗಳು ಉಂಟಾಗುತ್ತವೆ? ಯಾರ ಸ್ಥಾನ ಎಲ್ಲಿ, ಎಷ್ಟು? ಒಟ್ಟು ಸಮಾಜದ ಮಂಗಳಕ್ಕೂ ಈ ಎಲ್ಲರ ಕಾರ್ಯಗಳಿಗೂ ಕೆಳೆ ಇದೆಯೆ? ಹಣದ ಉತ್ಪತ್ತಿ ಹಂಚಿಕೆಗಳ ಪರಿಣಾಮಗಳಲ್ಲಿ ಒಳ್ಳೆಯವನ್ನು ಹೆಚ್ಚಿಸಿ, ಕೆಟ್ಟವನ್ನು ಕಡಮೆ ಮಾಡುವ ಉಪಾಯಗಳಾವುವು? ಹಣದ ಪೇಟೆಯ ಮತ್ತು ಹಣ ಪ್ರಚಾರದ ವ್ಯವಸ್ಥೆ ಹೇಗಿರಬೇಕು? ಇಂಡಿಯಾ ದೇಶದಲ್ಲಿ ಈಗ ಹಣ ಸಂಗ್ರಹದ ಸ್ಥಿತಿ ಹೇಗಿದೆ? ಎಂಬ ಸಂಗತಿಗಳಲ್ಲಿ ಕೆಲವನ್ನು ಈ ಪುಸ್ತಕದಲ್ಲಿ ವರ್ಣಿಸಲಾಗುತ್ತದೆ.

ಧನ-ಹಣ: ಮೂಲತಃ ಜನಜೀವನಕ್ಕೆ ಬೇಕಾದ ಎಲ್ಲ ಪದಾರ್ಥ ಶಕ್ತಿ, ಅನುಕೂಲ, ಸೇವಾಸೌಕರ್ಯ ಸೇರಿ ಧನವೆನಿಸಿಕೊಳ್ಳುವುದು. ಆದರೂ, ಸಾಮಾನ್ಯವಾಗಿ ಯಾವ ಪದಾರ್ಥದ ಪ್ರಭಾವದಿಂದ ಇತರ ಎಲ್ಲ ಪದಾರ್ಥಗಳನ್ನು ಪಡೆಯುವ ಅಧಿಕಾರವೂ ಸೌಲಭ್ಯವೂ ದೊರೆಯುವುವೋ, ಯಾವ ವಸ್ತುಗಳಿದ್ದರೆ ವ್ಯಕ್ತಿಯ ಮತ್ತು ಕುಟುಂಬದ ಸುಖ, ಸೌಕರ್ಯ, ಶಕ್ತಿ, ಪುಷ್ಟಿ, ಪ್ರತಿಷ್ಠೆ ಉಂಟಾಗುವುವೋ ಆ ಎಲ್ಲ ವಸ್ತು ನೆರವುಗಳ ಸಮುದಾಯಕ್ಕೆ ಧನ ಎನ್ನುವುದು ವಾಡಿಕೆ. ವಸ್ತುಗಳ

ಬೆಲೆಯನ್ನು ಅಳೆದು ಎಲ್ಲವನ್ನೂ ಬೇಕು ಬೇಕಾದಂತೆ ಸಂಗ್ರಹಿಸಬಲ್ಲ ಧನ ಪ್ರತಿನಿಧಿ—ಹಣ. ಒಟ್ಟು ಯಾರು ಧನಸಂಪತ್ತಿಯನ್ನಾಗಲಿ ಅದರಿಂದಲೇ ಅಳೆ ಸೂಚಿಸುವರು. ಹಣವೆಂದರೆ, ಮೂಲತಃ ಯಾವುದಾದರೊಂದು ರಾಜ್ಯದ ಅಲ್ಲಿನ ಅಧಿಕಾರಿಗಳು ತಮ್ಮ ಮುದ್ರೆ ಒತ್ತಿ ಬಳಕೆಗೆ ತರುವ ಒಂದು ಬಗೆ ಪದಾರ್ಥ ವಿಶೇಷ. ಎಲ್ಲ ಲೆಕ್ಕ ಅದರ ಎಣಿಕೆಯಲ್ಲಿ ನಡೆಯುವುದು. ಕೊಳ್ಳು ವುದು, ಕೊಡುವುದು, ವೆಚ್ಚಮಾಡುವುದು, ಕೂಡಿಡುವುದು, ಹಂಚುವುದು, ಎಲ್ಲ ಹಣದ ಮೂಲಕವೇ. ಧನಸಾಮಗ್ರಿ ಸೇವೆ ಸೌಕರ್ಯಗಳನ್ನೆಲ್ಲ ದೊರಕಿಸಬ ಸಾಧನ ಅದು. ಆದುದರಿಂದ ಹಣದ ಪ್ರಯೋಜನ, ಉತ್ಪತ್ತಿ, ಚಲನೆ, ಕಾರ್ಯ ಹಂಚಿಕೆ, ಸಂಗ್ರಹ, ಒಳ ಹೊರಗಿನ ಬೆಲೆ—ಇವನ್ನು ಕುರಿತು ಹೇಳಿದರೆ ಧನ ವಿಷಯವನ್ನೇ ಒಂದು ಬಗೆಯಿಂದ ಹೇಳಿದಹಾಗಾಯಿತು. ಮುಂದಿನ ಪ್ರಕರಣ ಗಳೆಲ್ಲ ಹಣವನ್ನೇ ಕುರಿತವು. ಈ ಸಂಬಂಧದಲ್ಲಿ ಎಲ್ಲ ದೇಶಗಳ ಆರ್ಥಿಕ ಉದ್ಯಮಗಳು; ಅವುಗಳ ಸ್ವರೂಪ; ಅವು ನಡೆಯುವ ರೀತಿ; ಅದಕ್ಕೆ ಬಂಡವಾಳ ಒದಗುವ ಬಗೆ, ಕ್ರಮ; ಮುಖ್ಯವಾಗಿ ಬಂಡವಾಳ ಉತ್ಪತ್ತಿಯಾಗಿ ಕೆಲಸಕಾರ್ಯ ಗಳಿಗೆ ಒದಗುವ ರೀತಿ; ಅದನ್ನು ಒದಗಿಸುವ ಜನ, ಸಂಸ್ಥೆಗಳು, ಅಲ್ಲಿನ ನಿಯಮ ನೀತಿ; ಅತಿ ಹಣ ಚಾಲನದಿಂದ ಸಮಾಜದಲ್ಲಿ ಉಂಟಾಗುವ ಹೆಚ್ಚು ಕಡಮೆ; ದೇಶದ ಕೈಗಾರಿಕೆ, ವ್ಯಾಪಾರ, ವಿನಿಮಯ, ದಾರಣೆವಾಸಿ—ಮುಂತಾದ ಕಾರ್ಯ ರಂಗಗಳ ವಿಚಾರವನ್ನು ಮಾಡಬೇಕಾಗುವುದು. ವಿಶೇಷವಾಗಿ ಜನಕ್ಕೂ ಸಂಸ್ಥೆ ಗಳಿಗೂ ಪೇಟೆಗೂ ವ್ಯಾಪಾರ ಕೈಗಾರಿಕೆಗಳಿಗೂ ಸರಕಾರಗಳಿಗೂ ಹಣವೊದಗುವ ರೀತಿಯೇ ಈ ಪುಸ್ತಕದ ವಿಷಯ.

ಹಿನ್ನೆಲೆ: ಪ್ರತಿ ದೇಶದಲ್ಲಿಯೂ ಒಂದು ಸರಕಾರವಿರುತ್ತದೆ. ಅದರ ರಕ್ಷಣೆ ಒಳಪಟ್ಟು ಅಲ್ಲಿನ ಜನ ತಮ್ಮ ದಿನದಿನದ ಬದುಕನ್ನು ನಡೆಸಿಕೊಂಡು ಸುಖವಾಗಿರು ತ್ತಾರೆ. ಸರಕಾರದಿಂದಲ್ಲವೆ ಅವರ ಸುರಕ್ಷಣೆ? ದೇಶದಲ್ಲಿ ಶಾಂತಿ? ಆದ್ದರಿಂದ ಸರಕಾರದ ಕೆಲಸಗಳು ಸರಿಯಾಗಿ ನಡೆಯುವಂತೆ ಅದಕ್ಕೆ ಹಣಕಾಸನ್ನು ಅನುಕೂಲಗಳನ್ನೂ ಒದಗಿಸಿ ತಾವು ಅದರ ಆಜ್ಞೆಗೆ ಒಳಪಟ್ಟು ನಡೆದುಕೊಳ್ಳು ತ್ತಾರೆ. ಅದು ದಕ್ಷವಾಗಿ ಇರುವವರೆಗೂ ತಮಗೆ ತೋರುವಂತೆ ಕ್ಷೇಮಲಾಭ ಗಳನ್ನು ಸಾಧಿಸಿಕೊಳ್ಳಬಹುದೆಂಬುದು ಅವರ ವಿಶ್ವಾಸ; ಯಾವ ಅಡಚಣೆಯೂ ಬಾರದಿರುವುದೆಂದು ಭರವಸೆ; ಇತರರಿಂದ ಅಡ್ಡಿ, ನಷ್ಟ, ಅನ್ಯಾಯ ಆದ ಸರಕಾರ ಅದನ್ನು ಸರಿಪಡಿಸಿಕೊಡುವುದೆಂಬ ಧೈರ್ಯ. ಆದುದರಿಂದ ಜನ ಅನುಕೂಲ ತೋರಿದಂತೆ ಸ್ವಂತ ಕೆಲಸಗಳನ್ನೂ ಪರರ ಕೆಲಸಗಳನ್ನೂ ಲಾಭ ಕೆಲಸಗಳನ್ನೂ ಧರ್ಮದ ಕೆಲಸಗಳನ್ನೂ ನಿರಾತಂಕವಾಗಿ ಮಾಡುತ್ತಿರುತ್ತಾರೆ ತಾವು ಎಲ್ಲಿಯವರೆಗೂ ಇತರರ ಗೊಡವೆಗೆ ಹೋಗದೆ, ತಾವು ಬಯಸುವ ಸ್ವಾತಂತ್ರ್ಯ ವನ್ನು ಅವರಲ್ಲಿಯೂ ಗೌರವಿಸಿ ಕೆಲಸಮಾಡುವರೋ ಅಲ್ಲಿನವರೆಗೂ ಸರಕಾರವು

ಅದರ ಕಾಯಿದೆಗಳೂ ಅವರನ್ನು ಕಾಯುವುವು. ಹೀಗಿರುವುದರಿಂದ, ಎಲ್ಲ ಬಗೆಯ ಜನರೂ ತಮ್ಮ ಬದುಕನ್ನು ಉತ್ತಮಗೊಳಿಸಿಕೊಳ್ಳಲು ಪ್ರಯತ್ನಿಸುವರು. ಸಂಪತ್ತನ್ನೂ ಸುಖ ಸೌಕರ್ಯಗಳನ್ನೂ ಹೆಚ್ಚಿಸಿಕೊಳ್ಳಲು ಆತುರರಾಗುವರು. ಮಕ್ಕಳು ಮರಿಗೆ, ಬಂಧುಮಿತ್ರರಿಗೆ, ತಮಗೇ ಕಷ್ಟಕಾಲಕ್ಕೆ ಪ್ರಯೋಜನವಾಗು ವಂತೆ ಸಂಪತ್ತನ್ನು ಕೂಡಿಟ್ಟುಕೊಳ್ಳುವರು. ಉದ್ದೇಶ ಯಾವುದೇ ಇರಲಿ ಸತತವಾಗಿ ಕೆಲಸಗಳಲ್ಲಿ ತೊಡಗಿ ತಮಗೆ ಸಿಕ್ಕಬಹುದಾದ ಅತಿ ಹೆಚ್ಚಿನ ಸಂಪಾದನೆಯನ್ನು ಮಾಡಿಕೊಳ್ಳುತ್ತಿರುವ ಜನರ ನೋಟವೇ ಎಲ್ಲೆಲ್ಲಿಯೂ.*

ಉದ್ಯೋಗಗಳು: ದೇವರು ನಿರ್ಮಾಣ ಮಾಡಿರುವ ವಸ್ತುಸಾಮಗ್ರಿಗಳನ್ನು ರೂಢಿಸುವ ವ್ಯವಸಾಯ, ಮೀನು ಹಿಡಿಯುವುದು, ಬೇಟೆ, ಅರಣ್ಯದ ವಸ್ತು ಸಂಗ್ರಹ, ಗಣಿಗಳಿಂದ ಲೋಹ ತೆಗೆಯುವುದು ಮೊದಲಾದ ಉದ್ಯೋಗಗಳಲ್ಲಿ ಕೆಲವರಲ್ಲಿ; ಈ ರೀತಿ ರೂಢಿಸಿದ ಮೂಲ ಸಾಮಗ್ರಿಯನ್ನು ಉಪಯೋಗಿಸಿಕೊಂಡು ಅನೇಕ ಕಾರ್ಖಾನೆ ಕೈಗಾರಿಕೆಗಳನ್ನು ಹೂಡಿ ವಸ್ತುಗಳಿಗೆ ರೂಪಾಂತರವನ್ನು ತಂದು ಪ್ರಯೋಜನವನ್ನು ಹೆಚ್ಚಿಸುತ್ತ, ದೊಡ್ಡ ದೊಡ್ಡ ಯಂತ್ರಗಳನ್ನೂ ಶಕ್ತಿ ಗಳನ್ನೂ ಹೂಡಿ ಒಂದು ತಯಾರಾಗುತ್ತಿದ್ದ ಕಡೆ ಸಾವಿರವನ್ನು ಮಾಡಲು ಪ್ರಯತ್ನಪಡುತ್ತಿರುವವರು ಕೆಲವರು; ತಯಾರಾದ ವಸ್ತುಗಳಿಗೆ ಗಿರಾಕಿ ಒದಗಿಸಲು ಹೆಚ್ಚು ಬೆಲೆ ತರುವಲ್ಲಿಗೆ ಅವನ್ನು ಸಾಗಿಸುವ ಉದ್ಯೋಗಗಳಲ್ಲಿ ಕೆಲವರು; ಈ ಬಗೆಯ ವ್ಯಾಪಾರ ವ್ಯವಹಾರಗಳಿಗೆ ಬೇಕಾಗುವ ರಸ್ತೆ ಹಾಕುವುದು, ರೈಲು, ಲಾರಿ, ಗಾಡಿ, ಹಡಗು, ವಿಮಾನವಾಹನ ಮುಂತಾದವನ್ನು ಮಾಡುವುದು, ನಡಸುವುದು, ವರ್ತಕತನ—ಇವುಗಳಲ್ಲಿ ಕೆಲವರು; ಕಟ್ಟಡ, ಸೇತುವೆ, ರೇವು ಬಂದರು, ಯಂತ್ರಶಾಲೆ ಇವುಗಳನ್ನು ಕಟ್ಟುವುದು; ಕಲೆ, ಶಿಲ್ಪ, ಜನರಿಗೆ ವಿನೋದ ವನ್ನೂ ಸುಖವನ್ನೂ ಒದಗಿಸುವ ಕೆಲಸ; ಅವರಿಗೆ ಊಟ ಉಪಚಾರ, ಸೇವೆ, ವಸತಿ, ಆರೋಗ್ಯ, ವಿನೋದ, ವಿಹಾರ—ಇವನ್ನು ಕಲ್ಪಿಸುವುದರಲ್ಲಿ ಕೆಲವರು; ಸರಕಾರಿ ಸಾಹುಕಾರಿ ಉದ್ಯೋಗಗಳಲ್ಲಿ ಸೇರಿಕೊಂಡು ಕ್ಲುಪ್ತಕಾಲಗಳಿಗೆ ಸರಿಯಾಗಿ ಸಂಬಳಗಳನ್ನು ತೆಗೆದುಕೊಳ್ಳುವವರು ಕೆಲವರು; ಇಲ್ಲವಾದರೆ ತಂದೆ ತಾತಂದಿರು, ಬಂಧುಗಳು ಗಳಿಸಿಟ್ಟುಹೋದ ಹಣದಿಂದಲೂ ಆಸ್ತಿಯಿಂದಲೂ ಬಡ್ಡಿ, ಬಾಡಿಗೆ, ಗುತ್ತಿಗೆ, ಲಾಭಗಳನ್ನು ಪಡೆದು ಜೀವನ ಮಾಡಿಕೊಂಡಿರುವವರು ಕೆಲವರು; ಸ್ವತಂತ್ರವಾಗಿ ನಡೆಸುವ ವೃತ್ತಿಗಳಲ್ಲಿ ಕೆಲವರು—ಈ ರೀತಿ ಬಗೆಬಗೆಯ ಉದ್ಯೋಗ ಗಳಲ್ಲಿ ಜನರು ತೊಡಗಿ ಹಣ ಸಂಪಾದನೆ ಮಾಡಿಕೊಳ್ಳುವರು.

ಇಂಥವರಲ್ಲಿ ಕೆಲವರು ಮಾತ್ರವೇ ಸ್ವತಂತ್ರರು; ಇತರರಿಗಾಗಿ ದುಡಿವವರೇ

---

* ಆ ಆ ಸರಕಾರಗಳು ಏರ್ಪಡಿಸುವ ಆರ್ಥಿಕ ಸೇವೆಗಳಿಗೂ ಸಮಾಜಹಿತದ ದರ್ಶನ ಕಾರ್ಯನೀತಿಗಳಿಗೂ ಒಳಪಟ್ಟು.

ಹೆಚ್ಚು ಮಂದಿ. ಬದುಕಿಗೆ ಅಗತ್ಯವಾದ ಅನ್ನ ಬಟ್ಟೆಗಳನ್ನು ಒದಗಿಸುವ ವೃತ್ತಿಗಳ ಕೆಲವು ; ಭೋಗಸಾಮಗ್ರಿಗಳನ್ನು ಉತ್ಪತ್ತಿಮಾಡುವವು ಕೆಲವು ; ಕೆಲವಕ್ಕೆ ಕೇವ ಕಾಯಿಕಶ್ರಮ ಬೇಕು ; ಕೆಲವಕ್ಕೆ ಬುದ್ಧಿಶಕ್ತಿ, ಅನುಭವ, ನಿಪುಣತೆ, ಸಾಹ ಬೇಕು. ಮೇಲಂತಸ್ತಿನ ಕೆಲಸಗಳನ್ನು ಮಾಡುತ್ತ ಮೈ ಅಲ್ಲಾಡಿಸದೆ ಹೆಚ್ಚು ಸಂಪಾದನೆಯೂ ಅಧಿಕಾರವೂ ಇರುವ ಮೆದುಗೈ ಕೆಲಸಗಳು ಕೆಲವರಿಗೆ ; ಎಷ್ಟು ದುಡಿದರೂ ಹೊಟ್ಟೆ ಬಟ್ಟೆಗೇ ಸಾಲದೆ ಇರುವ ಬಡತನ ಕೆಲವರಿಗೆ ; ಯಜಮಾನ ಕೆಲವರು ; ಕೂಲಿ ಕೆಲಸ ಮಾಡುವವರು ಕೆಲವರು ;—ಹೀಗೆ ರಚಿತವಾಗಿದೆ ವೃ ಗಳಲ್ಲಿ ಜನವರ್ಗ.*

ಸುತ್ತಲ ಪ್ರಪಂಚ : ಈ ಶತಮಾನದಲ್ಲಿ ಎಲ್ಲಿ ನೋಡಿದರೂ ತಂತಮ್ಮ ಮನೆಗಳಲ್ಲಿಯೋ ಹೊರಗೋ ಸಣ್ಣ ಪ್ರಮಾಣದಲ್ಲಿ ಕೆಲಸಮಾಡುವವರ ಜೊತೆ ಸಾವಿರಾರು ಜನ ಒಂದು ಕಡೆ ಸೇರಿ ಗುಂಪಿನಲ್ಲಿ ಕೆಲಸವನ್ನು ಮಾಡುತ್ತಿರುವುದು ಕಾಣುವುದು. ಅದು ನಡೆಯುವವರೆಗೂ, ಕೆಲಸಮಾಡುವ ಶಕ್ತಿ ತಮಗೆ ಇರುವ ವರೆಗೂ ಅಲ್ಲಿನ ಅಧಿಕಾರಿಗಳು ಕೊಡುವ ಸಂಬಳದಿಂದ ಇವರು ಹೊಟ್ಟೆಹೊರೆದು ಕೊಳ್ಳುತ್ತಾರೆ. ಅಂತಹ ಕಡೆಗಳಲ್ಲಿ, ಅಥವಾ ಸಂಸ್ಥೆಗಳಲ್ಲಿ ಯಜಮಾನರು ಯಾವ ದೇಶದವರು, ಅಲ್ಲಿನ ಕಾರ್ಯ ಯಾರಿಗೆ ಉಪಯೋಗವಾಗುವುದು, ಅದಕ್ಕೆ ಗಿರಾಕಿಯೂ ಲಾಭವೂ ದೊರೆಯುವುದೆ ಇಲ್ಲವೆ, ಅಲ್ಲಿ ಕೆಲಸಮಾಡುವ ಇತರರು ಎಲ್ಲಿನವರು ಎಂಬ ಸಾಮಾನ್ಯ ಸಂಗತಿಗಳು ಕೂಡ ತಿಳಿಯದೆ ಇದ್ದರೂ ಆ ಕೆಲಸ ವನ್ನು ಮಾಡಬಲ್ಲವರಿಗೆ ಅಲ್ಲಿ ಉದ್ಯೋಗ ದೊರೆಯುವುದು. ಕೆಲಸದಲ್ಲಿ ಲಾಭ ವಿರುವವರೆಗೂ—ಕೆಲವು ಕಡೆ ಲೆಕ್ಕದ ಲಾಭವಿಲ್ಲದಿದ್ದರೂ ಬೇರೆ ಯಾವುದೋ ಪ್ರಯೋಜನಕ್ಕಾಗಿ—ಅಧಿಕಾರಿಗಳು ಅದನ್ನು ನಡಸುವರು. ಕೆಲಸಮಾಡುವ ರೆಲ್ಲರಿಗೂ ಮೊದಲೇ ಗೊತ್ತಾಗುವ ಸಂಬಳ ಸಾರಿಗೆ ಸಿಕ್ಕುವುವು.

ಸಂಪದುತ್ಪತ್ತಿಗೆ ಸೇರಿದ ಎಲ್ಲ ಕಾರ್ಯಗಳೂ ಈಗ ದೊಡ್ಡ ದೊಡ್ಡ ಗಿರಣಿ ಗಳಲ್ಲಿಯೂ ಕಾರ್ಯಾಲಯಗಳಲ್ಲಿಯೂ ಬ್ಯಾಂಕುಗಳಲ್ಲಿಯೂ ಕಛೇರಿಗಳಲ್ಲಿಯೂ ನಡೆಯುವುವು. ಯಾರು ಯಾರಿಗೆ ಯಾವ ಕೆಲಸವನ್ನು ಮಾಡುವುದರಲ್ಲಿ ಹೆಚ್ಚು ಸೌಲಭ್ಯ, ತಿಳಿವಳಿಕೆ ಇವೆಯೊ, ಶಕ್ತಿಯೂ ಕುಶಲತೆಯೂ ಇವೆಯೊ ಅವರು ಆಯಾ ಕೆಲಸಗಳಲ್ಲಿ ತೊಡಗುವರು. ಸಣ್ಣ ಕೆಲಸಕ್ಕಿಂತ ದೊಡ್ಡ ಕೆಲಸದಲ್ಲಿ ಲಾಭ ಹೆಚ್ಚೆಂದು ಹಣವಿರುವವರು ದೊಡ್ಡ ಕೆಲಸಗಳಿಗೆ ಹಣ ಹೂಡುವರು. ತಮ್ಮ ಪದಾರ್ಥಗಳನ್ನು ಎಲ್ಲರಿಗಿಂತಲೂ ಅಗ್ಗವಾಗಿ ಮೇಲಾಗಿ ತಯಾರಿಸಲು ಪ್ರಯತ್ನ

---

* ಎಂಥ ಸಮಾಜದಲ್ಲಿಯೂ ಒಂದಲ್ಲ ಮತ್ತೊಂದು ಬಗೆಯ ಅಸಮಾನತೆ ಇದ್ದೇ ಇರುತ್ತದೆ.

ಸುವರು. ಅಗ್ಗಕ್ಕೆ ಕೊಳ್ಳುವುದು, ತಗ್ಗಿಗೆ ಮಾರುವುದು—ಇದೇ ಬಹುತರ ಆರ್ಥಿಕ ಪ್ರಪಂಚದ ಮುಖ್ಯ ಲಕ್ಷಣ. ತಾವು ತಯಾರಿಸಿದ್ದಕ್ಕೆ ಬೇಗ ಗಿರಾಕಿ ದೊರೆಯು ವಂತೆ ಏರ್ಪಡಿಸುವರು. ಇತರರೂ ಅದೇ ಪದಾರ್ಥವನ್ನು ತಯಾರಿಸಿ ಅವೇ ಪೇಟೆಗಳಲ್ಲಿ ಮಾರುತ್ತಿದ್ದರೆ ಅವರೊಡನೆ ಮೇಲ್ ಪೋಟಿಮಾಡಿ ಗೆಲ್ಲಲು ಯತ್ನಿಸು ವರು; ಇಲ್ಲವಾದರೆ ಅವರೊಡನೆ ಬೆಲೆ ಮಾರಾಟಗಳ ಒಪ್ಪಂದ ಮಾಡಿಕೊಂಡು ಪೇಟೆಯ ಗಿರಾಕಿಯನ್ನು ಇಬ್ಬರೂ ಹಂಚಿಕೊಳ್ಳುವರು. ಗಿರಾಕಿಗಳು ಯಾವ ಸಮಯದಲ್ಲಿ ಎಂತಹ ಸಾಮಾನನ್ನು ಎಷ್ಟು ಪರಿಮಾಣದಲ್ಲಿ ಕೇಳಿದರೂ ಪೇಟೆಯ ಧಾರಣೆಗೆ ಮಾರಲು ಒಪ್ಪುವರು. ಗಿರಾಕಿಗಳು ನೆರೆಯವರಾಗಲಿ ಹೊರಗಿನವ ರಾಗಲಿ, ಸ್ವದೇಶದವರಾಗಲಿ ವಿದೇಶದವರಾಗಲಿ ದೂರವನ್ನು ಸಡ್ಡೆಮಾಡದೆ ಅವರಿಗೆ ತಮ್ಮ ಸಾಮಾನು ಒದಗುವ ವ್ಯವಸ್ಥೆ ಮಾಡುವರು.

ದೊಡ್ಡ ಪ್ರಮಾಣದಲ್ಲಿ ವಸ್ತುಗಳನ್ನು ತಯಾರಿಸಬೇಕಾದರೆ ಅದಕ್ಕೆ ಅನೇಕ ಅನುಕೂಲಗಳು ಆವಶ್ಯಕ. ಕೆಲಸಕ್ಕೆ ಬೇಕಾದಷ್ಟು ಮೂಲ ಸಾಮಗ್ರಿ; ಅದಕ್ಕೆ ರೂಪಾಂತರ ಕೊಡಬಲ್ಲ ಕೆಲಸಗಾರರು; ಪ್ರತಿಯೊಬ್ಬ ಕೆಲಸಗಾರನ ಕೆಲಸದಿಂದಲೂ ಒಂದಕ್ಕೆ ಮೂರರಷ್ಟು ಉತ್ಪತ್ತಿಬರುವಂತೆಯೂ ಕೆಲಸ ನಯವಾಗಿ ಒಂದೇ ಸಮನಾಗಿ ಆಗುವಂತೆಯೂ ಯಂತ್ರ ಸಹಾಯ; ಸಾಮಗ್ರಿಯನ್ನು ಕೊಳ್ಳುವುದು, ಕೆಲಸಗಾರರ ಸಂಬಳ, ಯಂತ್ರಯೋಜನೆ, ಮೇಲ್ವಿಚಾರಣೆಯ ಖರ್ಚು ಇವು ಸಮರ್ಪಕವಾಗಿ ನಡೆಯಲು ಬೇಕಾದಷ್ಟು ಹಣ ಮೊದಲಾದ ಉತ್ಪತ್ತಿಕರಣಗಳು ಯಾವ ಯಾವ ಪ್ರಮಾಣದಲ್ಲಿ ನೆರೆಯಬೇಕೆಂದು ಗೊತ್ತುಮಾಡಿ, ವೆಚ್ಚ ಮಿತಿ ಮೀರದಂತೆಯೂ ವೆಚ್ಚದಿಂದ ದೊರೆಯಬಹುದಾದ ಪರಮಾವಧಿ ಫಲ ದೊರಕು ವಂತೆಯೂ ಕಾರ್ಯಾಲಯದ ದಕ್ಷ ವ್ಯವಸ್ಥೆ; ಕಾರ್ಯರಚನಾಶಕ್ತಿ; ತಯಾರಾದ ವಸ್ತುಗಳಿಂದ ಹೆಚ್ಚು ಲಾಭ ಬರುವಂತೆ ಅವನ್ನು ಪೇಟೆಗಳಲ್ಲಿ ಮಾರುವ ಮತ್ತು ಮಾರಿಸುವ ಚಾತುರ್ಯ; ಪೇಟೆ ಗಿರಾಕಿಗಳ ತಿಳಿವಳಿಕೆ, ಅನುಭವ; ಒಟ್ಟನಲ್ಲಿ ಲಾಭ ಬರುವುದೆಂಬ ಉದ್ದೇಶದಿಂದಲೇ ಇಷ್ಟು ದೊಡ್ಡ ಕೆಲಸಗಳನ್ನು ನಡೆಸು ತ್ತಿದ್ದರೂ ಯಾವ ಕಾರಣದಿಂದಲೇ ಆಗಲಿ ನಷ್ಟವಾದರೆ ಅದನ್ನು ಸಹಿಸಬಲ್ಲ ಯೋಗ್ಯತೆ, ಸಾಹಸ—ಇವೆಲ್ಲದರ ಪುಷ್ಕಲ ಸಂಯೋಜನದಿಂದಲೇ ಇಂದಿನ ಅದ್ಭುತವಾದ ಉತ್ಪತ್ತಿ ಕಾರ್ಯಗಳು ನಡೆಯುವುದು.

ಪ್ರತಿಯೊಂದು ದೊಡ್ಡ ಕಾರ್ಯಾಲಯದಲ್ಲಿಯೂ ಹೀಗೇ ಕಾರ್ಯ ನಡೆಯು ತ್ತಿದೆ. ಇಂತಹ ಕೆಲಸವನ್ನು ಮಾಡುತ್ತಿರುವ ಕಾರ್ಯಾಲಯಗಳವರಿಗೆ ಮೇಲ್ ಪೋಟಿಯಿದೆ: ಎಲ್ಲರೂ ಸಾಮಾನನ್ನು ತಯಾರಿಸುವರು; ಗಿರಾಕಿ ಹುಡುಕುವರು; ಮಾರುವರು; ಲಾಭ ಪಡೆಯುವರು. ಯಾರೋ ಬಂದು ಆ ಸಾಮಾನನ್ನು ಕೊಂಡುಹೋದರೆ ಇವರ ಕೆಲಸ ಅಲ್ಲಿಗೆ ಮುಗಿಯಿತು. ಯಾರು ಕೊಳ್ಳುವವರು? ಏಕೆ? ಮುಂದೆ ಅದರಿಂದ ಯಾವ ಪ್ರಯೋಜನ ಪಡೆಯುವರು—ಎಂದು ಕೂಡ

ಅವರು ವಿಚಾರಿಸುವುದಿಲ್ಲ. ಆ ಅಗತ್ಯವಿಲ್ಲ. ಗಿರಾಕಿಗೆ ಸಾಮಾನು ಮಾರಿಬಿಟ್ಟ ಇವರ ಕೆಲಸ ಅಲ್ಲಿಗೆ ಮುಗಿಯಿತು.*

ಈಗಿನ ಕಾರ್ಯವಿಧಾನ: ದೊಡ್ಡ ಕಾರ್ಖಾನೆ ಕಾರ್ಯಾಲಯಗಳಲ್ಲಿಯೂ ಒಟ್ಟು ಕೆಲಸ ಭಾಗಭಾಗವಾಗಿ ಮಜಲುಗಳಲ್ಲಿ ನಡೆಯುತ್ತದೆ. ನೂರಾರು ಜನ ಒಂದೇ ಬಗೆಯ ಕೆಲಸದಲ್ಲಿ ಅತಿ ಸ್ವಲ್ಪ ಭಾಗವನ್ನು ಬೆಳಗ್ಗಿನಿಂದ ಸಂಜೆಯವರೆಗೂ ಮಾಡುತ್ತಿರುತ್ತಾರೆ. ಉದಾ. ಹತ್ತಿಯ ದಾರವನ್ನು ತೆಗೆಯುವ ಕಾರ್ಖಾನೆಯಲ್ಲಿ ಹತ್ತಿ ಬಿಡಿಸುವ ಯಂತ್ರಗಳ ಬಳಿ ಕೆಲವರು: ಅದನ್ನು ಹಿಂಜುವ ಯಂತ್ರಗಳ ಬಳಿ ಕೆಲವರು; ಅದನ್ನು ತೆಳ್ಳಗೆ ಅಗಲವಾಗಿ ಹಂಜಿ ಪಟ್ಟಿಮಾಡುವ ಯಂತ್ರಗಳ ಬಳಿ ಕೆಲವರು; ಎಳೆ ತೆಗೆಯುವ ಯಂತ್ರದ ಕದಿರುಗಳ ಬಳಿಯೇ ನಿಂತು ಕೆಲಸ ಮಾಡುವವರು ಕೆಲವರು,—ಹೀಗೆ. ಇವರು ನಿಂತಿರುವಲ್ಲಿಗೆ ಯಂತ್ರಗಳ ಮೂಲಕ ವಾಗಿ ಒಂದು ನಿಯತ ಸ್ಥಿತಿಯಲ್ಲಿ ಸಾಮಗ್ರಿ ಬರುತ್ತದೆ. ನಿಯತವಾದ ರೂಪವನ್ನು ಅದಕ್ಕೆ ಹೊಂದಿಸುವ ಕೆಲಸ ಮಾತ್ರ ಇವರದು. ಅಷ್ಟು ಮಾಡಿದರೆ ಇವರ ಕೆಲಸ ಮುಗಿಯಿತು. ಕಾರ್ಯಾಲಯದ ಇತರ ಶಾಖೆಗಳಲ್ಲಿ ಯಾರು ಯಾವ ಕೆಲಸವನ್ನು ಹೇಗೆ ಮಾಡುವುರೆಂಬ ಪರಿವೆ ಅಥವಾ ಗಮನ ಇವರಿಗಿಲ್ಲ. ತಮ್ಮ ಭಾಗದ ಕೆಲಸವನ್ನು ತಾವು ಮಾಡಿಬಿಟ್ಟರಾಯಿತು. ಯಂತ್ರಗಳ ಮೂಲಕ ಕೆಲಸ ನಡೆಯು ವುದರಿಂದ ಪ್ರತಿಯೊಂದು ಭಾಗದ ಕೆಲಸವೂ ಅತಿ ಸೂಕ್ಷ್ಮವಾಗಿ ವಿಭಾಗವಾಗು ವುದು; ಹಲವು ವೇಳೆ ಅವುಗಳ ಬಳಿ ಕೆಲಸ ಮಾಡುವ ಜನರೂ ಒಂದೇ ಕಡೆ ನಿಂತು ಯಂತ್ರಗಳ ಹಾಗೆ ಒಂದೇ ಕೆಲಸ ಮಾಡುತ್ತಿರುತ್ತಾರೆ. ಸಮಯಕ್ಕೆ ಸರಿಯಾಗಿ ಒಂದು ಹಿಡಿಯನ್ನು ತಿರುಗಿಸುತ್ತಿದ್ದರೆಯೋ, ಒಂದು ಸಾಮಗ್ರಿಯನ್ನು ಎಳೆದು, ತಿದ್ದಿ, ಬಿಡಿಸಿ, ಸೇರಿಸಿದರೆಯೊ ಅವರ ಕೆಲಸ ಮುಗಿಯುವುದು. ಆ ಕೆಲಸ ಅತಿ ಅಸಂಪೂರ್ಣವಾದುದು ನಿಜ. ಆದರೆ ಕಾರ್ಯಾಲಯದ ದಾರ ತೆಗೆಯುವ ಒಟ್ಟು ಕೆಲಸದಲ್ಲಿ ಒಂದೊಂದು ಭಾಗದ ಕೆಲಸ ಒಂದು ಗೊತ್ತಾದ ಮಜಲು; ಪ್ರತಿಯೊಬ್ಬನದೂ ಆ ಮಜಲಲ್ಲಿ ಒಂದು ಅಂಶ. ಒಟ್ಟು ಕೆಲಸವನ್ನು ಅನೇಕರು ಅನೇಕ ಮಜಲುಗಳಲ್ಲಿ, ಅನೇಕ ಶಾಖೆಗಳಲ್ಲಿ ಯಂತ್ರ ಸಹಾಯದಿಂದ ಮಾಡುವುದು ಈಗಿನ ಕಾರ್ಖಾನೆ ಕಾರ್ಯಾಲಯಗಳ ವಿಶೇಷ ಲಕ್ಷಣ. ಇದಕ್ಕೆ ಶ್ರಮ ಅಥವಾ ಕಾರ್ಯವಿಭಜನೆ (Division of Labour) ಎನ್ನುವರು. ಇನ್ನೊಂದು ದೃಷ್ಟಿ ಯಿಂದ ಇದೇ ಒಂದು ಬಗೆಯ ಸಹಕಾರ.

---

* ರಾಷ್ಟ್ರ ಹಿತದೃಷ್ಟಿಯೊ, ಸಮಾಜ ಸಮತಾದರ್ಶನವೊ ಈ ಸ್ಥಿತಿಯನ್ನು ಹಾಗೆ ಹೀಗೆ ಮಾರ್ಪಡಿಸುವುದು. ಯಾರಿಗೆ ಹೇಗೆ ಮಾರಬೇಕು; ಯಾವುದನ್ನು ಎಷ್ಟು ತಯಾರಿಸಬೇಕು; ತಯಾರಿಕೆಯ ವೆಚ್ಚ, ಲಾಭನಷ್ಟಗಳ ಗಣನೆ ಹೇಗೆ ಎಂಬುದನ್ನು ಕೆಲಸ ರಾಷ್ಟ್ರಗಳನು ರಾಜಕೀಯ ನಿಯಮಗಳಿಗೆ ಒಳಪಡಿಸುತ್ತಾರೆ.

ಇಂತಹ ದಾರ ಮಾಡುವವರು ಒಂದು ದೇಶದಲ್ಲಿಯೇ ಅನೇಕ ಗಿರಣಿಗಳವರಿರುತ್ತಾರೆ. ಬೇರೆ ಬೇರೆ ದೇಶಗಳಲ್ಲಿಯೂ ಅನೇಕರಿರುತ್ತಾರೆ. ಒಂದೇ ಬಗೆಯ ದಾರವನ್ನು ತೆಗೆಯುವವರು ಗಿರಾಕಿಯೂ ಲಾಭವೂ ಹೆಚ್ಚಿದಂತೆಲ್ಲ ತಮ್ಮ ಕೆಲಸದ ಪ್ರಮಾಣವನ್ನು ಹೆಚ್ಚಿಸಿಕೊಳ್ಳುತ್ತಲೇ ಹೋಗುವರು. ಹೀಗೆ ಒಂದೊಂದು ಗಿರಣಿಯ ಒಳ ವ್ಯವಸ್ಥೆಯೂ ಅಂಥದೇ ಕೆಲಸವನ್ನು ಮಾಡುವ ಇತರ ಗಿರಣಿಗಳ ವ್ಯವಸ್ಥೆಯೂ ಸೇರಿದರೆ ಅದು ಆ ನಾಡಿನ ಆ ಉದ್ಯೋಗ. ಪ್ರಪಂಚದ ಮೇಲೆ ಅಂಥದೇ ಕೆಲಸದಲ್ಲಿ ತೊಡಗಿರುವವರದು ಸೇರಿ ಲೋಕದಲ್ಲಿ ಆ ಉದ್ಯೋಗವಾಗುವುದು.

ಅಂತರ್ ರಾಷ್ಟ್ರೀಯ ರಚನೆ: ದಾರ ತೆಗೆಯುವ ಕೆಲಸದಲ್ಲಿ ಹತ್ತಿ ಹಿಂಜುವುದು ಹೇಗೆ ಒಂದು ಭಾಗವೊ, ಹಾಗೆ ಒಟ್ಟು ಬಟ್ಟೆ ಮಾಡುವ ಕೆಲಸವನ್ನು ತೆಗೆದು ಕೊಂಡರೆ ದಾರದ ಎಳೆ ತೆಗೆಯುವುದೇ ಒಂದು ಭಾಗ. ಬಟ್ಟೆ ಮಾಡುವ ಒಟ್ಟು ಕೆಲಸದಲ್ಲಿ ಹತ್ತಿ ಬೆಳೆಯುವವರು, ಹತ್ತಿಯನ್ನು ಊರಿಂದ ಊರಿಗೆ ಸಾಗಿಸುವವರು, ಕೊಂಡು ಮಾರುವವರು, ಹಿಂಜುವವರು, ದಾರ ತೆಗೆಯುವವರು, ದಾರಕ್ಕೆ ಬಣ್ಣ ಹಾಕುವವರು, ಕೊಂಡ ದಾರದಿಂದ ಬಟ್ಟೆ ನೇಯುವವರು ಎಲ್ಲರೂ ಶ್ರಮ ಪಡಬೇಕು. ಇವರೆಲ್ಲರೂ ಒಂದೇ ದೇಶದವರಾಗಿರಬೇಕೆಂದಿಲ್ಲ. ಹತ್ತಿ ಬೆಳೆಯುವವರು ಸಾಮಾನ್ಯವಾಗಿ ಅಮೇರಿಕಾ, ಈಜಿಪ್ಟ್, ಇಂಡಿಯಾ ದೇಶಗಳವರು. ಆ ಹತ್ತಿಯಲ್ಲಿ ಬಹು ಭಾಗ ಇಂಗ್ಲೆಂಡ್, ಜಪಾನ್, ಇಟಲಿ, ಜೆಕೊಸ್ಲೋವಾಕಿಯಾ ಮುಂತಾದ ದೇಶಗಳಿಗೆ ರಫ್ತಾಗುವುದು. ಅಲ್ಲಿ ಬಟ್ಟೆಗಳನ್ನು ತಯಾರಿಸುವರು. ಒಳನಾಡಿನಲ್ಲಿಯೂ ಬೇಕಾದಷ್ಟು ಉತ್ಪತ್ತಿಯಾಗುವುದು. ಆ ಬಟ್ಟೆಗಳು ಎಲ್ಲೆಲ್ಲಿಗೂ ರಫ್ತಾಗುವುವು. ಇವುಗಳನ್ನು ಒಂದು ಕಡೆಯಿಂದ ಇನ್ನೊಂದಕ್ಕೆ ಸಾಗಿಸಲು ರೈಲ್ವೆ ಕಂಪನಿಗಳವರೂ ಹಡಗಿನ ಕಂಪನಿಗಳವರೂ ಬಂದರುಗಳವರೂ ಕೆಲಸ ಮಾಡುವರು; ಸಮಯಕ್ಕೆ ತಕ್ಕಷ್ಟು ಹಣವನ್ನು ಒದಗಿಸಲು ಎಲ್ಲ ದೇಶಗಳಲ್ಲಿಯೂ ಬ್ಯಾಂಕಿನವರೂ ಸಾಹುಕಾರರೂ ಇರುವರು; ಅಗ್ಗವಾಗಿ ಕೊಂಡು ಲಾಭಕ್ಕೆ ಮಾರುವ ದಲ್ಲಾಳಿ ವರ್ತಕರ (ತರಗಿನ ಪೇಟೆಯ) ಗುಂಪು ಎಲ್ಲೆಲ್ಲಿಯೂ ತಾನೇ ತಾನು.

ಮೇಲ್‌ಪೋಟಿ: ಬಟ್ಟೆಗಳನ್ನು ಒದಗಿಸುವುದರಲ್ಲಿ ಇಂಗ್ಲೆಂಡ್ ಜಪಾನ್ ದೇಶಗಳವರಿಗೆ ಮೇಲ್ ಪೋಟಿ: ಯಂತ್ರಗಳು, ಉಕ್ಕು ಮತ್ತು ಕಬ್ಬಿಣದ ಸಾಮಗ್ರಿ ಮುಂತಾದವನ್ನು ಒದಗಿಸುವುದರಲ್ಲಿ ಇಂಗ್ಲೆಂಡ್, ಜರ್ಮನಿ, ಜಪಾನ್, ಅಮೇರಿಕಾ ದವರಿಗೆ ಸ್ಪರ್ಧೆ. ಇಂಗ್ಲೆಂಡಿಗೆ ಗೋಧಿಯನ್ನು ಒದಗಿಸುವುದರಲ್ಲಿ ರಷ್ಯಾ, ಆಸ್ಟ್ರೇಲಿಯಾ, ಅರ್ಜೆಂಟಿನಾ, ಕ್ಯಾನಡಾಗಳವರಿಗೆ ಸ್ಪರ್ಧೆ. ಹೀಗೆ ಜನಜನಾಂಗಗಳವರಿಗೆ ವ್ಯಾಪಾರದಲ್ಲಿ ದೊಡ್ಡ ಮೇಲ್‌ಪೋಟಿ ನಡೆಯುತ್ತಿರುವುದು ಈಗಿನ ಕಾಲದ ಆರ್ಥಿಕ ಜೀವನದ ಪ್ರಧಾನ ಲಕ್ಷಣ. ಮೇಲ್‌ಪೋಟಿಯಲ್ಲಿ ಗೆದ್ದು ಉಳಿಯುವವರೆಲ್ಲರೂ ಆರ್ಥಿಕ ಮಂಡಲದಲ್ಲಿ ಸೇರುವರು. ಎಲ್ಲರೂ ಎಲ್ಲೋ ಹೇಗೋ ಕೆಲಸ

ಮಾಡುತ್ತಿದ್ದರೂ ಪ್ರತಿಯೊಬ್ಬರೂ ಅವರವರಿಗೆ ಹೆಚ್ಚು ಅನುಕೂಲವಿರುವ ಪದಾರ್ಥ
ಗಳನ್ನು ತಯಾರಿಸಿ ಪ್ರಪಂಚದ ಮೂಲೆ ಮೂಲೆಯಲ್ಲಿರುವವರಿಗೆ ಬೇಕಾಗು
ಆವಶ್ಯಕ ಮತ್ತು ಭೋಗಸಾಮಗ್ರಿಗಳನ್ನು ತಮಗೇ ತಿಳಿಯದೆ ಒದಗಿಸುವರು
ಸಂಪಾದನೆ ಇರುವ ಎಲ್ಲರ ಬಯಕೆಗಳೂ ಈಡೇರುವುವು. ಹೀಗೆ ಪ್ರತಿಯೊಂ
ಸಂಸ್ಥೆಗೂ ತಿಳಿಯದೆಯೇ ಒಟ್ಟು ಕೆಲಸದಲ್ಲಿ ಎಲ್ಲೆಲ್ಲಿನವರೋ ಭಾಗಿಗಳಾಗುವರು
ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಅಂತರ್‌ರಾಷ್ಟ್ರೀಯ ಸಹಕಾರವಾಗುವುದು
ಜಗತ್ತಿನ ಜನರಿಗೆಲ್ಲ ತಾವು ಕುಳಿತಿರುವ ಕಡೆ ಬೇಕಾದ ಸೌಕರ್ಯ ದೊರೆಯುವುದು
ಬಗೆಬಗೆಯ ವಸ್ತುಗಳನ್ನು ಕೊಳ್ಳಲು ಹಣ ಪ್ರಪಂಚದ ಎಲ್ಲ ಭಾಗಗಳ ಉದ್ಯೋ
ವನ್ನೂ ನಿರ್ಮಿತಿಯನ್ನೂ ಕಾಣಬಹುದಾಗುವುದು.

ಇದನ್ನೇ ಇನ್ನೊಂದು ದೃಷ್ಟಿಯಿಂದ ನೋಡಬಹುದು: ಈಗ ನಾವೆಲ್ಲ
ಮೈಸೂರು ದೇಶದಲ್ಲಿ ಒಬ್ಬೊಬ್ಬರು ಒಂದೊಂದು ಕಡೆ ಇದ್ದೇವೆ. ನಮಗೆ ಸೂ
ತೋರಿದಂತೆ ಜೀವನ ಮಾಡುತ್ತಿದ್ದೇವೆ; ಬೇಕಾದ ಪದಾರ್ಥಗಳನ್ನು ಅಂಗ
ಗಳಿಂದ ಕೊಂಡುತರುತ್ತೇವೆ. ಅತಿ ಸಾಮಾನ್ಯರೆನ್ನುವವರ ಮನೆಗಳಲ್ಲಿಯ
ಪೇಟೆಯಿಂದ ತಂದ ದೇಶ ವಿದೇಶಗಳ ವಸ್ತುಗಳು ಹಲವು ಕಾಣುತ್ತವೆ. ದೀಪಗ
ಜರ್ಮನಿ, ಆಸ್ಟ್ರಿಯ, ಇಂಗ್ಲಂಡ್, ಅಮೇರಿಕಾ, ಜಪಾನ್ ದೇಶದವು; ಬಟ್ಟೆ
ಇಂಗ್ಲಂಡ್, ಹಾಲೆಂಡ್, ಜಪಾನಿನವು; ಚಾಕು, ಕತ್ತರಿ, ಕ್ಷೌರಕತ್ತಿ, ಸೂಜಿ
ಕೊಡೆ, ಸೋಪು, ವಾಸೆಲೈನ್, ಬೆಂಕಿಯಪೆಟ್ಟಿಗೆ, ಜೋಡು, ರಗ್ಗು, ಕಾಗದ
ಪುಸ್ತಕ, ಮೋಟರು ಎಲ್ಲ ಬಹುವಾಗಿ ಪರದೇಶದವು. ಇಂತಹ ಸಾಮಾನು ನಮ್ಮ
ದೇಶದಲ್ಲಿಯೇ ಎಷ್ಟು ಇರಬಹುದು? ಒಟ್ಟು ಇಂಡಿಯಾದೇಶದಲ್ಲಿ ಎಷ್ಟು
ಇರಬಹುದು? ಪ್ರಪಂಚದಲ್ಲೆಲ್ಲ?

ಎಂದರೆ, ಅವನ್ನು ಮೊದಲು ತಯಾರಿಸುವವರು ಎಷ್ಟು ದೊಡ್ಡ ಪರಿಮಾಣ
ದಲ್ಲಿ ಮಾಡುತ್ತಿರಬೇಕು? ವಸ್ತುಗಳನ್ನು ತಯಾರಿಸುವವರಿಗೆ, ತಮ್ಮ ಕ
ವಸ್ತುಗಳು ನಮ್ಮ ಕೈ ಸೇರುವುವೆಂಬ ತಿಳಿವಿಲ್ಲ. ನಮಗೆ, ಇಂತಹವರು ಇಲ್ಲಿಯೆ
ಹೀಗೆಯೇ ಅದನ್ನು ತಯಾರುಮಾಡಿ ಇಂಥವರ ಮೂಲಕವೇ ಮಾರಿರುವರೆಂಬುದು
ತಿಳಿಯದು. ಇದನ್ನು ಮಾರುವ ಅಂಗಡಿಗಳವರಿಗೂ ನಮಗೂ ಅನೇಕ ವೇಳೆ
ಪರಿಚಯವಿರುವುದಿಲ್ಲ. ಇಂಥ ವಸ್ತುಗಳಿಗೆ ಗಿರಾಕಿ ಸಿಕ್ಕೀತೆಂದು ಊಹಿಸಿ ಮಾತ್ರ
ಉತ್ಪತ್ತಿಕಾರರು ತಯಾರಿಸುವರು. ಅಂಗಡಿಯವರು ತಮ್ಮ ಊರಿನವರಿಗೆ
ಪ್ರಿಯವಾದಾವೆಂದು ಅದನ್ನು ಕೊಂಡು ಇಟ್ಟು ಮಾರುವರು. ಕೊಳ್ಳಬಯಸಿ
ವವರಿಗೆ ಇಂಥ ಸಾಮಾನಿದೆಯೆಂದು ತಿಳಿವಳಿಕೆ ಕೊಡುವರು. ಈ ಅಂಗಡಿ
ಗಳಿಗೆ ಹೋದರೆ ಈ ಈ ಪದಾರ್ಥ ದೊರೆಯುವುದೆಂದು ತಿಳಿದು ನಾವು ಅಲ್ಲಿಗೆ
ಹೋಗಿ ಅದನ್ನು ತಂದು ಅದರ ಸುಖವನ್ನು ಅನುಭವಿಸುವೆವು. ಹೀಗೆ
ಒಬ್ಬರೊಬ್ಬರಿಗೆ ಪರಿಚಯ ಕೂಡ ಇಲ್ಲದೆಯೇ ಪ್ರತಿಯೊಬ್ಬರ ತೃಪ್ತಿಯೂ

ಲಭಿಸಿದಂತಾಯಿತು. ಈ ಕೆಲಸದಲ್ಲಿ ತೊಡಗಿರುವವರೆಲ್ಲರಿಗೂ ಲಾಭ ದೊರೆಯಿತು. ಅನೇಕ ದೇಶಗಳಲ್ಲಿ ಅನೇಕ ಕೈಗಾರಿಕೆ ಕುಶಲ ವಿದ್ಯೆಗಳು ನಡೆಯುತ್ತಲೇ ಇರುವಂತಾಯಿತು. ಕುಳಿತಿರುವ ಸ್ಥಳಕ್ಕೆ ಹತ್ತು ದಿಕ್ಕುಗಳಿಂದಲೂ ಪ್ರಪಂಚದ ಭೋಗಭಾಗ್ಯಗಳೆಲ್ಲ ದುಮಿಕಿ ಬರುವಂತಾಯಿತು. ಹೀಗೆ ಈ ಕಾರ್ಯಚಕ್ರದಲ್ಲಿ ಒಂದು ಬಗೆಯ ಕಾರ್ಯಕಾರಣ ಸಂಬಂಧವಿದೆ; ಕಾರ್ಯವಿಭಾಗವಿದೆ; ಪರಸ್ಪರ ಅಧೀನತೆಯಿದೆ; ಸಹಕಾರವಿದೆ. ಎಲ್ಲರೂ ಸ್ವಂತ ಲಾಭಕ್ಕೆ ಕೆಲಸಮಾಡುತ್ತಿದ್ದರೂ ಎಲ್ಲರ ಆಸೆಗಳೂ ನೆರವೇರಲು ಅವಕಾಶವಾಗುತ್ತದೆ. ಆ ಮಟ್ಟಿಗೆ ಇತರರಿಗೆ ಉಪಕಾರಮಾಡಿದಂತಾಗುತ್ತದೆ. ವಸ್ತುಗಳಿರುವುದರಿಂದ ಭೋಗಾಭಿಲಾಷೆ, ಅಭಿಲಾಷೆ ಪೂರ್ತಿಯಾಗಬೇಕಾದುದರಿಂದ ವಸ್ತುಗಳ ಉತ್ಪತ್ತಿ—ಹೀಗೆ ಉತ್ಪತ್ತಿಯಿಂದ ಆರಂಭವಾದ ಕಾರ್ಯ ಅದನ್ನು ಭೋಗಿಸುವ ಜನರ ಸೌಕರ್ಯ ಭೋಗಗಳಲ್ಲಿ ಕೊನೆಗೊಳ್ಳುವುದು. ಭೋಗಾಭಿಲಾಷೆಗಳನ್ನು ತೃಪ್ತಿಗೊಳಿಸುವ ಉದ್ದೇಶದಿಂದ ಪದಾರ್ಥಗಳು ಉತ್ಪತ್ತಿಯಾಗಬೇಕಾಗಿರುವಾಗ ಇದಕ್ಕಾಗಿ ಎಷ್ಟು ಮಜಲುಗಳಲ್ಲಿ, ಎಷ್ಟು ಜನರ, ಎಷ್ಟು ದೇಶಗಳವರ, ಉದ್ದೇಶ, ಯಂತ್ರ, ವರ್ತಕರ, ಬ್ಯಾಂಕುಗಳ ಪ್ರಯತ್ನ ಆವಶ್ಯಕ, ಎಷ್ಟು ಜನರ ಜೀವನ ನಡೆಯುವುದು—ಎಂಬುದನ್ನು ಊಹಿಸಬಹುದು.*

ಹಣವೇ ಸಾಧನ: ಈಗ ಇಷ್ಟೆಲ್ಲ ಸುಲಭಸಾಧ್ಯವಾಗಿರುವುದು ಒಂದರ ಪ್ರಭಾವದಿಂದ, ಹಣದಿಂದ; ಕೈಯಲ್ಲಿ ಹಣವೊಂದಿದ್ದರೆ ಆರ್ಥಿಕ ಪ್ರಪಂಚದಲ್ಲಿ ಅಸಾಧ್ಯವಾದ ಕಾರ್ಯವೇ ಇಲ್ಲ. ಪೂರ್ತಿಯಾಗದ ಬಯಕೆಯೇ ಇಲ್ಲ. ನಾವು ಎಲ್ಲೇ ಕೆಲಸಮಾಡುತ್ತಿರಲಿ ಆ ಕೆಲಸದಿಂದ ತಕ್ಷಣ ನಮಗಾಗಲಿ ಯಜಮಾನರಿಗಾಗಲಿ ನೆರೆಯವರಿಗಾಗಲಿ ಸ್ವಂತಕ್ಕೆ ಬೇಕಾದ ಸಾಮಗ್ರಿ ದೊರೆಯುವಂತಿರಲಿ ದೊರೆಯದಿರಲಿ, ಕೆಲಸದ ಫಲವಾಗಿ ಹಣ ಬಂದರೆ ಆಯಿತು. ಹಣವನ್ನು ವೆಚ್ಚಮಾಡಿ ನಮಗೆ ಬೇಕಾದುದನ್ನು ಬೇಕಾದ ಪ್ರಮಾಣದಲ್ಲಿ ಕೊಂಡು ಭೋಗಿಸಲು ಅವಕಾಶವುಂಟು. ಹೀಗೆ ಹಣ ಭೋಗಸಾಧನ. ಹಣವಿದ್ದವರಿಗೆ ವಸ್ತು ಸೇವೆಗಳ ಮೇಲೆ, ಆ ಮಟ್ಟಿಗೆ ಲೋಕದ ಮೇಲೆ ಅಧಿಕಾರ ಬರುವುದು. ಸಂಪಾದನೆಯೆಂದರೆ ವೆಚ್ಚಮಾಡುವ ಶಕ್ತಿ. ಇತರ ಪದಾರ್ಥಗಳು ಎಷ್ಟಿದ್ದರೂ ಕೈಯಲ್ಲಿ ಹಣವಿದ್ದಷ್ಟು ಬೆಲೆಯಿಲ್ಲ. ಹಣವೇ ಲೌಕಿಕದಲ್ಲಿ ಎಲ್ಲವನ್ನೂ ಆಳೆಯುವ ಅಳತೆ; ಎಲ್ಲ ಬೀಗಗಳ ಕೈ, ಎಲ್ಲ ಸಂತೋಷಗಳಿಗೂ ಮಾರ್ಗ-ಸಾಧನ; ಕೆಲಸಮಾಡುವುದು ಹಣಕ್ಕೆ; ವಸ್ತುಗಳನ್ನು ಕೊಳ್ಳುವುದು, ಮಾರುವುದು ಹಣಕ್ಕೆ,

---

* ಹಾಗೆಯೇ ಈ ಬಗೆಯ ಕಾರ್ಯವಿಧಾನದ ಫಲವಾಗಿ ಎಲ್ಲಿಯಾದರೂ ಸ್ವಲ್ಪ ವಿಷಮತೆ ಉಂಟಾಗಿ ಕೆಡುಕು ಸಂಭವಿಸಿದರೆ ಅದರ ಪರಿಣಾಮ ಹೇಗೆ ಸರ್ವತೋಮುಖವಾಗುವುದು ಎಂಬುದನ್ನು ಕಲ್ಪಿಸಿಕೊಳ್ಳಬಹುದು.

ಅಂಗಡಿ ಮುಂಗಟ್ಟುಗಳಲ್ಲಿ ಪದಾರ್ಥಕ್ಕೆ ಬೆಲೆ ಗೊತ್ತುಮಾಡುವುದು ಹಣದ ಲೆಕ್ಕದಲ್ಲಿ; ದೇಶದಿಂದ ದೇಶಕ್ಕೆ ಸಾಮಾನು ಸಾಗಬೇಕಾದರೆ ಹಣದ ಸಹಾಯ; ಸಾಲ ಕೊಡುವುದು ತೆರುವುದು, ಕೂಡಿಡುವುದು, ಆಸ್ತಿಮಾಡುವುದು, ಹಂಚುವುದು, ಕಾಗದ ಪತ್ರ ಬರೆದಿಡುವುದು, ಆಸ್ತಿಗೆ ಬೆಲೆಕಟ್ಟುವುದು, ಕೂಲಿ, ಸಂಬಳ, ಬಡ್ಡಿ, ಬಂಡವಾಳ, ಲಾಭ—ಎಲ್ಲದರ ಲೆಕ್ಕವೂ ಹಣದ ಮೂಲಕ; ಸರಕಾರಕ್ಕೆ ಕಂದಾಯ ತೆರುವುದು, ದಾನಧರ್ಮಮಾಡುವುದು ಎಲ್ಲಕ್ಕೂ ಹಣವೇ ಸಾಧನ; ವಿನಿಮಯ ವ್ಯಾಪಾರ ವ್ಯವಹಾರ ಯಾವುವೂ ಹಣವಿಲ್ಲದೆ ನಡೆಯವು. ಯಾ ಯಾವ ಹಂಗೂ ಇಲ್ಲದೆ ಹಣವನ್ನು 'ಬೀಸಾಡಿ' ಎಲ್ಲರೂ ತಮ್ಮ ತಮ್ಮ ಕೆಲಸ ಗಳನ್ನು ಮಾಡಿಕೊಳ್ಳುವರು.

**ಸಂಪಾದನೆ-ಉಳಿಸಿ ಕೂಡಿಸುವ ಹಣ:** ಸಂಪಾದನೆ ಕೆಲವರಿಗೆ ಹೆಚ್ಚಾಗಿ ಕೆಲವರಿಗೆ ಕಡಮೆಯಾಗಿ ಇರುವುದಲ್ಲವೆ? ಬರುವ ವರಮಾನ ದಿನ ದಿನದ ವೆಚ್ಚಕ್ಕೆ ಸಾಲದಾದರೆ ಅದರಲ್ಲಿ ಯಾವ ಭಾಗವನ್ನೂ ಕೂಡಿಡಲು ಸಾಧ್ಯವಿಲ್ಲ. ದೊಡ್ಡ ಸಂಪಾದನೆ ಇರುವವರಿಗೆ ಖರ್ಚು ಕಳೆದು ಉಳಿತಾಯವಾಗುವ ಅವಕಾಶ ಹೆಚ್ಚು. ಉಳಿದ ಹಣವನ್ನು ಅವರು ದಾನಧರ್ಮಗಳಿಗಾಗಿಯೊ ಹಬ್ಬ ಹುಣ್ಣಿಮೆಗಳಿಗಾಗಿಯೊ ವಿನೋದಕ್ಕೊ ವೆಚ್ಚಮಾಡಿ ಬರಿಗೈ ಮಾಡಿಕೊಳ್ಳಬಹುದು. (ಕಾನೂನಿಗೆ ಬಾ ಹಾಗೆ ಮಾಡಲು ಅವರಿಗೆ ಸಂಪೂರ್ಣ ಸ್ವಾತಂತ್ರ್ಯವುಂಟು.) ಅಥವಾ, ಅವರು ಒಡವೆ ವಸ್ತು ಕೊಂಡಿಡಬಹುದು; ಪೆಟ್ಟಿಗೆಗಳಲ್ಲಿಯೊ ನೆಲದ ಕುಳಿಗಳಲ್ಲಿಯೊ ಹೂತಿಡಬಹುದು. ಇತರರಿಗೆ ಸಾಲ ಕೊಡಬಹುದು; ಬ್ಯಾಂಕುಗಳಲ್ಲಿ ಪುದುವಟ್ಟಾಗಿಡಬಹುದು; ಕಂಪನಿ ಕಾರ್ಖಾನೆಗಳ ಬಂಡವಾಳವಾಗುವಂತೆ ಷೇರು ರೂಪದಲ್ಲಿಯೊ ಬಾಂಡು ರೂಪದಲ್ಲಿಯೊ ಬಡ್ಡಿಗೆ ಹೂಡಬಹುದು. ಬಂದ ಕ್ಷಣವೆ ಭೋಗಕ್ಕೆ ವೆಚ್ಚಮಾಡಿದರೆ ತಕ್ಷಣದ ಸಂತೋಷ ಬರುತ್ತದೆ. ಹೂತಿಟ್ಟರೆ ಯಾರಿಗೆ ಎಂದಿಗೆ ಮುಂದಕ್ಕೆ ಪ್ರಯೋಜನವೊ ಹೇಳುವಹಾಗಿಲ್ಲ. ಆದರೆ ಇಂತಹ ವರ್ತನೆಯಿಂದ ಆರ್ಥಿಕ ಪ್ರಪಂಚಕ್ಕೆ ಉಪಕಾರವಿಲ್ಲ. ಏಕೆಂದರೆ, ಆ ಮಟ್ಟಿಗೆ ಸಂಪದಭಿವೃದ್ಧಿಗೆ ಅದು ನೆರೆಯದಾಗುವುದು. ಒಡವೆಗಳ ರೂಪದಲ್ಲಿಯೂ ಪೆಟ್ಟಿಗೆಗಳಲ್ಲಿಯೂ ನಿಂತ ಹಣದಿಂದ ಹಣದ ಓಟ ತಡೆಯುವುದು; ಹಣ ಅಡಗುವುದು. ಹಣವನ್ನು ಬಡ್ಡಿಗೆ ಹಾಕಿದರೆ, ಬಡ್ಡಿ ಸೇರಿ ಹಣ ಹಿಂದಕ್ಕೆ ಬರುವುದು; ಜೊತೆಗೆ ಸಾಲ ತೆಗೆದುಕೊಂಡವರು ಹಣವನ್ನು ಯಾವುದಾದರೂ ಉತ್ಪತ್ತಿಕಾರ್ಯಕ್ಕೆ ಉಪಯೋಗಿಸಿದರೆ ಆ ಮಟ್ಟಿಗೆ ಉದ್ಯೋಗವೂ ದೇಶದ ಸಂಪತ್ತೂ ಹೆಚ್ಚುವುವು. ಬ್ಯಾಂಕು, ಕಂಪನಿಗಳಲ್ಲಿಟ್ಟರೂ ಹೀಗೆಯೇ. ವೆಚ್ಚವಾಗದೆ ಉಳಿಯುವ ಹಣವೆಲ್ಲ ಉತ್ಪತ್ತಿಕಾರ್ಯಕ್ಕೆ ಮೂಲಧನವಾಗಬಲ್ಲದು. ಆಗಬೇಕು. ಹಾಗೆ ಪ್ರಚಾ ವಾದದ್ದು ಮಾತ್ರವೇ ಸಂಪದಭಿವೃದ್ಧಿಗೆ ಸಾಧನ; ಕಾರಣ: ಅರ್ಥಚಕ್ರವನ್ನು

ನಡಸುವ ಚಾಲಕಶಕ್ತಿ,* ಬಂಡವಾಳ, ಉದ್ಯೋಗ, ಉತ್ಪತ್ತಿ, ಸಂಪಾದನೆ, ವಸ್ತುಸಾಮಗ್ರಿಗಳ ಭೋಗ ಇವನ್ನು ಪರಮಾವಧಿಗೆ ಹೆಚ್ಚಿಸಿ ಲೋಕದ ಸೌಖ್ಯ ವನ್ನು ಬೆಳಸುವುದೇ ಅರ್ಥಸಾಧನೆಯ ಗುರಿ.

ಒಂದು ಕಡೆಯಿಂದ ಉತ್ಪತ್ತಿ ಹೆಚ್ಚಿಸುವುದು; ಇನ್ನೊಂದು ಕಡೆಯಿಂದ ಕೆಲಸವಿಲ್ಲದವರಿಗೆ ಕೆಲಸ ಒದಗಿಸಿ ಅವರಿಗೆ ವರಮಾನ ಬರುವಂತೆ ಮಾಡುವುದು; ಅವರು ಅದನ್ನು ವೆಚ್ಚಮಾಡಿ ಪೇಟೆಯ ಪದಾರ್ಥಗಳನ್ನೂ ಸೇವೆ ಸೌಕರ್ಯ ಗಳನ್ನೂ ಕೊಂಡು ಭೋಗಿಸುವಂತೆ ಮಾಡುವುದು. ಇದು ಆರ್ಥಿಕ ಹಿತದ ಮಾರ್ಗ.

—ವಿ. ಸೀತಾರಾಮಯ್ಯ

# ಪ್ರಾಣಿಗಳ ಸಮಾಜ ಜೀವನ

ಪ್ರಾಣಿಜೀವನವು ಮಾನವ ಜೀವನದ ತಳಹದಿ ಎಂದಮೇಲೆ ನಮ್ಮ ಜೀವನದ ಗುಣ ಧರ್ಮಗಳು, ರೀತಿ ನೀತಿಗಳು ಒಂದಲ್ಲ ಒಂದು ರೂಪದಲ್ಲಿ ಪ್ರಾಣಿಗಳಲ್ಲಿ ಕಂಡುಬರಲೇಬೇಕು. ಡಾರ್ವಿನ್ನನ ವಿಕಾಸವಾದವು ಮನುಷ್ಯನ ಉತ್ಪತ್ತಿಯ ವಿಚಾರದಲ್ಲಿ ಜನತೆಯ ಮೂಢ ನಂಬಿಕೆಯನ್ನು ನಿರ್ಮೂಲಮಾಡಿದುದಲ್ಲದೆ, ನಮಗೂ ಸೃಷ್ಟಿಯ ಇತರ ಪ್ರಾಣಿಗಳಿಗೂ ಇರುವ ಬಾಂಧವ್ಯವನ್ನು ನಿರ್ವಿವಾದವಾಗಿ ಸ್ಥಿರಪಡಿಸಿತು. ಪ್ರಾಚೀನ ಶಿಲಾಯುಗದ ನಮ್ಮ ಪೂರ್ವಜರೂ (Remote Ancestors of Man) ಗೋರಿಲ್ಲ, ಚಿಂಪಂಜಿ ಮೊದಲಾದ ಮಾನವ ಕಪಿಗಳೂ

---

*ಹಣವಿಲ್ಲದೆಯೇ ಬದುಕು ನಡೆಯದೆ? ವ್ಯಾಪಾರ ವ್ಯವಹಾರಗಳನ್ನೆಲ್ಲ ಹಾಗೇ ನಡಸುವುದಕ್ಕಾಗದೆ ಎಂಬ ಪ್ರಶ್ನೆ ಬರಬಹುದು. ಹಣದಿಂದಲೇ ಸಮಾಜಕ್ಕೆ ಕೇಡು, ಅನ್ಯಾಯ ಎಂದುಕೊಂಡು ರಷ್ಯಾದೇಶದವರು ಹಣವೆಂಬುದನ್ನು ಬಿಟ್ಟು ಕೆಲವು ದಿನ ಕಾರ್ಯ ನಡಸಿ ಪುನಃ ಹಣದ ಆಗತ್ಯವನ್ನು ಕಂಡು ಅದರ ಸಂಚಾರವನ್ನು ಮೊದಲಿನಂತೆಯೇ ಏರ್ಪಡಿಸಿದರು. ಬಹುಕಾಲ ಬೆಲೆ ತರುವ ಆಸ್ತಿಗಳು ಇರುವವರೆಗೂ (Durable Assets) ಹಣ ಇದ್ದೇ ತೀರಬೇಕು.

ಹಣದಿಂದಲೇ ಎಲ್ಲ, ಎಂದ ಮಾತ್ರಕ್ಕೇ ಧರ್ಮ, ಸುಖ, ಶಾಂತಿ, ಮೋಕ್ಷ, ಪ್ರೇಮ, ಭಕ್ತಿ, ನ್ಯಾಯ, ಸೌಂದರ್ಯ ಎಲ್ಲವೂ ಅದರಿಂದ ಎಂದ ಹಾಗಾಗಲಿಲ್ಲ ಅವುಗಳಲ್ಲಿ ಕೆಲವಕ್ಕೂ ಹಣಕ್ಕೂ ಈಗಿನ ಬದುಕಿನಲ್ಲಿ ಹೊಂದಿಕೆ ಇಲ್ಲ. ಆ ವಿಷಯವನ್ನು ಕುರಿತಾಗಲಿ ಆ ದೃಷ್ಟಿಯಿಂದಾಗಲಿ ಈ ಪುಸ್ತಕವನ್ನು ಬರೆದಿಲ್ಲ. ಲೌಕಿಕ ಜೀವನದ ವ್ಯವಹಾರದಲ್ಲಿನ ಸೌಕರ್ಯಗಳನ್ನು ದೊರಕಿಸಿಕೊಡುತ್ತಿರುವ ಸಾಧನ ಹಣ. ಆದುದರಿಂದ ವಿಷಯದ ವ್ಯಾಪ್ತಿಯನ್ನರಿತು ಇಲ್ಲಿನ ಸಂಗತಿಗಳನ್ನು ಪರೀಕ್ಷಿಸಬೇಕು.

(Anthropoid Apes) ಒಂದೇ ಬುಡಕಟ್ಟಿನಿಂದ ಉತ್ಪತ್ತಿಯಾಗಿರಬೇಕೆಂ ವಾದಿಸುವ ಡಾರ್ವಿನ್ನನ ತತ್ತ್ವವನ್ನು ನಾವು ಅನುಮೋದಿಸಿದರೆ ನಮಗೂ, ಸಮ ಜೀವನದ ಸವಿಯನ್ನು ಅನುಭವಿಸಲು ಮೊದಲು ಮಾಡಿದ ಪ್ರಾಣಿಗಳಿಗೂ ಇರು ರಕ್ತಬಾಂಧವ್ಯವನ್ನು ಒಪ್ಪಲೇಬೇಕು. ಅಂದಮೇಲೆ ಮನುಷ್ಯನ ಸಮಾಜ ಜೀವನ ಹೇಗೆ ಉತ್ಪತ್ತಿಯಾಯಿತೆಂಬ ಪ್ರಶ್ನೆಗೆ ಉತ್ತರವನ್ನು ಹುಡುಕುವುದು ಕಷ್ಟವ ಮನುಷ್ಯನು ಸಸ್ತನಿ ಪ್ರಾಣಿ;* ಸಣ್ಣಸಣ್ಣ ಗುಂಪುಗಳಾಗಿ ಚರಿಸುವುದು ಗೋ ಕಪಿಗಳ ಸ್ವಭಾವ; ಗಿಡಗಳ ಮೇಲೆ ಗೂಡುಗಳನ್ನು ಕಟ್ಟಿಕೊಂಡು ಸಮ ಜೀವನವನ್ನು ನಡೆಸುವುದು ಚಿಂಪಂಜಿ ಕಪಿಗಳ ಲಕ್ಷಣ. ಸಸ್ತನಿಗಳೆಲ್ಲ ಬೆಕ್ಕಿನ ಸಮಾಜ ಜೀವನವನ್ನು ತಿರಸ್ಕರಿಸುವ ಪ್ರಾಣಿಗಳೇ ಆಗಿದ್ದರೆ, ನಮ್ಮ ಜೀ ಸಮಸ್ಯೆಯನ್ನು ಬಿಡಿಸಲು ಸಾಧ್ಯವಾಗುತ್ತಿತ್ತು. ಆದರೆ ನಾಯಿಗಳ ಗುಂ ಆನೆಗಳ ಹಿಂಡು, ಕುರಿಗಳ ಮಂದೆ—ಇವುಗಳೆಲ್ಲ ನಮ್ಮ ಸಮಾಜ ಜೀವನ ಬೆಳವಣಿಗೆಗೆ ಪ್ರಾಣಿ ಜೀವನವು ಒದಗಿಸುವ ಹಿನ್ನಲೆ. ಪೃಥ್ವಿಯ ಮೇಲೆ ಮನುಷ್ ಇತಿಹಾಸವನ್ನು ಪರಿಶೀಲಿಸಿದರೆ, ಅವನ ಬೆಳವಣಿಗೆಯು ಅವನ ಸುತ್ತುಮುತ್ತ ಪ್ರಾಣಿಸಮಾಜಗಳನ್ನು ಅವಲಂಬಿಸಿ ರೂಪುಗೊಂಡಿರುವುದೆಂಬುದು ವ್ಯಕ್ತ ವಾಗುತ್ತದೆ.

ಸ್ವಾಭಾವಿಕವಾಗಿ ಮನುಷ್ಯನು ಸಮಾಜಜೀವಿ, ಸಮಾಜದಲ್ಲಿ ಬದು ಬಾಳಿದ ಮನುಷ್ಯನಿಗೆ ಒಂಟಿಯಾಗಿ ಜೀವಿಸುವುದು ಕಷ್ಟವಾಗುವುದು. ಸಮಾ ದಿಂದ ಬೇರೆಯಾದರೆ ನಾವು ಸೊರಗಿ ಕಂಗೆಡುತ್ತೇವೆ. ಜೀವನಯಾತ್ರೆಯ ಹೋರಾಡಿ ಸಾಯದೆ ಉಳಿಯುವ ಸಮಸ್ಯೆಯು ನಮ್ಮ ಪೂರ್ವಜರಿಗೂ ತಪ್ಪಿರಲಿ ಜೀವನದಲ್ಲಿ ಒದಗುವ ಕಷ್ಟಪರಂಪರೆಗಳಿಂದ ಪಾರಾಗಿ ತನಗೆ ಬೇಕಾದ ಜೀವ ಸೌಕರ್ಯಗಳ ಸಂಪಾದನೆಗಾಗಿ ತನ್ನ ಸಹಪಾಠಿಗಳೊಂದಿಗೆ ದುಡಿಯುವು ಅನುಕೂಲವಾಗಿ ತೋರಿತು. ಕಾಲಕ್ರಮದಲ್ಲಿ ಕುಟುಂಬ ಜೀವನವು ರೂಪ ಗೊಂಡಾಗ ಆಹಾರಾರ್ಜನೆ, ಆತ್ಮಸಂರಕ್ಷಣೆ, ಪ್ರಣಯಜೀವನ, ಸಂತಾನರಕ್ಷಣೆ— ಇವುಗಳಿಗಾಗಿ ಜನರು ಒಟ್ಟುಗೂಡಿ ಕೆಲಸಮಾಡಲುಪಕ್ರಮಿಸಿದರು. ಅನೇ ಕುಟುಂಬಗಳು ರಕ್ಷಣೆಗಾಗಿ ಗವಿಗಳಲ್ಲಿಯೂ ಗುಹೆಗಳಲ್ಲಿಯೂ ಸೇರಲು ಮೊದಲಾ ಗುಂಪಿನ ಅಭ್ಯುದಯಕ್ಕಾಗಿ ಸ್ವಾರ್ಥತ್ಯಾಗ, ಪರಸ್ಪರ ಸೌಹಾರ್ದ, ಗೆಳೆತನ ಮೊ ಲಾದ ಗುಣಗಳು ತಲೆದೋರಿ ಸಮಾಜಜೀವನವು ಒಂದು ಶಿಸ್ತಿಗೆ ಒಳಪಟ್ಟಿತು.

ಪ್ರಾಣಿಜೀವನದಲ್ಲಿ ಒದಗುವ ಸಮಸ್ಯೆಗಳಲ್ಲಿ ಬಾಳ್ವೆಯ ಪ್ರಶ್ನೆಯೇ ಮುಖ್ಯ

---

*ಕೂದಲಿನಿಂದಾದ ಮೈಹೊದ್ದಿಕೆಯನ್ನು ಪಡೆದು, ಮರಿಗಳಿಗೆ ಮೊಲೆಹಾಲನ್ನು ಕೊಟ್ಟು ಪೋಷಣೆ ಮಾಡುವ ಪ್ರಾಣಿಗಳಿಗೆ ಸಸ್ತನಿಗಳೆಂದು ಹೆಸರು. ಉದಾಹರಣೆ: ಬೆಕ್ಕು, ನಾಯಿ ಕುರಿ, ಕಪಿ, ಮನುಷ್ಯ.

ವಾದುದು. ಒಂಟಿಯಾಗಿ ಜೀವನಸವನ್ನು ನಡೆಯಿಸಲು ಶಕ್ತಿಯಿಲ್ಲದ ಪ್ರಾಣಿಗಳು, ಒಗ್ಗಟ್ಟಿನಲ್ಲಿ ಶಕ್ತಿಯಿದೆ ಎಂಬ ತತ್ವವನ್ನು ತಿಳಿದಂತೆ ಗುಂಪುಗುಂಪುಗಳಾಗಿ ಸೇರುವುದು ಸ್ವಭಾವ; ನಿರ್ಭಯವಾಗಿ ಕಾಡಿನಲ್ಲಿ ಒಂಟಿಯಾಗಿ ಅಲೆಯುತ್ತ ಜೀವಿಸುವ ಶಕ್ತಿ ಹುಲಿಗಿರುತ್ತದೆ. ಆದರೆ ಅಪಾಯಗಳಿಂದ ಪಾರಾಗಬೇಕಾದರೆ, ಬೆದರುವ ಹುಲ್ಲೆಗಳಿಗೆ ಗುಂಪುಜೀವನವು ಅತ್ಯಾವಶ್ಯಕ. ಆದುದರಿಂದ ತಮ್ಮ ಹೊರಗಣ ಪರಿಸ್ಥಿತಿಯಲ್ಲಿ ಒದಗುವ ಅಪಾಯಗಳನ್ನು, ಅದರಲ್ಲೂ ತಮ್ಮನ್ನೇ ಕೊಂದು ತಿನ್ನುವ ಹಿಂಸ್ರಜಂತುಗಳನ್ನು ಎದುರಿಸುವುದಕ್ಕಾಗಿಯೂ ಒಂಟೊಂಟಿಯಾಗಿ ಸಾಧಿಸಲಾಗದ ಸೌಕರ್ಯಗಳ ಸಾಧನೆಗಾಗಿಯೂ ಒಂದೇ ಜಾತಿಯ ಹಲವು ಪ್ರಾಣಿಗಳು ಒಟ್ಟುಗೂಡಿ ದುಡಿಯುತ್ತವೆ.

ಅನೇಕ ಪ್ರಾಣಿಗಳು ಒಂದೇ ಕಡೆಯಲ್ಲಿ ಇದ್ದಮಾತ್ರದಿಂದಲೇ ಅವುಗಳಲ್ಲಿ ಸಮಾಜ ಜೀವನವಿದೆ ಎಂದು ಹೇಳುವುದಕ್ಕಾಗುವುದಿಲ್ಲ. ಜೌಗುಪ್ರದೇಶಗಳಲ್ಲಿ ತಂಡತಂಡವಾಗಿ ಸುಳಿಯುವ ಸೊಳ್ಳೆಗಳ ಗುಂಪುಗಳನ್ನು ಸಮಾಜವೆನ್ನಲಾಗುವುದಿಲ್ಲ. ಅವು ಗುಂಪಿನಲ್ಲಿ ಸೇರಿ ಮಾಡುವ ಕೆಲಸಗಳಿಗೆ ಒಂದು ಗೊತ್ತಾದ ಗುರಿಯಿರಬೇಕು. ಆಹಾರಕ್ಕಾಗಿ ಹಣ್ಣಿನ ತೋಟಗಳನ್ನು ಸೂರೆಮಾಡುವ ಕೋತಿಗಳ ಗುಂಪಿನಲ್ಲಿಯೂ ಹಳ್ಳಿಗಳಿಗೆ ನುಗ್ಗಿ ದನಕರುಗಳನ್ನು ಕೊಂದು ತಿನ್ನುವ ತೋಳಗಳ ಹಿಂಡುಗಳಲ್ಲಿಯೂ ಸಮಾಜಜೀವನದ ಗುರಿಯಿರುತ್ತದೆ. ಸಮಾಜಕ್ಕೆ ಸೇರಿದ ಪ್ರಾಣಿಗಳು ಕೊಂಚಮಟ್ಟಿಗಾದರೂ ಸಹಕಾರವನ್ನೂ ಸ್ವಾರ್ಥತ್ಯಾಗವನ್ನೂ ಗೆಳೆತನದ ಆಸಕ್ತಿಯನ್ನೂ ಹೊಂದಿರಬೇಕು. ಸಮಾಜಜೀವನದಲ್ಲಿ "ತಾನುಂಟು, ಮೂರು ಲೋಕವುಂಟು" ಎಂಬ ಭಾವನೆಗೆ ಅವಕಾಶವಿಲ್ಲ.

ಜೀವನದ ಹೋರಾಟದಲ್ಲಿ ಸಿಕ್ಕಿಕೊಂಡಿರುವ ಪ್ರಾಣಿಗಳಿಗೆ ಸಮಾಜಜೀವನವು ಅನೇಕ ಅನುಕೂಲಗಳನ್ನು ಒದಗಿಸುತ್ತದೆ. ಒಂಟಿಯಾಗಿ ಸಿಕ್ಕಿ ಶತ್ರುವಿನ ಬಾಯಿಗೆ ಸುಲಭವಾಗಿ ತುತ್ತಾಗುವ ಪ್ರಾಣಿಯು ಗುಂಪಿನಲ್ಲಿರುವಾಗ ಅಜೇಯವಾಗಬಲ್ಲದು. ಗುಂಪಿನಿಂದ ಬೇರೆಯಾಗಿ ಅಲೆಯುವ ಕಾಡೆಮ್ಮೆಯನ್ನು ಹುಲಿ ಸುಲಭವಾಗಿ ಕೊಂದು ತಿಂದುಬಿಡುತ್ತದೆ. ಆದರೆ ಅದೇ ಕಾಡೆಮ್ಮೆಯನ್ನು ಗುಂಪಿನಲ್ಲಿದ್ದಾಗ ಹುಲಿ ಹಿಡಿಯುವುದು ಬಹಳ ಕಷ್ಟ. ಹುಲಿಯ ಸುಳಿವಿದೆ ಎಂದು ಗೊತ್ತಾದೊಡನೆಯೇ ಕೋಣಗಳು ಮುಂದೆ ನುಗ್ಗಿ ಹುಲಿಯನ್ನು ತಡೆದು ಎಮ್ಮೆಗಳನ್ನೂ ಕರುಗಳನ್ನೂ ಸಂರಕ್ಷಿಸುತ್ತವೆ. ಒಂದು ಪ್ರಾಣಿಯಿಂದ ಸಾಧ್ಯವಾಗದ ಕೆಲಸವು ಹಲವು ಪ್ರಾಣಿಗಳ ಸಹಕಾರದಿಂದ ಈಡೇರುವುದು. ಇರುವೆಗಳು ತಮಗಿಂತಲೂ ಎಷ್ಟೋ ಪಾಲು ಭಾರವಿರುವ ಸಕ್ಕರೆಯ ಹರಳುಗಳನ್ನೂ ಸತ್ತ ಹುಳ ಹುಪ್ಪಟೆಗಳನ್ನೂ ತಮ್ಮ ಗೂಡಿಗೆ ಸಾಗಿಸುವುದನ್ನು ನಿತ್ಯವೂ ನೋಡುತ್ತಲೇ ಇದ್ದೇವೆ. ಗೆದ್ದಲು ಹುಳುಗಳ ಹುತ್ತಗಳು, ಜೇನು ನೊಣದ ಗೂಡುಗಳು, ಬೀವರ್ ಪ್ರಾಣಿಗಳು ಕಟ್ಟುವ ಅಣೆಕಟ್ಟೆಗಳು — ಇವೆಲ್ಲವೂ ಅವು ಒಟ್ಟುಗೂಡಿ ಕೆಲಸ ಮಾಡುವುದರ ಫಲಗಳು.

ಸಮಾಜಜೀವನದ ಬೆಳವಣಿಗೆಗೆ ಬೇಕಾದ ಪರಸ್ಪರ ಸಹಾಯ, ಸೌಹಾರ್ದ, ಸ್ನೇಹ ಮೊದಲಾದ ಗುಣಗಳು ಎಲ್ಲ ಪ್ರಾಣಿಗಳಲ್ಲೂ ಇರುವುದಿಲ್ಲ. ಇವು ಮೆದುಳಿನ ಶಕ್ತಿಯನ್ನು ಗಳಿಸಿರುವ ಮೇಲುದರ್ಜೆಯ ಪ್ರಾಣಿಗಳಲ್ಲಿ ಮಾತ್ರ ಕಂಡು ಬರುತ್ತವೆ. ಕೆಲವು ಋತುಗಳಲ್ಲಿ ಸಮುದ್ರದ ಕೆಲವು ಮೀನುಗಳು ಸಹಸ್ರ ಸಹಸ್ರವಾಗಿ ಈಜುತ್ತಿದ್ದರೂ, ಅವುಗಳಲ್ಲಿ ಯಾವ ವಿಧವಾದ ಸಹಾನುಭೂತಿಯು ಕಾಣುವುದಿಲ್ಲ. ಕೇವಲ ೨೦-೩೦ ಪ್ರಾಣಿಗಳನ್ನೊಳಗೊಂಡ ಕಪಿಗಳ ಗುಂಪಿನಲ್ಲಿಯೂ, ಆನೆಗಳ ಹಿಂಡಿನಲ್ಲಿಯೂ ಸಮಾಜಜೀವನದ ಗುಣಗಳೆಲ್ಲ ಕಂಡು ಬರುತ್ತವೆ. ಎರಡನೆಯದಾಗಿ, ಈ ಗುಣಗಳು ಹುಟ್ಟಲು ಜೀವಿಗೆ ಹೆಚ್ಚಾಗಿ ಸಂತಾನೋತ್ಪತ್ತಿಮಾಡುವ ಶಕ್ತಿ ಇರಬೇಕು; ಹೆಚ್ಚಾಗಿ ಸಂತಾನವನ್ನು ಪಡೆಯುವ ಶಕ್ತಿಯಿಲ್ಲದಿದ್ದರೂ, ಪ್ರಾಣಿಯು ಹಲವು ವರ್ಷಗಳವರೆಗಾದರೂ ಸಂತಾನವನ್ನು ಪಡೆಯುವ ಶಕ್ತಿಯನ್ನಾದರೂ ಹೊಂದಿರಬೇಕು. ಈ ಎರಡು ಗುಣಗಳಿರುವ ಪ್ರಾಣಿಗಳಲ್ಲಿ ಮಾತ್ರ ಸಮಾಜಜೀವನವು ರೂಪುಗೊಳ್ಳಲು ಸಾಧ್ಯ.

ಗುಂಪುಸೇರುವ ಹುಟ್ಟುಗುಣವು ಸಮಾಜಜೀವನದ ಅಡಿಗಲ್ಲು. ಹಿಂದು ಮುಂದು ನೋಡದೆ ಒಂದರ ಹಿಂದೆ ಒಂದು ನುಗ್ಗುವ ಕುರಿಗಳು ಇದಕ್ಕೆ ಒಳ್ಳೆಯ ನಿದರ್ಶನ. ವಿವೇಚನೆಯಿಲ್ಲದೆ ವರ್ತಿಸುವಂತೆ ಪ್ರೇರಿಸುವ ಈ ಹುಟ್ಟುಗುಣವು ಈ ಸೃಷ್ಟಿಯ ಉತ್ತಮ ಪದವಿಗೇರಿರುವ ಮನುಷ್ಯನಲ್ಲಿ ಕೂಡ ನೆಲೆಸಿರುವುದು. ಉದ್ರೇಕಗೊಂಡ ಗುಂಪಿನಲ್ಲಿರುವಾಗ ಮನುಷ್ಯನು ಕೂಡ ಇದರ ಬಲೆಗೆ ಸಿಕ್ಕಿ ತಾನೊಬ್ಬನೇ ಇದ್ದಾಗ ಹೇಯವೆಂದು ತೋರುವ ಕಾರ್ಯವನ್ನು ಮುಂದಾಲೋಚನೆಯಿಲ್ಲದೆ ದುಡುಕಿ ಮಾಡುತ್ತಾನೆ. ಅಮೇರಿಕ ದೇಶದಲ್ಲಿ ನೀಗ್ರೋಗಳ ಮೇಲೆ ಉದ್ರೇಕಗೊಂಡ ಬಿಳಿಯಜನರು ಬಂದೀಖಾನೆಗಳಿಗೆ ಹಿಂಡು ಹಿಂಡಾಗಿ ನುಗ್ಗಿ, ನಿರಪರಾಧಿಗಳಾದ ನೀಗ್ರೋ ಕೈದಿಗಳನ್ನು ಹೊರಗೆಳೆದು, ಕರುಣೆಯಿಲ್ಲದೆ, ಅವರ ಚರ್ಮ ಸುಲಿದು ಕೊಲ್ಲುತ್ತಾರೆ. ಗುಂಪಿನಿಂದ ಬೇರೆಯಾದ ಮೇಲೆ ತಮ್ಮ ದುಷ್ಕೃತ್ಯಕ್ಕಾಗಿ ಪಶ್ಚಾತ್ತಾಪ ಪಟ್ಟರೂ ಗುಂಪಿನ ಧರ್ಮಕ್ಕೆ ಸಿಕ್ಕಿದಾಗ ಅವರ ವಿವೇಚನಾಶಕ್ತಿಯು ಶೂನ್ಯವಾಗಿಬಿಡುವುದು. ಜಿಂಕೆ, ಕುರಿ, ಮೊಲ ಮೊದಲಾದ ಸಸ್ತನಿಗಳ ಸಮಾಜಗಳು ಈ ಧರ್ಮವನ್ನನುಸರಿಸುತ್ತವೆ.

ಪ್ರಾಣಿಸಮಾಜಗಳಲ್ಲಿ ಮುಂದಾಳೊಬ್ಬನಿಲ್ಲದಿದ್ದರೆ, ಸಮಾಜದ ವ್ಯಕ್ತಿಗಳೆಲ್ಲ ಒಂದು ಶಿಸ್ತಿಗೆ ಒಳಪಟ್ಟು ಸಮಾಜದ ಅಭ್ಯುದಯಕ್ಕಾಗಿ ದುಡಿಯುವುದಿಲ್ಲ. ಆದರೆ ನಾಯಕನೊಬ್ಬನಿದ್ದರೆ ಸಾಮಾಜಿಕ ಜೀವನದಲ್ಲಿ ಶಿಸ್ತು ಏರ್ಪಡುವುದು. ಕಾಡು ನಾಯಿ, ತೋಳ, ಆನೆ ಮೊದಲಾದ ಪ್ರಾಣಿಸಮಾಜಗಳಲ್ಲಿ ನಾಯಕತ್ವವು ಸಾಮಾನ್ಯವಾಗಿ ವಯಸ್ಸಾದ ಗಂಡಿನ ಹಕ್ಕು. ನಾಯಕತ್ವದ ಹಕ್ಕುಬಾಧ್ಯತೆಗಳನ್ನು ಕಾಪಾಡಿಕೊಳ್ಳುವುದು ಸುಲಭವಲ್ಲ. ಗುಂಪಿನ ಇತರ ಎಳೆಯ ಗಂಡುಗಳ ದೃಷ್ಟಿಯೆಲ್ಲ ನಾಯಕನ ಮೇಲೆ ನೆಟ್ಟಿರುತ್ತದೆ. ತನ್ನ ದೇಹದಲ್ಲಿ ಶಕ್ತಿಯಿರುವವರೆಗೂ

ಪ್ರಭುತ್ವವನ್ನು ನಡೆಯಿಸುತ್ತದೆ; ಶಕ್ತಿಗುಂದಿದಾಗ ಅದನ್ನು ಚೆನ್ನಾಗಿ ಬೆಳೆದು ಬಲಿತ ಗಂಡು ಹೊಡೆದೋಡಿಸಿಬಿಡುತ್ತದೆ. ಮುದಿಗಂಡುಗಳು ಕಪಟಸಂನ್ಯಾಸಿಗಳಂತೆ ಒಂಟಿಯಾಗಿ ಅಲೆದಾಡುತ್ತಿರುವುವು. ಇದೇ ಮುದಿನಾಯಕನ ಹಣೆಯ ಬರಹ. ಸಸ್ತನಿಗಳ ಸಮಾಜದಲ್ಲಿ ನಾಯಕತ್ವವು ಗಂಡುಪ್ರಾಣಿಯ ಸರ್ವಮಾನ್ಯವಲ್ಲ; ಒಂದು ಜಾತಿಯ ಜಿಂಕೆಗಳಲ್ಲಿ ಇದು ಹಿರಿಯ ಹೆಣ್ಣಿಗೆ ಸೇರಿದ ಹಕ್ಕು. ಜಿಂಕೆಗಳು ಜೊತೆಗೂಡುವ ಕಾಲದಲ್ಲಿ ಗುಂಪು ಚದುರಿದಾಗ ಗಂಡುಜಿಂಕೆಗಳು ಒಂದರೊಡನೊಂದು ಕಾದಾಡುತ್ತವೆ. ಈ ಕಾದಾಟವು ಹೆಣ್ಣು ಜಿಂಕೆಯನ್ನು ವಶಪಡಿಸಿಕೊಳ್ಳುವುದಕ್ಕಾಗಿ ಮಾತ್ರ; ಗುಂಪಿನ ನಾಯಕತ್ವಕ್ಕಲ್ಲ. ತನ್ನ ಮರಿಗೆ ಬೇಟೆಯಾಡುವ ರೀತಿನೀತಿಗಳನ್ನು ಕಲಿಸುವುದು ಹೆಣ್ಣು ಸಿಂಹವೇ. ಜೇಡರ ಹುಳುವಿನ ಜಾತಿಯಲ್ಲಿ ಹೆಣ್ಣು ಜೇಡವೇ ದೊಡ್ಡಪ್ರಾಣಿ. ಸಂತಾನೋತ್ಪತ್ತಿಗೆ ಮೊದಲು, ಜೊತೆಗೂಡಿದ ಮೇಲೆ ಗಂಡು ಜೇಡನನ್ನು ಕೊಂದು ತಿನ್ನುವುದು ಹೆಣ್ಣಿನ ಸ್ವಭಾವ. ಜೇನುನೊಣಗಳ ಸಮಾಜದಲ್ಲಿ ರಾಣಿ ಜೇನುನೊಣಕ್ಕೆ ಹೆಚ್ಚಿನ ಮನ್ನಣೆ; ಸಮಾಜದ ಸಂಪ್ರದಾಯಗಳೆಲ್ಲ ರಾಣಿಯನ್ನೇ ಅವಲಂಬಿಸುತ್ತವೆ. ಇದರಿಂದ ಸ್ತ್ರೀ ಜಾತಿಗೆ ಸೇರಿದ ಪ್ರಾಣಿಗಳೆಲ್ಲವೂ ಅಬಲೆಯರು ಎಂಬುದು ತಪ್ಪು ತಿಳಿವಳಿಕೆ ಎಂದು ಶ್ರುತಪಡುವುದು.

ಸಸ್ತನಿಗಳ ಸಮಾಜಗಳಲ್ಲಿ ಕೆಲವು ವ್ಯಕ್ತಿಗಳು ಅಪಾಯದ ಎಚ್ಚರಿಕೆಯನ್ನು ಕೊಡುತ್ತವೆ. ತನ್ನ ಮುಂಗಾಲುಗಳನ್ನು ನೆಲದ ಮೇಲೆ ಅಪ್ಪಳಿಸಿ, ಸಮಾಜದ ಅಥವಾ ಗುಂಪಿನ ಇತರ ವ್ಯಕ್ತಿಗಳಿಗೆ ಅಪಾಯದ ಸೂಚನೆಯನ್ನು ತಿಳಿಸುವುದು ಮೊಲದ ಸ್ವಭಾವ; ಹುಲ್ಲುಗಾವಲುಗಳಲ್ಲಿ ಮೇಯುತ್ತಿರುವ ಸಾರಗಗಳ ಗುಂಪಿನ ಒಂದೆರಡು ಪ್ರಾಣಿಗಳು ಎತ್ತರವಾದ ಸ್ಥಳದಲ್ಲಿ ಕಾವಲು ನಿಂತು ಅಪಾಯಸೂಚನೆ ತೋರಿದೊಡನೆಯೇ ಗುಂಪಿಗೆ ಎಚ್ಚರಿಕೆ ಕೊಡುತ್ತವೆ.

ಗುಂಪಾಗಿ ಜೀವಿಸುವ ಪ್ರಾಣಿಗಳಲ್ಲೆಲ್ಲಾ ಸಾಮಾಜಿಕ ಗುಣಗಳು ಒಂದೇ ವಿಧವಾಗಿರುವುದಿಲ್ಲ. ಮೊಲ, ಜಿಂಕೆ ಮೊದಲಾದ ಪ್ರಾಣಿಗಳ ಸಮಾಜಗಳಲ್ಲಿ ಗೆಳೆತನ, ಪರಸ್ಪರ ಸಹಕಾರವೇ ಮೊದಲಾದ ಗುಣಗಳು ತೀರ ಕಡಿಮೆ. ಇವುಗಳಿಗಿಂತ ಸಾರಗ, ಕಾಡೆಮ್ಮೆ—ಈ ಜಾತಿಯ ಪ್ರಾಣಿಗಳು ಸಾಮಾಜಿಕ ಜೀವನದಲ್ಲಿ ಒಂದೆರಡು ಹೆಜ್ಜೆ ಮುಂದುವರಿದಿರುವುವೆಂದು ಹೇಳಬಹುದು. ಇವುಗಳ ಜೀವನದ ಧಾಟಿಯು ಒಗ್ಗಟ್ಟಿನಲ್ಲಿ ಬಲವಿರುವುದೆಂಬ ತತ್ವವನ್ನನುಸರಿಸುತ್ತದೆ. ಶತ್ರುಗಳನ್ನು ಎದುರಿಸುವಾಗ ಇವು ಒಟ್ಟಾಗಿ ಸೇರಿ ಮುಂದೆ ನುಗ್ಗುತ್ತವೆ. ಅಳಿಲು ಮತ್ತು ಹೆಗ್ಗಣಗಳ ಜಾತಿಗೆ ಸೇರಿದ ಬೀವರ್ ಎಂಬ ಸಸ್ತನಿಯ ಸಮಾಜ ಜೀವನವು ಬಹು ಸ್ವಾರಸ್ಯವಾಗಿರುವುದು. ಬೀವರ್ ಪ್ರಾಣಿ ನೀರಿನಲ್ಲಿ ವಾಸಿಸುತ್ತದೆ. ನೀರಿನ ದಡದಲ್ಲಿ ಕಟ್ಟಿರುವ ಬಿಲಗಳಲ್ಲಿ ವಾಸಿಸುತ್ತ ಆಗಾಗ ನೀರಿನಲ್ಲಿ ಆಟವಾಡುವುದು ಇದರ ಸ್ವಭಾವ. ಮೈತುಂಬ ದಟ್ಟವಾದ ಕೂದಲಿನ ಹೊದಿಕೆ; ಈಜಲು

ನೆರವಾಗುವ ಜಲಪಾದಗಳು; ಪೊರೆಗಳಿಂದ ಆವೃತವಾತ ಶಕ್ತಿಯುತ ಬಾಲ. ಇದರ ಬಿಲದ ಬಾಗಿಲು ನೀರಿನ ಮಟ್ಟಕ್ಕಿಂತ ಕೊಂಚ ಕೆಳಗಿರುವುದು. ಕೆಲವು ವೇಳೆ ಬಿಲದ ಬಾಗಿಲಿನ ಮೇಲೆ ಬಗ್ಗಿದ ಮರದ ತುಂಡೊಂದಿರುತ್ತದೆ. ಬಿಲದ ಮೇಲೆ ಮಣ್ಣು ಮೆತ್ತಿ, ತುಂಡನ್ನು ಭದ್ರವಾಗಿ ಅದುಮಿ ನಿಲ್ಲಿಸುತ್ತದೆ. ಬಿಲಗಳ ಬಾಯಿ ನೀರಿನ ಕೆಳಗಿರುವುದರಿಂದ ತೋಳ, ಕರಡಿ ಮೊದಲಾದ ಶತ್ರುಗಳ ಭಯವಿಲ್ಲ. ಮನೆಯ ಮುಂದೆ ಆಟವಾಡುತ್ತ, ಈಜುತ್ತಿರುವ ಈ ಪ್ರಾಣಿಗಳು ಅಪಾಯಸೂಚನೆ ಬಂದೊಡನೆಯೇ ನೀರಿನಲ್ಲಿ ಮುಳುಗಿ ಬಿಲಗಳನ್ನು ಸೇರುತ್ತವೆ. ಅಪಾಯದ ಸೂಚನೆಯಾದಾಗ ಬಾಲವನ್ನು ನೀರಿನ ಮೇಲೆ ರಭಸವಾಗಿ ಅಪ್ಪಳಿಸಿ ಮುಳುಗುವುದು ಈ ಪ್ರಾಣಿಯ ಸ್ವಭಾವ.

ಬಿಸಿಲು ಕಾಲದಲ್ಲಿ ನೀರು ಬತ್ತಿಹೋದಾಗ, ಬಿಲಗಳ ಬಾಯಿ ಶತ್ರುವಿನ ಕಣ್ಣಿಗೆ ಬಿದ್ದು ಬೀವರ್ ಪ್ರಾಣಿಯು ಅಪಾಯಕ್ಕೆ ಒಳಗಾಗುವ ಅವಕಾಶವಿರುವುದು. ಇಂತಹ ಸಂದರ್ಭದಲ್ಲಿ, ಅದರ ಸಾಮಾಜಿಕ ಗುಣಗಳು ಎದ್ದು ತೋರುವುವು. ಒಂಟಿಯಾಗಿ ಸಾಧಿಸಲು ಅಸಾಧ್ಯವಾದ ಯೋಜನೆಯೊಂದನ್ನು ಬೀವರ್ ಸಮಾಜವು ಒಟ್ಟಾಗಿ ಸೇರಿ ಸಾಧಿಸುತ್ತದೆ. ತಮ್ಮ ಬಿಲಗಳ ಮುಂದೆ ನೀರು ಆಳವಾಗಿ ನಿಲ್ಲುವಂತೆ ಪ್ರವಾಹಕ್ಕೆ ಒಂದು ಅಣೆಕಟ್ಟನ್ನು ಅವು ಕಟ್ಟುತ್ತವೆ. ಅಣೆಕಟ್ಟಿನ ರಚನೆಗಾಗಿ ೮–೧೦ ಅಂಗುಲ ದಪ್ಪವಿರುವ ಮರದ ಬುಡವನ್ನು ಕಡಿದು, ಉರುಳಿಸಿ, ಮರದ ತೊಗಟೆಯನ್ನೆಲ್ಲ ಕಚ್ಚಿ ಸುಲಿದು, ಸಾಗುವಾನಿ ತುಂಡುಗಳನ್ನು ತಯಾರಿಸುತ್ತವೆ. ಈ ತುಂಡುಗಳನ್ನು ಉರುಳಿಸಿ ತಂದು ನೀರಿಗೆ ಅಡ್ಡಲಾಗಿ ಹಾಕುತ್ತವೆ. ಅಣೆಕಟ್ಟಿಗೂ ಮರದ ತುಂಡುಗಳಿರುವ ಸ್ಥಳಕ್ಕೂ ಹೆಚ್ಚು ದೂರವಿದ್ದು, ನೆಲ ನಯವಾಗಿದ್ದರೆ, ಅನೇಕ ಪ್ರಾಣಿಗಳು ತುಂಡುಗಳನ್ನು ನೆಲದ ಮೇಲೆ ಉರುಳಿಸಿಕೊಂಡು ಬರುತ್ತವೆ. ಕೆಲವು ವೇಳೆ ಕಾಲುವೆಗಳನ್ನು ಕೊರೆದು ಮರದ ತುಂಡುಗಳನ್ನು ಅಣೆಕಟ್ಟಿನ ಹತ್ತಿರಕ್ಕೆ ತೇಲಿಸಿಕೊಂಡು ತರುವುವು. ಮರದ ತುಂಡುಗಳನ್ನೆಲ್ಲ ಪ್ರವಾಹಕ್ಕೆ ಅಡ್ಡಲಾಗಿ ಹಾಕಿ, ಸಂದಿಗಳಿಗೆ ಜೇಡಿಮಣ್ಣನ್ನು ತುಂಬಿ ದಮ್ಮಸು ಮಾಡಿ, ನೀರನ್ನು ತಡೆಗಟ್ಟುತ್ತವೆ. ಸುಮಾರು ಮುಕ್ಕಾಲು ಮೈಲಿ ಉದ್ದವುಳ್ಳ ಅಣೆಕಟ್ಟು ಕಟ್ಟಿರುವುದನ್ನು ಕೂಡ ಪ್ರಕೃತಿಶಾಸ್ತ್ರಜ್ಞರು ನೋಡಿರುತ್ತಾರೆ.

ಈ ಸಸ್ತನಿಗಳ ಮೈಕಟ್ಟಿನಲ್ಲಿ ವ್ಯತ್ಯಾಸಗಳಿಲ್ಲದಿದ್ದರೂ ಕೂಡ ಅವು ಒಂದೊಂದೂ ಬೇರೆ ಬೇರೆ ಕೆಲಸಕಾರ್ಯಗಳಲ್ಲಿ ಭಾಗವಹಿಸುವುವು. ಆದರೆ ಇರುವೆ, ಗೆದ್ದಲುಹುಳುಗಳು, ಜೇನುನೊಣ—ಇವುಗಳ ಸಮಾಜದಲ್ಲಿ ಒಂದೊಂದು ಕೆಲಸಕ್ಕೆ ಒಂದೊಂದು ಗುಂಪಿನ ಗೆದ್ದಲುಹುಳುಗಳೂ ಜೇನುನೊಣಗಳೂ ಇರುತ್ತವೆ; ಆಯಾ ಕೆಲಸಮಾಡಲು ಯೋಗ್ಯವಾದ ರೂಪರಚನೆಗಳನ್ನೂ ಹೊಂದಿರುತ್ತವೆ. ಸಾಮಾನ್ಯವಾಗಿ ಈ ಸಮಾಜಗಳಲ್ಲಿ ರಾಣಿ, ಗಂಡು ಮತ್ತು ಕೆಲಸಗಾರ ಎಂಬ ಮೂರು ಜಾತಿಗಳಿರುತ್ತವೆ. ರಾಣಿಯೂ ಕೆಲಸಗಾರರೂ ಹೆಣ್ಣು ಜಾತಿಯವು.

ಒಂದೊಂದು ಜಾತಿಯ ವ್ಯಕ್ತಿಯ ದೇಹರಚನೆ ಮತ್ತು ಆಕಾರಗಳು ಆಯಾ ವ್ಯಕ್ತಿಯ ವೃತ್ತಿಗೆ ಅನುಗುಣವಾಗಿ ಮಾರ್ಪಡುತ್ತವೆ. ರಾಣಿಯ ಕೆಲಸವನ್ನು ಇತರ ಹೆಣ್ಣು ಕೆಲಸಗಾರರು ಮಾಡಲಾರವು. ಕೆಲಸಗಾರರ ಜವಾಬ್ದಾರಿಯನ್ನು ಗಂಡು ವ್ಯಕ್ತಿಗಳು ನಿರ್ವಹಿಸಲಾರವು. ಅಂದರೆ ಸಮಾಜದ ಒಂದು ಕೆಲಸಕ್ಕಾಗಿ ರೂಪುಗೊಂಡ ವ್ಯಕ್ತಿಯು ತನ್ನ ಇಡೀ ಜೀವಮಾನದಲ್ಲಿ ಬೇರೊಂದು ಕೆಲಸವನ್ನು ಮಾಡಲಾರದು. ಸಮಾಜದ ಹಿತಕ್ಕಾಗಿ ಅದು ತನ್ನ ಜೀವನಸವನ್ನೇ ಧಾರೆಯೆರೆಯುತ್ತದೆ. ತನ್ನ ಪಾಲಿಗೆ ಬಂದ ಕೆಲಸವನ್ನು ಫಲಾಪೇಕ್ಷೆಯಿಲ್ಲದೆ, ಹಿಂದು ಮುಂದು ನೋಡದೆ ಮಾಡುವ ಕಾರ್ಯದಕ್ಷತೆಯು ಆದರ್ಶಪ್ರಾಯವಾದುದು. ವ್ಯವಸ್ಥೆ, ಸ್ವಾರ್ಥತ್ಯಾಗ, ಕಾರ್ಯದಕ್ಷತೆ, ಸಹಕಾರ—ಈ ಗುಣಗಳು ಜೇನು ನೊಣಗಳಲ್ಲಿ ಎದ್ದು ಕಾಣುವಷ್ಟು ಚೆನ್ನಾಗಿ ಬೇರೆ ಜಾತಿಯ ಯಾವ ಪ್ರಾಣಿಯಲ್ಲೂ ಕಂಡುಬರುವುದಿಲ್ಲವೆಂದು ಧಾರಾಳವಾಗಿ ಹೇಳಬಹುದು.

ಇರುವೆಯ ಸಮಾಜದಲ್ಲಿ ಮೂರು ಜಾತಿಯ ವ್ಯಕ್ತಿಗಳಿವೆ. ರಾಣಿ ಇರುವೆ, ಕೆಲಸಗಾರ ಇರುವೆ ಮತ್ತು ಗಂಡು ಇರುವೆ: ರಾಣಿ ಇರುವೆಗಳಿಗೂ ಗಂಡು ಇರುವೆಗಳಿಗೂ ರೆಕ್ಕೆಗಳಿರುತ್ತವೆ. ಕೆಲಸಗಾರರೆಲ್ಲ ಹೆಣ್ಣು ಇರುವೆಗಳು. ಹೆಣ್ಣಾದರೂ, ಇವಕ್ಕೆ ಸಂತಾನವನ್ನು ಪಡೆಯುವ ಶಕ್ತಿ ಇರುವುದಿಲ್ಲ. ಜನನೇಂದ್ರಿಯಗಳು ಸಂಪೂರ್ಣವಾಗಿ ಬಲಿಯದಿರುವುದೇ ಇದಕ್ಕೆ ಕಾರಣ. ಕೆಲಸಗಾರರ ತಲೆಯಲ್ಲಿ ಕಾಳು ಕಡ್ಡಿಗಳನ್ನು ಕಡಿಯಲು ಬಲವಾದ ದವಡೆಗಳೂ ಶತ್ರುವನ್ನು ಚುಚ್ಚಿ ನೋಯಿಸುವ ಭರ್ಜಿಗಳೂ ಎಲೆಗಳನ್ನು ಕತ್ತರಿಸಿ ತುಂಡುಮಾಡಲು ನೆರವಾಗುವ ಕತ್ತರಿಗಳೂ ಇವೆ. ಸಮಾಜದ ಕೆಲಸ ಕಾರ್ಯಗಳೆಲ್ಲ ನಡೆಯುವುದು ಈ ಕೆಲಸಗಾರರಿಂದಲೇ.

ಸಮಾಜ ಜೀವನದಲ್ಲಿ ಗಂಡು ಇರುವೆಗಳಿಗೆ ಪ್ರಶಸ್ತಿ ಕಡಿಮೆ; ಅವು ಕೆಲಸ ಮಾಡುವುದೂ ಕಡಮೆಯೇ. ಅವು ರಾಣಿಯನ್ನು ಒಲಿಸಿಕೊಳ್ಳಲು ಅದನ್ನು ಎಡೆಬಿಡದೆ ಒಂದೇ ಸಮನಾಗಿ ಹಿಂಬಾಲಿಸುತ್ತವೆ; ಚಳಿಗಾಲದಲ್ಲಿ ರೆಕ್ಕೆಯುಳ್ಳ ಹೆಣ್ಣು ಮೇಲಕ್ಕೆ ಹಾರಿದಾಗ ಗಂಡುಗಳೂ ಮೇಲಕ್ಕೆ ಹಾರಿ ಹೆಣ್ಣಿನೊಡನೆ ಜೊತೆಗೂಡುವುವು. ಬಹುಶಃ ಅವುಗಳ ಜೀವನದ ಸರ್ವಸ್ವವೂ ಅದೊಂದೇ ಕೆಲಸವೆಂದು ಬೇಕಾದರೂ ಹೇಳಬಹುದು. ಒಮ್ಮೆ ರಾಣಿಯ ಪ್ರೀತಿಯನ್ನು ಸಂಪಾದಿಸಿ, ಅದರೊಡನೆ ಸೇರಿದರೆ ಗಂಡಿನ ಕೆಲಸ ಮುಗಿಯಿತು; ಅಲ್ಲಿಗೆ ಅದರ ಆಯುಸ್ಸೂ ಮುಗಿದಂತೆಯೇ ಸರಿ. ನಾಲ್ಕಾರು ಗಂಡು ಇರುವೆಗಳೊಡನೆ ಜೊತೆ ಸೇರುವುದು ಹೆಣ್ಣು ಇರುವೆಯ ಸ್ವಭಾವ. ಇವೇ ಮುಂದಿನ ರಾಣಿಗಳು. ಇವು ತಮ್ಮ ಗೂಡಿಗೆ ಹಿಂದಿರುಗಬಹುದು; ಇಲ್ಲವಾದರೆ ಬೇರೊಂದೆಡೆ ಬಿಡಾರವನ್ನು ಹೂಡಿ ಮತ್ತೊಂದು ಸಮಾಜವನ್ನು ಸ್ಥಾಪಿಸಬಹುದು.

ಗರ್ಭಧರಿಸಿ ಗೂಡಿಗೆ ಹಿಂತಿರುಗಿದಾಗ ರಾಣಿ ಇರುವೆಯ ರೆಕ್ಕೆಗಳು ಉದುರಿ

ಹೋಗುತ್ತವೆ. ಅದರ ಆಗಮನವನ್ನೇ ಎದುರು ನೋಡುತ್ತಿರುವ ಕೆಲಸಗಾರರು ಬಳಲಿ ಬಂದ ರಾಣಿಯ ಸೇವೆಯನ್ನು ಒಲವಿನಿಂದ ಮಾಡುವುವು. ರಾಣಿಯು ಅನೇಕ ವಾರಗಳವರೆಗೂ ಆಹಾರವನ್ನು ತೆಗೆದುಕೊಳ್ಳದೆ ವಿಶ್ರಾಂತಿಯನ್ನು ಅನುಭವಿಸುತ್ತದೆ. ಕೆಲವು ದಿನಗಳಾದ ಮೇಲೆ ಬಿಡುವಿಲ್ಲದೆ ಒಂದೇ ಸಮನಾಗಿ ಮೊಟ್ಟೆಗಳನ್ನು ಇಡುತ್ತದೆ. ಇದು ಇಡುವ ಮೊಟ್ಟೆಗಳು ಎರಡು ವಿಧ; ಒಂದು ಹೆಣ್ಣು ಇರುವೆಯಾಗುವ ಮೊಟ್ಟೆಗಳು, ಇನ್ನೊಂದು ಗಂಡು ಇರುವೆಯಾಗುವ ಮೊಟ್ಟೆಗಳು. ಇವಕ್ಕೆ ಆಹಾರವನ್ನು ಒದಗಿಸುವುದು ರಾಣಿಯ ಮೊದಲ ಕೆಲಸ. ಈ ಮೊಟ್ಟೆಗಳೊಡೆದು ಹೊರಬೀಳುವ ಇರುವೆಗಳೆಲ್ಲ ಹೆಣ್ಣು ಕೆಲಸಗಾರರು. ಯಾವ ವಿಧವಾದ ಅಭ್ಯಾಸವೂ ಶಿಕ್ಷಣವೂ ಇಲ್ಲದೆ ಇವು ಗೂಡು ಕಟ್ಟುವುದರಲ್ಲಿಯೂ, ಗೂಡನ್ನು ಚೊಕ್ಕಟಮಾಡುವುದರಲ್ಲಿಯೂ, ತಮ್ಮ ಅನಂತರ ಹುಟ್ಟುವ ಇರುವೆಗಳ ದಾದಿಯರಾಗಿ ಸೇವೆಮಾಡುವುದರಲ್ಲಿಯೂ ತೊಡಗುವುವು.

ಒಂದು ಬಂಡೆಯನ್ನು ಎತ್ತಿದರೆ ಅದರಡಿಯಲ್ಲಿ ಸಾಲುಸಾಲಾಗಿ ಚಲಿಸುತ್ತಿರುವ ಇರುವೆಯ ಸಮಾಜಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಇರುವೆಗಳು ಸಣ್ಣ ಸಣ್ಣ ಬಿಳಿಯ ಕೋಶಗಳನ್ನು ಎತ್ತಿಕೊಂಡು ಹರಿದಾಡುವುದನ್ನು ನೋಡಬಹುದು. ಈ ಕೋಶಗಳಲ್ಲಿ ಬಲಿಯುತ್ತಿರುವ ಇರುವೆಯ ಮರಿಗಳಿರುತ್ತವೆ. ಬಂಡೆಯುರುಳಿ ಅಪಾಯ ಸೂಚನೆಯಾದಾಗ, ಕೆಲಸಗಾರರಲ್ಲಿ ದಾದಿಗಳು ಮರಿಗಳಿರುವ ಕೋಶಗಳನ್ನು ಸುರಕ್ಷಿತವಾದ ಸ್ಥಳಗಳಿಗೆ ಕೊಂಡೊಯ್ಯುತ್ತವೆ.

ಸಮಾಜದ ಮಕ್ಕಳೆಂದರೆ ಕೆಲಸಗಾರರಿಗೆ ಬಹಳ ಅಕ್ಕರೆ. ಕೋಶಗಳಲ್ಲಿ ಮರಿಗಳು ಪೂರ್ತಿ ಬೆಳೆದಾಗ, ದಾದಿಗಳು ಕೋಶಗಳನ್ನು ಕಡಿದು ಮರಿಗಳು ಹೊರಗೆ ಬರಲು ದಾರಿಮಾಡುತ್ತವೆ. ಸಮಾಜದಲ್ಲಿ ರಾಣಿ ಇರುವೆಗೆ ಹೆಚ್ಚಾದ ಮನ್ನಣೆ. ಸಮಾಜವು ಅಪಾಯಕ್ಕೊಳಗಾಗುವ ಪ್ರಸಂಗ ಒದಗಿದರೆ, ಕೆಲಸಗಾರರು, ತಮ್ಮ ಜೀವದಾಸೆಯನ್ನು ಬಿಟ್ಟು ರಾಣಿಯನ್ನು ಕಾಪಾಡಲು ಪ್ರಯತ್ನಿಸುತ್ತವೆ. ಈ ಸಂದರ್ಭಗಳಲ್ಲಿ ಮರಿಗಳ ಪೋಷಣೆಯನ್ನು ಕೂಡ ಅಲಕ್ಷಿಸುವುದು ಇವುಗಳ ಸ್ವಭಾವ. ರಾಣಿಯು ಸತ್ತರೆ, ಸಮಾಜವು ಹಾಳಾಗುವುದೆಂಬ ಭೀತಿಯೇ ಈ ವರ್ತನೆಗೆ ಕಾರಣ. ಹೀಗೆ ಇರುವೆಗಳು ಕ್ರಮಬದ್ಧವಾಗಿ ಜೀವಿಸಿದರೂ, ಕ್ರಮಜೀವಿಗಳಾದ ಮನುಷ್ಯರಂತೆ ಅವು ಯಾವ ವಿಧವಾದ ಶಿಕ್ಷಣವನ್ನೂ ಪಡೆಯುವುದಿಲ್ಲ. ಅವುಗಳನ್ನು ತಿದ್ದಲು ರಾಜಕೀಯ ಅಥವಾ ಧಾರ್ಮಿಕ ಕಟ್ಟುಕಾಯಿದೆಗಳೂ ಇಲ್ಲ. ಮನುಷ್ಯನಂತೆ ಅವು ತಿಳಿವಳಿಕೆಯಿಂದ ತಮ್ಮ ಜೀವನವನ್ನು ಮಾರ್ಪಡಿಸಿಕೊಳ್ಳಲಾರವು.

ವಾಸನೆಯ ಬಲವೇ ಇರುವೆಗಳ ಸಮಾಜ ಜೀವನದ ರಹಸ್ಯ. ಒಂದು ಗುಂಪಿನ ಇರುವೆಗಳು ಮತ್ತೊಂದು ಗುಂಪನ್ನು ವಾಸನೆಯಿಂದ ಗುರುತಿಸಬಲ್ಲವು. ತಮ್ಮ ಗುಂಪಿನ ವಾಸನೆಯಿಲ್ಲದ ಇರುವೆಯನ್ನು ತಮ್ಮ ಗೂಡಿನಲ್ಲಿ ಸೇರಲು ಎಡೆ

ಗೊಡುವುದಿಲ್ಲ. ಹಾಗೆ ಆಕಸ್ಮಿಕವಾಗಿ ಬಂದು ಸೇರಿದರೂ ಅದನ್ನು ಕೊಂದುಹಾಕಿ ಬಿಡುವುವು. ಇವು ಒಂದೊಂದು ಸನ್ನಿವೇಶವನ್ನೂ ಒಂದೊಂದು ಬಗೆಯ ಸಂಕೇತ ದಿಂದ ತಮ್ಮ ಸಮಾಜದ ಇತರ ಇರುವೆಗಳಿಗೆ ತಿಳಿಸುತ್ತವೆ. ಇದನ್ನು ತಿಳಿಸುವುದು ಮಾತಿನಿಂದಲ್ಲ, ಸ್ಪರ್ಶದಿಂದ. ಇರುವೆಯ ತಲೆಯ ಮುಂದಿರುವ ಕುಡಿಮೀಸೆಗಳು ಅದರ ಸ್ಪರ್ಶಾಂಗಗಳು. ಸಾಲು ಸಾಲುಗಳಾಗಿ, ಎದುರುಬದುರು ಬರುತ್ತಿರುವ ಇರುವೆಗಳು ಒಂದನ್ನೊಂದು ಮೀಸೆಗಳಿಂದ ಮುಟ್ಟಿ ಮುಂದೆ ಹೋಗುವುದನ್ನು ನಾವೆಲ್ಲರೂ ನೋಡಿರುತ್ತೇವೆ. ಪರಸ್ಪರ ಸೂಚನೆಗಳನ್ನು ಕೊಡುವುದೇ ಈ ಕಾರ್ಯದ ಉದ್ದೇಶ. ಇರುವೆಗಳು ತಮ್ಮ ಕುಡಿಮೀಸೆಗಳನ್ನು ನೆಲದ ಮೇಲೆ ನಾನಾ ರೀತಿಯಲ್ಲಿ ತಟ್ಟುವುವು; ಮತ್ತೊಂದು ಇರುವೆಯನ್ನು ಮೆಲ್ಲಗೆ ಮುಟ್ಟುವುವು; ತಮ್ಮ ಹಿಂಗಾಲುಗಳ ಮೇಲೆ ನಿಂತು ಕುಡಿಮೀಸೆಗಳನ್ನು ಅಲ್ಲಾಡಿಸುವುವು—ಇವೆಲ್ಲವೂ ಸಾಂಕೇತಿಕ ಭಾಷೆಯೇ. ಗಾಬರಿಗೊಂಡು ನಡುಗುತ್ತಿರುವ ಇರುವೆಯನ್ನು ಮತ್ತೊಂದು ಕಂಡಾಗ ತನ್ನ ಕುಡಿಮೀಸೆಗಳಿಂದ ಒಂದೇ ರೀತಿಯಲ್ಲಿ ಹಲವು ಬಾರಿ ಮುಟ್ಟುವುದು. ಹೀಗೆ ಮಾಡಿದಾಗ ಅದು ಗಾಬರಿಗೊಂಡ ಇರುವೆಯನ್ನು ಸಂತೈಸುತ್ತಿದೆಯೆಂದು ತಿಳಿಯಬಹುದು. ಧಾನ್ಯದ ಕಣಜವನ್ನೋ ಬೆಲ್ಲದ ಮುದ್ದೆಯನ್ನೊ ಕಂಡ ಇರುವೆಗಳು ತಮ್ಮ ಗೂಡಿನ ಬಳಿಗೆ ಬಂದು ತಮ್ಮ ಹಿಂಗಾಲುಗಳ ಮೇಲೆ ನಿಂತು ನರ್ತನಮಾಡಿ, ನಿಧಿ ಕಂಡುದನ್ನು ಇತರ ಇರುವೆಗಳಿಗೆ ತಿಳಿಸುವುವಂತೆ !

ಹೀಗೆ ಇರುವೆಗಳ ಗುಂಪನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಒಂದು ಇರುವೆ ಮತ್ತೊಂದು ಇರುವೆಯನ್ನು ಸಂಧಿಸಿದಾಗ ತನ್ನ ಕುಡಿಮೀಸೆಗಳಿಂದ ಅದನ್ನು ಮುಟ್ಟುವುದನ್ನು ನೋಡಬಹುದು. ಇದು ಆಹಾರ ತನಗೆ ಬೇಕೆಂಬ ಪ್ರಾರ್ಥನೆ. ಸಂಧಿಸಿದ ಇರುವೆಯ ಹೊಟ್ಟೆಯಲ್ಲಿ ಆಹಾರವಿದ್ದರೆ, ಅದು ತನ್ನ ಹಿಂಗಾಲುಗಳ ಮೇಲೆ ನಿಂತು ತನ್ನ ಬಾಯಿಂದ ಒಂದು ತೊಟ್ಟು ಆಹಾರವನ್ನು ಹಸಿದ ಇರುವೆಗೆ ಕೊಡುತ್ತದೆ. "ಹಸಿದುಬಂದವರಿಂಗೆ ಅಶನವೀಯುವು"ವುದು ಇರುವೆಗಳ ಸಂಪ್ರದಾಯ. ಹೊಟ್ಟೆಯಲ್ಲಿ ಆಹಾರವಿದ್ದರೂ ಹಸಿದ ಇರುವೆಯ ಪ್ರಾರ್ಥನೆಯನ್ನು ನಿರಾಕರಿಸಿದರೆ, ಸ್ವಾರ್ಥ ತೋರಿಸಿದ ಇರುವೆಯನ್ನು ಇತರ ಇರುವೆಗಳು ನಿರ್ದಾಕ್ಷಿಣ್ಯವಾಗಿ ಕೊಂದುಬಿಡುವುದು ಈ ಸಮಾಜದ ನೀತಿ. ಇರುವೆಯ ಸಂಪಾದನೆಯು ಸ್ವಂತ ಸುಖಕ್ಕೇ ಅಲ್ಲ; ಇಡೀ ಸಮಾಜದ ಹಿತಕ್ಕೆ. ಇರುವೆಯ ಹೊಟ್ಟೆ ಸಮಾಜದ ಕಣಜ. ಹೀಗೆ ಇರುವೆಯ ಜೀವನವನ್ನು ಒಳಹೊಕ್ಕು ನೋಡಿದರೆ, ಅದರ ಪ್ರತಿಯೊಂದು ಚಲನಕ್ಕೂ ಒಂದು ಅರ್ಥವಿರುವುದೆಂದು ವಿಶದಪಡುವುದು. ಇವು ಕೆಲವು ವೇಳೆ ತಮ್ಮ ಗೂಡಿನಲ್ಲಿ ಇತರ ಜಾತಿಯ ಜೀವಿಗಳನ್ನು ಸಾಕು ಪ್ರಾಣಿಗಳಾಗಿ ಇಟ್ಟುಕೊಂಡು ಸಲಹುವುದೂ ಉಂಟು. ಕಾರಣಾಂತರದಿಂದ ತಮ್ಮ ಗೂಡನ್ನು ಬಿಟ್ಟು ಬೇರೆ ಗೂಡಿಗೆ ಹೋಗಬೇಕಾದರೆ, ತಮ್ಮ ಸಾಕುಪ್ರಾಣಿ

ಗಳನ್ನು ಜೊತೆಯಲ್ಲೇ ತೆಗೆದುಕೊಂಡು ಹೋಗುವುವು. ಇಂತಹ ಸಾಕುಪ್ರಾಣಿಗಳಲ್ಲಿ ದುಂಬಿಗಳು ಕೆಲವು. ಇವು ಕೊಡುವ ತೊಂದರೆಗಳನ್ನೆಲ್ಲಾ ಇರುವೆಗಳು ಒಲವಿನಿಂದ ಸೈರಿಸುವುವಲ್ಲದೆ, ತಮ್ಮ ಆಹಾರದಲ್ಲಿ ಅವುಗಳಿಗೆ ಪಾಲನ್ನು ಕೂಡ ಕೊಡುತ್ತವೆ. ಇರುವೆಗಳ ಈ ವರ್ತನೆ ಪರಾರ್ಥವೆಂದು ಭಾವಿಸಕೂಡದು. ಇದು ಅವುಗಳ ರಸಿಕತೆಯನ್ನು ತೋರ್ಪಡಿಸುವುದು; ದುಂಬಿಗಳ ದೇಹದಿಂದ ಹೊರ ಹೊಮ್ಮುವ ಸುವಾಸನೆಯೆಂದರೆ ಇರುವೆಗಳಿಗೆ ಪ್ರಾಣ.

ನಾವು ಹಾಲಿಗಾಗಿ ಹಸುಗಳನ್ನು ನಮ್ಮ ಮನೆಗಳಲ್ಲಿ ಕಟ್ಟಿಕೊಂಡು ಸಾಕುವ ಹಾಗೆ, ಇರುವೆಗಳು ಏಫಿಡ್ (Aphid) ಜಾತಿಯ ಕೀಟಗಳನ್ನು ಆಹಾರಕ್ಕಾಗಿ ತಮ್ಮ ಗೂಡುಗಳಲ್ಲಿ ಸಾಕುತ್ತವೆ. ಕೆಲವು ಸಸ್ಯಗಳಲ್ಲಿ ಉತ್ಪತ್ತಿಯಾಗುವ ಮಧು ರಸಗಳೆಂದರೆ ಇರುವೆಗಳಿಗೆ ಬಹು ಪ್ರೀತಿ. ಆದರೆ ಈ ರಸವನ್ನು ಹೀರುವ ಶಕ್ತಿ ಮಾತ್ರ ಅವುಗಳಿಗಿಲ್ಲ. ಗೂಡಿನ ಸಾಕು ಪ್ರಾಣಿ ಕೀಟಕ್ಕೆ ರಸವನ್ನು ಹೀರುವ ನಳಿಕೆ (Proboscis) ಇರುವುದು. ಸಸ್ಯಗಳ ಮೇಲೆ ಕುಳಿತು ಹೊಟ್ಟೆಯ ತುಂಬ ರಸವನ್ನು ಹೀರಿ ಕೀಟಕವು ಇರುವೆಯ ಗೂಡಿಗೆ ಬರುತ್ತದೆ. ಇದರ ದೇಹದಿಂದ ರಸವು ತೊಟ್ಟುತೊಟ್ಟಾಗಿ ಜಿನುಗುವುದು. ಇದು ಎಳ್ಳಷ್ಟೂ ಪೋಲಾಗದಂತೆ ಅದರ ಸುತ್ತಲೂ ಸುತ್ತಿಕೊಂಡು ಇರುವೆಗಳು ನೆಕ್ಕುವುವು. ಕೆಲವು ಸಮಯಗಳಲ್ಲಿ ಕೀಟವನ್ನು ಹಿಡಿದು, ಅದರ ಹೊಟ್ಟೆಯನ್ನು ತಮ್ಮ ಕುಡಿಮೀಸೆಗಳಿಂದ ಸವರಿ ಹಾಲು ಕರೆದಂತೆ ರಸವನ್ನು ಹೊರಗೆಳೆಯುತ್ತವೆ. ಹಾಲು ಕರೆಯುವ ಹಸುಗಳಂತೆ ತಮಗೆ ಮಧುವನ್ನೊದಗಿಸುವ ಈ ಕೀಟಗಳನ್ನು ಕಂಡರೆ ಇರುವೆಗಳಿಗೆ ಬಹು ಪ್ರೀತಿ. ಅವುಗಳನ್ನು ಅಕ್ಕರೆಯಿಂದ ಸಾಕಿ ಸಲಹುತ್ತವೆ.

ಬೇರೊಂದು ಗೂಡಿನ ಇರುವೆಗಳನ್ನು ಕದ್ದುತಂದು ತಮ್ಮ ಗುಲಾಮರನ್ನಾಗಿ ಮಾಡಿಕೊಳ್ಳುವುದು ಕೂಡ ಇರುವೆಗಳ ಸಾಮಾಜಿಕ ಸಂಪ್ರದಾಯ. ತಮ್ಮ ಜಾತಿಗೆ ಸೇರಿದ ಬೇರೊಂದು ಸಣ್ಣಜಾತಿಯ ಗೂಡಿನ ಮೇಲೆ ಧಾಳಿ ನಡೆಸಿ, ಆ ಗೂಡಿನ ಕೆಲಸಗಾರರನ್ನೆಲ್ಲ ಕೊಂದು ಅಲ್ಲಿ ಸಂಗ್ರಹವಾಗಿರುವ ಆಹಾರವನ್ನು ಅಪಹರಿಸುವುದಲ್ಲದೆ, ಸೋತ ಗುಂಪಿನ ಮರಿಗಳಿರುವ ಕೋಶಗಳನ್ನೂ ತಮ್ಮ ಗೂಡಿಗೆ ಹೊತ್ತುಕೊಂಡು ಬರುವುವು. ಈ ಕೋಶಗಳಿಂದ ಹೊರಬೀಳುವ ಇರುವೆಗಳೆಲ್ಲ ಸಮಾಜದ ಗುಲಾಮರು. ಆಳುಗಳಾಗಿ ಸೇವಾವೃತ್ತಿಯಲ್ಲಿದ್ದ ಗುಲಾಮರು ಆಳುವವರಾಗುವುದೂ ಉಂಟು. ಗುಲಾಮರಿಂದಲೇ ಸಮಸ್ತ ಉಪಚಾರಗಳನ್ನು ಮಾಡಿಸಿಕೊಳ್ಳುವ ಅಮೆಸಾನ್ ಇರುವೆಗಳಿಗೆ ಕೆಲಸ ಮಾಡುವುದು ಸಂಪೂರ್ಣವಾಗಿ ಮರೆತು ಹೋಗಿರುತ್ತದೆ. ಆಹಾರವನ್ನು ತೆಗೆದುಕೊಳ್ಳುವುದೂ ಕೂಡ ಇವಕ್ಕೆ ಕಷ್ಟವೇ. ಗುಲಾಮರು ಬಂದು ಆಹಾರವನ್ನು ಅವುಗಳ ಬಾಯೊಳಕ್ಕೆ ಸುರಿಯಬೇಕು. ಗುಲಾಮರ ಸಹಾಯವಿಲ್ಲದಿದ್ದರೆ ಹೊಟ್ಟೆಗಿಲ್ಲದೆ ಸಾಯುವುದು ಈ ಇರುವೆಗಳ ಹಣೆಯ ಬರಹ.

ಜೇನು ನೊಣಗಳ ಸಮಾಜ ಜೀವನವು ಇರುವೆಗಳಂತೆಯೇ ವ್ಯವಸ್ಥಿತವಾದುದು. ಇವುಗಳ ಸಮಾಜದಲ್ಲಿಯೂ ರಾಣಿ ನೊಣ, ಕೆಲಸಗಾರರು, ಗಂಡು ನೊಣಗಳು ಎಂಬ ಮೂರು ಜಾತಿಗಳಿವೆ. ಆದರೆ ಈ ಸಮಾಜದಲ್ಲಿ ರಾಣಿಯೊಬ್ಬಳೆ. ರಾಣಿಯ ವೈ ವಾಸನೆಯೇ ಎಲ್ಲ ನೊಣಗಳಿಗೂ ದಿಗ್ದರ್ಶಕ. ಅನೇಕ ಗಂಡು ನೊಣಗಳು ರಾಣಿಯನ್ನು ಮೋಹಿಸಿ ಹೊರಟರೂ ಅದು ಕೂಡಿಕೊಳ್ಳುವುದು ಒಂದರ ಜೊತೆಯಲ್ಲಿಯೇ. ಓಟದಲ್ಲಿ ರಾಣಿ ನೊಣವು ಬಲುಜೋರು. ರಾಣಿಯನ್ನು ಓಟದಲ್ಲಿ ಸೋಲಿಸಿ ಹಿಡಿಯುವ ಗಂಡು ನೊಣವು ಮಾತ್ರ ರಾಣಿಯೊಡನೆ ಸೇರುವುದು. ಮೊಟ್ಟೆಗಳನ್ನಿಡುವುದೊಂದೇ ರಾಣಿಯ ಕೆಲಸ. ಅದು ಜೇನು ಗೂಡಿನ ಮೇಲೆ ಹಾರುತ್ತ ಪ್ರತಿಯೊಂದು ಕೋಶದಲ್ಲೂ ಒಂದೊಂದು ಮೊಟ್ಟೆಯನ್ನಿಡುವುದು. ಅದು ದಿನ ಒಂದಕ್ಕೆ ೨೦೦೦-೩೦೦೦ ಮೊಟ್ಟೆಗಳನ್ನಿಡುವುದು. ರಾಣಿಯ ಆಯುಸ್ಸು ಸುಮಾರು ಮೂರು ವರ್ಷಗಳು. ಮೊಟ್ಟೆಗಳನ್ನಿಟ್ಟ ಮೇಲೆ ರಾಣಿಯ ಕೆಲಸ ಮುಗಿಯಿತು; ಅವುಗಳ ಪೋಷಣೆಯು ಕೆಲಸಗಾರರ ಜವಾಬ್ದಾರಿ. ಕೆಲಸಗಾರ ನೊಣಗಳು ಜೇನುಗೂಡನ್ನು ಕಟ್ಟುವುದರಲ್ಲಿಯೂ, ಗೂಡನ್ನು ಚೊಕ್ಕಟವಾಗಿಡುವುದರಲ್ಲಿಯೂ ಜೇನನ್ನು ಸಂಗ್ರಹಿಸುವುದರಲ್ಲಿಯೂ, ರಾಣಿಯನ್ನೂ ಮರಿಗಳನ್ನೂ ಪೋಷಿಸುವುದರಲ್ಲಿಯೂ ಹೆಚ್ಚು ಶ್ರದ್ಧೆಯನ್ನು ತೋರುತ್ತವೆ. ಮುಖ್ಯವಾಗಿ ಸಮಾಜದ ಆರ್ಥಿಕ ಜೀವನವನ್ನು ರೂಪುಗೊಳಿಸುವುದು ಕೆಲಸಗಾರರೆ. ಇವುಗಳೆಲ್ಲ ಹೆಣ್ಣು ನೊಣಗಳು.

ಇರುವೆಯ ಸಮಾಜದಲ್ಲಿರುವಂತೆಯೇ, ಇಲ್ಲಿ ಗಂಡು ನೊಣವು ಅಲ್ಪಾಯಸ್ಸಿನ ಪ್ರಾಣಿ. ರಾಣಿಗೆ ಗರ್ಭದಾನ ಮಾಡಿತೆಂದರೆ ಮುಗಿಯಿತು ಗಂಡಿನ ಕೆಲಸ. ಗೂಡಿನಲ್ಲಿ ಆಹಾರವು ಯಥೇಚ್ಛವಾಗಿದ್ದರೆ ಗಂಡುನೊಣಗಳ ಜೀವನಕ್ಕೆ ಅಪಾಯವಿರುವುದಿಲ್ಲ. ಚಳಿಗಾಲದಲ್ಲಾದರೆ ಆಹಾರವು ಕಡಿಮೆಯಾಗುವುದರಿಂದ ಕೆಲಸಗಾರರು ಗಂಡು ನೊಣಗಳನ್ನು ಕರುಣೆಯಿಲ್ಲದೆ ಕೊಂದುಬಿಡುತ್ತವೆ. ಗಂಡು ನೊಣಗಳು ಕೆಲಸಗಾರರಲ್ಲ; ಅಲಸರು, ಜೇನನ್ನು ಸಂಗ್ರಹಿಸಲಾರವಾದರೂ, ಅದನ್ನು ಸಂಕೋಚವಿಲ್ಲದೆ ಹೊಟ್ಟೆತುಂಬ ಕುಡಿಯಬಲ್ಲವು. ಮುಂಜಾಗ್ರತೆಯುಳ್ಳ ಕೆಲಸಗಾರರು ಮಳೆಗಾಲಕ್ಕೆಂದು ಕೂಡಿಡುವ ಆಹಾರವನ್ನು ಉಂಡಾಡಿ ಭಟ್ಟರಾದ ಗಂಡುನೊಣಗಳು ಮುಗಿಸಿಬಿಡುತ್ತವೆಯೆಂಬ ಭೀತಿಯಿಂದ, ಗಂಡು ನೊಣಗಳನ್ನು ಹೊಡೆದಟ್ಟಿ ಅವುಗಳ ರೆಕ್ಕೆಗಳನ್ನು ಕಡಿದುಬಿಡುವುವು.

ಕಣಜ, ಗೆದ್ದಲುಹುಳು ಇವುಗಳ ಸಮಾಜವು ಕೂಡ ಹೆಚ್ಚು ಕಡಿಮೆ ಮೇಲೆ ವಿವರಿಸಿದ ಧರ್ಮಗಳನ್ನೇ ಅನುಸರಿಸುವುದು.

— ಎ. ನಾರಾಯಣರಾವ್

# ಸ್ವಾತಂತ್ರ್ಯದ ಹಕ್ಕು

ಮನುಷ್ಯನು ಆಲೋಚಿಸುವುದು, ಮಾತಾಡುವುದು, ಆರ್ಥಿಕ, ಸಾಹಿತ್ಯ, ಕಲೆ ಮೊದಲಾದ ವಿಷಯಗಳಲ್ಲಿ ಭಾಗವನ್ನು ವಹಿಸಿ ಅವುಗಳನ್ನು ವೃದ್ಧಿಪಡಿಸುವುದು ಇವೇ ಮೊದಲಾದುವು ಅವನ ಸ್ವಭಾವವನ್ನೂ, ಮನುಷ್ಯ ಜೀವನದ ರಹಸ್ಯವನ್ನೂ ಉದಹರಿಸುವುವು. ಜೀವನದ ಮಟ್ಟವು ಏರಬೇಕಾದರೆ ಈ ಚಳುವಳಿಗಳ ಸಂಖ್ಯೆಯು ಅಧಿಕವಾಗಿದ್ದರೆ ಸಾಲದು. ಇವುಗಳು ಸ್ವಾಭಾವಿಕವಾಗಿ ಎಷ್ಟರಮಟ್ಟಿಗೆ ಅಭಿವೃದ್ಧಿಯಾಗಬಲ್ಲವೋ ಅಷ್ಟರಮಟ್ಟಿಗೆ ಬೆಳೆದು ನಾಗರಿಕತೆಯ ಮಟ್ಟವನ್ನು ಉನ್ನತಸ್ಥಿತಿಗೆ ತರಬೇಕು. ಸಸ್ಯವು ಬೆಳೆದು ಫಲಿಸಬೇಕಾದರೆ ಅದಕ್ಕೆ ತಕ್ಕ ಭೂಮಿ, ನೀರು, ಗೊಬ್ಬರ, ವ್ಯವಸಾಯ ಇವು ಹೇಗೆ ಅವಶ್ಯಕವೋ ಹಾಗೆ ಈ ಚಳುವಳಿಗಳು ಬೆಳೆದು ಫಲಿಸಬೇಕಾದರೆ ಅವುಗಳಿಗೆ ತಕ್ಕ ಸನ್ನಿವೇಶವು ಅವಶ್ಯಕ. ಯಾವ ಸಮಾಜವು ಮನುಷ್ಯನ ಆರ್ಥಿಕ, ರಾಜಕೀಯ, ಶಾರೀರಕ, ಮಾನಸಿಕ ಇವೇ ಮೊದಲಾದ ಚಳುವಳಿಗಳಿಗೆ ನಿರ್ಬಂಧ, ಅಡಚಣೆ ಇವುಗಳನ್ನು ಅಡ್ಡಲಾಗಿ ತರದೆ ಅವು ಬೆಳೆದು ಫಲಿಸುವುದಕ್ಕೆ ತಕ್ಕ ಪ್ರೋತ್ಸಾಹವನ್ನು ಕೊಡುವುದೋ ಆ ಸಮಾಜವೇ ಈ ಚಳುವಳಿಗಳಿಗೆ ಸರಿಯಾದ ಸನ್ನಿವೇಶವಾಗುವುದು. ಈ ಗುಣವುಳ್ಳ ಸಮಾಜಕ್ಕೆ ಸ್ವಾತಂತ್ರ್ಯದ ಸನ್ನಿವೇಶವೆಂದು ಹೆಸರು.

ಮತ್ತೊಬ್ಬ ವ್ಯಕ್ತಿಯ ಅಥವಾ ವ್ಯಕ್ತಿಗಣದ ಹೇಳಿಕೆ, ಬೆದರಿಕೆ ಇವುಗಳಿಗೆ ತಲೆಬಾಗದೆ ಅಥವಾ ಹೆದರದೆ ತನ್ನ ಇಚ್ಛೆಗೆ ಬಂದಂತೆ ಆಲೋಚಿಸಿ ಕಾರ್ಯವನ್ನು ಯಾವನು ನಡೆಸುವನೋ ಅಂತಹವನನ್ನು ಸ್ವತಂತ್ರನೆಂದು ಕರೆಯುವುದು ಕೆಲವು ಸ್ವತಂತ್ರವಾದಿಗಳ ಮತ. ಈ ಅರ್ಥವುಳ್ಳ ಸ್ವಾತಂತ್ರ್ಯವು ಅನುಭವಕ್ಕೆ ವಿರುದ್ಧ. ಪ್ರಪಂಚವನ್ನೆಲ್ಲಾ ಹುಡುಕಿದರೂ ಇಂತಹ ಅಖಂಡಸ್ವಾತಂತ್ರ್ಯವನ್ನು ಅನುಭವಿಸುವ ಒಬ್ಬ ವ್ಯಕ್ತಿಯೂ ಸಿಕ್ಕುವುದಿಲ್ಲ. ಸಮಾಜದಲ್ಲಿ ಜೀವಿಸಬೇಕೆಂದಿರುವ ಮನುಷ್ಯರಿಗೆ. ಅಖಂಡವಾದ ಸ್ವಾತಂತ್ರ್ಯವು ಸಾಧ್ಯವೂ ಅಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಇಚ್ಛೆಗೆ ಬಂದಂತೆ ಆಲೋಚಿಸಿ ಕೆಲಸಮಾಡುವುದಾದರೆ, ಅರಿಷಡ್ವರ್ಗಗಳಿಂದ ಕೂಡಿದ ಮನುಷ್ಯರ ಸಮಾಜವು ಹೇಗೆ ತಾನೇ ನಿಂತೀತು. ಇಂತಹ ಪೂರ್ಣ ಸ್ವಾತಂತ್ರ್ಯವು ರಾಜ್ಯದ ಸಹಾಯವು ಇದ್ದರೂ ಸಾಧ್ಯವಲ್ಲ ಇಲ್ಲದಿದ್ದರೂ ಸಾಧ್ಯವಲ್ಲ. ವ್ಯಕ್ತಿ ಯಾವ ಮಾರ್ಗವನ್ನು ಅನುಸರಿಸುವುದರಿಂದ ಇತರರಿಗೆ ತೊಂದರೆಯುಂಟಾಗುವುದಿಲ್ಲವೋ ಅವನ ಯಾವ ಪ್ರವರ್ತನೆಯಿಂದ ಇತರರ ಮಾನ, ಪ್ರಾಣ, ಆಸ್ತಿ ಇವುಗಳಿಗೆ ಭಂಗಬರುವುದಿಲ್ಲವೋ ಅಂತಹವನ ಪ್ರವೃತ್ತಿಮಾರ್ಗಕ್ಕೆ ಸ್ವತಂತ್ರಮಾರ್ಗವೆಂದು ಹೆಸರು. ಇಂತಹ ಸ್ವಾತಂತ್ರ್ಯಕ್ಕೂ ರಾಜ್ಯಾಧಿಕಾರಕ್ಕೂ ವೈಷಮ್ಯವಿಲ್ಲ. ಈ ಸ್ವಾತಂತ್ರ್ಯವು ಸಾಧ್ಯವಾಗುವುದು

ರಾಜ್ಯದ ಸಹಾಯದಿಂದಲೇ ಹೊರತು ರಾಜ್ಯದ ಅಭಾವದಿಂದಲ್ಲ. ಈ ಅರ್ಥವುಳ್ಳ ಸ್ವಾತಂತ್ರ್ಯವೇ ಎಲ್ಲಾ ರಾಜ್ಯಗಳಲ್ಲಿಯೂ ಆಚರಣೆಯಲ್ಲಿರುವುದು. ಯಾವ ವ್ಯಕ್ತಿ ಇತರ ಮನುಷ್ಯರ ಶಾರೀರಕ, ಮಾನಸಿಕ ಇವುಗಳ ಸಂಬಂಧವಾದ ನಿರೋಧ, ಹೆದರಿಕೆ, ಅಡಚಣೆ ಇವುಗಳಿಗೆ ಒಳಗಾಗದೆ ರಾಜಶಾಸನಗಳ ನಿರೋಧಕ್ಕೆ ಮಾತ್ರ ಒಳಗಾಗಿರುವನೋ ಅವನೇ ಸ್ವತಂತ್ರನೆಂದು ಧಾರಾಳವಾಗಿ ಹೇಳಬಹುದು. ರಾಜನೀತಿಶಾಸ್ತ್ರಜ್ಞನಾದ ಮ್ಯಾಕಿಕ್ನೆ ಹೇಳಿರುವಂತೆ ಮನುಷ್ಯನ ಜೀವನದ ಹಾದಿಯಲ್ಲಿ ಅನೇಕ ವಿಧದ ನಿರ್ಬಂಧಗಳು ಬರುವುದು ಸ್ವಾಭಾವಿಕ. ಕೆಲವು ಸಂದರ್ಭಗಳಲ್ಲಿ ಮನುಷ್ಯನು ಕಾಲ, ಪ್ರಕೃತಿ ಇವುಗಳ ನಿಯಮಕ್ಕೆ ಅಧೀನವಾಗಿರುತ್ತಿದ್ದೂ, ಇನ್ನು ಕೆಲವು ಸಂದರ್ಭಗಳಲ್ಲಿ ಮತ, ನೀತಿ, ಮೊದಲಾದ ಸಾಮಾಜಿಕ ನಿಯಮಗಳಿಗೆ ಅಧೀನನಾಗಿರುವುದೂ ಸ್ವಾಭಾವಿಕ. "ಮನುಷ್ಯನ ಶರೀರದಲ್ಲಿರುವ ಜೀವಕಣಗಳು ಬೇರೆಯಾಗಬೇಕೆಂದು ಹೇಗೆ ತಪಿಸುವುವೋ ಹಾಗೆ ಸಮಾಜದಲ್ಲಿರುವ ವ್ಯಕ್ತಿಗಳು ಸ್ವತಂತ್ರರಾಗಿರಬೇಕೆಂದು ಇಚ್ಛಿಸುವರಂತೆ. ಇವೆರಡೂ ಸಾಧ್ಯವಾಗಬೇಕಾದರೆ ಜೀವದ ಜೀವತ್ವವೂ ಸಮಾಜದ ಸಮಾಜತ್ವವೂ ಅಳಿಯಬೇಕು. ರಾಜ್ಯವು ಸಮಾಜವನ್ನು ಕ್ರಮಪಡಿಸಬೇಕೆಂದು ಪ್ರಯತ್ನಿಸುತ್ತಿರುವುದೂ, ಮನುಷ್ಯನು ಸ್ವತಂತ್ರನಾಗಿರಬೇಕೆಂದು ಅಪೇಕ್ಷಿಸುತ್ತಿರುವುದೂ ಇವೆರಡೂ ಜೀವನದ ನಿರಂತರವಾದ ಹೋರಾಟ. ಈ ಹೋರಾಟವೇ ಜೀವನದ ರಹಸ್ಯ." ಎಂಬುದಾಗಿ ಮ್ಯಾಕಿಕ್ನೆ ಸ್ವಾತಂತ್ರ್ಯದ ರಹಸ್ಯವನ್ನು ವಿವರಿಸಿರುವನು. ಮುಖ್ಯವಾಗಿ, ಮನುಷ್ಯನು ಸಮಾಜದಲ್ಲಿ ಜೀವಿಸಿಕೊಂಡಿರಬೇಕೆಂದು ಇಚ್ಛಿಸುವುದಾದರೆ ಅವನು ಮೇಲೆ ತಿಳಿಸಿದ ನಿರೋಧಗಳಿಗೆ ತಲೆಬಾಗಿ ನಡೆಯಲು ಸಿದ್ಧನಾಗಿರಬೇಕು. ಮನುಷ್ಯನ ಜೀವನದಲ್ಲಿ ಕಂಡುಬರುವ ನಿರೋಧಗಳಲ್ಲಿ ಕೆಲವು ಕಾಲದ ಅಧೀನ, ಇನ್ನು ಕೆಲವು ಪ್ರಕೃತಿಯ ಅಧೀನ, ಮತ್ತೆ ಕೆಲವು ಸಮಾಜದ ಅಧೀನ, ಇನ್ನು ಕೆಲವು ಸರ್ಕಾರದ ಅಧೀನ. ಕಾಲ, ಪ್ರಕೃತಿ ಇವುಗಳ ಅಧೀನದಲ್ಲಿರುವ ನಿರೋಧಗಳ ಮೇಲೆ ಮನುಷ್ಯನಿಗೆ ಯಾವ ವಿಧವಾದ ಅಧಿಕಾರವೂ ಇಲ್ಲದಿರುವುದರಿಂದಲೂ, ಅವುಗಳು ಸಾಮಾನ್ಯವಾಗಿ ಮನುಷ್ಯನ ಸುಖಕ್ಕಾಗಿರುವುದರಿಂದಲೂ, ಅಂತಹ ನಿರೋಧಗಳ ಮೇಲೆ ವಾದವಿರುವುದಿಲ್ಲ. ಆದರೆ ಸಮಾಜ ಸರ್ಕಾರ ಇವುಗಳ ಆಧಾರದ ಮೇಲೆ ನಿಂತಿರುವ ನಿರೋಧಗಳೆಲ್ಲಾ ಮನುಷ್ಯನ ಸುಖಕ್ಕಾಗಿಯೇ ಇರುವುವು ಎಂದು ಹೇಳುವುದರಲ್ಲಿ ಸ್ವಲ್ಪ ಸಂದೇಹವಿರುವುದರಿಂದ ಅಂತಹ ನಿರೋಧಗಳನ್ನು ಮನುಷ್ಯರು ತಮ್ಮ ವಿವೇಚನೆಯಿಂದ ಪರೀಕ್ಷಿಸಿ ತಮಗೆ ಅಪಾಯಕರವೆಂದು ತೋರಿದ ನಿರೋಧಗಳನ್ನು ಪ್ರತಿಭಟಿಸುವುದು ಅವರ ಕರ್ತವ್ಯ. ಲ್ಯಾಸ್ಕಿ ಹೇಳುವಂತೆ ಯಾವ ನಿರೋಧವು ವ್ಯಕ್ತಿತ್ವದ ಏಳಿಗೆಗೆ ಅಡ್ಡಲಾಗಿ ಬರುವುದೋ ಅಂತಹ ನಿರೋಧವು ನಿಂದ್ಯವು. ವ್ಯಕ್ತಿಯ ಅಭಿವೃದ್ಧಿಗೆ ಪ್ರತಿಬಂಧಕವನ್ನುಂಟುಮಾಡುವ ನಿರೋಧವು ಯಾವ ಕಡೆಯಿಂದ—ಎಂದರೆ ಇತರ ವ್ಯಕ್ತಿ,

ರಾಜ್ಯ, ಸಮಾಜ ಎಂದು—ಬಂದರೂ ಅದನ್ನು ನಿರ್ಭಯದಿಂದ ಎದುರಿಸುವುದು ಮನುಷ್ಯನ ಕರ್ತವ್ಯವೆಂದು ಜೆ. ಎಸ್. ಮಿಲ್ ಹೇಳುವನು.

ಸ್ವಾತಂತ್ರ್ಯವು ಒಂದು ಬಗೆಯ ಸನ್ನಿವೇಶ. ಇದು ಇತರರಿಂದ ಪಡೆಯುವ ಸಾಮಾನ್ಯ ವಸ್ತುವಲ್ಲ. ಇದು ಒಂದು ವಿಧವಾದ ನಿರಂತರವಾದ ಜೀವನದ ಮಾರ್ಗ. ಸ್ವಾತಂತ್ರ್ಯವೆಂದರೆ ವ್ಯಕ್ತಿಯ ಅಭಿವೃದ್ಧಿ, ಸಮಾಜದ ಏಳಿಗೆ ಇವುಗಳಿಗೆ ಸೌಹಾರ್ದವನ್ನು ಕಲ್ಪಿಸುವ ಜೀವನದ ಕ್ರಮ. ವ್ಯಕ್ತಿಗಳಿಗೂ ಸಮಾಜಕ್ಕೂ ಆಗಿಂದಾಗ್ಗೆ ಬರುವ ವೈಷಮ್ಯಗಳನ್ನು ನಿವಾರಣೆ ಮಾಡಿಕೊಂಡು ಸಮಾಜದ ಸೌಹಾರ್ದವನ್ನು ಸಾರ್ಥಕಗೊಳಿಸುವುದು ರಾಜ್ಯದ ಕರ್ತವ್ಯ. ಇಂತಹ ಕಾರ್ಯವು ಒಂದೆರಡು ದಿವಸಗಳಲ್ಲಿಯಾಗಲೀ, ಒಬ್ಬಿಬ್ಬ ವ್ಯಕ್ತಿಯಿಂದಾಗಲೀ ಆಗತಕ್ಕ ಕೆಲಸವಲ್ಲ. ನೆವಿನ್‌ಸನ್ ಎಂಬ ಶಾಸ್ತ್ರಜ್ಞನು ಹೇಳಿರುವಂತೆ ಸ್ವಾತಂತ್ರ್ಯ ಸಾಧನೆಯು ಒಂದು ಬಗೆಯ ಜೀವನದ ಹೋರಾಟ. ಮನುಷ್ಯನ ಜೀವಮಾನ ವಿರುವವರೆಗೂ ಈ ಹೋರಾಟವು ತಪ್ಪುವುದಿಲ್ಲ. ನಿರಂಕುಶ ಪ್ರಭುತ್ವವು ವ್ಯಕ್ತಿಯ ಸ್ವಾತಂತ್ರ್ಯಕ್ಕೆ ಹೇಗೆ ದೊಡ್ಡ ಪ್ರತಿಬಂಧಕವೋ ವ್ಯಕ್ತಿಯ ಸ್ವೇಚ್ಛಾಪ್ರವರ್ತನೆಯೂ ಸಮಾಜಕ್ಕೆ ಪ್ರತಿಬಂಧಕ. ಪ್ರಜೆಯ ಸ್ವಾತಂತ್ರ್ಯವು ಸಾಧ್ಯವಾಗಬೇಕಾದರೆ ಸರ್ಕಾರದ ನಿರೋಧವು ಸ್ವಲ್ಪಮಟ್ಟಿಗೆ ಇದ್ದೇತೀರಬೇಕು. ರಾಜ್ಯದ ಅಧಿಕಾರವು ಶಾಶ್ವತವಾಗಿರಬೇಕಾದರೆ ಅದಕ್ಕೆ ವ್ಯಕ್ತಿಯ ಸ್ವಾತಂತ್ರ್ಯವು ಆಧಾರವಾಗಿರಬೇಕು. ಎಲ್ಲಿ ರಾಜ್ಯದ ಪ್ರಭುತ್ವವು ಬಿಗಿಯೋ ಅಲ್ಲಿ ಪ್ರಜೆಯ ಸ್ವಾತಂತ್ರ್ಯವು ಸ್ಫುಟವಾಗಿ ಕಾಣುವುದು. ಸಮಾಜದಲ್ಲಿ ಜೀವಿಸುವ ಪ್ರಜೆಗಳಿಗೆ ಸ್ವಾತಂತ್ರ್ಯವನ್ನು ಅನುಭವಿಸುವಾಗ ಇತರರಿಂದ ತೊಂದರೆಯುಂಟಾಗುವುದು ಸ್ವಾಭಾವಿಕ. ಇಂತಹ ಸಮಯದಲ್ಲಿ ಸರ್ಕಾರದ ಶಿಕ್ಷೆಯ ಹೆದರಿಕೆಯಿಲ್ಲದಿದ್ದರೆ ವ್ಯಕ್ತಿಯ ಸ್ವಾತಂತ್ರ್ಯವು ಉಳಿಯುವುದು ಕಷ್ಟ. ಆಂಗ್ಲೇಯ ಶಾಸ್ತ್ರಜ್ಞನಾದ ಗ್ರೀನ್ ಹೇಳಿರುವಂತೆ ಒಂದು ವಿಧವಾದ ಔದ್ಧತ್ಯವನ್ನು ತಪ್ಪಿಸಬೇಕಾದರೆ ಮತ್ತೊಂದು ವಿಧವಾದ ಔದ್ಧತ್ಯವು ಅವಶ್ಯಕ. ದುಷ್ಟಪ್ರಜೆಯ ನಿರೋಧವನ್ನು ನಿವಾರಿಸುವುದಕ್ಕೆ ಸರ್ಕಾರದ ನಿರೋಧ ವಲ್ಲದೆ ಮತ್ತಿನ್ನಾವ ಮಾರ್ಗವೂ ಇಲ್ಲ. ಸರ್ಕಾರದ ನಿರೋಧವು ಪ್ರಜೆಯ ಸ್ವಾತಂತ್ರ್ಯಾನುಭವದ ಹಾದಿಯಲ್ಲಿ ಬರುವ ವಿಘ್ನಗಳನ್ನು ನಿವಾರಣೆಮಾಡುವುದ ಕ್ಕಾಗಿರುವುದೇ ಹೊರತು ಸ್ವಾತಂತ್ರ್ಯದ ಹಾದಿಯನ್ನು ಮುಚ್ಚುವುದಕ್ಕಲ್ಲ. ಪ್ರಜೆಗಳೆಲ್ಲರ ಸ್ವಾತಂತ್ರ್ಯವನ್ನು ಸಾರ್ಥಕಗೊಳಿಸುವುದು ಪ್ರಭುತ್ವದ ಲಕ್ಷಣ, ಅದನ್ನು ನಿರರ್ಥಕಮಾಡುವುದಲ್ಲ.

ಪ್ರಜೆಯ ಸ್ವಾತಂತ್ರ್ಯದ ರಕ್ಷಣೆಯ ಸಲುವಾಗಿ ಸರ್ಕಾರವು ನಿರೋಧಕ್ರಮ ವನ್ನು ಆಚರಣೆಗೆ ತರುವುದು ಅವಶ್ಯಕವೆಂದು ಹೇಳಿರುವುದು ಸರಿಯಷ್ಟೆ. ಹೀಗೆ ಹೇಳುವುದರಿಂದ ಸರ್ಕಾರದ ನಿರೋಧಗಳೆಲ್ಲಾ ಒಳ್ಳೆಯದು ಎಂದು ತಿಳಿಯುವುದು ತಪ್ಪು. ಯಾವ ಸಂದರ್ಭಗಳಲ್ಲಿ ಸರ್ಕಾರದ ನಿರೋಧವು ಪ್ರಜೆಗಳ ಸ್ವಾತಂತ್ರ್ಯಕ್ಕೆ

ಕುಂದಕವನ್ನುಂಟುಮಾಡದೆ ವ್ಯಕ್ತಿಯ ಅಭಿವೃದ್ಧಿಗೆ ಸಹಕಾರಿಯಾಗಿರುವುದೋ ಅಂತಹ ನಿರೋಧವು ಅತ್ಯಾವಶ್ಯಕ, ಬೀದಿಯಲ್ಲಿ ಗಾಡಿಯನ್ನು ಹೊಡೆದುಕೊಂಡು ಹೋಗುತ್ತಿರುವ ಪ್ರಜೆಗೆ ಪಕ್ಕದಲ್ಲಿ ಹೋಗಬೇಕೆಂದು ಪೋಲೀಸ್ ಅಧಿಕಾರಿಯು ಎಚ್ಚರಿಕೆಯನ್ನು ಕೊಟ್ಟರೆ ಆ ಪ್ರಜೆಯ ಸ್ವಾತಂತ್ರ್ಯಕ್ಕೆ ಪ್ರತಿಬಂಧಕವುಂಟಾಗುವುದೆಂದು ಭಾವಿಸುವುದು ತಪ್ಪು. ಈ ಸಂದರ್ಭದಲ್ಲಿ ಪ್ರಜೆಯ ಸ್ವಾತಂತ್ರ್ಯವೆಂದರೆ ಇತರರಿಗೆ ತೊಂದರೆಯಾಗದಂತೆ ಗಾಡಿಯನ್ನು ಹೊಡೆಯುವುದು ಎಂದು. ಸ್ವಾತಂತ್ರ್ಯದ ಅರ್ಥವನ್ನು ಪ್ರಜೆಯ ಜ್ಞಾಪಕಕ್ಕೆ ತಂದು ಅವನನ್ನು ಪಕ್ಕದಲ್ಲಿ ಹೋಗಬೇಕೆಂದು ಆಜ್ಞೆಮಾಡುವುದರಿಂದ ಪ್ರಜೆಯ ಸ್ವಾಭಾವಿಕ ಗುಣಗಳ ಬೆಳವಣಿಗೆಗೇನೂ ಕುಂದಕಬರುವುದಿಲ್ಲ. ಯಾವ ನಿರೋಧಗಳಿಂದ ಮನುಷ್ಯನ ಅಜ್ಞಾನ, ಹೀನಸ್ಥಿತಿ ಇವು ಕಡಿಮೆಯಾಗಿ ಅವನ ಬುದ್ಧಿಯೂ ಸಮಾಜಕ್ಕೆ ಸಹಾಯ ಮಾಡಬೇಕೆಂಬ ಉತ್ಸಾಹವೂ ಹೆಚ್ಚುವುದೋ ಅವುಗಳೆಲ್ಲಾ ನ್ಯಾಯವಾದ ನಿರೋಧಗಳು. ಹಾಗಲ್ಲದೆ ಮನುಷ್ಯನು ಆಡುವ ಪ್ರತಿ ಒಂದು ಮಾತಿಗೂ ಅವನು ಮಾಡುವ ಪ್ರತಿ ಒಂದು ಕಾರ್ಯಕ್ಕೂ ಸರ್ಕಾರವಾಗಲೀ ಇತರ ವ್ಯಕ್ತಿಗಳಾಗಲೀ ಅಡ್ಡಿಮಾಡಿದರೆ ಅವನ ಹುಟ್ಟುಗುಣ, ಪ್ರತಿಭಾಶಕ್ತಿ ಇವು ಕಡಿಮೆಯಾಗಿ ಅವನು ಮೂಕಪ್ರಾಣಿಯಂತಾಗುವನು. ದೇಶದ ಪ್ರಜೆಗಳನ್ನು ಮನುಷ್ಯವರ್ಗಕ್ಕೆ ಸೇರಿಸುವುದಕ್ಕೆ ಪ್ರಯತ್ನಪಡದೆಯಿರುವ ರಾಜ್ಯವು ಪ್ರಪಂಚದ ನಾಗರಿಕತೆಗೆ ಶತ್ರುಪ್ರಾಯವಾಗಿರುವುದು ಎಂದು ಧಾರಾಳವಾಗಿ ಹೇಳಬಹುದು.

ತನ್ನ ಇಚ್ಛೆಗೆ ಬಂದಂತೆ ಆಲೋಚಿಸುವುದೂ ಕೆಲಸಮಾಡುವುದೂ ಮನುಷ್ಯನಿಗೆ ಸ್ವಾಭಾವಿಕ. ಇವುಗಳಿಗೆ ಉತ್ತೇಜನವನ್ನು ಕೊಡುವುದರಿಂದ ಮನುಷ್ಯನ ಪ್ರತಿಭಾಶಕ್ತಿ, ಬುದ್ಧಿಶಕ್ತಿ, ಶಾರೀರಕ ಸಾಮರ್ಥ್ಯ ಇವು ಬೆಳೆಯುವುವು. ಮನುಷ್ಯನ ಬೆಳವಣಿಗೆಗೆ ಅವನ ಅಜ್ಞಾನ, ಅಸ್ವಾತಂತ್ರ್ಯ, ದಾರಿದ್ರ್ಯ ಇವುಗಳೇ ದೊಡ್ಡ ಪ್ರತಿಬಂಧಕಗಳು. ಅಜ್ಞಾನದಿಂದ ವಿಷಯ ವಿಚಾರವು ಅವನ ಅನುಭವಕ್ಕೆ ಹೇಗೆ ಬರುವುದಿಲ್ಲವೋ ಹಾಗೆ ಅಸ್ವಾತಂತ್ರ್ಯದಿಂದ ಅವನ ಸ್ವಾಭಾವಿಕ ಯೋಗ್ಯತೆಯು ಪ್ರಕಾಶಕ್ಕೆ ಬರಲು ಅವಕಾಶವಿರುವುದಿಲ್ಲ. ವಿಷಯಜ್ಞಾನ, ಮನುಷ್ಯನ ಯೋಗ್ಯತೆ, ಸಾಹಸ, ಇವುಗಳ ಪ್ರಭಾವವೇ ನಾಗರೀಕತೆಗೆ ಮುಖ್ಯಾಧಾರ. ಆದುದರಿಂದ ಸ್ವಾತಂತ್ರ್ಯವು ಸಮಾಜದ ಇರುವಿಕೆಗೂ, ನಾಗರಿಕತೆಯ ಅಭಿವೃದ್ಧಿಗೂ ಅತ್ಯಂತ ಸಹಕಾರಿಯಾಗಿರುವುದು. ಪ್ರಜೆಗಳಿಗೆ ಸ್ವಾತಂತ್ರ್ಯವನ್ನು ಕೊಡುವುದರಿಂದ ರಾಜಕೀಯ ಜೀವನದಲ್ಲಿಯೂ ರಾಜ್ಯದ ಏಳಿಗೆಯಲ್ಲಿಯೂ ಅವರಿಗೆ ಉತ್ಸಾಹ ಬರುವುದು. ಸ್ವಾತಂತ್ರ್ಯವನ್ನು ಅನುಭವಿಸುವ ಪ್ರಜೆಗಳು ಸರ್ಕಾರದ ದಬ್ಬಾಳಿಕೆಗೆ ಅವಕಾಶವನ್ನು ಕೊಡುವುದಿಲ್ಲ. ರಾಜ್ಯ ಪ್ರಜೆಗಳದು. ರಾಜ್ಯದ ಮೇಲೆ ಪ್ರಜೆಗಳಿಗೂ ಅಧಿಕಾರವಿರುವುದು ಎಂಬ ತಿಳಿವಳಿಕೆಯು ಸಮಾಜದಲ್ಲಿ ಹರಡಿ ಸರ್ಕಾರ ಪ್ರಜೆ ಇವುಗಳಲ್ಲಿ ಸೌಹಾರ್ದ ಹುಟ್ಟುವುದು. ಈ ಸ್ವಾತಂತ್ರ್ಯ ತತ್ವವು ಸಮಾಜದಲ್ಲಿ

ಬೇರೂರುವುದರಿಂದ ರಾಜ್ಯಾಧಿಕಾರವನ್ನು ಪ್ರಜೆ, ಸಂಸ್ಥೆ ಇವುಗಳಲ್ಲಿ ಹಂಚು ವುದಕ್ಕೂ ಪ್ರಜೆಗಳಿಗೆ ರಾಜ್ಯಾಧಿಕಾರದಲ್ಲಿ ಶಿಕ್ಷಣೆಯನ್ನು ಕೊಡುವುದಕ್ಕೂ ಅನು ಕೂಲ ದೊರೆಯುವುದು. ಪ್ರಜೆಗಳಿಗೆ ಸರ್ಕಾರದಲ್ಲಿ ನಂಬಿಕೆಯನ್ನುಂಟುಮಾಡು ವುದಕ್ಕೆ ಅವರು ಅನುಭವಿಸುವ ಸ್ವಾತಂತ್ರ್ಯವೂ, ಅವರು ಸಾಕ್ಷಾತ್ತಾಗಿ ಮಾಡುವ ರಾಜಕಾರ್ಯಗಳೂ ಆಧಾರಗಳಾಗುವುವು. ವ್ಯಕ್ತಿ ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಇವುಗಳಿಗೆ ಅಭಾವವಿರುವ ರಾಜ್ಯಗಳಲ್ಲಿ ವ್ಯಕ್ತಿ ಗೌರವ, ಅವನ ಸಹಕಾರ ಇವು ಸರ್ಕಾರಕ್ಕೆ ದೊರೆಯದೇ ಅಂತಹ ರಾಜ್ಯದ ಸೈನ್ಯವು ಅಸಂಸ್ಕೃತವಾದ ಜನದ ಗುಂಪಿನಂತೆಯೂ, ಅದರ ನಾವೆಯು ಕೊಳೆತ ಮರದ ತುಂಡುಗಳಂತೆಯೂ ಆಗುವುವು ಎಂದು ಆಂಗ್ಲೇಯ ಶಾಸ್ತ್ರಜ್ಞನಾದ ಬರ್ಕನು ಹೇಳಿರುವನು.

ವ್ಯಕ್ತಿಯ ಅಭಿವೃದ್ಧಿ, ಅವನ ಸಜ್ಜೀವನ, ನಾಗರಿಕತೆಯ ಸಂಪತ್ತು, ಇವುಗಳಿಗೆ ಮೂಲಾಧಾರವಾಗಿರುವ ಸ್ವಾತಂತ್ರ್ಯವು ಈ ಕಾಲದಲ್ಲಿ ಬಂದದ್ದಲ್ಲ. ಇದು ಬಹುಕಾಲದಿಂದ ಪ್ರಪಂಚದ ಅನೇಕ ಭಾಗಗಳಲ್ಲಿ ನೆಲಸಿ ನಾಗರಿಕತೆಗೆ ಬೆಂಬಲವನ್ನು ಕೊಟ್ಟಿರುವುದು. ಬಹುಕಾಲದ ಹಿಂದೆ ಇದ್ದ ನಮ್ಮ ಪೂರ್ವಿಕರಾದ ಆರ್ಯರ ಸಮಾಜವು ಸ್ವಾತಂತ್ರ್ಯಕ್ಕೆ ಮಾತೃಸ್ಥಾನವಾಗಿತ್ತೆಂದೂ ಅವರು ಇತರರ ಅಧಿಕಾರ, ಸರ್ಕಾರದ ದಬ್ಬಾಳಿಕೆ ಇವುಗಳನ್ನು ನಿಂದಿಸುತ್ತಿದ್ದರೆಂದೂ, ಅವರಲ್ಲಿ ಸಾರ್ವಜನಿಕ ದೃಷ್ಟಿಯು ಹೆಚ್ಚಾಗಿ ಇದ್ದಿತೆಂದೂ, ಲಾರ್ಡ್ ಆಕ್ಟನ್ನನು ತಿಳಿಸುವನು. ಈ ಸ್ವಾತಂತ್ರ್ಯವು ಕಾರಣಾಂತರಗಳಿಂದ—ಎಂದರೆ ಜನರ ಅಜ್ಞಾನ, ಮೌಢ್ಯ ಯುದ್ಧಾಕಾಂಕ್ಷೆ, ಅಧಿಕಾರಾಪೇಕ್ಷೆ, ದಾರಿದ್ರ್ಯ ಇವುಗಳು ಎಂದು—ಇವರ ತರುವಾಯ ಬಂದ ಸಮಾಜಗಳಲ್ಲಿ ನೆಲಸಿರಲಾರದೆ ಲಯವಾಗುತ್ತಾ ಬಂದಿತು. ಆದರೆ ಪೂರ್ವಕಾಲದ ಆಥೆನ್ಸಿನ ಜನರು ಸಾಹಸ, ಪ್ರತಿಭಾಶಕ್ತಿ, ದೇಶಾಭಿಮಾನ ಇವುಗಳಲ್ಲಿ ಮುಂದಾಳುಗಳಾಗಿದ್ದುದರಿಂದ ಅವರು ಸ್ವಾತಂತ್ರ್ಯಕ್ಕೆ ಜೀವಕಳೆಯನ್ನು ತುಂಬಿ ತಮ್ಮ ದೇಶದಲ್ಲಿ ಅದು ಸ್ವಲ್ಪಕಾಲ ನೆಲಸುವಂತೆ ಮಾಡಿದರು. ಆಧುನಿಕ ಪಾಶ್ಚಾತ್ಯರು ಈಗಲೂ ಕೂಡ ಅನುಭವಿಸುತ್ತಿರುವ ರಾಜಕೀಯ, ಸಾಮಾಜಿಕ, ಸಾಹಿತ್ಯ, ಕಲಾ ಇವುಗಳ ಸಂಬಂಧವಾದ ನಾಗರಿಕತೆಯ ಅಂಶಗಳು ಆ ಆಥೆನ್ಸಿನ ಜನಗಳು ಅನುಭವಿಸಿದ ಸ್ವಾತಂತ್ರ್ಯದ ಫಲವೆನ್ನಬಹುದು. ಆ ಕಾಲದ ಆಥೆನ್ಸಿನ ಪ್ರಜೆಗಳು ಸ್ವಾತಂತ್ರ್ಯಾಭಿಮಾನಿಗಳಾಗಿದ್ದುದರಿಂದ ತಮ್ಮ ಕೆಲಸಗಳನ್ನು ಎಷ್ಟು ಉತ್ಸಾಹದಿಂದ ಮಾಡುತ್ತಿದ್ದರೋ ಅದೇ ಉತ್ಸಾಹದಿಂದ ಸಮಾಜದ ಕೆಲಸಗಳನ್ನು ಅವರು ಮಾಡುತ್ತಿದ್ದರು. ತಮ್ಮ ದೇಶದ ರಾಜ್ಯಾಧಿಕಾರವು ತಮ್ಮ ಜನಗಳ ಕೈಯಲ್ಲಿಯೇ ಇರುವುದು ಮೇಲೆಂದೂ ಮತ್ತೊಬ್ಬರ ಅಧಿಕಾರಕ್ಕೆ ಅಡಿಯಾಳಾಗಿರ ಬಾರದೆಂದೂ ಇವರು ಸ್ಥಿರಮನಸ್ಸು ಮಾಡಿದ್ದರಿಂದ ಅವರು ತಮ್ಮ ದೇಶದಲ್ಲಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿದರು. ಇದರಿಂದ ಪ್ರಾಪ್ತವಾದ ಸ್ವಾತಂತ್ರ್ಯದ ಸನ್ನಿವೇಶವು ಸಾಹಿತ್ಯ, ಕಲೆ, ಶಿಲ್ಪವಿದ್ಯೆ, ವಿಜ್ಞಾನ, ರಾಜನೀತಿ ಇವೇ

ಮೊದಲಾದವುಗಳಿಗೆ ಹೆಚ್ಚು ಪ್ರೋತ್ಸಾಹವನ್ನು ಕೊಟ್ಟು ಅಥೆನ್ಸನ್ನು ಇಡೀ ಗ್ರೀಕ್ ದೇಶಕ್ಕೆ ಒಂದು ದೊಡ್ಡ ವಿಶ್ವವಿದ್ಯಾನಿಲಯವನ್ನಾಗಿ ಮಾಡಿತು. ಈ ಸ್ವಾತಂತ್ರ್ಯದಿಂದ ಅಥೆನ್ಸಿನ ಜನಗಳಿಗೆ ಪ್ರಯೋಜನವಾದರೂ ಅಲ್ಲಿ ಇದು ಬಹುಕಾಲ ನಿಲ್ಲಲಿಲ್ಲ. ಅಥೆನ್ಸಿನ ಜನರ ಸ್ವಾರ್ಥ, ಚಕ್ರಾಧಿಪತ್ಯವನ್ನು ಉಳಿಸಿಕೊಂಡಿರಬೇಕೆಂಬ ಆಕಾಂಕ್ಷೆ, ಸಾಮಾನ್ಯ ಜನಗಳ ದಾರಿದ್ರ್ಯ, ರೋಗ, ಅಂತಃಕಲಹ ಇವುಗಳಿಂದ ಅವರ ಸ್ವಾತಂತ್ರ್ಯವು ಕೊನೆಗಂಡಿತು.

ಈ ಪ್ರಕಾರ ತೊಡಕಿಗೆ ಸಿಕ್ಕಿದ್ದ ಸ್ವಾತಂತ್ರ್ಯವು ರೋಮ್ ಜನಗಳ ಕಾಲದಲ್ಲಿ ಅವರ ಯುದ್ಧಾಕಾಂಕ್ಷೆಯಿಂದಲೂ, ವ್ಯಾವಹಾರಿಕ ಬುದ್ಧಿಯಿಂದಲೂ, ಸನ್ನಿವೇಶದ ಬಲದಿಂದಲೂ ಲಯಹೊಂದುತ್ತಾ ಬಂದಿತು. ವ್ಯಕ್ತಿತ್ವಕ್ಕಿಂತ ಚಕ್ರಾಧಿಪತ್ಯವು ದೊಡ್ಡದೆಂದೂ, ಅಭಿವೃದ್ಧಿಗಿಂತ ಶಾಂತಿಯು ಮುಖ್ಯವೆಂದೂ, ನಂಬಿದ್ದ ರೋಮ್ ಜನರಿಂದ ಸ್ವಾತಂತ್ರ್ಯಕ್ಕೆ ಪ್ರೋತ್ಸಾಹ ದೊರೆಯಲಿಲ್ಲ. ಮಧ್ಯಮ ಯುಗದಲ್ಲಿ ರಾಜತ್ವ, ರಾಜ್ಯದ ಶಾಂತಿ, ಐಕಮತ್ಯ, ಸೌಹಾರ್ದ ಇವುಗಳಿಗೆ ಅಭಾವವಿದ್ದುದರಿಂದಲೂ, ಪ್ರಜೆಯ ಹಕ್ಕುಗಳಿಗಿಂತ ಅವನ ಕರ್ತವ್ಯಗಳು ಹೆಚ್ಚೆಂಬ ಸಂಪ್ರದಾಯವಿದ್ದುದರಿಂದಲೂ ಸ್ವಾತಂತ್ರ್ಯವು ಮುಂದುವರಿಯುವುದಕ್ಕೆ ಅವಕಾಶವನ್ನು ಹೊಂದಲಿಲ್ಲ. ೧೬ನೆಯ ಶತಮಾನದಿಂದೀಚೆಗೆ ವ್ಯಕ್ತಿಗೌರವವು ಆವಶ್ಯಕವೆಂಬ ತತ್ವ, ದಬ್ಬಾಳಿಕೆಯನ್ನು ಪ್ರತಿಭಟಿಸುವ ಅಧಿಕಾರವು ಪ್ರಜೆಗಳಿಗೆ ಸೇರಿದ್ದು ಎಂಬ ಅಭಿಪ್ರಾಯ, ಇವುಗಳು ಪ್ರಸಿದ್ಧಿಗೆ ಬಂದುವು. ಆದರೆ ಅನೇಕ ರಾಜ್ಯಗಳು ಒಡೆದು ಹೋದ ಸಂಸಾರಗಳಂತೆ ಭಿನ್ನವಾಗಿದ್ದುದರಿಂದಲೂ, ರಾಜರ ಸರ್ವಾಧಿಕಾರವು ಆವಶ್ಯಕವಾಗಿದ್ದುದರಿಂದಲೂ, ಸ್ವಾತಂತ್ರ್ಯಕ್ಕೆ ಸ್ಥಾನ ದೊರೆಯಲಿಲ್ಲ. ಸಾಮಾಜಿಕ ನಿಯಮದ ಸಿದ್ಧಾಂತವು ಪ್ರಾಬಲ್ಯಕ್ಕೆ ಬಂದಲಾಗಾಯತಿನಿಂದ—ಎಂದರೆ ೧೭-೧೮ನೆಯ ಶತಮಾನದಿಂದ—ಸ್ವಾತಂತ್ರ್ಯಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆಯಲಾರಂಭಿಸಿತು. ಇಂಗ್ಲೀಯ ಶಾಸ್ತ್ರಜ್ಞನಾದ ಲಾಕನು ವ್ಯಕ್ತಿಸ್ವಾತಂತ್ರ್ಯಕ್ಕೆ ಬಲವಾದ ಅಸ್ತಿಭಾರವನ್ನು ಹಾಕಿದನು. ಫ್ರಾನ್ಸಿನ ಕ್ರಾಂತಿಯು ಮುಗಿಯುವುದರೊಳಗಾಗಿ ಲಾಕನು ಹಾಕಿದ ಅಸ್ತಿಭಾರದ ಮೇಲೆ ರೂಸೋ ಮೊದಲಾದ ಶಾಸ್ತ್ರಜ್ಞರು ಕಟ್ಟಡವನ್ನು ಕಟ್ಟಿದರು. ಸ್ವಾತಂತ್ರ್ಯದ ಕಟ್ಟಡಕ್ಕೆ ಬಹಳವಾಗಿ ಸಹಾಯಮಾಡಿದವರಲ್ಲಿ ಇಂಗ್ಲೀಯ ಶಾಸ್ತ್ರಜ್ಞರಾದ ಗ್ರೀನ್, ಬ್ರಾಡ್ಲಿ, ಮೊದಲಾದ ನಿರ್ದುಷ್ಟ ರಾಜನೀತಿ ಸಿದ್ಧಾಂತಿಗಳು. ಬೆಂತೆಂ, ಮಿಲ್ ಮೊದಲಾದ ಪ್ರಜಾಹಿತಕಾರಿ ಸಿದ್ಧಾಂತಿಗಳು ಮುಖ್ಯರಾದವರು. ಜೆ. ಎಸ್. ಮಿಲ್ಲನು ವ್ಯಕ್ತಿಗೆ ಆಲೋಚಿಸುವುದಕ್ಕೂ, ಚರ್ಚೆ ಮಾಡುವುದಕ್ಕೂ, ಮಾತಾಡುವುದಕ್ಕೂ, ಬರೆಯುವುದಕ್ಕೂ ಸ್ವಾತಂತ್ರ್ಯವಿರಬೇಕೆಂದೂ, ರಾಜಕೀಯ, ಸಾಮಾಜಿಕ, ಮತ ಇವುಗಳ ಸಂಬಂಧವಾದ ನಿರೋಧಗಳನ್ನೆಲ್ಲಾ ಕಡಿಮೆಮಾಡಿದ ಹೊರತು ಸ್ವಾತಂತ್ರ್ಯವು ಸಾಧ್ಯವಾಗುವುದಿಲ್ಲವೆಂದೂ, ವ್ಯಕ್ತಿಸ್ವಾತಂತ್ರ್ಯಕ್ಕೂ ಸಮಾಜದ ಏಳಿಗೆಗೂ ವೈಷಮ್ಯವಿಲ್ಲವೆಂದೂ,

'ಸ್ವಾತಂತ್ರ್ಯ' ಎಂಬ ಗ್ರಂಥದಲ್ಲಿ ಸ್ವಾತಂತ್ರ್ಯದ ತತ್ವವನ್ನು ಬಹಳಮಟ್ಟಿಗೆ ಪುಷ್ಟೀಕರಿಸಿರುವನು.

## ಸ್ವಾತಂತ್ರ್ಯದ ವಿಧಗಳು

ಮನುಷ್ಯನ ಮಾನ, ಪ್ರಾಣ, ಐಶ್ವರ್ಯ ಇವುಗಳ ರಕ್ಷಣೆಯೇ ಪೌರತ್ವ ಸ್ವಾತಂತ್ರ್ಯದ ಅರ್ಥ. ಇವುಗಳನ್ನು ದುಷ್ಟ ಪ್ರಜೆಗಳಿಂದ ರಕ್ಷಿಸಿ ಪ್ರತಿ ಒಬ್ಬ ಪ್ರಜೆಗೆ ಅತ್ಯಾವಶ್ಯಕವಾಗಿರುವ ಪೌರತ್ವದ ಸ್ವಾತಂತ್ರ್ಯವನ್ನು ಎಲ್ಲರಿಗೂ ಕೊಟ್ಟು ಅವರನ್ನು ಕಾಪಾಡುವುದು ರಾಜ್ಯದ ಪ್ರಥಮ ಕರ್ತವ್ಯ. ಈ ಸ್ವಾತಂತ್ರ್ಯವು ಹಕ್ಕುಗಳ ಮೂಲಕವೇ ಸಾಧ್ಯವಾಗುವುದರಿಂದ ಇದನ್ನು ಪಕ್ಷಪಾತವಿಲ್ಲದೆ ಸಮಸ್ತ ಪ್ರಜೆಗಳಿಗೆ ಕೊಡುವುದು ರಾಜಧರ್ಮ. ಮನುಷ್ಯನ ಮಾನ, ಪ್ರಾಣ, ಐಶ್ವರ್ಯ ಇವುಗಳ ರಕ್ಷಣೆಗಾಗಿ ಅನೇಕ ಶಾಸನಗಳನ್ನು ಏಳಿಗೆಯಲ್ಲಿರುವ ರಾಜ್ಯಗಳು ಆಚರಣೆಗೆ ತಂದಿರುವುವು. ಇಂತಹ ಅನುಕೂಲಗಳು ದುಷ್ಟರ ಬಾಧೆಗೊಳಗಾಗದೆ ಇರುವುದಕ್ಕಾಗಿ ಪೋಲೀಸ್ ಸಿಬ್ಬಂದಿಯೂ, ನ್ಯಾಯಸ್ಥಾನಗಳೂ ಏರ್ಪಟ್ಟಿರುವುವು. ಮನುಷ್ಯನಿಗೆ ಅತ್ಯಾವಶ್ಯಕವಾಗಿರುವ ಆತ್ಮರಕ್ಷಣೆಗಾಗಿ ಅವನಿಗೆ ಬಂದೂಕ ಮೊದಲಾದ ಆಯುಧಗಳನ್ನು ಉಪಯೋಗಿಸುವ ಹಕ್ಕುಗಳನ್ನು ಅನೇಕ ಪಾಶ್ಚಾತ್ಯ ರಾಜ್ಯಗಳು ಕೊಟ್ಟಿರುವುವು. ಮನುಷ್ಯನ ಇರುವಿಕೆಗೆ ಈ ಬಗೆಯ ಸ್ವಾತಂತ್ರ್ಯವು ಆವಶ್ಯಕವಾಗಿರುವುದರಿಂದ ಇದನ್ನು ಎಲ್ಲ ಪ್ರಜೆಗಳಿಗೂ ಕೊಡುವುದು ರಾಜ್ಯಗಳ ಪ್ರಥಮ ಕರ್ತವ್ಯವೆಂದೂ ಈ ಅನುಕೂಲಗಳನ್ನೂ ಕೂಡ ಕೊಡದ ರಾಜ್ಯವು ಬಹಳ ಹೀನ ದೆಶೆಯಲ್ಲಿರುವುದೆಂದೂ ಈ ವಾದದಿಂದ ವ್ಯಕ್ತವಾಗುವುದು.

## ರಾಜಕೀಯ ಸ್ವಾತಂತ್ರ್ಯ

ಮನುಷ್ಯನು ಬದುಕಿರುವುದೊಂದೇ ಮುಖ್ಯವಾಗಿದ್ದಲ್ಲಿ ಪೌರಜನ ಸ್ವಾತಂತ್ರ್ಯವೇ ಸಾಕಾಗಿರುತ್ತಿತ್ತು. ಸಮಾಜದಿಂದ ಮನುಷ್ಯನಿಗೆ ಉಂಟಾಗುವ ಸಹಾಯಗಳಿಗೆ ಪ್ರತ್ಯುಪಕಾರವನ್ನು ಮಾಡುವುದು ಅವನ ಧರ್ಮ. ದೇಶ ಸೇವೆಯೇ ಇಂತಹ ಪ್ರತ್ಯುಪಕಾರದ ಉದಾಹರಣೆ. ಯಾವ ರಾಜ್ಯದಲ್ಲಿ ಪ್ರಜೆಗಳು ರಾಜ್ಯಾಧಿಕಾರಗಳಲ್ಲಿ ಭಾಗಿಗಳಾಗಿ ಅಂತಹ ಕಾರ್ಯಗಳಲ್ಲಿ ತಮ್ಮ ಉತ್ಸಾಹವನ್ನು ತೋರಿಸಿ ಕೆಲಸಮಾಡುತ್ತಿರುವರೋ ಅಂತಹ ರಾಜ್ಯದಲ್ಲಿ ಪ್ರಜೆಗಳಿಗೆ ರಾಜಕೀಯ ಸ್ವಾತಂತ್ರ್ಯವಿರುವುದೆಂದು ಹೇಳಬಹುದು. ಪ್ರಜಾಪ್ರತಿನಿಧಿ ಸಭೆಗೆ ತಮ್ಮ ಪ್ರತಿನಿಧಿಗಳನ್ನು ಚುನಾಯಿಸುವುದೂ ಅಥವಾ ತಾವೇ ಉಮೇದುವಾರರಾಗಿ ನಿಲ್ಲುವುದೂ, ಪ್ರತಿನಿಧಿಗಳಿಗೆ ರಾಜ್ಯದ ಆಡಳಿತದ ವಿಷಯಗಳಲ್ಲಿ ತಮ್ಮ ಅಭಿಪ್ರಾಯವನ್ನು ಸೂಚಿಸುವುದೂ, ಅಸಮರ್ಪಕವಾಗಿ ಕೆಲಸಮಾಡುತ್ತಿರುವ ಪ್ರತಿನಿಧಿಗಳನ್ನು ಅವರ ಕೆಲಸದಿಂದ ತಪ್ಪಿಸಿ ಅವರ ಸ್ಥಳಕ್ಕೆ ಯೋಗ್ಯರಾದ ಇತರ ಪ್ರತಿನಿಧಿಗಳನ್ನು ಚುನಾಯಿಸುವುದೂ

ರಾಜಕೀಯ ಸ್ವಾತಂತ್ರ್ಯದ ಮುಖ್ಯ ಕುರುಹುಗಳು. ಸಮಾಜದ ಕ್ಷೇಮಕ್ಕಾಗಿರುವ ರಾಜ್ಯಾಧಿಕಾರವನ್ನು ಯೋಗ್ಯರಾದ ಪ್ರಜೆಗಳಿಗೆ ಒಪ್ಪಿಸಿ ಅವರಿಗೆ ಆ ಕೆಲಸಗಳಲ್ಲಿ ಉತ್ಸಾಹವನ್ನೂ, ಜವಾಬ್ದಾರಿಯನ್ನೂ ಹುಟ್ಟಿಸಿ ಅವರಿಂದ ಕೆಲಸಗಳನ್ನು ಮಾಡಿಸುವುದಕ್ಕಿಂತ ಹೆಚ್ಚು ತೃಪ್ತಿಕರವಾದ ರಾಜನೀತಿ ಮತ್ತಾವುದೂ ಇಲ್ಲ.

ರಾಜಕೀಯ ಸ್ವಾತಂತ್ರ್ಯವು ಎಲ್ಲರ ಅಭಿವೃದ್ಧಿಗೂ ಅತ್ಯಾವಶ್ಯಕವಾಗಿದ್ದರೂ ವಿವೇಚನೆಯಿಲ್ಲದೆ ಇದನ್ನು ಎಲ್ಲರಿಗೂ ಕೊಡುವುದು ಅನುಚಿತವೆಂದು ಕೆಲವರು ಅಭಿಪ್ರಾಯಪಡುವರು. ಏಕೆಂದರೆ ಈ ಸ್ವಾತಂತ್ರ್ಯವನ್ನು ಅನುಭವಿಸುವುದಕ್ಕೆ ತಕ್ಕ ಯೋಗ್ಯತೆಯಿಲ್ಲದ ಜನರಿಗೆ ಅಧಿಕಾರವನ್ನು ಕೊಟ್ಟು ರಾಜ್ಯಭಾರ ಕ್ರಮಕ್ಕೆ ಭಂಗವನ್ನುಂಟುಮಾಡುವುದು ಅನುಚಿತ. ಪ್ರಜೆಗಳ ಯೋಗ್ಯತೆಗೆ ತಕ್ಕ ರಾಜ್ಯಾಧಿಕಾರವನ್ನು ಕೊಡುವುದು ರಾಜನೀತಿ ಎಂದೂ, ರಾಜಕಾರ್ಯವು ಕುಶಲ ವಿದ್ಯೆಗಳಿಗೆ ಸಮಾನವೆಂದೂ, ಸಂಗೀತ ಶಾಸ್ತ್ರವನ್ನಾಗಲೀ ಶಿಲ್ಪಿ ಶಾಸ್ತ್ರವನ್ನಾಗಲಿ ಕಲಿಯುವುದಕ್ಕೆ ಹೇಗೆ ತುಂಬಾ ಶ್ರಮ, ಕಾಲ ಇವುಗಳು ಆವಶ್ಯಕವೋ, ಹಾಗೆಯೇ ರಾಜ್ಯಾಧಿಕಾರಗಳಲ್ಲಿ ಪರಿಶ್ರಮ ಬರುವುದಕ್ಕೆ ಹೆಚ್ಚು ವ್ಯವಸಾಯವೂ ಆವಶ್ಯಕವೆಂದೂ, ರಾಜನೀತಿಯಲ್ಲಿ ಪಾಂಡಿತ್ಯವನ್ನು ಹೊಂದಿರುವವರೇ ರಾಜ್ಯದ ಆಡಳಿತವನ್ನು ವಹಿಸಬೇಕೆಂದೂ ಪ್ಲೇಟೋ ಅಭಿಪ್ರಾಯವನ್ನು ಕೊಟ್ಟಿರುವನು. ಪ್ಲೇಟೋವಿನ ತತ್ವವನ್ನು ಅನುಸರಿಸುವುದರಿಂದ ಶ್ರೀಮಂತರ ದಬ್ಬಾಳಿಕೆಗೂ ಸಾಧಾರಣ ಪ್ರಜೆಗಳ ಅನಾದರಣೆಗೂ ಅವಕಾಶಬರುವುದೆಂದು ಅರಿಸ್ಟಾಟಲ್ ಪ್ರತಿವಾದ ಮಾಡಿರುವನು. ಅರಿಸ್ಟಾಟಲ್ ಈ ವಿಷಯದಲ್ಲಿ ಕೊಟ್ಟಿರುವ ಅಭಿಪ್ರಾಯವೇನೆಂದರೆ "ಪ್ರಜೆಗಳು ಒಬ್ಬೊಬ್ಬರೇ ರಾಜ್ಯಾಧಿಕಾರಗಳನ್ನು ನಡೆಯಿಸಲು ಅಸಮರ್ಥರಾಗಿರಬಹುದು. ಆದರೆ ಒಟ್ಟು ಪ್ರಜೆಗಳು ಅಧಿಕಾರಿಗಳನ್ನು ಚುನಾಯಿಸುವುದಕ್ಕೂ ರಾಜ್ಯಭಾರದ ಮುಖ್ಯ ವಿಷಯಗಳಿಗೆ ತಮ್ಮ ಸಮ್ಮತಿಯನ್ನು ಕೊಡುವುದಕ್ಕೂ ತಕ್ಕ ಯೋಗ್ಯತೆಯನ್ನು ಪಡೆದಿರುವರು, ಎಂದು. ಆದುದರಿಂದ ಈ ವಿಶೇಷಾರ್ಥದಲ್ಲಿ ಪ್ರಜೆಗಳನ್ನು ರಾಜ್ಯಾಡಳಿತದ ಭಾಗಿಗಳೆಂದು ಕರೆಯುವುದು ಸರಿ. ಸಮಾಜದಲ್ಲಿ ಬುದ್ಧಿಶಾಲಿಗಳಾಗಿಯೂ ಗಣ್ಯರಾಗಿಯೂ ಇರುವ ಪ್ರಜೆಗಳಿಗೆ ಸಾಕ್ಷಾತ್ತಾಗಿ ರಾಜ್ಯಕಾರ್ಯಗಳನ್ನು ವಹಿಸುವ ಅಧಿಕಾರ, ಸಾಧಾರಣ ಪ್ರಜೆಗಳಿಗೆ ತಮ್ಮ ಪ್ರತಿನಿಧಿಗಳು ಮಾಡುವ ರಾಜ್ಯಕಾರ್ಯಗಳಿಗೆ ಸಮ್ಮತಿಯನ್ನು ಕೊಟ್ಟು ತಮ್ಮ ಸಹಕಾರವನ್ನು ತೋರಿಸುವುದಕ್ಕೆ ತಕ್ಕ ಅವಕಾಶ ಕೊಡುವುದು ಇವೆರಡೂ ಪ್ರಜಾಪ್ರಭುತ್ವದ ತತ್ವಕ್ಕೆ ಅನುಗುಣವಾಗಿರುವುವು.

ಒಟ್ಟಿನಲ್ಲಿ ಪ್ರಜಾಪ್ರಭುತ್ವ ತತ್ವವು ಅಭಿವೃದ್ಧಿಗೆ ಬಂದಹಾಗೆಲ್ಲ ಸಾಧಾರಣ ಪ್ರಜೆಗಳು ರಾಜಕೀಯ ಸ್ವಾತಂತ್ರ್ಯವನ್ನು ಅನುಭವಿಸುವ ಯೋಗ್ಯತೆಯನ್ನು ಹೊಂದಿರುವರು ಎಂಬ ಅಭಿಪ್ರಾಯವು ರೂಢಿಗೆ ಬರುತ್ತಿರುವುದು—ಎಂದರೆ ರಾಜಕೀಯ ಸಂಬಂಧವಾದ ಹಕ್ಕುಗಳನ್ನು ಪಡೆಯುವ ಪ್ರಜೆಗಳಿಗೆ ಐಶ್ವರ್ಯ, ವಿದ್ಯೆ

ಇವುಗಳಲ್ಲಿ ವಿಶೇಷ ಯೋಗ್ಯತೆ ಇದ್ದೇತೀರಬೇಕೆಂಬ ಹಿಂದಿನ ಕಾಲದ ನಿರ್ಬಂಧಗಳು ಬಹಳ ಕಡಿಮೆಯಾಗಿರುವುವು ಎಂದು—ಅರ್ಥ. ಈ ಕಾರಣಗಳಿಂದ ರಾಜ್ಯದಲ್ಲಿರುವ ಸಮಸ್ತ ಪ್ರಜೆಗಳಿಗೂ—ಎಂದರೆ ಬಾಲಕರು, ಯುವಕರು, ಖೈದಿಗಳು, ಅಪರಾಧಿಗಳು, ಪರಾಧೀನದಲ್ಲಿರುವ ಸ್ತ್ರೀಯರು, ಇವರುಗಳನ್ನು ಹೊರತು— ರಾಜಕೀಯ ಸ್ವಾತಂತ್ರ್ಯವು ಏಳಿಗೆಯಲ್ಲಿರುವ ಅನೇಕ ರಾಜ್ಯಗಳಲ್ಲಿ ದೊರೆತಿರುವುದು. ರಾಜಕೀಯ ಸ್ವಾತಂತ್ರ್ಯವನ್ನು ಪ್ರಜೆಗಳು ಪಡೆಯುವುದು ಈ ಕಾಲದಲ್ಲಿ ಅಷ್ಟು ಕಷ್ಟವಲ್ಲ. ಆದರೆ ಈ ಸ್ವಾತಂತ್ರ್ಯವನ್ನು ಸರ್ವದಾ ಅನುಭವಿಸುವುದಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸುವುದು ಕಷ್ಟ. ಪ್ರಜೆಗಳು ರಾಜ್ಯಾಧಿಕಾರವನ್ನು ನಡೆಯಿಸುವುದಕ್ಕೆ ಮುಂಚೆ ದೇಶದ ನಿಜಸ್ಥಿತಿಯನ್ನೂ ಸಮಾಜದ ಕಷ್ಟ ಸುಖಗಳನ್ನೂ ಯಥಾರ್ಥವಾಗಿ ತಿಳಿಯುವುದು ಅತ್ಯಾವಶ್ಯಕ. ಇಂತಹ ವಿಷಯಗಳನ್ನು ಪ್ರಜೆಗಳಿಗೆ ತಿಳಿಸುವುದಕ್ಕೆ ವರ್ತಮಾನಪತ್ರಿಕೆ, ಪುಸ್ತಕ ಇವುಗಳು ಮುಖ್ಯ ಉಪಕರಣಗಳು. ಈ ಕಾಲದ ರಾಜಕಾರ್ಯಗಳು ನಂಬಿಕೆಯ ಆಧಾರದ ಮೇಲೆ ನಡೆಯಬೇಕೇ ಹೊರತು ಅಧಿಕಾರಿಗಳ ಸ್ವಂತ ಅನುಭವದಿಂದಲ್ಲ. ಏಕೆಂದರೆ ಈಗಿನ ಕಾಲದ ರಾಜ್ಯಗಳು ವಿಸ್ತೀರ್ಣ, ಈ ಜನಸಂಖ್ಯೆ ವಿಷಯಗಳಲ್ಲಿ ಅಸಾಧಾರಣವಾದ ರಾಷ್ಟ್ರಗಳಾಗಿರುವುವು. ವರ್ತಮಾನ ಪತ್ರಿಕೆ, ಪುಸ್ತಕ, ಉಪನ್ಯಾಸ ಇವುಗಳು ಜನಗಳ ವಾಸ್ತವವಾದ ಸ್ಥಿತಿಯನ್ನು ವ್ಯಕ್ತಪಡಿಸದಿದ್ದರೆ ಇವುಗಳ ಆಧಾರದ ಮೇಲೆ ನಿಂತಿರುವ ಸರ್ಕಾರದ ಕೆಲಸಗಳು ನಿಷ್ಫಲವಾಗುವುವು. ರಾಜಕೀಯ ಸ್ವಾತಂತ್ರ್ಯವನ್ನು ಪಡೆಯಬೇಕೆಂದು ಪ್ರಯತ್ನಿಸುತ್ತಿರುವ ಪ್ರಜೆಗಳೂ, ಇಂತಹ ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವ ಪ್ರಜೆಗಳೂ, ಮೇಲೆ ತಿಳಿಸಿದ ವಿಷಯಗಳನ್ನು ನೆನಪಿನಲ್ಲಿಟ್ಟು ರಾಜ್ಯಕಾರ್ಯಗಳಲ್ಲಿ ಪ್ರವರ್ತಿಸುವುದು ಸಮಾಜಕ್ಕೆ ಶ್ರೇಯಸ್ಕರ.

## ವೈಯಕ್ತಿಕ ಸ್ವಾತಂತ್ರ್ಯ

ಯಾವ ಸಂದರ್ಭಗಳಲ್ಲಿ ಮನುಷ್ಯನು ತನ್ನ ಇಚ್ಛೆಗೆ ಬಂದಂತೆ ನಡೆಯುವುದರಿಂದ ಇತರ ಪ್ರಜೆಗಳಿಗಾಗಲಿ ಒಟ್ಟು ಸಮಾಜಕ್ಕಾಗಲಿ ಕುಂದಕವನ್ನುಂಟು ಮಾಡುವುದಿಲ್ಲವೋ ಆ ನಡತೆಗಳಿಗೆ ವೈಯಕ್ತಿಕ ಸಂಬಂಧವಾದ ಸ್ವಾತಂತ್ರ್ಯವೆಂದು ಹೆಸರು. ತನಗೆ ಬೇಕಾದ ಕಸಬುಗಳನ್ನು ಕೈಕೊಳ್ಳುವುದು, ತನಗೆ ಇಚ್ಛೆಬರುವ ಗ್ರಂಥಗಳನ್ನು ಓದುವುದು, ತನಗೆ ತೋಚಿದ ಅಭಿಪ್ರಾಯವನ್ನು ಕೊಡುವುದು ಇವೆಲ್ಲ ಈ ಸ್ವಾತಂತ್ರ್ಯದ ಕೆಲವು ಗುರುತುಗಳು. ಈ ವಿಚಾರಗಳಲ್ಲಿ ಪ್ರಜೆಗಳಿಗೆ ಸ್ವಾತಂತ್ರ್ಯವನ್ನು ಕೊಡುವುದರಿಂದ ಇತರರಿಗೆ ಯಾವ ವಿಧವಾದ ಅನಾನುಕೂಲವೂ ಇರುವುದಿಲ್ಲ. ಆದುದರಿಂದ ಈ ಸ್ವಾತಂತ್ರ್ಯವನ್ನು ಪ್ರಜೆಗಳಿಗೆ ಕೊಡುವುದು ಉಚಿತ.

## ಮತಸಂಬಂಧವಾದ ಸ್ವಾತಂತ್ರ್ಯ

ಮನುಷ್ಯನಿಗೆ ನಂಬಿಕೆಯಿರುವ ಮತವನ್ನು ಅವಲಂಬಿಸುವುದಕ್ಕೂ, ಮತ ವಿಚಾರದಲ್ಲಿ ಇತರ ಮತಕ್ಕೆ ಸೇರಿದವರ ಮನಸ್ಸನ್ನು ನೋಯಿಸದಂತೆ ಆಧ್ಯಾತ್ಮಿಕ ವಿಚಾರವನ್ನು ಚರ್ಚಿಸುವುದಕ್ಕೂ ಅನುಕೂಲಗಳನ್ನು ರಾಜ್ಯವು ಏರ್ಪಡಿಸಬೇಕು. ಇಂತಹ ಅನುಕೂಲಗಳೇ ಮತಸಂಬಂಧವಾದ ಸ್ವಾತಂತ್ರ್ಯದ ಲಕ್ಷಣ. ಪೂರ್ವಕಾಲದಲ್ಲಿ ರಾಜಕೀಯ ವ್ಯಾಪಾರಗಳಿಗೂ, ಮತವಿಚಾರಗಳಿಗೂ ಹೆಚ್ಚು ಸಂಬಂಧವಿದ್ದುದರಿಂದ ಕೆಲವು ಸಂದರ್ಭಗಳಲ್ಲಿ ರಾಜ್ಯಕ್ಕೆ ಕ್ಷೇಮವಿರಲಿಲ್ಲ. ಆಧುನಿಕ ಕಾಲದ ಪ್ರಾರಂಭದಲ್ಲಿ ಕ್ರೈಸ್ತಮತ ವಿಷಯಗಳಲ್ಲಿ ಮಹಾಕ್ರಾಂತಿ ಯುಂಟಾಗಿ ಸಮಾಜದ ವಿಶಿಷ್ಟ ವ್ಯಾಪಾರಗಳ ಮೇಲೆ—ಎಂದರೆ ರಾಜಕೀಯ, ಆರ್ಥಿಕ, ನೀತಿ, ಮತ ಇವುಗಳ ಮೇಲೆ—ತಮ್ಮ ಅಧಿಕಾರವನ್ನು ನಡೆಯಿಸುವುದಕ್ಕೆ ಅನೇಕ ರಾಜರು ಉಪಕ್ರಮಿಸಿದರು. ಆದರೂ ಮತವಿಚಾರದಲ್ಲಿ ಪ್ರಜೆಗಳಿಗೆ ಪೂರ್ಣ ಸ್ವಾತಂತ್ರ್ಯವು ವಾಸ್ತವವಾಗಿ ದೊರೆಯಲಿಲ್ಲ. ೧೯ನೆಯ ಶತಮಾನದ ವರೆಗೆ ಅಲ್ಲಲ್ಲಿ ಮತಸಂಬಂಧವಾದ ಅಕ್ಷಮತೆಗಳೂ, ಸರ್ಕಾರದ ಪಕ್ಷಪಾತಗಳೂ ಗೋಚರಕ್ಕೆ ಬರುತ್ತಿದ್ದುವು. ಇತ್ತೀಚೆಗೆ ಮತವಿಷಯಗಳಲ್ಲಿ ಅನೇಕ ರಾಜ್ಯಗಳು ಪ್ರಜೆಗಳಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿರುವುವು ಎಂದು ಹೇಳಬಹುದು.

## ಆರ್ಥಿಕ ಸ್ವಾತಂತ್ರ್ಯ

ಆರ್ಥಿಕಸ್ವಾತಂತ್ರ್ಯವೆಂದರೆ ಮನುಷ್ಯನು ತನ್ನ ಜೀವನಕ್ಕೆ ಸಂಬಂಧಿಸುವ ಅನುಕೂಲಗಳನ್ನು—ಎಂದರೆ ತನಗೆ ಬೇಕಾದ ವ್ಯಾಪಾರ, ಕೈಗಾರಿಕೆ ಇವೇ ಮೊದಲಾದ ಕಸಬುಗಳನ್ನು ಕೈಕೊಳ್ಳುವುದಕ್ಕೆ ತಕ್ಕ ಅನುಕೂಲಗಳನ್ನು—ಪಡೆದಿರಬೇಕೆಂದು ಅರ್ಥ. ಇಂತಹ ಅನುಕೂಲಗಳನ್ನು ಒದಗಿಸುವುದು ಸರ್ಕಾರಕ್ಕೆ ಸಾಧ್ಯವೇ ಹೊರತು ಪ್ರತ್ಯೇಕ ವ್ಯಕ್ತಿಗಳಿಗೆ ಸಾಧ್ಯವಲ್ಲ. ಸಮಾಜದಲ್ಲಿ ದೊರಕುವ ಆರ್ಥಿಕ ಸಂಪತ್ತನ್ನು ತಿಳಿಯಪಡಿಸುವುದೂ, ಇವುಗಳನ್ನು ಉಪಯೋಗಿಸುವುದಕ್ಕೆ ಪ್ರಜೆಗೆ ತಕ್ಕ ಶಿಕ್ಷಣವನ್ನು ಕೊಡುವುದೂ, ವ್ಯವಸಾಯ, ವ್ಯಾಪಾರ ಕೈಗಾರಿಕೆಗಳಿಗೆ ಉತ್ತೇಜನವನ್ನು ಕೊಡುವುದೂ ರಾಜ್ಯದ ಆರ್ಥಿಕ ನೀತಿ. ತನ್ನ ಪ್ರಜೆಗಳು ಆರ್ಥಿಕ ವಿಚಾರಗಳಲ್ಲಿ ಮತ್ತೊಂದು ದೇಶದ ಜನಗಳಿಗೆ ಅಡಿಯಾಳಾಗದಂತೆ ನೋಡಿಕೊಂಡಿರುವುದು ರಾಜ್ಯದ ಹೆಮ್ಮೆಯಲ್ಲವೆ! ಪ್ರಜೆಗಳು ನಿರುದ್ಯೋಗದಿಂದಲೂ ದಾರಿದ್ರ್ಯದ ಸಂಕಟದಿಂದಲೂ ತಪಿಸುವುದು ಅವರ ಆರ್ಥಿಕ ಸ್ವಾತಂತ್ರ್ಯದ ಲಕ್ಷಣವಲ್ಲ. ಅವರ ಉದರ ಪೋಷಣೆಗೇ ತೊಂದರೆ ಇರುವಾಗ ಪ್ರಜೆಗಳು ಯಾವ ಮಹತ್ಕಾರ್ಯವನ್ನು ತಾನೇ ಮಾಡಲು ಶಕ್ತರಾಗುವರು? ಆರ್ಥಿಕ ಸ್ವಾತಂತ್ರ್ಯ ವನ್ನು ಪ್ರಜೆಗಳಿಗೆ ಸರ್ಕಾರವು ಕೊಡುವುದೆಂದರೆ ಸರ್ಕಾರವು ಎಲ್ಲರಿಗೂ ಜೀವ ನೋಪಾಯಗಳನ್ನು ಹುಡುಕಿಕೊಡಬೇಕೆಂದೂ ಅಂತಹ ಉಪಾಯಗಳು

ದೊರೆಯುವವರೆಗೆ ಅವರಿಗೆ ದ್ರವ್ಯಾನುಕೂಲಗಳನ್ನು ಮಾಡಬೇಕೆಂದೂ ಅರ್ಥವಲ್ಲ. ಸ್ವಾರ್ಥತೆಯಿಂದ ಕೂಡಿರುವ ಬಂಡವಾಳಗಾರರ ದ್ರವ್ಯಾಕಾಂಕ್ಷೆಯನ್ನೂ, ಕೈಗಾರಿಕೆಗಳ ಯಜಮಾನರ ಏಕಾಧಿಪತ್ಯವನ್ನೂ, ಕಡಿಮೆ ಮಾಡಿ ಸಮಾಜದ ಕ್ಷೇಮವನ್ನು ಧ್ಯೇಯದಲ್ಲಿಟ್ಟು ಪ್ರಜೆಗಳ ಬದುಕಿಗೆ ತಕ್ಕ ಅನುಕೂಲಗಳನ್ನು ಒದಗಿಸಿಕೊಟ್ಟು ಅವರನ್ನು ಸ್ವತಂತ್ರಜೀವಿಗಳನ್ನಾಗಿ ಮಾಡುವುದು ಈ ಆರ್ಥಿಕ ಸ್ವಾತಂತ್ರ್ಯದ ಮುಖ್ಯ ಧ್ಯೇಯ.

— ಎಚ್. ಕೃಷ್ಣರಾವ್

## ವಿದ್ಯುಚ್ಛಕ್ತಿ

ಮಾನವನು ತನ್ನ ಉಪಯೋಗಕ್ಕಾಗಿ ಪಳಗಿಸಿಕೊಂಡಿರುವ ಶಕ್ತಿರೂಪಗಳಲ್ಲೆಲ್ಲಾ ವಿದ್ಯುಚ್ಛಕ್ತಿಯು ನೂತನವಾದುದು, ಹಾಗೂ ಅವ್ಯಕ್ತವಾದುದು. ಪರಮಾಣುಶಕ್ತಿಯು ಇದಕ್ಕಿಂತ ನೂತನವಾದುದಾದರೂ ಆ ಶಕ್ತಿಯನ್ನು ಸಂಪೂರ್ಣವಾಗಿ ಮಾನವನು ಸದ್ಯಕ್ಕೆ ವಶಪಡಿಸಿಕೊಂಡಿದ್ದಾನೆಂದು ಹೇಳುವ ಹಾಗಿಲ್ಲ. ವಿದ್ಯುತ್ಕಣಗಳು ಸಮಸ್ತ ಪದಾರ್ಥಗಳಿಗೂ ಅಂಗಗಳಾದರೂ ಶಕ್ತಿಯ ವಿದ್ಯುತ್ಸ್ವರೂಪವನ್ನು ನಾವು ೧೯ನೆಯ ಶತಮಾನದವರೆಗೂ ಗ್ರಹಿಸದಿದ್ದುದು ಕೌತುಕವಾಗಿ ಕಾಣಬಹುದು. ಸಾಮಾನ್ಯಸ್ಥಿತಿಯಲ್ಲಿ ಪದಾರ್ಥಗಳು ವಿದ್ಯುದ್ರಹಿತವಾಗಿ ತೋರುವುದೇ ಈ ಕಾಲವಿಳಂಬಕ್ಕೆ ಕಾರಣ. ಪ್ರತಿಯೊಂದು ಪರಮಾಣುವಿನ ಬೀಜದಲ್ಲಿ ಎಷ್ಟು ಪ್ರೋಟಾನ್‌ಗಳಿರುತ್ತವೆಯೋ ಅಷ್ಟೇ ಎಲೆಕ್ಟ್ರಾನ್‌ಗಳು ಅದನ್ನು ಆವರಿಸಿರುವುದರಿಂದ ಒಟ್ಟಿನಲ್ಲಿ ಪರಮಾಣುವು ವಿದ್ಯುದ್ರಹಿತವಾಗಿ ತೋರುತ್ತದೆಯಷ್ಟೆ. ಯಾವ ವಿಧಾನದಿಂದಲಾದರೂ ಸರಿ, ನಾವು ಋಣವಿದ್ಯುತ್ಕಣಗಳನ್ನು ಧನಕಣಗಳಿಂದ, ಪ್ರತ್ಯೇಕಿಸಿದರೆ, ವಿದ್ಯುಚ್ಛಕ್ತಿಯು ಹೊರಬೀಳುತ್ತದೆ, ಅದರ ಪ್ರಭಾವವು ನಮಗೆ ವ್ಯಕ್ತವಾಗುತ್ತದೆ.

ವಿದ್ಯುದ್ವಿಜ್ಞಾನದ ದೃಷ್ಟಿಯಿಂದ ವಸ್ತುಗಳನ್ನು ವಿದ್ಯುದ್ವಾಹಕಗಳು,[1] ವಿದ್ಯುದವಾಹಕಗಳು[2] ಎಂದು ಸ್ಥೂಲವಾಗಿ ಎರಡು ವರ್ಗಗಳಾಗಿ ವಿಂಗಡಿಸಬಹುದು. ತಾಮ್ರ, ಬೆಳ್ಳಿ, ಕಬ್ಬಿಣ, ಪಾದರಸ ಇತ್ಯಾದಿ ಲೋಹಗಳೆಲ್ಲಾ ವಿದ್ಯುದ್ವಾಹಕಗಳು. ಗಂಧಕ, ರೇಷ್ಮೆ, ಉಣ್ಣೆ, ಒಣಮರ, ಅನಿಲಗಳು ಇತ್ಯಾದಿ ಪದಾರ್ಥಗಳು ಅವಾಹಕಗಳು. ಒಂದು ಅವಾಹಕವನ್ನು ಮತ್ತೊಂದರಿಂದ

[1] Electric conductors.

[2] Electric insulators, non-conductors.

ತಿಕ್ಕಿದಾಗ ಸಾಮಾನ್ಯವಾಗಿ ಎಲೆಕ್ಟ್ರಾನ್‌ಗಳ ವರ್ಗೀಕರಣವಾಗುತ್ತದೆ. ಉದಾಹರಣೆಗೆ ಗಾಜಿನ ಕೋಲನ್ನು ರೇಷ್ಮೆಯಿಂದ ಉಜ್ಜಿದಾಗ ಗಾಜಿನಿಂದ ಕಿತ್ತುಬಂದ ಹಲವು ಎಲೆಕ್ಟ್ರಾನ್‌ಗಳು ರೇಷ್ಮೆಗೆ ಅಂಟಿಕೊಳ್ಳುತ್ತವೆ. ಆದಕಾರಣ ರೇಷ್ಮೆಯಲ್ಲಿ ಎಲೆಕ್ಟ್ರಾನ್‌ಗಳು ಅಧಿಕ ಸಂಖ್ಯಾಕಗಳಾಗುತ್ತವೆ, ರೇಷ್ಮೆಯಲ್ಲಿ ಋಣವಿದ್ಯುತ್ತು ಉತ್ಪತ್ತಿಯಾಗಿದೆ ಎಂದು ಹೇಳುತ್ತೇವೆ. ಅದೇ ಕಾಲದಲ್ಲಿಯೇ ಗಾಜಿನಲಿ ಎಲೆಕ್ಟ್ರಾನ್‌ಗಳ ಅಭಾವವಾಗುತ್ತದೆಯಷ್ಟೆ, ಇದನ್ನೇ ನಾವು ಗಾಜಿನಲ್ಲಿ ಧನ ವಿದ್ಯುತ್ತು ಹುಟ್ಟಿದೆಯೆಂದು ಕರೆಯುತ್ತೇವೆ. ಪ್ಲಾಸ್ಟಿಕ್ ಬಾಚಣಿಗೆಯಿಂದ ಒಣಕೂದಲನ್ನು ಬಾಚಿಕೊಂಡಾಗಲೂ, ಬಾಚಣಿಗೆಯು ಕೂದಲಿನಿಂದ ಎಲೆಕ್ಟ್ರಾನ್‌ಗಳನ್ನು ಕಸಿದು ತನಗಂಟಿಸಿಕೊಂಡು ಋಣವಿದ್ಯುದ್ವಸ್ತುವಾಗುತ್ತದೆ, ಕೂದಲನ್ನು ಧನವಿದ್ಯುದ್ವಸ್ತುವನ್ನಾಗಿ ಬಿಡುತ್ತದೆ. ಎಲೆಕ್ಟ್ರಾನ್‌ಗಳ ಆಧಿಕ್ಯವೇ ಋಣವಿದ್ಯುತ್ತು, ಅವುಗಳ ಅಭಾವವೇ ಧನವಿದ್ಯುತ್ತು.

ವಾಹಕಗಳಿಗೆ ಉದಾಹರಣೆಯಾಗಿ ತಾಮ್ರವನ್ನು ತೆಗೆದುಕೊಳ್ಳೋಣ. ತಾಮ್ರದ ಪರಮಾಣು ಕ್ರಮಾಂಕವು ೨೯. ಇದರ ಪ್ರಥಮ, ದ್ವಿತೀಯ, ತೃತೀಯ ವಲಯಗಳಲ್ಲಿ ಕ್ರಮವಾಗಿ ೨,೮,೧೮, ಎಲೆಕ್ಟ್ರಾನ್‌ಗಳಿವೆ. ನಾಲ್ಕನೆಯ ವಲಯದಲ್ಲಿ ಒಂದು ಎಲೆಕ್ಟ್ರಾನ್ ಏಕಾಕಿಯಾಗಿದೆ. ಧನವಿದ್ಯುತ್ತಿರುವ ಪರಮಾಣು ಬೀಜಕ್ಕೆ ಎಲೆಕ್ಟ್ರಾನ್‌ಗಳು ಸಮೀಪವಿದ್ದಷ್ಟೂ ಆಕರ್ಷಣ ಬಲ ಹೆಚ್ಚು. ತಾಮ್ರದ ಪರಮಾಣುವಿನಲ್ಲಿ ನಾಲ್ಕನೆಯ ವಲಯಕ್ಕೆ ಸೇರಿದ ಎಲೆಕ್ಟ್ರಾನ್ ಕಣವು ಬೀಜಕ್ಕೆ ಬಹಳ ದೂರವಿರುವುದರಿಂದಲೂ, ಈ ಎಲೆಕ್ಟ್ರಾನಿನ ದೃಷ್ಟಿಯಿಂದ ೨೯ ಪ್ರೋಟಾನ್‌ಗಳ ಪರಮಾಣು ಬೀಜವನ್ನು ೨೮ ಎಲೆಕ್ಟ್ರಾನ್‌ಗಳು ಆವರಿಸಿರುವುದರಿಂದ ನಿವ್ವಳ ಒಂದೇ ಪ್ರೋಟಾನಿನ ವಿದ್ಯುದಾಕರ್ಷಣ ಬಲಕ್ಕೆ ಮಾತ್ರ ಇದು ಒಳಪಟ್ಟಿರುವುದರಿಂದಲೂ ಈ ಏಕಾಕಿ ಎಲೆಕ್ಟ್ರಾನಿಗೂ ತಾಮ್ರದ ಪರಮಾಣುವಿಗೂ ಇರುವ ಬಂಧನ ಶಕ್ತಿ ತೀರ ಕಡಮೆ. ಆದಕಾರಣ ಈ ಎಲೆಕ್ಟ್ರಾನಿಗೆ ತನ್ನ ಪರಮಾಣುವಿನ ಬಂಧನವನ್ನು ತೊಡೆದು ಸ್ವೇಚ್ಛೆಯಾಗಿ ಚಲಿಸಲು ಸುಲಭಸಾಧ್ಯ. ಇಂತಹ ಎಲೆಕ್ಟ್ರಾನ್‌ಗಳಿಗೆ ಸ್ವತಂತ್ರ ಎಲೆಕ್ಟ್ರಾನ್[3]ಗಳೆಂದು ಹೆಸರು. ತಾಮ್ರದಲ್ಲಿ ಎಷ್ಟು ಪರಮಾಣುಗಳಿವೆಯೋ ಸರಿಸುಮಾರಾಗಿ ಅಷ್ಟೂ ಸ್ವತಂತ್ರ ಎಲೆಕ್ಟ್ರಾನ್‌ಗಳಿರುತ್ತವೆ. ಅದಕ್ಕೋಸ್ಕರವೇ ತಾಮ್ರವು ಒಳ್ಳೆಯ ವಿದ್ಯುದ್ವಾಹಕ. ವಿದ್ಯುದವಾಹಕಗಳಲ್ಲಿ ಹೊರವಲಯದ ಎಲೆಕ್ಟ್ರಾನ್‌ಗಳಿಗೂ ಪರಮಾಣು ಬೀಜಕ್ಕೂ ಕೂಡ ಆಕರ್ಷಣ ಬಲವು ಹೆಚ್ಚಾಗಿಯೇ ಇರುತ್ತದೆ. ಆದಕಾರಣ ಈ ಪದಾರ್ಥಗಳಲ್ಲಿ ಸ್ವತಂತ್ರ ಎಲೆಕ್ಟ್ರಾನ್‌ಗಳು ಇರುವುದೇ ಇಲ್ಲ.

ವಿದ್ಯುತ್ಕಣಗಳು ಚಲಿಸಿದರೆ ವಿದ್ಯುತ್ಪ್ರವಾಹವುಂಟಾಗುತ್ತದೆ. ತಾಮ್ರದಲ್ಲಿ

[3] Free electrons.

ಸ್ವತಂತ್ರ ಎಲೆಕ್ಟ್ರಾನ್‌ಗಳು ಹೇರಳವಾಗಿರುವುದರಿಂದ ಇವುಗಳು ತಾಮ್ರದ ಉಷ್ಣಾಂಶಕ್ಕನುಗುಣವಾಗಿ ಅವ್ಯವಸ್ಥಿತವಾಗಿ ಚಲಿಸುತ್ತಿರುತ್ತವೆ. ಈ ಅವ್ಯವಸ್ಥಿತ ಚಲನೆಯಲ್ಲಿ ಯಾವುದಾದರೊಂದು ಕ್ಷಣದಲ್ಲಿ ಒಂದು ದಿಕ್ಕಿನಲ್ಲಿ ಎಷ್ಟು ಎಲೆಕ್ಟ್ರಾನ್‌ಗಳು ಚಲಿಸುತ್ತಿರುತ್ತವೆಯೋ ಅಷ್ಟೇ ಎಲೆಕ್ಟ್ರಾನ್‌ಗಳು ಅದಕ್ಕೆ ಎದುರು ದಿಕ್ಕಿನಲ್ಲಿ ಸರಾಸರಿ ಅದೇ ವೇಗದಲ್ಲಿ ಚಲಿಸುತ್ತಿರುತ್ತವೆ. ಹೀಗಾಗಿ ಸಾಮಾನ್ಯ ಸ್ಥಿತಿಯಲ್ಲಿ ಯಾವ ಒಂದು ದಿಕ್ಕಿನಲ್ಲಿಯೂ ವಿದ್ಯುತ್ಪ್ರವಾಹವಿರುವುದು ನಮಗೆ ಗೋಚರವಾಗುವುದಿಲ್ಲ. ಇದರ ಅರ್ಥ—ಎಲ್ಲ ವಿದ್ಯುದ್ವಾಹಕಗಳಲ್ಲಿಯೂ ಸರ್ವದಾ ವಿದ್ಯುತ್ಪ್ರವಾಹವಿದ್ದೇ ಇರುತ್ತದೆ. ಆದರೆ, ಈ ಪ್ರವಾಹವು ಎಲ್ಲ ದಿಕ್ಕುಗಳಲ್ಲಿಯೂ ಸಮವಾಗಿರುವುದರಿಂದ ಸ್ಥೂಲದೃಷ್ಟಿಗೆ ವಿದ್ಯುತ್ಪ್ರವಾಹ ರಹಿತವಾಹಕವಾಗಿ ಕಾಣುತ್ತದೆ. ಈಗ ನಾವು ಈ ಸ್ವತಂತ್ರ ಎಲೆಕ್ಟ್ರಾನ್‌ಗಳನ್ನು ಯಾವುದಾದರೊಂದು ದಿಕ್ಕಿನಲ್ಲಿ ಇತರ ದಿಕ್ಕುಗಳಿಗಿಂತ ಹೆಚ್ಚಾಗಿ ಪ್ರವಹಿಸುವಂತೆ ಮಾಡಿದರೆ ವಾಹಕದಲ್ಲಿ ವಿದ್ಯುತ್ಪ್ರವಾಹವುಂಟಾಗುತ್ತದೆ.

ಒಂದು ದ್ರಾವಕದಲ್ಲಿ ಎರಡು ಬೇರೆ ಬೇರೆ ಲೋಹಗಳನ್ನಿಟ್ಟು ದ್ರಾವಕದ ಹೊರಗಿರುವ ಆ ಎರಡು ಲೋಹಗಳ ತುದಿಗಳನ್ನು ವಿದ್ಯುದ್ವಾಹಕ ತಂತಿಯಿಂದ ಸೇರಿಸಿದರೆ ತಂತಿಯಲ್ಲಿ ವಿದ್ಯುತ್ತು ಪ್ರವಹಿಸುತ್ತದೆ. ಈ ವಿಧಾನವನ್ನು ಇಟಲಿಯ ಪ್ರಸಿದ್ಧ ವಿಜ್ಞಾನಿಯಾದ ವೋಲ್ಟಾ ಎಂಬವನು ೧೯ನೆಯ ಶತಮಾನದ ಆದಿ ಭಾಗದಲ್ಲಿ ಕಂಡುಹಿಡಿದನು. ಈ ಪ್ರಯೋಗದಲ್ಲಿ ರಾಸಾಯನಿಕ ಶಕ್ತಿಯು ವಿದ್ಯುಚ್ಛಕ್ತಿಯಾಗಿ ರೂಪಾಂತರ ಹೊಂದಿದೆ. ಅಧಿಕ ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯನ್ನು ಈ ವಿಧಾನದಿಂದ ಉತ್ಪತ್ತಿಮಾಡುವುದು ಕಷ್ಟ. ಕ್ರಿ.ಶ. ೧೮೩೧ರಲ್ಲಿ ಬ್ರಿಟಿಷ್ ವಿಜ್ಞಾನಿ ಮೈಕೆಲ್ ಫ್ಯಾರಡೆಯು ವಿದ್ಯುದ್ವಾಹಕ ತಂತಿಯನ್ನು ಕಾಂತ ಕ್ಷೇತ್ರ[4]ದಲ್ಲಿ ಚಲಿಸುವಂತೆ ಮಾಡಿದರೆ ವಾಹಕದಲ್ಲಿ ವಿದ್ಯುತ್ಪ್ರವಾಹವಾಗುತ್ತದೆಂಬುದನ್ನು ತೋರಿಸಿದನು. ಅಂದಿನಿಂದ ವಿದ್ಯುದ್ಯುಗವು ಪ್ರಾರಂಭಿಸಿತೆಂದು ಹೇಳಬಹುದು. ಆಗ ಅರ್ಥಸಚಿವನಾಗಿದ್ದ ಗ್ಲಾಡ್‌ಸ್ಟನ್ ಒಂದು ದಿನ ರಾಯಲ್ ಇನ್‌ಸ್ಟಿಟ್ಯೂಷನ್‌ಗೆ ಭೇಟಿಕೊಟ್ಟಾಗ ಫ್ಯಾರಡೆಯ ಈ ಪ್ರಯೋಗವನ್ನು ನೋಡಿ, ಆತನನ್ನು "ಸೊಗಸಾಗಿದೆ, ವಿದ್ವಾಂಸರೇ, ಆದರೆ ಇದರಿಂದ ಲೋಕಕ್ಕೆ ಏನು ಪ್ರಯೋಜನ?" ಎಂದು ಕೇಳಿದನಂತೆ. ಫ್ಯಾರಡೆಯು "ಪ್ರಾಯಶಃ ಮುಂದೆ ಬರಲಿರುವ ಅರ್ಥಸಚಿವರಿಗೆ, ಈ ಸಂಶೋಧನೆಗಳಿಂದ ವಿಕಾಸಗೊಳ್ಳುವ ಯಂತ್ರ ಕೈಗಾರಿಕೆಗಳ ಮೇಲೆ ತೆರಿಗೆ ಹಾಕದಿದ್ದರೆ, ರಾಜ್ಯದ ಆಯವ್ಯಯವನ್ನು ಸಮ ತೂಗಿಸುವುದು ಅಸಾಧ್ಯವಾಗಬಹುದು" ಎಂದು ಉತ್ತರ ಕೊಟ್ಟನಂತೆ. ಗ್ಲಾಡ್‌ಸ್ಟನ್ನಿನ ಮುಖ್ಯಮಂತ್ರಿತ್ವದಲ್ಲಿಯೇ ಈ ಭವಿಷ್ಯವು ಯಥಾರ್ಥವಾಯಿತು.

---

[4] Magnetic field.

ವಿದ್ಯುತ್ತನ್ನು ಉತ್ಪತ್ತಿಮಾಡುವ ಆಧುನಿಕ ಯಂತ್ರಗಳ ರಚನೆಗೆ ಫ್ಯಾರಡೆಯ ತಾತ್ತ್ವಿಕ, ಪ್ರಾಯೋಗಿಕ ಸಂಶೋಧನೆಗಳೇ (ಕ್ರಿ.ಶ. ೧೮೩೦) ಇಂದಿಗೂ ಆಧಾರ. ಈ ಯಂತ್ರಗಳು ಉತ್ಪತ್ತಿಮಾಡುವ ವಿದ್ಯುಚ್ಛಕ್ತಿಯು ಹೆಚ್ಚಿದಂತೆಲ್ಲಾ ಇವುಗಳನ್ನು ಕಾಂತಕ್ಷೇತ್ರದಲ್ಲಿ ತಿರುಗುವಂತೆ ಮಾಡಲು ನಾವು ವ್ಯಯಿಸಬೇಕಾದ ಶಕ್ತಿಯೂ ಹೆಚ್ಚುತ್ತದೆ. ವಿದ್ಯುಜ್ಜನಕಗಳು ವಸ್ತುವಿನ ಸ್ಥೂಲಚಲನ ಶಕ್ತಿಯನ್ನು ಎಲೆಕ್ಟ್ರಾನ್‌ಗಳ ಚಲನಶಕ್ತಿಯನ್ನಾಗಿ ರೂಪಾಂತರಿಸಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿ ಮಾಡುತ್ತವೆ. ವಿದ್ಯುತ್ಪ್ರವಾಹವು ಎಷ್ಟು ಪ್ರಬಲವಿದ್ದರೂ ವಾಹಕದ ಸ್ವತಂತ್ರ ಎಲೆಕ್ಟ್ರಾನ್‌ಗಳೆಲ್ಲಾ ಪ್ರವಾಹದ ದಿಕ್ಕಿನಲ್ಲಿಯೇ ಚಲಿಸುತ್ತವೆಂದು ತಿಳಿಯಬಾರದು; ಇತರ ದಿಕ್ಕುಗಳಿಗಿಂತ ಸ್ವಲ್ಪ ಅಧಿಕ ವೇಗದಲ್ಲಿ ಆ ದಿಕ್ಕಿನಲ್ಲಿ ಚಲಿಸುತ್ತವೆ, ಅಷ್ಟೆ. ಇದಕ್ಕೆ ಒಂದು ಉಪಮೆಯನ್ನು ಕೊಡಬಹುದು. ನಾವು ಬೆಂಗಳೂರಿನ ಮಾರ್ಕೆಟ್ ಚೌಕದಲ್ಲಿ ನಿಂತುಕೊಂಡು ಬೆಳಗ್ಗೆ ೧೧ ಘಂಟೆಯಲ್ಲಿ ಜನಗಳ ಓಡಾಟವನ್ನು ವೀಕ್ಷಿಸುತ್ತಿದ್ದರೆ ಅವರು ಎಲ್ಲ ದಿಕ್ಕುಗಳಲ್ಲಿಯೂ ಓಡಾಡುತ್ತಿದ್ದರೂ ಅವೆನ್ಯೂ ರೋಡಿನಲ್ಲಿ ಉತ್ತರಾಭಿಮುಖವಾಗಿ ಹೋಗುತ್ತಿರುವವರ ಸಂಖ್ಯೆಯೇ ಹೆಚ್ಚು. ವಿದ್ಯುತ್ಪ್ರವಾಹದ ದಿಕ್ಕಿನಲ್ಲಿ ಎಲೆಕ್ಟ್ರಾನ್‌ಗಳ ಚಲನೆಯೂ ಹೀಗೆಯೇ.

ತಾಮ್ರದ ತಂತಿಯಲ್ಲಿ ವಿದ್ಯುತ್ತು ಹರಿಯುತ್ತಿದೆಯೇ ಇಲ್ಲವೇ ಎಂಬುದನ್ನು ನೇರವಾಗಿ ನಮ್ಮ ಇಂದ್ರಿಯಗಳಿಂದ ತಿಳಿಯುವುದು ಅಸಾಧ್ಯ. ಅದರಿಂದಲೇ ವಿದ್ಯುತ್ತನ್ನು ಶಕ್ತಿಯ ಅವ್ಯಕ್ತರೂಪವೆಂದು ಕರೆದಿರುವುದು. ಆದರೆ ವಿದ್ಯುತ್ತು ಪ್ರವಹಿಸುತ್ತಿರುವಾಗ ಸ್ವತಂತ್ರ ಎಲೆಕ್ಟ್ರಾನ್‌ಗಳ ಚಲನ ವೇಗವು ಹೆಚ್ಚುತ್ತದೆಯಷ್ಟೆ. ಹೀಗೆ ಹೆಚ್ಚಾದ ವೇಗವೆಲ್ಲ ಎಲೆಕ್ಟ್ರಾನ್‌ಗಳಿಗೇ ಮೀಸಲಲ್ಲ. ವಾಹಕದ ಇತರ ಅಣು ಪರಮಾಣುಗಳೂ ಈ ವೇಗವನ್ನು ಹಂಚಿಕೊಳ್ಳುತ್ತವೆ. ಇದರಿಂದ ತಂತಿಯ ಅಣುಗಳ ಸರಾಸರಿ ವೇಗವು ಹೆಚ್ಚುತ್ತದೆ, ಅಂದರೆ ಉಷ್ಣಾಂಶವು ಹೆಚ್ಚುತ್ತದೆ. ಆದಕಾರಣ ವಿದ್ಯುತ್ಪ್ರವಾಹವನ್ನು ಅದು ಉತ್ಪತ್ತಿಮಾಡಿದ ಉಷ್ಣದಿಂದ ಗುರುತಿಸಬಹುದು. ಪ್ರವಾಹದ ತೀಕ್ಷ್ಣತೆಯು ಹೆಚ್ಚಿದರೆ ಅಥವಾ ತಂತಿಯ ವ್ಯಾಸವು ಕಡಮೆಯಾದರೆ ಅತ್ಯಧಿಕ ಉಷ್ಣೋತ್ಪತ್ತಿಯಾಗಿ ತಂತಿಯು ಕೆಂಪಗೆ ಅಥವಾ ಬೆಳ್ಳಗೂ ಹೊಳೆಯಬಹುದು. ಹೀಗೆ ವಿದ್ಯುಚ್ಛಕ್ತಿಯು ಬೆಳಕುಶಕ್ತಿಗೆ ಪರಿವರ್ತಿತವಾಗಿ ನಮಗೆ ವ್ಯಕ್ತವಾಗಬಹುದು.

ತಾಮ್ರದ ತಂತಿಯನ್ನು ಸುರುಳಿಯಾಗಿ ಸುತ್ತಿ ಅದರಲ್ಲಿ ವಿದ್ಯುತ್ತನ್ನು ಪ್ರವಹಿಸಿದರೆ, ಸುರುಳಿಯು ಅದರ ಸಮೀಪದಲ್ಲಿರುವ ಕಬ್ಬಿಣದ ವಸ್ತುಗಳನ್ನು ಆಕರ್ಷಿಸುವ ಶಕ್ತಿಯನ್ನು ಪಡೆಯುತ್ತದೆ. ಈಗ ವಿದ್ಯುಚ್ಛಕ್ತಿಯು ಕಾಂತಶಕ್ತಿಯಾಗಿ ರೂಪಾಂತರಿಸಿದೆ. ವಿದ್ಯುತ್ತನ್ನು ನಮ್ಮ ಶರೀರದೊಳಗೆ ಪ್ರವಹಿಸುವಂತೆ ಮಾಡಿದರೆ ನಮ್ಮ ನರಗಳು ಘಾಸಿಪಡುತ್ತವೆ. ವಿದ್ಯುತ್ಪ್ರವಾಹವು ರಕ್ತನಾಳಗಳೊಳಗಿನ ದ್ರವಗಳಲ್ಲಿ ರಾಸಾಯನಿಕ ಪರಿವರ್ತನೆಗಳನ್ನುಂಟುಮಾಡುವುದರಿಂದ

ನಾವು ಈ ಯಾತನೆಯನ್ನು ಅನುಭವಿಸುತ್ತೇವೆ. ಇದೇ ರೀತಿಯಲ್ಲಿ ವಿದ್ಯುತ್ಪ್ರವಾಹವು ಇತರ ಎಷ್ಟೋ ದ್ರಾವಕಗಳನ್ನು ವಿಭಜಿಸುತ್ತದೆ. ಇವು ವಿದ್ಯುಚ್ಛಕ್ತಿಯು ರಾಸಾಯನಿಕ ಶಕ್ತಿಯಾಗಿ ರೂಪಾಂತರವಾಗುವುದಕ್ಕೆ ನಿದರ್ಶನಗಳು. ವಿದ್ಯುತ್ತು ಪ್ರವಹಿಸುತ್ತಿರುವ ತಂತಿಯನ್ನು ಕಾಂತಕ್ಷೇತ್ರದಲ್ಲಿರಿಸಿದರೆ ತಂತಿಯು ತಾನಾಗಿಯೇ ಚಲಿಸುತ್ತದೆ. ಇದೇ ವಿದ್ಯುತ್ತಿನ ಮೋಟಾರುಗಳ ತತ್ತ್ವ. ಇಲ್ಲಿ, ವಿದ್ಯುಚ್ಛಕ್ತಿಯು ಪುನಃ ಚಲನಶಕ್ತಿಯಾಗಿ ರೂಪತಾಳುತ್ತದೆ. ಮೋಡಗಳಲ್ಲಿಯ ವಿದ್ಯುತ್ತು ಒಂದರಿಂದ ಒಂದಕ್ಕೆ ಹಾರಿದಾಗ ಮಿಂಚು ಗುಡುಗುಗಳು ಉತ್ಪತ್ತಿಯಾಗುತ್ತವೆ. ನಿಸರ್ಗದಲ್ಲಿ ವಿದ್ಯುಚ್ಛಕ್ತಿಯು ತೇಜಶ್ಶಕ್ತಿ, ಶಬ್ದಶಕ್ತಿಗಳಾಗಿ ಪರಿವರ್ತನ ಹೊಂದುವುದಕ್ಕೆ ಇದು ನಿದರ್ಶನ. ಮೋಡದಲ್ಲಿ ವಿದ್ಯುತ್ತು ಘರ್ಷಣೆ[1]ಯಿಂದ ಹುಟ್ಟುತ್ತದೆ. ಸಮುದ್ರದ ಕೆಲವು ಜಾತಿಯ ಮೀನುಗಳಲ್ಲಿ ವಿದ್ಯುತ್ಕೋಶದ[2] ಅವಯವಗಳಿವೆ. ಈ ಪ್ರಾಣಿಗಳ ದೇಹದಲ್ಲಿ ರಾಸಾಯನಿಕ ಶಕ್ತಿಯು ವಿದ್ಯುಚ್ಛಕ್ತಿಯಾಗಿ ರೂಪಾಂತರವಾಗುತ್ತದೆ. ಈ ಶಕ್ತಿಯನ್ನು ಇವು ಆತ್ಮರಕ್ಷಣೆಗಾಗಿ ಉಪಯೋಗಿಸಿಕೊಳ್ಳುತ್ತವೆ.

ಶಕ್ತಿಗೆ ಇಷ್ಟೊಂದು ರೂಪಗಳಿದ್ದರೂ ಆಧುನಿಕ ಜಗತ್ತಿನ ಶಕ್ತ್ಯುತ್ಪತ್ತಿ ಕೇಂದ್ರಗಳಲ್ಲಿ ವಿದ್ಯುದ್ರೂಪದಲ್ಲಿ ಶಕ್ತಿಯನ್ನು ಉತ್ಪತ್ತಿಸುವ ಕೇಂದ್ರಗಳ ಸಂಖ್ಯೆಯೇ ಹೆಚ್ಚು. ಇದಕ್ಕೆ ಸಾಕಷ್ಟು ಕಾರಣಗಳಿಲ್ಲದೆ ಇಲ್ಲ. ವಿದ್ಯುಚ್ಛಕ್ತಿಯನ್ನು ರೂಪಾಂತರಿಸುವಷ್ಟು ಸುಲಭವಾಗಿ ಇತರ ಶಕ್ತಿಗಳನ್ನು ರೂಪಾಂತರಿಸಲು ಸಾಧ್ಯವಲ್ಲ. ಕ್ಷಣಕ್ಷಣವೂ ಜೀವನಮಾರ್ಗವು ಹೆಚ್ಚು ಹೆಚ್ಚು ತೊಡಕಾಗುತ್ತಿರುವ ಈ ಕಾಲದ ನಾಗರಿಕತೆಗೆ ಶಕ್ತಿಯ ಎಲ್ಲ ರೂಪಗಳೂ ಅವಶ್ಯವಾದುದರಿಂದ ವಿದ್ಯುಚ್ಛಕ್ತಿಯ ಪರಿವರ್ತನ ಸೌಲಭ್ಯವು ಬಹಳ ಉಪಯುಕ್ತವಾದ ಗುಣ. ಇದರ ಜೊತೆಗೆ ಇಂತಹ ರೂಪಾಂತರದಲ್ಲಿ ಶಕ್ತಿ ನಷ್ಟವಾಗುವುದು ಅನಿವಾರ್ಯ. ವಿದ್ಯುಚ್ಛಕ್ತಿಯ ರೂಪಾಂತರದಲ್ಲಿ ಈ ಶಕ್ತಿನಷ್ಟವೂ ಅತ್ಯಲ್ಪ. ಉತ್ಪತ್ತಿ ಸೌಕರ್ಯದಲ್ಲಿಯೂ ವಿದ್ಯುಚ್ಛಕ್ತಿಯು ಪ್ರಥಮ ಸ್ಥಾನವನ್ನೇ ಪಡೆಯುತ್ತದೆ. ಅಧಿಕ ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯು ಉತ್ಪತ್ತಿಯಾಗಬೇಕಾದರೆ ಚಲನಶಕ್ತಿಯನ್ನೇ ಮೂಲಶಕ್ತಿಯನ್ನಾಗಿ ಉಪಯೋಗಿಸಬೇಕು. ಜಲಪಾತಗಳು ಈ ಶಕ್ತಿಯನ್ನು ನೇರವಾಗಿ ಒದಗಿಸಿಕೊಡುವ ಪ್ರಕೃತಿ ಸಹಜ ಶಕ್ತಿಮೂಲಗಳು. ಜಲಾಶಯಗಳೂ ಪ್ರಪಾತಗಳೂ ದೊರಕದಿರುವೆಡೆಗಳಲ್ಲಿ ಕಲ್ಲಿದ್ದಲಿನ ರಾಸಾಯನಿಕ ಶಕ್ತಿಯನ್ನು ಉಷ್ಣಶಕ್ತಿಯನ್ನಾಗಿ ಪರಿವರ್ತಿಸಿ, ಆ ಉಷ್ಣಶಕ್ತಿಯನ್ನು ಚಲನ ಶಕ್ತಿಗೆ ರೂಪಾಂತರಿಸಿ ವಿದ್ಯುಚ್ಛಕ್ತಿಯನ್ನುಂಟುಮಾಡಬೇಕಾಗುತ್ತದೆ. ಶಕ್ತಿಯನ್ನು ವಿವಿಧ ರೂಪಗಳಲ್ಲಿ ನಾವು ಬಳಸುತ್ತಿದ್ದರೂ ನಮ್ಮ ಆವಶ್ಯಕತೆಗಳಿಗೆ ಅಧಿಕಾಂಶದಲ್ಲಿ ಶಕ್ತಿಯು ಚಲನ

---

[1] Friction. [2] Electric cell.

ರೂಪದಲ್ಲಿಯೇ ಬೇಕಾಗುತ್ತದೆ. ಬಟ್ಟೆಯ ಗಿರಣಿಗಳು, ಗಣಿಗಳು, ಎಣ್ಣೆಯ ಗಾಣಗಳು, ಸಕ್ಕರೆ ಕಾರ್ಖಾನೆಗಳು, ವಿದ್ಯುತ್ತಿನ ರೈಲುಗಳು ಮುಂತಾದವುಗಳೆಗೆಲ್ಲಾ ಶಕ್ತಿಯನ್ನು ಚಲನರೂಪದಲ್ಲಿಯೇ ಒದಗಿಸಬೇಕು. ಅಂದಮೇಲೆ ಜಲಪಾತದ ಚಲನಶಕ್ತಿಯನ್ನೂ, ಉಷ್ಣಯಂತ್ರದ ಚಲನಶಕ್ತಿಯನ್ನೂ ವಿದ್ಯುಚ್ಛಕ್ತಿಯನ್ನಾಗಿ ಮೊದಲು ಪರಿವರ್ತಿಸಿ ಪುನಃ ಚಲನಶಕ್ತಿಯನ್ನಾಗಿ ಮಾರ್ಪಡಿಸಿಕೊಳ್ಳುವುದು ಸ್ಥೂಲ ಪರಿಶೀಲನೆಗೆ ವೃಥಾಯಾಸವಾಗಿ ತೋರಬಹುದು. ಆದರೆ ಉಷ್ಣಯಂತ್ರದ ಚಲನಶಕ್ತಿಯನ್ನು ಉತ್ಪತ್ತಿಸಿದ ಸ್ಥಳದಲ್ಲಿಯೇ ಅಥವಾ ಅದರಿಂದ ೧೦೦-೨೦೦ ಗಜಗಳ ದೂರದಲ್ಲಿಯೇ ಉಪಯೋಗಿಸಿಕೊಳ್ಳಬೇಕು. ವಿದ್ಯುಚ್ಛಕ್ತಿಯನ್ನಾದರೋ ನೂರಾರು ಮೈಲಿಗಳ ದೂರ ಅಲ್ಪನಷ್ಟದಿಂದ, ಮಿತವ್ಯಯದಿಂದ ವಾಹಕತಂತಿಗಳ ಮೂಲಕ ಒಯ್ಯಬಹುದು. ಅಲ್ಲದೆ ಅಧಿಕ ಪ್ರಮಾಣದಲ್ಲಿ ಒಂದು ಕೇಂದ್ರದಲ್ಲಿ ಉತ್ಪತ್ತಿಮಾಡಿದ ವಿದ್ಯುಚ್ಛಕ್ತಿಯನ್ನು ಸಾಮಾನ್ಯ ಜನರಿಗೆ ಅವರಿಗೆ ಬೇಕಾದಷ್ಟು ಅತ್ಯಲ್ಪ ಪ್ರಮಾಣದಲ್ಲಿ ಬೇಕಾದಷ್ಟು ಕಡೆಗಳಿಗೆ ಮಿತವ್ಯಯದಿಂದ ಹಂಚಬಹುದು. ವಿದ್ಯುಚ್ಛಕ್ತಿಯು ಬಹುಜನಾದರಣೆಯನ್ನು ಪಡೆದಿರುವುದಕ್ಕೆ ಇದು ಎಲ್ಲಕ್ಕಿಂತಲೂ ಪ್ರಧಾನವಾದ ಕಾರಣ.

ಉಷ್ಣಯಂತ್ರವು ಮಾನವ ಸಮಾಜವನ್ನು ಮಾರ್ಪಡಿಸಿದಂತೆಯೇ ವಿದ್ಯುಚ್ಛಕ್ತಿಯೂ ಒಂದು ಹೊಸ ಯುಗವನ್ನು ತಂದಿತೆಂದು ಹೇಳಬಹುದು. ಉಷ್ಣಯಂತ್ರದ ಶಕ್ತಿಯನ್ನು ಬಂಡವಾಳಗಾರರು ಮಾತ್ರ ವಶಪಡಿಸಿಕೊಳ್ಳಬಹುದಾಗಿತ್ತು. ವಿದ್ಯುಚ್ಛಕ್ತಿಯ ಉತ್ಪತ್ತಿಗೆ ಹಣವು ವಿಪುಲವಾಗಿ ಬೇಕಾದರೂ ಆ ಶಕ್ತಿಯನ್ನು ಕಡುಬಡವರೂ ಉಪಯೋಗಿಸಿಕೊಳ್ಳಲು ಸಾಧ್ಯ. ಉಷ್ಣಯಂತ್ರಕ್ಕೆ ಸಹಜವಾದ ನಾಗರಿಕತೆಯು ಬಂಡವಾಳಗಾರರ ನಾಗರಿಕತೆಯಾದರೆ ವಿದ್ಯುದ್ಯುಗಕ್ಕೆ ಸಹಜವಾದ ನಾಗರಿಕತೆಯು ಸಮತಾವಾದದ ನಾಗರಿಕತೆ. ವಿದ್ಯುಚ್ಛಕ್ತಿಯ ಸದುಪಯೋಗದಿಂದ ಗ್ರಾಮಗಳಿಗೆ ನಗರ ಜೀವನದ ಸೌಕರ್ಯಗಳನ್ನೆಲ್ಲಾ ಒದಗಿಸಬಹುದು. ಆದರೆ ಇದು ಜನಾನುರಾಗಿ ರಾಜ್ಯಾಡಳಿತದಿಂದ ಮಾತ್ರ ಸಾಧ್ಯ. ಪತ್ರಿಕೋದ್ಯೋಗಿಯೊಬ್ಬನು ರಷ್ಯಾ ದೇಶದ ಕ್ರಾಂತಿಪುರುಷನಾದ ಲೆನಿನ್‌ನನ್ನು "ಬೋಲ್ಷೆವಿಸಂ-ಸಮತಾವಾದ-ಎಂದರೇನು?" ಎಂದು ಕೇಳಿದುದಕ್ಕೆ ಆತನು "ಬೋಲ್ಷೆವಿಸಂ ಎಂದರೆ ಪ್ರತಿಯೊಬ್ಬ ಗ್ರಾಮಸ್ಥನಿಗೂ ಅವನಿಗೆ ಬೇಕಾದಷ್ಟು ವಿದ್ಯುಚ್ಛಕ್ತಿಯನ್ನು ಒದಗಿಸುವುದು" ಎಂದು ಉತ್ತರ ಕೊಟ್ಟನಂತೆ. ಲೆನಿನ್‌ನ ಉತ್ತರವು ಬಹಳ ಅರ್ಥಗರ್ಭಿತವಾದದ್ದು ಮತ್ತು ಸಮರ್ಪಕವಾದದ್ದು.

— ಆರ್. ಎಲ್. ನರಸಿಂಹಯ್ಯ

# ಆತ್ಮನ ಅಸ್ತಿತ್ವ

ಆತ್ಮನು ಶಾಂತಿರೂಪದಿಂದ ಅನುಭವಕ್ಕೆ ಬರುತ್ತಾನೆಂದು ಜ್ಞಾನಮಾರ್ಗದ ಸಾಧಕರೂ, ಜ್ಯೋತಿರೂಪದಿಂದ ಅನುಭವಕ್ಕೆ ಬರುತ್ತಾನೆಂದು ಯೋಗಮಾರ್ಗದ ಸಾಧಕರೂ ತಿಳಿದುಕೊಂಡಿರುತ್ತಾರಷ್ಟೇ? ಆದರೆ ಇಷ್ಟೇ ಅಲ್ಲ ಜ್ಞಾನರೂಪ ದಿಂದಲೂ, ಶಕ್ತಿರೂಪದಿಂದಲೂ, ಆನಂದರೂಪದಿಂದಲೂ ಆತ್ಮನು ಅನುಭವಕ್ಕೆ ಬರುತ್ತಾನೆಂದು ಭಗವಾನ್ ಶ್ರೀ ಅರವಿಂದರು "ಯೋಗ ಪ್ರದೀಪ"ವೆಂಬ ಗ್ರಂಥ ದೊಳಗಿನ ಒಂದು ವಿಸ್ತಾರವಾದ ಪತ್ರದಲ್ಲಿ ನಿರೂಪಿಸಿರುವರು.

ಶ್ರೀ ಶ್ರೀರಾಮಕೃಷ್ಣ ಪರಮಹಂಸರಿಗೆ ನೀರೊಳಗೆ ಹರಿದಾಡುವ ಮೀನುಗಳ ಹೊಟ್ಟೆಯಲ್ಲೆಲ್ಲ ಒಂದೊಂದು ಕಿಡಿಯು ಒಮ್ಮೆ ಕಂಡಿದ್ದಿತೆಂದು ಶ್ರೀರಾಮಕೃಷ್ಣ ವಚನಾಮೃತವೆಂಬ (ಗಾಸ್ಪೆಲ್) ಗ್ರಂಥದಲ್ಲಿ ಹೇಳಿದೆ.

ಮಹಾಭಾರತದ ಶಾಂತಿಪರ್ವದಲ್ಲಿ ಆತ್ಮನು ಪಕ್ಷಿಗಳೊಳಗೆ ತ್ರಿಕೋಣಾಕಾರ ವಾಗಿಯೂ ಪಶುಗಳೊಳಗೆ ಚೌಕೋಣಾಕಾರವಾಗಿಯೂ, ಮನುಷ್ಯರೊಳಗೆ ಕೋಳಿ ತತ್ತಿಯ ಆಕಾರದಂತೆಯೂ ಕಾಣುತ್ತಾನೆಂದು ಹೇಳಲಾಗಿದೆ. ಈ ಕ್ರಮವು ಸ್ವಲ್ಪ ಹಿಂದುಮುಂದಾಗಿರಬಹುದು. ಏಕೆಂದರೆ ಹತ್ತಿರ ಪುಸ್ತಕವಿಲ್ಲದೆ ನೆನಪಿನಿಂದ ಬರೆ ದಿದ್ದೇನೆ. ಶಕ್ತಿಯು ಗೆರೆಗಳ ರೂಪದಿಂದಲೂ ಸಹ ಆತ್ಮನ ಅನುಭವ ಬರುವದೆಂದು ಕೆಲಕೆಲವು ಗ್ರಂಥಗಳಲ್ಲಿ ಹೇಳಿದೆ.

ಥಿಯಾಸಫಿಸ್ಟರಲ್ಲಿ ಸೂಕ್ಷ್ಮ ದೃಷ್ಟಿಯುಳ್ಳ ಸಾಧಕರೊಬ್ಬರಿಗೆ ಬೇರೆ ಬೇರೆ ಲೋಕದ ದೇವತೆಗಳು ಕಂಡಿದ್ದು, ತೀರ ಕೆಳಗಿನ ಲೋಕದ (ಸೂಕ್ಷ್ಮ ಅನ್ನಮಯ. ದೇವತೆಗಳ ಒಂದು ಗುಂಪಿನಲ್ಲಿ ಒಬ್ಬ ಮುಖ್ಯ ದೇವತೆಯಿದ್ದು ಉಳಿದವರು ಅವನ ಸುತ್ತುಮುತ್ತು ಆಡುತ್ತಿದ್ದಂತೆ, ಈ ಪ್ರತಿಯೊಬ್ಬರ ಮೈಯೊಳಗಿನಿಂದ ಒಂದು ಬಂಗಾರದಂಥ ಎಳೆಯು ಹೊರಬಿದ್ದು ಪರಸ್ಪರ ಪ್ರತಿಯೊಬ್ಬರಿಗೆ ಜೋಡಿಸಲಾಗಿದ್ದಿ ತಂತೆ. ಹಾಗೂ ಪ್ರತಿಯೊಬ್ಬರೊಳಗಿಂದ ಒಂದು ಎಳೆಯು ಅವರ ಮುಖ್ಯನಿಗೆ ಜೋಡಿಸಲಾಗಿದ್ದಿತಂತೆ. ಅದೇ ಮೇರೆಗೆ ಈ ಕೆಳಗಿನ ಲೋಕದ ತಂಡದ ಮುಖ್ಯ ನೊಳಗಿನಿಂದ ಹೊರಟ ಒಂದು ಎಳೆಯು ಮೇಲಿನ ಲೋಕದ ತಂಡದ ಒಡೆಯನಿಗೆ ಜೋಡಿಸಲಾಗಿದ್ದಿತಂತೆ. ಅದರಂತೆ ಮೇಲೆ ಮೇಲೆ ಶ್ರೀಮದ್ಭಗವದ್ಗೀತೆಯಲ್ಲಿ ಹೇಳಿದ ಸೂತ್ರಾತ್ಮನ ಅನುಭವವು ಇದಾಗಿರಬಹುದೆಂದು ತೋರುತ್ತದೆ.

ಶ್ರೀ ಅರವಿಂದರು ತಮ್ಮ "ಯೋಗಸಮನ್ವಯ"ವೆಂಬ ಗ್ರಂಥದಲ್ಲಿ ವಿಜ್ಞಾನ ಅರಳಿದಾಗ ಎಲ್ಲರ ಆತ್ಮಗಳು ಒಂದಕ್ಕೊಂದು ಸಂಬಂಧಿಸಲ್ಪಟ್ಟವೆಯೆಂಬುದರ ಸ್ಪಷ್ಟ ದರ್ಶನವಾಗುವದು ಎಂದು ಹೇಳಿದ್ದಾರೆ.

ಹೀಗೆ ವಿವಿಧ "ಪುರುಷ"ರ ಅನುಭವಗಳು ಅನೇಕಾನೇಕ ಪ್ರಕಾರವಾಗಿ ಬರು ತ್ತಿರಬಹುದೆಂದು ತೋರುತ್ತದೆ.

ಆತ್ಮ ವಿಷಯದಲ್ಲಿ ಅತ್ಯಂತ ಪ್ರಖ್ಯಾತವಾದ ಕಠ ಉಪನಿಷತ್ತಿನಲ್ಲಿ "ವಾಣಿಯನ್ನು ಮನದಲ್ಲಿ ಲಯಗೊಳಿಸಬೇಕು, ಮನವನ್ನು ಜ್ಞಾನಾತ್ಮನಲ್ಲಿ ಲಯಗೊಳಿಸಬೇಕು, ಜ್ಞಾನವನ್ನು ಮಹದಾತ್ಮನಲ್ಲಿಲಯಗೊಳಿಸಬೇಕು, ಮಹತ್ತನ್ನು ಶಾಂತಾತ್ಮನಲ್ಲಿ, ಲಯಗೊಳಿಸಬೇಕು." (೧-೩-೧೩)ಎಂದು ಹೇಳಲಾಗಿದೆಯಷ್ಟೆ? (ಯಚ್ಛೇದ್ ವಾಙ್ಮನಸೀ ಪ್ರಾಜ್ಞಃ, ತದ್ಯಚ್ಛೇತ್ ಜ್ಞಾನ ಆತ್ಮನಿ ! ಜ್ಞಾನಂ ಆತ್ಮನಿ ಮಹತಿ ನಿಯಚ್ಛೇತ್, ತದ್ಯಚ್ಛೇತ್ ಶಾಂತ ಆತ್ಮನಿ ॥ ) ಇದರ ಮೇಲಿಂದ ಜ್ಞಾನ ಆತ್ಮ, ಮಹತ್ ಆತ್ಮ, ಶಾಂತ ಆತ್ಮ, ಎಂದು ಮೂರು ಪ್ರಕಾರದ ಆತ್ಮರು ಇರುವರೆಂದು ಸಿದ್ಧವಾಗುವದಷ್ಟೇ ? ಇದೇ ಉಪನಿಷತ್ತಿನಲ್ಲಿ ಇನ್ನೆರಡು ಶ್ಲೋಕಗಳಿವೆ. ಅವುಗಳಲ್ಲಿ —"ಇಂದ್ರಿಯಗಳ ಮೇಲೆ ಮನವಿದೆ, ಮನದ ಮೇಲೆ ಸತ್ವವಿದೆ. (=ಜ್ಞಾನ ಅಥವಾ ಬುದ್ಧಿ ?), ಸತ್ವದ ಮೇಲೆ ಮಹಾನ್ ಆತ್ಮನಿದ್ದಾನೆ, ಮಹತ್ತಿಗಿಂತ ಮೇಲೆ ಅವ್ಯಕ್ತವು (=ಪ್ರಕೃತಿ ?) ಇರುತ್ತದೆ, ಅವ್ಯಕ್ತದ ಮೇಲೆ ವ್ಯಾಪಕನೂ ಲಕ್ಷಣಾತೀತನೂ ಆದ ಪುರುಷನಿದ್ದಾನೆ. (೨-೩-೭ ಮತ್ತು ೮) ಎಂದು ಹೇಳಲಾಗಿದೆ. ಇದರ ಮೇಲಿಂದ, ಪುರುಷ ತತ್ವದ ಕೆಳಗೆ ಪ್ರಕೃತಿ ತತ್ವ, ಪ್ರಕೃತಿ ತತ್ವದ ಕೆಳಗೆ ಮಹತ್ ತತ್ವ, ಮಹತ್ ತತ್ವದ ಕೆಳಗೆ ಬುದ್ಧಿ ತತ್ವ, ಬುದ್ಧಿ ತತ್ವದ ಕೆಳಗೆ ಮನಸ್ ತತ್ವ, ಮನದ ಕೆಳಗೆ ಸಕಲ ಜ್ಞಾನೇಂದ್ರಿಯ ಹಾಗೂ ಕರ್ಮೇಂದ್ರಿಯಗಳು ಇರುತ್ತವೆ ಎಂದು ಹೇಳುವ ಪುರಾತನ ತತ್ವಕ್ರಮದಲ್ಲಿ ಎಲ್ಲಕ್ಕೂ ಮೇಲೆ ಇರುವ "ಪುರುಷ" ತತ್ವದ ಕೆಳಗಿರುವ ಮಹತ್‌ತತ್ವ, ಹಾಗೂ ಬುದ್ಧಿ ತತ್ವ (ಜ್ಞಾನ ?) ಗಳಿಗೂ ಕೂಡ ಮೇಲೆ ಹೇಳಿದ ಮೊದಲನೆಯ ಶ್ಲೋಕದಲ್ಲಿ ಆತ್ಮ ಆತ್ಮ ಎಂದೇ (ಜ್ಞಾನ ಆತ್ಮ, ಮಹತ್ ಆತ್ಮ ) ಹೇಳಿರುವುದನ್ನು ನೋಡಿದರೆ"ಮೂಲ ಪುರುಷ"ನ ಕೆಳಗೂ ಕೆಲವು "ಪುರುಷ"ರು ಇದ್ದಾರೆಂದು ಸ್ಪಷ್ಟವಾಗುವದಿಲ್ಲವೆ ? ಈ "ಮೂಲ ಪುರುಷ"ನಿಗೇ ಕಠೋಪನಿಷತ್ತು "ಅಂಗುಷ್ಠಮಾತ್ರಪುರುಷ"ನೆಂದು ಹೇಳುತ್ತದೆ. (ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ) ಇಷ್ಟೇ ಅಲ್ಲ, ಈ ಅಂಗುಷ್ಠಮಾತ್ರ ಪುರುಷನು ಹೊಗೆಸುತ್ತಿಸಲಾರದ ಉಜ್ವಲ ಜ್ಯೋತಿಯಂತೆ ಇದ್ದಾನೆಂದು ಹೇಳುತ್ತದೆ. (ಅಗುಷ್ಠಮಾತ್ರಃ ಪುರುಷೋ ಜ್ಯೋತಿರಿವ ಅಧೂಮುಕಃ) [೨-೧-೧೨-೧೩] ಭಗವಾನ್ ಶ್ರೀ ಅರವಿಂದರಾದರೋ ಹೃದಯ ಗುಹೆಯಲ್ಲಿರುವ (ಗುಹಾಹಿತಂ, ಗಂಹ್ವರೇಷ್ಠಂ) ಈ ಅಂಗುಷ್ಠಮಾತ್ರ ಪುರುಷನಿಗಿಂತ ಮೇಲೆ ಸಹ ಇನ್ನೂ ಕೆಲವರು "ಪುರುಷ"ರು ಇದ್ದಾರೆಂದು ಹೇಳುತ್ತಾರೆ. ೨೫ ತತ್ವಗಳ ವಿವರಣೆ ಹೇಳುವ ಗ್ರಂಥಗಳಲ್ಲಿ "ಪುರುಷ" ತತ್ವವೇ ಕಡೆಯದು (ಮೇಲಿನದು) ಆಗಿರುತ್ತದಷ್ಟೆ ? ಆದರೆ ೩೬ ತತ್ವಗಳ ವಿವರಣೆಯುಳ್ಳ ಆಗಮಿಕ ಗ್ರಂಥಗಳಲ್ಲಿ ೨೫ನೆಯದಾದ ಪುರುಷ ತತ್ವದ ಮೇಲೆ ಇನ್ನೂ ೧೧ ತತ್ವಗಳನ್ನು ಹೇಳಲಾಗಿದೆಯೆಂಬುದು ಸರ್ವಶ್ರುತ. ಈ ಎರಡನೆಯ ವಿವರಣ ಪದ್ಧತಿಯಲ್ಲಿ ಮೇಲಿನ ಹನ್ನೊಂದು ತತ್ವಗಳಲ್ಲಿ ಎಲ್ಲಕ್ಕೂ ಮೇಲಿನ ಐದು ತತ್ವಗಳನ್ನು ಒಂದು

ವರ್ಗವಾಗಿಯೂ, ಅದರ ಕೆಳಗಿನ ಆರು ಹಾಗೂ "ಪುರುಷ" ತತ್ವ ಈ ಏಳನ್ನು ಕೂಡಿಸಿ ಎರಡನೆಯ ವರ್ಗವಾಗಿಯೂ, ಆ ಮೇಲೆ ಪ್ರಕೃತಿಯೇ ಮುಖ್ಯವಾಗಿರುವ ಕೆಳಗಿನ ೨೪ ತತ್ವಗಳನ್ನು ಮೂರನೆಯ ವರ್ಗವಾಗಿಯೂ ವಿಂಗಡಿಸಲಾಗಿದೆಯಷ್ಟೆ? ಹಾಗೂ ಈ ಮೂರು ವರ್ಗಗಳಿಗೆ ಮೇಲಿನಿಂದ ಕ್ರಮವಾಗಿ, ಶುದ್ಧ, ಮಿಶ್ರ, ಅಶುದ್ಧ ಎಂದು ಹೆಸರಿಡಲಾಗಿದೆ. ಎಲ್ಲಕ್ಕೂ ಮೇಲಿನ ಐದು ತತ್ವಗಳಲ್ಲಿ ಮೇಲಿನ ಮೂರು ಏರಡರದೇ ಒಂದು ವರ್ಗ, ಹಾಗೂ ಅವುಗಳ ಕೆಳಗಿನ ಉಳಿದ ಎರಡು ಮೂರರದೇ ಇನ್ನೊಂದು ವರ್ಗವೆಂದು ಸಹ ವಿಂಗಡಿಸಬಹುದೆಂದು ಶ್ರೀ ಅರವಿಂದರ ತತ್ವವಿಚಾರ ಸರಣಿಯಿಂದ ವಿಚಾರ ಮಾಡಿದಾಗ ಅನಿಸುತ್ತದೆ. ಅದು ಹೇಗೆಂದರೆ—ಮೊದಲನೆಯ ದಾದ ಶಿವತತ್ವ ಹಾಗೂ ಎರಡನೆಯದಾದ ಶಕ್ತಿತತ್ವ ಇವೆರಡಕ್ಕೇ ಅಥವಾ ಸದಾಶಿವ ತತ್ವವೊಂದನ್ನು ಕೂಡಿಕೊಂಡು ಮೇಲಿನ ಮೂರಕ್ಕೆ ಸಚ್ಚಿದಾನಂದ ವರ್ಗವೆಂದೂ, ಹಾಗೂ ನಾಲ್ಕನೆಯದಾದ ಈಶ್ವರತತ್ವ ಮತ್ತು ಐದನೆಯದಾದ ಶುದ್ಧವಿದ್ಯಾ (ಅಥವಾ ಶುದ್ಧ ದಿವ್ಯಜ್ಞಾನ) ತತ್ವ ಇವೆರಡಕ್ಕೆ ಅಥವಾ ಇವೆರಡರ ಮೇಲಿರುವ ೩ನೆಯದಾದ ಸದಾಶಿವ ತತ್ವವನ್ನು ಸಹ ಇದರಲ್ಲಿಯೇ ಕೂಡಿಸಿಕೊಂಡು, ಸದಾಶಿವ, ಈಶ್ವರ, ಶುದ್ಧವಿದ್ಯಾ ಎಂಬ ಈ ತತ್ವತ್ರಯಕ್ಕೆ "ವಿಜ್ಞಾನ" ವರ್ಗವೆಂದೂ ಹೆಸರಿಡಬಹುದು. ಶಿವ ಎಂದರೆ ಸತ್, ಶಕ್ತಿಯೆಂದರೆ ಚಿತ್ ಎಂಬುದಂತೂ ಸ್ಪಷ್ಟವೇ ಇದೆ. ಈ ಕ್ರಮಾನುಸಾರವಾಗಿ ಮೂರನೆಯದಾದ ಸದಾಶಿವ ತತ್ವವು ಸಚ್ಚಿದಾನಂದದೊಳಗೆ ಮೂರನೆಯದಾದ "ಆನಂದ" ತತ್ವವಾಗಿರಬಹುದೇನೊ ಎಂದು ಊಹೆಗೆ ಅನಿಸುತ್ತದೆ. ಆದರೆ ಭಗವಾನ್ ಶ್ರೀ ಅರವಿಂದರ ಭಕ್ತರಲ್ಲೊಬ್ಬರಾದ ಶ್ರೀ ವೀರೇಂದ್ರ ಕಿಶೋರರಾಯಚೌಧರಿ ಎಂಬ ಮಹಾಶಯರು ಶ್ರೀ ಅರವಿಂದರ ಜಯಂತೀ ಸಂಚಿಕೆಯೊಂದರಲ್ಲಿ "ಸದಾಶಿವ, ಈಶ್ವರ, ಶುದ್ಧವಿದ್ಯಾ" ಈ ಮೂರು ತತ್ವಗಳಿಗೆ ಕೂಡಿ "ವಿಜ್ಞಾನ"ವೆಂದು ಹೇಳಿದ್ದಾರೆ. ಈ ಮಾತಿಗೆ ಶ್ರೀ ಅರವಿಂದಾಶ್ರಮದ ಸೆಕ್ರೆಟರಿಗಳಾದ ಶ್ರೀನಲಿನೀಕಾಂತಗುಪ್ತ ಮಹೋದಯರ "ಚೇತನದ ಅವತರಣ" ("ಯೋಗ ಆಫ್ ಶ್ರೀ ಅರೋಬಿಂದೋ" ಭಾಗ ೩ ಎಂಬ ಪುಸ್ತಕದಲ್ಲಿ) ಎಂಬ ಲೇಖನದಲ್ಲಿರುವ ಒಂದು ಮಾತು ಪುಷ್ಟಿಯನ್ನು ಕೊಡುತ್ತದೆ. ಅದಾವುದೆಂದರೆ "ಎಲ್ಲಕ್ಕೂ ಮೇಲಿರುವ ಸಚ್ಚಿದಾನಂದದಲ್ಲಿ ಪರಮೇಶ್ವರ ಪರಮೇಶ್ವರಿಯರಿಬ್ಬರೇ ಇದ್ದಾರೆ." ಆ ಮೇಲೆ ಈ ೩೬ ತತ್ವಗಳ ವಿವರಣೆಯುಳ್ಳ ಪುರಾತನ ಶಾಸ್ತ್ರಗಳಲ್ಲಿ (ಶ್ರೀ ನಿಜಗುಣ ಶಿವಯೋಗಿಗಳ "ವಿವೇಕ ಚಿಂತಾಮಣಿ"ಯಲ್ಲಿ) ಈಶ್ವರತತ್ವದೊಳಗೆ ಅಷ್ಟವಿದ್ಯೇಶ್ವರರು ಇದ್ದಾರೆಂದು ಹೇಳಲಾಗಿದೆಯಷ್ಟೇ? ಶ್ರೀ ಅರವಿಂದರೂ "ಮಾತಾ" ಗ್ರಂಥದಲ್ಲಿ ಈ ವಿದ್ಯೇಶ್ವರರಿಗೆ ಸರಿ ಹೋಲುವ ಈಶ್ವರನ ಅನೇಕ ವ್ಯಕ್ತಿತ್ವಗಳ ಹಾಗೂ ಶಕ್ತಿಸ್ವರೂಪಿಣಿಯರಾದ ಮಹೇಶ್ವರಿ, ಮಹಾಕಾಲಿ, ಮಹಾಲಕ್ಷ್ಮಿ, ಮಹಾ ಸರಸ್ವತಿ ಇನ್ನೂ ಸೂಕ್ಷ್ಮತಮರಾದ ಅನೇಕ ಮಾತೆಯರ ವರ್ಣನೆಯಿದ್ದು ಅವರು "ವಿಜ್ಞಾನ"ದಲ್ಲಿದ್ದಾರೆಂದು ಶ್ರೀ ನಲಿನೀಕಾಂತರ ಲೇಖನದಲ್ಲಿ ಹೇಳಲಾಗಿದೆ.

ಇವರೆಲ್ಲರ ಮೇಲೆ “ ವಿಜ್ಞಾನಮಯೀ ಮಹಾಶಕ್ತಿ ”ಯಿದ್ದಾಳೆಂದು “ ಮಾತಾ ” ಗ್ರಂಥದಲ್ಲಿ ಸೂಚಿಸಲಾಗಿದೆ. ಈ “ ವಿಜ್ಞಾನಮಯಿ ಮಹಾಶಕ್ತಿ ”ಗೆ ಸದೃಶನಾದ ಈಶ್ವರನ ವ್ಯಕ್ತಿವಿಶೇಷವೆಂದರೆ “ ಸದಾಶಿವ ”ನೇ ಆಗಿರಬಹುದೆಂದು ಊಹಿಸಲಿಕ್ಕೆ ಬರುವಂತಿಲ್ಲವೇ ? ಇವೆಲ್ಲ ಮಾತುಗಳ ಮೇಲಿಂದ ಹೀಗೆ ಶ್ರೀ ವೀರೇಂದ್ರಕಿಶೋರ ರಾಯಚೌಧರಿಯವರ ಅಭಿಪ್ರಾಯದಂತೆ ಸದಾಶಿವತತ್ವ (ವಿಜ್ಞಾನಮಯ ಮಹಾ ಪುರುಷೋತ್ತಮ), ಈಶ್ವರತತ್ವ (ಅಷ್ಟವಿದ್ಯೇಶ್ವರರು) ಹಾಗೂ ಶುದ್ಧವಿದ್ಯಾತತ್ವ (ವಿಜ್ಞಾನತತ್ವ) ಈ ಮೂರೂ ತತ್ವಗಳಿಂದ ಕೂಡಿದ್ದೇ “ ವಿಜ್ಞಾನ ” ಎಂದು ಅನ್ನ ಲಿಕ್ಕೂ ಸಹ ಅವಕಾಶವುಂಟೆಂದು ಕಂಡುಬರುತ್ತದೆ. ಏನೇ ಇರಲಿ ಮೇಲಿನ ಐದು ತತ್ವಗಳು ಕೂಡಿ ವೇದಾಂತದೊಳಗಿನ ಸಚ್ಚಿದಾನಂದ ಹಾಗೂ ವಿಜ್ಞಾನ ತತ್ವ ಗಳಾಗುತ್ತವೆ. ವಿಜ್ಞಾನದ ಕೆಳಗೆ ಶ್ರೀ ಅರವಿಂದರು ಅಧಿಮಾನಸ, ಸಂಬೋಧಿ ಮಾನಸ, ಪ್ರಕಾಶಮಯ ಮಾನಸ, ಊರ್ಧ್ವಮಾನಸ ಮೊದಲಾದ ಉಪಭೂಮಿಕೆ ಗಳಿವೆಯೆಂದು ಹೇಳುತ್ತಾರೆ. ಆದ್ದರಿಂದ ಮೂವತ್ತಾರರಲ್ಲಿ ಮೇಲಿನ ಐದು ತತ್ವಗಳ ಕೆಳಗೆ ಇರುವ ನಡುವಿನ ಆರೇಳು ತತ್ವಗಳಲ್ಲಿ ಕೆಲವು ಶ್ರೀ ಅರವಿಂದರ ವಿಜ್ಞಾನದ ಕೆಳಗಿನ ಈ ಉಪಭೂಮಿಕೆಗಳಿಗೆ ಹೊಂದುತ್ತಿರಬಹುದೆಂದು ನನಗೆ ಅನಿಸುತ್ತದೆ. ಉದಾಹರಣಾರ್ಥವಾಗಿ ಆರನೆಯದಾದ “ ಮಾಯಾ ” ತತ್ವವು ಶ್ರೀ ಅರವಿಂದರ “ ಅಧಿಮಾನಸ ” ವಾಗಿರಬಹುದು. ಏಕೆಂದರೆ ಅಧಿಮಾನಸದಲ್ಲಿ ಪರಮಾತ್ಮನ ಅಗಾಧ “ ದೈವೀಮಾಯೆ ”ಯಿದೆಯೆಂದು (ಬಿಡಿಬಿಡಿಯೆಲ್ಲಾ ಒಂದೇ ಇಡಿಯಾಗಿ ಕಾಣುವಂತಹದು) ಅವರ “ ದಿವ್ಯ ಜೀವನ ” ಎಂಬ ಮಹಾಗ್ರಂಥದಲ್ಲಿ ಮೊದಲನೆಯ ಸಂಪುಟದಲ್ಲಿ ಸವಿಸ್ತಾರವಾಗಿ ವಿವರಿಸಲ್ಪಟ್ಟಿರುವದು.

ಮಾಯಾ (=ದೈವೀ ಮಾಯಾ ?) ತತ್ವದ ಕೆಳಗಿರುವ ಕಾಲ, ಕಲಾ, ವಿದ್ಯಾ, ನಿಯತಿ ( =ಕರ್ಮ ? ) ರಾಗ ಎಂಬ ಐದು ತತ್ವಗಳಿಗೆ “ ಮಾಯಾ ಪಂಚಕ ” ವೆಂದು ಅನ್ನುವರೆಂದು ಶ್ರೀ ವೀರೇಂದ್ರ ಕಿಶೋರರು ಹೇಳಿರುವರು. “ ಮಾಯಾ ” ತತ್ವಕ್ಕೆ ಶ್ರೀ ಅರವಿಂದರ “ ಅಧಿಮಾನಸ ” (ಓವ್ಹರ್ ಮಾಯಿಂಡ) ಎಂದು ಅನ್ನುವೆವಾದರೆ ಅದರ ಕೆಳಗಿನ ಐದು ತತ್ವಗಳಿಗೆ “ ಅಧಿಮಾನಸ ಪಂಚಕ” ವೆಂದು ನಾವು ಅನ್ನಬಹುದಲ್ಲವೇ ? ಇದರ ಕೆಳಗಿರುವ “ ಪುರುಷ ” ತತ್ವದಲ್ಲಿ ಎರಡು ಉಪಭಾಗಗಳಿವೆಯೆಂದು ತೋರುತ್ತದೆ. ಅವು ಯಾವವೆಂದರೆ, ಮೇಲಿನದು, ಪ್ರಕೃತಿಯನ್ನು ನಿಯಂತ್ರಣಗೊಳಿಸಲು ಸಮರ್ಥನಾದ ಹೃತ್ಪುರುಷ ಅಥವಾ ಅಂತರಾತ್ಮನ ವಿಭಾಗ. ಹಾಗೂ ಅನಂತರ, ಪ್ರಕೃತಿಕ್ರಿಯೆಗಳಿಗೆ ಉದಾಸೀನನಾದ “ಸಾಕ್ಷೀಪುರುಷ”ನ ವಿಭಾಗ. ಬಹುಶಃ ಮನೋಮಯ, ಪ್ರಾಣಮಯ, ಅನ್ನಮಯ ಪುರುಷರ ಸಮುಚ್ಚಯಕ್ಕೇ ಈ “ ಪುರುಷ ” ಅಥವಾ “ ಸಾಕ್ಷೀಪುರುಷ ” ಎಂಬ ಹೆಸರಿರಬಹುದೆಂದು ತೋರುತ್ತದೆ. ಇಲ್ಲಿ ಇನ್ನೊಂದು ಮಹತ್ವದ ಮಾತಾವು ದೆಂದರೆ ಹೃತ್ಪುರುಷ ಅಥವಾ ಅಂತರಾತ್ಮನ ವಿಕಾಸದ ಅನಂತರ ಶ್ರೀ ಅರವಿಂದರ

ಪೂರ್ಣಯೋಗದಲ್ಲಿ ಅಂತರಾತ್ಮನಿಗಿಂತ ಮೇಲಿನ, ಆದರೆ ವಿಜ್ಞಾನಮಯ ಪುರುಷನಿಗಿಂತ ಕೆಳಗಿನ, ಆಧ್ಯಾತ್ಮಪುರುಷನ (ಅಧಿಮಾನಸಪಂಚಕ ಹಾಗೂ ಅಧಿಮಾನಸಗಳ ಅಧಿಷ್ಠಾತೃವಾಗಿರಬಹುದೇ ಈತ ?) ಅರಳುವಿಕೆಯ ಕಾಲದಲ್ಲಿ ಮೊದಲಿಗೆ ಮೇಲಿನ ದೈವೀಶಾಂತಿ, ಶಕ್ತಿ, ಜ್ಯೋತಿ, ಜ್ಞಾನ, ಆನಂದ ಮೊದಲಾದವುಗಳು ಇಳಿಯುವವೆಂದು ಹೇಳಲಾಗಿದೆಯಷ್ಟೇ? "ಮಾಯಾ ಪಂಚಕ"ದಲ್ಲಿ ಕೆಲವು ಇವಾಗಿರಬಹುದೇನೊ ಎಂದು ಅನಿಸುತ್ತದೆ. ಹೇಗೆಂದರೆ "ರಾಗ"= "ಆನಂದ", "ವಿದ್ಯಾ"= "ಜ್ಞಾನ", "ಕಲಾ"= "ಜ್ಯೋತಿ", "ನಿಯತಿ"= "ಶಕ್ತಿ" ಇತ್ಯಾದಿ. ಆದರೆ ಇದರ ನಿಜತ್ವವು ಆ ಭೂಮಿಕೆಯ ಅನುಭವವುಳ್ಳವರಿಗೇ ಗೊತ್ತು. ಏನೇ ಇರಲಿ. ಅಧಿಮಾನಸಾದಿ ನಾಲ್ಕು ಉಪಭೂಮಿಕೆಗಳೂ, ಶಾಂತಿ-ಶಕ್ತಿ-ಜ್ಯೋತಿ ಮೊದಲಾದ ದೈವೀಶಕ್ತಿಗಳ ಅವತರಣವೂ ಶ್ರೀ ಅರವಿಂದರ ಯೋಗದಲ್ಲಿ ಎರಡನೆಯ ಪುರುಷನಾದ "ಆಧ್ಯಾತ್ಮಪುರುಷ"ನ ರಾಜ್ಯಕ್ಕೆ ಸೇರಿದವುಗಳೆಂಬುದು ಸರ್ವಶ್ರುತ. ಇವನ ಮೇಲಿನವನಾದ "ವಿಜ್ಞಾನಮಯ ಪುರುಷ"ನೇ ಶ್ರೀ ಅರವಿಂದರ ಯೋಗದೊಳಗಿನ ಮೂರನೆಯ ಪುರುಷನಾಗಿದ್ದಾನೆಂಬ ಮಾತನ್ನು ಹಿಂದೆ ಹೇಳಿದ್ದೇನೆ. ಇವನಿಗಿಂತ ಮೇಲಿನವನಾದ ಸಚ್ಚಿದಾನಂದಮಯ ಪುರುಷನ ವಿಕಾಸವು ಇದರ ಮುಂದಿನ ಯುಗದ ಕಾರ್ಯವಾಗಿದೆಯೆಂದು ಶ್ರೀ ಅರವಿಂದರು ಹೇಳಿದ್ದಾರೆ. ಆದ್ದರಿಂದ ಅವನ ವಿಷಯಕ್ಕೆ ನಾವು ಈಗ ವಿಚಾರ ಮಾಡಬೇಕಾಗಿಲ್ಲವೆಂಬುದು ಸಹಜ.

ಶ್ರೀ ಅರವಿಂದಾಶ್ರಮದ ಸೆಕ್ರೆಟರಿಗಳಾದ ಶ್ರೀ ನಲಿನೀಕಾಂತ ಗುಪ್ತ ಮಹೋದಯರು ತಮ್ಮ "ಬೆಳಕಿನೆಡೆಗೆ" (ಟೋಡ್ರ್ಸ್ ದಿ ಲಾಯಿಟ್) ಎಂಬ ವಚನ ಸಂಗ್ರಹದಲ್ಲಿ ಈ ವಿಷಯದಲ್ಲಿ ಒಂದು ಅತ್ಯಂತ ಸುಂದರವಾದ ವಚನವನ್ನು ಬರೆದಿದ್ದಾರೆ. ಅದು "ಅಂತರಾತ್ಮನು (ಸೋಲ್) ಪರಮಾತ್ಮನ ಒಂದು ಅಂಶವಾಗಿದ್ದಾನೆ. ಮಾನವ ಪ್ರಾಣಿಯ ಹೃದಯ ಸಿಂಹಾಸನದಲ್ಲಿ ಆತನು ಮಂಡಿಸಿದ್ದಾನೆ. ಈತನು ಮಹಾಶಕ್ತಿಯ ಶಿಶುವಾಗಿದ್ದಾನೆ. ಮರಣಶೀಲವಾದದ್ದರಲ್ಲಿ ಈತನು ಅಮರನಾಗಿದ್ದಾನೆ. ಜಗತ್ತಿನ ಜೀವಿಗಳ ವಿಕಾಸ ಯಾತ್ರೆಯಲ್ಲಿ ಪುನಃ ಪುನಃ ಜನ್ಮಿಸಿ ಆಂತರಿಕ ಸದ್ಗುಣಗಳನ್ನು ಜೀವನದ ಸತ್ಯದಲ್ಲಿ ಪ್ರಕಟಗೊಳಿಸುವ ಗೂಢ ದೇವತ್ವದಿಂದ ಕೂಡಿದವನಾಗಿದ್ದಾನೆ.

"ಆತ್ಮನು (ಸೆಲ್ಫ್) ವ್ಯಕ್ತಿಗತ ಪುರುಷನಾಗಿದ್ದಾನೆ. ಈತನು ಕೇವಲ ಇರುವಿಕೆಯ ಅರಿವಿನಲ್ಲಿರುತ್ತಾನೆ. ಕೇವಲ ತನ್ನ ಆನಂದದಲ್ಲಿ ತಾನಿರುತ್ತಾನೆ. ಈತನು ಸರ್ವಸಂಗತಿಗಳಿಗೆ ಸಾಕ್ಷಿಯೂ ಅನುಮಂತನೂ ಆಗಿದ್ದು, ಜೀವನದಲ್ಲಿ ಬರುವ ಸರ್ವ ಬದಲಾವಣೆಗಳಿಗಿಂತ ಮೇಲೆ ಇರುತ್ತಾನೆ.

"(ಮೂಲ) ಜೀವಾತ್ಮನು (ಸ್ಪಿರಿಟ್) ಸರ್ವವ್ಯಾಪಕನೂ, ವಿಶ್ವಾತ್ಮನೂ, ವಿಶ್ವಾತೀತನೂ ಆಗಿರುತ್ತಾನೆ."

"ಪರಮಾತ್ಮನು (ಸುಪ್ರೀಮ್ ಡಿವ್ಹಾಯ್ನ್) ಪುರುಷೋತ್ತಮನಾಗಿದ್ದಾನೆ; ತನ್ನ ಇರವು ಮತ್ತು ಪ್ರಕಟನೆಗಳಿಂದ ಅಂದರೆ ಸತ್ ಮತ್ತು ಶಕ್ತಿಗಳಿಂದ ಕೂಡಿದವನಾಗಿದ್ದಾನೆ."

— ಮಧುರಚೆನ್ನ

## ಪ್ರತಿಮಾ ಮತ್ತು ಪ್ರತಿಕೃತಿ

ಪರಿಚಿತನಾದ ಮನುಷ್ಯ ವ್ಯಕ್ತಿಯೊಬ್ಬನ ಆಕೃತಿಯನ್ನು ಎಷ್ಟು ಮಂದಿ ಚಿತ್ರಕಾರರು ಚಿತ್ರಿಸಿದರೂ ಆ ಎಲ್ಲ ಚಿತ್ರಗಳಲ್ಲಿಯೂ ಒಬ್ಬನ ರೂಪವನ್ನೆ ಕಾಣುತ್ತೇವೆ. ರೇಖಾರಚನೆಯಲ್ಲಿ, ವರ್ಣಪ್ರದರ್ಶನದಲ್ಲಿ, ಭಾವಪ್ರಕಾಶನದ ವಿಧಾನದಲ್ಲಿ ಅವರವರ ಕಲೆಗಳಿಗೆ ವ್ಯತ್ಯಾಸವಿರಬಹುದು. ಆದರೆ ಒಬ್ಬನ ಮುಖಮುದ್ರೆಯಲ್ಲಿ, ವ್ಯಕ್ತಿರೂಪದಲ್ಲಿ ವ್ಯತ್ಯಾಸವಿರುವುದಿಲ್ಲ. ಹಾಗೇನಾದರೂ ಬದಲಾವಣೆ ಕಂಡುಬಂದರೆ ಅಂತಹ ಚಿತ್ರವನ್ನು ನಾವು ಹುಸಿ ಎಂದು ತಿರಸ್ಕರಿಸುತ್ತೇವೆ. ಮೂಲದೊಂದಿಗಾಗಲಿ ಅಥವಾ ಮೂಲದ ಸ್ಮೃತಿಯೊಂದಿಗಾಗಲಿ ಹೋಲಿಸಿ ಅದರ ಮಿಥ್ಯೆಯನ್ನು ಸ್ಥಾಪಿಸಲು ಸಮರ್ಥರಾಗುತ್ತೇವೆ. ಮೂಲಕೃತಿಗೆ ಸರಿಯಾದ ಪ್ರತಿಕೃತಿಯಲ್ಲವೆಂದು ನಿಸ್ಸಂದೇಹವಾದ ನಿರ್ವಿವಾದವಾದ ಇತ್ಯರ್ಥಕ್ಕೆ ಬರುತ್ತೇವೆ.

ಚರಿತ್ರೆಯ ಒಬ್ಬ ವ್ಯಕ್ತಿಯನ್ನು ಆತನ ನಿಜರೂಪದಲ್ಲಿ ಚಿತ್ರಿಸುತ್ತೇನೆಂದು ಹೊರಡುವ ವರ್ಣಶಿಲ್ಪಿ ತನ್ನ ಕೃತಿಯ ಸತ್ಯತೆಗೆ ಬಾಹ್ಯಪ್ರಮಾಣಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಹಾಗಲ್ಲದೆ, ಅಕ್‌ಬರ್ ಎಂದೋ ಮಹಾತ್ಮಾ ಗಾಂಧಿ ಎಂದೋ ಹೆಸರು ಕೊಡುವುದಕ್ಕೆ ಬದಲಾಗಿ, ತನ್ನ ಕೃತಿಗೆ 'ವಾಯುದೇವ' ಎಂದು ಹೆಸರಿಡುವ ಚಿತ್ರಕಾರನನ್ನು ಯಥಾರ್ಥತೆಯ ಅಥವಾ ವಾಸ್ತವತೆಯ ಒರೆಗಲ್ಲಿಗೆ ಹಚ್ಚುವುದು ಹೇಗೆ ಸಾಧ್ಯ? ಯಾವ ಮೂಲವನ್ನಿಟ್ಟುಕೊಂಡು ಅವನ 'ವಾಯುದೇವ' ನನ್ನು ಹೋಲಿಸೋಣ? ಅವನ ಚಿತ್ರದ 'ವಾಯುದೇವ' ಯಾವ ನಿಜವಾದ ವಾಯುದೇವನ ಪ್ರತಿಕೃತಿ?

ಪ್ರಕೃತಿಯಲ್ಲಿ ವಾಯುವನ್ನೇನೊ ಅನುಭವಿಸುತ್ತೇವೆ, ಅದರ ಅರೂಪಾವಸ್ಥೆಯಲ್ಲಿ ಅದನ್ನೇ ನೋಡಲಾಗದಿದ್ದರೂ ಸರೂಪದ ಮೇಲೆ ಗಾಳಿ ತನ್ನ ವಿವಿಧಸ್ಥಿತಿಗಳಲ್ಲಿ ಉಂಟುಮಾಡುವ ಪರಿಣಾಮದ ಚಿತ್ರಗಳಲ್ಲಿ ಅದು ಗೋಚರವಾಗುತ್ತದೆ: ತನ್ನ ಗರಿಗಳನ್ನೆಲ್ಲ ಒಕ್ಕಡೆಗೆ ಚಾಚಿ, ಬಾಗಿ, ತೂಗಾಡುತ್ತಿರುವ ತೆಂಗಿನ ಮರದ ಚಿತ್ರದಲ್ಲಿ. ಉಲ್ಲೋಲ ಕಲ್ಲೋಲವಾಗಿ ಹೆದ್ದೆರೆಗಳಿಂದ ತೀರವನ್ನಪ್ಪಳಿಸುತ್ತಿರುವ ಕಡಲಿನ ಚಿತ್ರದಲ್ಲಿ. ಗುಡಿಸಲಿನ ಮೇಲುಹೊದಿಕೆಯಿಂದ ತೂರಿ, ಚಿಮ್ಮಿ,

ಅಂತರಪಿಶಾಚಗಳಂತೆ ಅಂತರಿಕ್ಷದಲ್ಲಿ ರಿಂಗಣಗುಣಿಯುತ್ತಿರುವ ಹುಲ್ಲಿನ ಚಿಂದಿಗಳ ಚಿತ್ರದಲ್ಲಿ. ದಿಗಂತದಿಂದೆದ್ದು ಬಾಂದಳವನ್ನೆಲ್ಲ ಆಕ್ರಮಿಸುವ ಕಾರ್ಮೋಡಗಳ ವೇಗಗಮನದ ಚಿತ್ರದಲ್ಲಿ. ಸುಗ್ಗಿಯ ಹೂದೋಟದಲ್ಲಿ ಒಯ್ಯೊಯ್ಯನೆ ತಲೆಯೊಲೆ ಯುವ ಬಣ್ಣಬಣ್ಣದ ಹೂಗಳ ಲಾಸ್ಯದೃಶ್ಯದಲ್ಲಿ.–ಇಂತಹ ನೂರಾರು ಚಿತ್ರ ಗಳಲ್ಲಿ, ಬಲ್ಗಾಳಿಯಾಗಿ, ಕಾರ್ಗಾಳಿಯಾಗಿ, ಬಿರುಗಾಳಿಯಾಗಿ, ತಿರಿಗಾಳಿಯಾಗಿ, ತಂಗಾಳಿಯಾಗಿ, ಮೇಲ್ಗಾಳಿಯಾಗಿ, ಅನೇಕಾವಸ್ಥೆಗಳಲ್ಲಿ ವಾಯು ನಮ್ಮ ಅನುಭವಕ್ಕೆ ಬರುತ್ತದೆ. ಆದರೆ ಮೇಲೆ ಹೇಳಿದ ಚಿತ್ರದ 'ವಾಯುದೇವ' ನನ್ನು ಯಾರು ಕಂಡಿದ್ದಾರೆ? ಅಂತಹ ವ್ಯಕ್ತಿ ಇದ್ದಾನೆಯೆ? ಇರದಿದ್ದರೆ ಚಿತ್ರಕಾರನು ಸುಳ್ಳುಗಾರನೋ ಮೋಸಗಾರನೋ ಆಗಬೇಕಲ್ಲವೆ?

ಚಿತ್ರಕಾರನು ತನ್ನ ಕೃತಿಯನ್ನು ಪ್ರತಿಕೃತಿ ಎಂದು ಕರೆದಿದ್ದರೆ ಅದು ಹುಸಿಯೂ ಮೋಸವೂ ಆಗುತ್ತಿತ್ತು. ಆದರೆ ಅವನು ತನ್ನ ಚಿತ್ರವನ್ನು ಕಣ್ಣಿಗೆ ಕಾಣುವ ಪ್ರಕೃತಿಯ ಪ್ರತಿಕೃತಿ ಎಂದು ತಿಳಿಯುವುದಿಲ್ಲ. ಅವನ ಚಿತ್ರಕೃತಿ ಯಾವೊಬ್ಬ ವ್ಯಕ್ತಿಯ ರೂಪಕ್ಕೂ ಕನ್ನಡಿ ಹಿಡಿಯುವುದಿಲ್ಲ. ಅವನದು ಬರಿಯ ರೂಪಕಲೆಯಲ್ಲ; ಭಾವಕಲೆ. ಎಂದರೆ ಭಾವಕ್ಕೆ ರೂಪಕಲ್ಪನೆಯಾಗಿದೆ, ಅಷ್ಟೆ ಗಾಳಿಯನ್ನು ಆದರ ನಾನಾ ಸ್ಥಿತಿಗಳಲ್ಲಿ ಅನುಭವಿಸಿ ಅದರ ಅನೇಕಾನೇಕ ದೃಶ್ಯಗಳನ್ನೂ ಅವುಗಳಿಂದ ಪ್ರೇರಿತವಾದ ಬಹುಸಂಖ್ಯೆಯ ಭಾವಗಳನ್ನೂ ತನ್ನ ರಸಗರ್ಭದಲ್ಲಿ ಧಾರಣೆಮಾಡಿಕೊಂಡ ವರ್ಣಶಿಲ್ಪಿ ತನ್ನ ರಸಾನುಭೂತಿಗೆ ರೂಪದಾನಗೈದು, ಕಾಲತುಂಬಿದ ಮೇಲೆ ಆದನ್ನು ಪ್ರಕಟಿಸಿ, ಆದಕ್ಕೆ "ವಾಯು ದೇವ" ಎಂದು ನಾಮಕರಣ ಮಾಡುತ್ತಾನೆ.

ಹೊಸದಾಗಿ ಹುಟ್ಟಿದ ಶಿಶು ಯಾವುದರ ಪ್ರತಿಕೃತಿ? ಅದು ಸತ್ಯವೊ ಮಿಥ್ಯೆಯೊ ಎಂಬ ಪ್ರಶ್ನೆಗೆ ಅರ್ಥವೇನು? ಬದುಕಿದೆಯೊ ಸತ್ತಿದೆಯೊ? ತಾಯಿ ಯಂತಿದೆಯೊ? ತಂದೆಯಂತಿದೆಯೊ? ಸುರೂಪಿಯೊ ಕುರೂಪಿಯೊ? ಅಳುತ್ತ ದೆಯೆ? ಉಸಿರಾಡುತ್ತದೆಯೆ? ಎಂದು ಮೊದಲಾಗಿ ಕೇಳುವ ಪ್ರಶ್ನೆಗಳು ಅಪ್ರಕೃತ ವಲ್ಲ. ಆದರೆ ಅದರ ಸತ್ಯಾಸತ್ಯವನ್ನು ಕುರಿತ ಪ್ರಶ್ನೆಗೆ ಏನುತ್ತರ ಹೇಳಬಹುದು? ನಮ್ಮಂತೆಯೆ ಅಸ್ತಿತ್ವಪಡೆದು ನಮ್ಮ ಅನುಭವಕ್ಕೆ ಗೋಚರವಾಗುವುದು ಒಂದು ವೇಳೆ ಮಿಥ್ಯೆಯಾಗಿದ್ದರೆ ನಮಗಿಂತಲೂ ಹೆಚ್ಚೇನೂ ಮಿಥ್ಯೆಯಲ್ಲ. ಆದ್ದರಿಂದಲೆ 'ನಮ್ಮ' ಸತ್ಯತೆಯ ವಿಚಾರದಲ್ಲಿ ನಮಗೆಷ್ಟು ಶ್ರದ್ಧೆಯೋ 'ಅದರ' ಸತ್ಯತೆಯ ವಿಚಾರದಲ್ಲಿಯೂ ನಮಗೆ ಅಷ್ಟೇ ಶ್ರದ್ಧೆ.

ಶಿಶುವಿನ ಸತ್ಯತೆ ಸ್ಥಾಪಿತವಾಗುವುದು ತಾನು ಅವತರಿಸಿದ ಪ್ರಪಂಚದಲ್ಲಿ ತನ್ನ ಸಮಗ್ರವರ್ತನೆಯ ಸಮಂಜಸತೆಯಿಂದ. ಅದು ಹುಟ್ಟಿದ ಭೂಮಿಕೆಯನ್ನು ಬಿಟ್ಟು ಬೇರೆ ಭೂಮಿಕೆಯ ಪ್ರಮಾಣಗಳಿಂದ ನಾವು ಅದರ ಸತ್ಯನಿರ್ಣಯಕ್ಕೆ

ಹೋಗುವುದಿಲ್ಲ.[1] ಆಯಾ ಭೂಮಿಕೆಯ ಅಥವಾ ಸತ್ತೆಯ ವಸ್ತುಗಳ ಸತ್ಯಕ್ಕೆ ಆಯಾ ಭೂಮಿಕೆಗೆ ಅಥವಾ ಸತ್ತೆಗೆ ಅಧೀನವಾಗಿರುವ ಪ್ರಮಾಣಗಳೇ ಸಾಕ್ಷಿ: ಅವುಗಳ ತಂತ್ರ 'ಅನ್ಯಪರ'ವಲ್ಲ, 'ಅನನ್ಯಪರ'.

ಚಿತ್ರಕಾರನ "ವಾಯುದೇವ" ಒಂದು ಹೊಸಸೃಷ್ಟಿ. ಅದನ್ನು ಪ್ರತಿಮಾ ಎಂದು ಕರೆಯುತ್ತೇವೆಯೆ ಹೊರತು ಪ್ರತಿಕೃತಿ ಎಂದು ಕರೆಯುವುದಿಲ್ಲ. ಆ ಪ್ರತಿಮೆ ಸಟೆಯೋ ದಿಟವೋ ಎಂದು ಕೇಳುವ ಪ್ರಶ್ನೆ ವಿಫಲ. ಯಾವ ಅನುಭವದ ಪ್ರಚೋದನೆಯ ಫಲವಾಗಿ ಸೃಷ್ಟಿಶೀಲವಾದ ವರ್ಣಶಿಲ್ಪಿಯ ಪ್ರತಿಭೆ ರೂಪರಚನೆ ಮಾಡುತ್ತದೆಯೋ ಆ ರೂಪದ ಅಥವಾ ಪ್ರತಿಮೆಯ ವಿಚಾರವಾಗಿ ನಾವು ಕೇಳುವ ಪ್ರಶ್ನೆಗಳೆಂದರೆ, ಅದು ಸಜೀವವಾಗಿದೆಯೆ? ಸುಂಧರವಾಗಿದೆಯೆ? ಪ್ರೇಕ್ಷಕರಲ್ಲಿ ತನಗೆ ಆಧಾರವಾಗಿದ್ದ ಆ ಮೂಲಾನುಭವವನ್ನು ಪ್ರಚೋದಿಸುತ್ತದೆಯೆ?[2] —ಎಷ್ಟೆಷ್ಟುಮಟ್ಟಿಗೆ ಆ ಮೂಲಾನುಭವವನ್ನು ಪ್ರಚೋದಿಸಲು ಸಮರ್ಥವಾಗುತ್ತದೆಯೋ ಅಷ್ಟಷ್ಟು ಮಟ್ಟಿಗೆ ಅದು ಸತ್ಯವಾಗುತ್ತದೆ; ಸುಂದರವೂ ಆಗುತ್ತದೆ. ಹಾಗೆ ಸತ್ಯವಾಗಿರುವಿಕೆಯಲ್ಲಿಯೆ ಅದರ ಸುಂದರವಾಗಿರುವಿಕೆಯೂ ಒಡಗೂಡಿರುತ್ತದೆ. ಆದ್ದರಿಂದಲೆ ಅಲ್ಲಿ ಸತ್ಯ ಮತ್ತು ಸೌದರ್ಯಗಳಿಗೆ ನಾವು ಮಾಡುವ ಕೇವಲ ಭೇದಕಲ್ಪನೆ ಅರ್ಥರಹಿತ.

"ವಾಯುದೇವ" ಎಂದು ಹೆಸರಿಟ್ಟು ಹತ್ತು ಚಿತ್ರಕಾರರು ಹತ್ತು ಚಿತ್ರಗಳನ್ನು ಬರೆಯಬಹುದು. ಯಾವೊಂದೂ ಮತ್ತೊಂದಕ್ಕೆ ಸದೃಶರೂಪಿಯಾಗದಿರಬಹುದು. ಒಂದೊಂದನ್ನೆ ಬೇರೆ ಬೇರೆಯಾಗಿ ಪರಿಶೀಲಿಸಿದರೆ ಪ್ರತಿಯೊಂದೂ ಸತ್ಯ. ಆದರೆ ಒಂದನ್ನು ಮತ್ತೊಂದರೊಡನೆ ಹೋಲಿಸಿದರೆ ಒಂದಕ್ಕಿಂತ ಮತ್ತೊಂದು ಹೆಚ್ಚಿನ ಅಥವಾ ಕಡಮೆಯ ಸತ್ಯವಾಗಬಹುದು. ಏಕೆಂದರೆ ಒಂದೇ ಕಲೆಯ ಒಂದೇ ಭೂಮಿಕೆಯಲ್ಲಿ, ಸತ್ಯದಲ್ಲಿ ಸಮಾನತೆಗೆ ಹೋರಾಡುವ ಬಹುಸಂಖ್ಯೆಯ ಸಮವಿಷಯ ಕೃತಿಗಳನ್ನು ಪರಸ್ಪರ ಹೋಲಿಸಿ, ಯಾವ ಕೃತಿ ತನ್ನ ಪ್ರಚೋದಕಾನುಭವವನ್ನು ಅತ್ಯಂತ ಪೂರ್ಣವಾಗಿ, ಸಮರ್ಪಕವಾಗಿ ಮತ್ತು ರಸವತ್ತಾಗಿ ಸಹೃದಯರ ಹೃದಯಾನುಭವವಾಗುವಂತೆ ಮಾಡಲು

---

1. In art we submit to ourselves the shows of things. We create an autonomous world, a blending of the physical with ourselves, and therefore a new reality within the so-called real world.—*Beauty and Other Forms of Value*—by S. Alexander.

2. It is not the image but the delight of the image, not the event but the joy of the event that exalts Sensation to Poetry. In a similar way emotion fuses the poet with ideas.—*The Inspiration of Poetry*—by Woodberry.

ಸಮರ್ಥವಾಗುತ್ತದೆಯೋ ಅದನ್ನು ಉಳಿದೆಲ್ಲವುಗಳಿಗಿಂತಲೂ ಹೆಚ್ಚಿನ ಸತ್ಯವೆಂದೂ ಸೌಂದರ್ಯವೆಂದೂ ಸ್ವೀಕರಿಸುತ್ತೇವೆ.

ಕಲೆಯಲ್ಲಿ ಸತ್ಯ ಮೈದೋರುವುದು ಬಹುಮಟ್ಟಿಗೆ ಪ್ರತಿಮಾ ವಿಧಾನ ದಿಂದಲ್ಲದೆ ಪ್ರತಿಕೃತಿ ವಿಧಾನದಿಂದಲ್ಲ.

ಸ್ವಪ್ನಸತ್ತೆಯಲ್ಲಿ ಪ್ರತಿಮಾವಿಧಾನದ ಈ ಸೃಷ್ಟಿ ಎಲ್ಲರ ಅನುಭವಕ್ಕೂ ಬಂದಿರುವುದರಿಂದ ಅದನ್ನು ನಿದರ್ಶನವನ್ನಾಗಿ ತೆಗೆದುಕೊಂಡರೆ ಮೇಲೆ ಹೇಳಿದ ವಿಚಾರವು ಇನ್ನೂ ಸ್ಪಷ್ಟತರವಾಗುತ್ತದೆ. ಜಾಗ್ರದವಸ್ಥೆಯ ಅನುಭವಸಾಮಗ್ರಿಯ ಆಧಾರದ ಮೇಲೆಯೇ ನಿಂತಿರುತ್ತದೆ ಸ್ವಪ್ನಾವಸ್ಥೆಯ ಸಕಲ ಸೃಷ್ಟಿ. ಕನಸಿನ ವಸ್ತುಗಳು ಎಷ್ಟು ವಿಚಿತ್ರಗಳಾಗಲಿ, ಎಷ್ಟು ಅತಿಲೌಕಿಕಗಳಾಗಿರಲಿ, ಮತ್ತೆಷ್ಟು ಅಸ್ವಾಭಾವಿಕವಾಗಿ ತೋರಲಿ ಅವೆಲ್ಲಕ್ಕೂ ಎಚ್ಚರದ ಜಗತ್ತಿನ ಅನುಭವಗಳೇ ಮೂಲಸಾಮಗ್ರಿ. ಸ್ವಪ್ನವು ಜಾಗ್ರದವಸ್ಥೆಯ ಅನುಭವಗಳಿಗೆ ಜಾಗ್ರಜ್ಜಗತ್ತಿನ ಆಕಾರಗಳನ್ನೇ ಕಲ್ಪಿಸಿದರೆ ಆಗ ಆ ಸೃಷ್ಟಿ ಪ್ರತಿಕೃತಿಯಾಗುತ್ತದೆ. ಹಾಗಲ್ಲದೆ ಜಾಗ್ರದವಸ್ಥೆಯ ಅನುಭವಕ್ಕೆ ಸಾಂಕೇತಿಕ ಪ್ರತಿಯನ್ನು ನಿರ್ಮಿಸಿದರೆ ಆಗ ಆ ಸೃಷ್ಟಿ ಪ್ರತಿಮೆಯಾಗುತ್ತದೆ. ಆ ಪ್ರತಿಮೆಯಂತಹ ಆ ಕೃತಿಯನ್ನು ನಾವು ಜಾಗ್ರದವಸ್ಥೆಯ ಜಗತ್ತಿನಲ್ಲಿ ಎಲ್ಲಿಯೂ ಎಂದೂ ಕಾಣದಿದ್ದರೂ ಅದನ್ನು "ಸುಳ್ಳು" ಎನ್ನಲಾಗುವುದಿಲ್ಲ. ಕನಸೂ ಎಚ್ಚರೂ ಬೇರೆ ಬೇರೆ ಭೂಮಿಕೆಗಳು. ಒಂದಿರುವಾಗ ಮತ್ತೊಂದಿರುವುದಿಲ್ಲ. ಅವುಗಳಲ್ಲಿ ಯಾವೊಂದರಲ್ಲಿ ನಾವಿರುವಾಗಲಾಗಲಿ ನಮ್ಮ ಅನುಭವವು ಮತ್ತೊಂದರಿಂದ ಅಬಾಧಿತ. ಒಂದರ ಆಳಿಕೆ ಮತ್ತೊಂದಕ್ಕಿಲ್ಲ. ಅದರದರ ಶಾಸನ ಅದರದರ ನೆಲದಲ್ಲಿ ಮಾತ್ರ ಮಾನ್ಯ. ಇದು ಅದಕ್ಕೆ, ಅದು ಇದಕ್ಕೆ ಶೂನ್ಯ. ಆದ್ದರಿಂದಲೆ ಒಂದರ ಸತ್ಯಮಾನದಿಂದ ಮತ್ತೊಂದನ್ನು ಅಳೆಯಲುಳವಲ್ಲ. ಜಾಗ್ರತ್ ಸತ್ತೆಯ ಒರೆಗಲ್ಲಿಗೆ ತಿಕ್ಕಿ ಸ್ವಪ್ನದ ಸೃಷ್ಟಿಯನ್ನು "ಮಿಥ್ಯೆ" ಎನ್ನುವುದು ಏಕಪಕ್ಷೀಯ ಇತ್ಯರ್ಥ. ಸ್ವಪ್ನ ಸತ್ತೆಯ ಪ್ರತಿಮೆಯ ಸತ್ಯತೆ ಇರುವುದು ಅದರ ಹೊರಮೈಯಲ್ಲಲ್ಲ; ಅದಕ್ಕೆ ಕಾರಣವಾದ ಅನುಭವದಲ್ಲಿ. ಆ ಅನುಭವ ಕನಸಿಗೂ ಎಚ್ಚರಿಗೂ ಎರಡಕ್ಕೂ ಸತ್ಯ. ಆ ಅನುಭವದ ದೃಷ್ಟಿಗೆ ಎಚ್ಚರು ಕನಸುಗಳೆರಡೂ ಸಮ ಪ್ರಮಾಣದ ಸತ್ಯಗಳು.

ಉದಾಹರಣೆಗಾಗಿ, ಒಬ್ಬನಿಗೆ ಈ ಕನಸು ಬೀಳುತ್ತದೆ: ಅವನೂ ಅವನ ಮಿತ್ರರೂ ಒಂದು ಕಡಿದಾದ ಬೆಟ್ಟವನ್ನೇರುತ್ತಿದ್ದಾರೆ. ಗೆಳೆಯರೆಲ್ಲರಿಗಿಂತಲೂ ತಾನು ಮುಂದಾಗಬೇಕೆಂದು ಬೇಗಬೇಗನೆ ಹತ್ತುತ್ತಿದ್ದಾನೆ. ಬಹುಬೇಗನೆ ಆದರೂ ಪ್ರಯಾಸದಿಂದ ಎಲ್ಲರಿಗಿಂತಲೂ ಮುಂದಾಗಿ, ಬಹಳ ಎತ್ತರದಲ್ಲಿ, ಬಹಳ ಕಡಿದಾದ ಓರೆಯಲ್ಲಿ, ಮುಂಬರಿಯುತ್ತಿದ್ದಾನೆ. ಇದ್ದಕ್ಕಿದ್ದ ಹಾಗೆ ಫಕ್ಕನೆ ಕಾಲು ಜಾರುತ್ತದೆ. ಎಷ್ಟು ಪ್ರಯತ್ನಿಸಿದರೂ ನಿತ್ತರಿಸಲಾಗುವುದಿಲ್ಲ. ಬೆಟ್ಟದೋರೆಯೋ ಬಲು ಕಡಿದು. ಕೆಳಗೆ ನೇರವಾಗಿ ಒಂದು ಸರೋವರವಿದೆ. ಬಿದ್ದರೆ ಮುಳುಗಿಯೇ

ಹೋಗುತ್ತಾನೆ. ದಡ ದಡ ದಡನೆ ಉರುಳತೊಡಗುತ್ತಾನೆ. ಅಯ್ಯೋ ಎನ್ನುತ್ತಿರುವಾಗಲೆ ಎಚ್ಚರಾಗುತ್ತದೆ. ಕನಸು ಒಡೆಯುತ್ತದೆ. ಮೈ ಬೆವರಿದೆ! ಎದೆ ಡವಗುಡುತ್ತಿದೆ! ತಿದಿಯೊತ್ತುತ್ತಿದೆ ಉಸಿರು!

ಆ ಕನಸು ಸಟಿಯೋ ದಿಟವೋ? ಆಗತಾನೆ ತಾನು ಸಾಕ್ಷಾತ್ತಾಗಿ ಅನುಭವಿಸಿದುದನ್ನು ಸಟಿ ಎನ್ನುವುದು ಹೇಗೆ? ಜಾಗ್ರಜ್ಜಗತ್ತಿನಲ್ಲಿ ಎಲ್ಲಿಯೂ ಇರದುದನ್ನು, ಯಾರೂ ಕಾಣದುದನ್ನು ದಿಟ ಎನ್ನುವುದಾದರೂ ಹೇಗೆ?

ಬೆಟ್ಟವೇರುತ್ತಿದ್ದ ಉದ್ವೇಗದ ಅನುಭವ ಇನ್ನೂ ಇದೆ. ಜಾಗ್ರಜ್ಜಗತ್ತಿನಲ್ಲಿ ಒಮ್ಮೆ ಕಂಡದ್ದನ್ನು ಮತ್ತೆ ಹೇಗೆ ಬಗೆಯಲ್ಲಿ ಚಿತ್ರಿಸಿಕೊಳ್ಳಬಹುದೋ ಹಾಗೆಯೆ ಆ ಬೆಟ್ಟದ, ಆ ಸರೋವರದ, ಆ ಏರಿಕೆಯ, ಆ ಬೀಳಿಕೆಯ ಚಿತ್ರ ಕಣ್ಣಿಗೆ ಕಟ್ಟಿದಂತಿದೆ. ಅದಿರಲಿ. ಮೈ ಬೆವರಿರುವುದೂ ಎದೆ ಹೊಡೆದುಕೊಳ್ಳುತ್ತಿರುವುದೂ ಉಸಿರು ತಿದಿಯೊತ್ತುತ್ತಿರುವುದೂ ಕನಸಿನ ಸತ್ಯಕ್ಕೆ ಎಚ್ಚರೂ ಸಾಕ್ಷಿ ಹೇಳುವಂತಿವೆಯಲ್ಲಾ! ಹೀಗಿರುವಾಗ ಆ ಕನಸಿನ ಅನುಭವಗಳನ್ನು ಸಟಿ ಎನ್ನುವುದೆಂತು?

ಇಲ್ಲಿಯೆ ಕೋಣೆಯಲ್ಲಿ ಮಲಗಿದ್ದಾನೆ. ಹಾಕಿದ ಅಗಣಿ ಹಾಕಿದಂತೆಯೆ ಇದೆ. ಅವನೆಲ್ಲಿಯೂ ಹೊರಗೆ ಹೋಗಿಲ್ಲ. ಆ ಬೆಟ್ಟ ಸರೋವರಗಳು ಕೋಣೆಯೊಳಗೆ ಬರುವುದು ಅಸಾಧ್ಯ. ಅವನ ಕಾಲಿಗೆ ಮಣ್ಣು ಹಿಡಿದಿಲ್ಲ. ಜಾರಿದಾಗ ಕೈ ಕೀಸಿಲ್ಲ. ಮೈ ಗಾಯಗೊಂಡಿಲ್ಲ; ನೋಯುತ್ತಲೂ ಇಲ್ಲ. ಅವನು ಅಂತಹ ಸಾಹಸದಿಂದ ಮರಳಿದುದಕ್ಕೆ ಜಾಗ್ರತ್‌ಪ್ರಾಪಂಚಿಕವಾದ ಯಾವ ಕುರುಹೂ ಕಂಡುಬರುವುದಿಲ್ಲ. ಹೀಗಿರುವಲ್ಲಿ ಆ ಕನಸು ದಿಟ ಎನ್ನುವುದೆಂತು?

ಕನಸಿನ ಹೊರಮೈಯನ್ನು ಮಾತ್ರ ಲಕ್ಷಿಸಿದರೆ ಈ ತೊಡಕು ಏಳುತ್ತದೆ. ಅನುಭವವನ್ನು ಗಮನಿಸಿದರೆ ಸಮಸ್ಯೆ ಪರಿಹಾರವಾಗುತ್ತದೆ. ಯಾವ ಮೂಲಾನುಭವವು ಅಥವಾ ಮೂಲವಾಸನೆಯು ಕನಸು ಮೈಗೊಳ್ಳುವುದಕ್ಕೆ ಕಾರಣವಾಯಿತೋ ಅದು ಎಚ್ಚರಿಗೂ ಕನಸಿಗೂ ಸಮಸತ್ಯ. ಆತ್ಮದಲ್ಲಿ ಅಂತರ್ನಿಗೂಢವಾಗಿರುವ ಆ ಮೂಟವಾಸನೆಗೆ ಕನಸಿನಲ್ಲಿ ಪ್ರತಿಮಾರೂಪವಾದ ಅಭಿವ್ಯಕ್ತಿ ದೊರೆಕೊಂಡಿದೆ. ಆ ಪ್ರತಿಮೆ ಸ್ವಪ್ನಾವಸ್ಥೆಗೆ ಸತ್ಯ; ಜಾಗ್ರದವಸ್ಥೆಗೆ ಮಿಥ್ಯೆ. ಆದರೆ, ತಾನು ಎಲ್ಲರನ್ನೂ ಮೀರಿಸಿ ಮುಂದುವರಿಯಬೇಕೆಂಬ ಮಹತ್ವಾಕಾಂಕ್ಷೆ, ಅದು ಬಹಳ ಕಷ್ಟಸಾಧ್ಯ ಎಂಬ ಅರಿವು, ಆ ಮೇಲಾಟದಲ್ಲಿ ತಾನೆಲ್ಲಿ ಹಿಂದೆ ಬೀಳುವೆನೋ ಕೆಳಗುರುಳುವೆನೋ ಎಂಬ ಅಳುಕು,—ಇವೇ ಮೊದಲಾದುವುಗಳ ಮೂಲವಾಸನೆಯ ಸಂಸ್ಕಾರವು ಎರಡು ಅವಸ್ಥೆಗಳಿಗೂ ಏಕಮಾತ್ರ ಸತ್ಯ. ಅಂದರೆ, ಆ ಕಡಿದಾದ ಬೆಟ್ಟವು ಕನಸಿಗೆ ನಿಜವಾಗಬಹುದು; ಎಚ್ಚರಿಗೆ ಸುಳ್ಳಾಗಬಹುದು. ಆದರೆ ಆ ಕಡಿಪೂ ಆ ಬೆಟ್ಟವೂ ಯಾವ ಭಾವಗಳಿಗೆ, ಎಂದರೆ ಕಷ್ಟಸಾಧ್ಯತೆ ಮತ್ತು ಅಭ್ಯುದಯ ಕಾಂಕ್ಷೆಗಳಿಗೆ, ಪ್ರತಿಮೆಗಳೋ ಆ ಭಾವಗಳೂ ಅವುಗಳನ್ನು ಆಶ್ರಯಿಸಿ ಹೊಮ್ಮುವ ಎಲ್ಲ ಅನುಭವಗಳೂ ಎರಡು ಸತ್ತೆಗಳಿಗೂ ಸತ್ಯ. ಈ

ಭಾವಸತ್ಯದ ಮತ್ತು ಆದು ವ್ಯಕ್ತಗೊಳ್ಳುವ ಪ್ರತಿಮಾ ವಿಧಾನದ ಮರ್ಮವನ್ನು ಗ್ರಹಿಸಿದರೆ ಸ್ವಪ್ನಜಗತ್ತಿಗೂ ಜಾಗ್ರಜ್ಜತ್ತಿಗೂ ನಡುವೆಯೆಂಬಂತಿದ್ದು ಆ ಎರಡು ಸತ್ತೆಗಳ ಲಕ್ಷಣಗಳನ್ನೂ ಒಳಕೊಂಡಿರುವ ಕಾವ್ಯಸತ್ತೆಯ ಮಹಿಮೆಯನ್ನರಿತು ಕ್ರಮೇಣ ಕೇವಲ ರಸವಾದ ಬ್ರಹ್ಮವನ್ನು ಸಾಕ್ಷಾತ್ಕರಿಸಲು ಸಮರ್ಥರಾಗುತ್ತೇವೆ.[3]

ದಶಗ್ರೀವನಿಂದ ಅಶೋಕವನದಲ್ಲಿ ಬಂಧಿತಳಾಗಿದ್ದ ಸೀತಾದೇವಿಯನ್ನು ಹುಡುಕುವ ಮಹತ್ಕಾರ್ಯಕ್ಕೆ ಹೊರಟ ಅಲಘುಪರಾಕ್ರಮಿ ಆಂಜನೇಯನು ತನ್ನ ಪ್ರಯತ್ನದಲ್ಲಿ ಸಫಲನಾಗಿ ಹಿಂತಿರುಗಿದನಷ್ಟೆ? ಕಡಲ ನಡುವೆಯಿದ್ದ ಆ ರಾಕ್ಷಸ ದ್ವೀಪಕ್ಕೆ ಅವನು ದಾಟಿದ್ದು ಹೇಗೆ? ಈಜಿ ದಾಟಿದನೆ? ತೆಪ್ಪವೇರಿ ಹೋದನೆ! ದೋಣಿಯ ಸಹಾಯದಿಂದ ಪಾರಾವಾರದ ಅಪಾಯಗಳಿಂದ ಪಾರಾದನೆ?— ಚರಿತ್ರಕಾರನು ತನ್ನ ಸಮಸ್ತ ಸಂಶೋಧನ ಶಕ್ತಿಯನ್ನು ಆಂಜನೇಯನು ವಾಸ್ತವವಾಗಿ ಯಾವ ಸಲಕರಣೆಯ ಸಹಾಯದಿಂದ ಸಮುದ್ರವನ್ನು ದಾಟಲು ಸಮರ್ಥನಾದನು ಎಂಬ ಪ್ರಾಸಂಚಿಕ ಸತ್ಯದ ನಿರ್ಣಯಕ್ಕಾಗಿ ವಿನಿಯೋಗಿಸುತ್ತಾನೆ. ಅವನಿಗೆ ಬೇಕಾದುದು ವಾಸ್ತವವಾಗಿಯೂ ನಡೆದ ಘಟನೆಯ ಪ್ರತಿಕೃತಿ. ಆದರೆ ಕಾವ್ಯದ ರೀತಿ ಪ್ರತಿಕೃತಿಯ ರೀತಿಯಲ್ಲ.

ಕಾವ್ಯವೂ ಸತ್ಯಶೀಲವಾದುದೇ. ಕಾವ್ಯವೂ ಸತ್ಯವನ್ನೇ ಪ್ರತಿಪಾದಿಸುತ್ತದೆ. ಆದರೆ ಅದು ಹಿಡಿಯುವ ಸತ್ಯ ಭಾವಸತ್ಯ. ಬಹಿರ್‌ಲೌಕಿಕ ಸತ್ಯಕ್ಕಿಂತಲೂ ಸತ್ಯತರವಾದ ಅನುಭವಸತ್ಯ. ಚರಿತ್ರಕಾರನಂತೆಯೆ ವಾಲ್ಮೀಕಿ ಆಂಜನೇಯನು ಲಂಕೆಗೆ ಹೋಗಿ ಹಿಂತಿರುಗಿದುದನ್ನು ಒಪ್ಪಿಕೊಳ್ಳುತ್ತಾನೆ. ಆಂಜನೇಯನ ಆ ಸಾಹಸವನ್ನು ಮನನಮಾಡುತ್ತಾನೆ. ಅವನು ಉತ್ತರಿಸಿರಬಹುದಾದ ಭಯಂಕರವಾದ ಅಪಾಯಗಳನ್ನು ಊಹಿಸುತ್ತಾನೆ. ಕೃತಕಾರ್ಯನಾದ ಆತನ ಆತ್ಮದ ಅದ್ಭುತ ಶಕ್ತಿ, ಅಪಾರಮಹಿಮೆ, ಅದಮ್ಯ ಧೈರ್ಯ, ಸಾಗರೋಪಮ ಸಾಹಸಗಳನ್ನು ಭಾವಿಸುತ್ತಾನೆ. ಉಂಟಾಗುವ ಅನುಭವವೂ ರೋಮಾಂಚನಕಾರಿ! ಆಂಜನೇಯನು ಲಂಕೆಗೆ ಹೋಗಿ ಬಂದ ಚರಿತ್ರವಿಷಯದ ಜೀವಕ್ಕೆ ಆ ರೋಮಾಂಚನಕಾರಿಯಾದ ಅನುಭವವೆ ಹೃದಯ. ಅದಿಲ್ಲದೆ ಉಳಿದುದೆಲ್ಲ, ಅದು ಎಂತಹ ಲೆಕ್ಕಾಚಾರವಾಗಿ ಅಳೆದು ತೂಗಿದ ಚರಿತ್ರಸತ್ಯವಾದರೂ, ಬರಿಯ ಕಳೇಬರ. ಯಥಾರ್ಥವೆನ್ನಿಸಿಕೊಳ್ಳುವ ಚಾರಿತ್ರಕ ಘಟನೆಗಳಿಗಿಂತಲೂ ಆ ಘಟನೆಗೆ ಕಾರಕಪ್ರೇರಕಗಳಾದ ಆತ್ಮಾನುಭವಗಳೇ ಕವಿದೃಷ್ಟಿಗೆ ಸತ್ಯತರ ಯಥಾರ್ಥಗಳಾಗುತ್ತವೆ.

---

[3] The worlds are only frames for our experience, the senses only instruments of experience and conveniences. Consciousness is the great underlying fact, the universal witness for whom the world is a field, the senses instruments. To that witness the worlds and the objects appeal for their reality.—*The Life Divine*, ch. III—Sri Aurobindo.

ಆದ್ದರಿಂದ ಅವನ ಕೃತಿ ಪ್ರಯತ್ನಿಸುವುದು ಚರಿತ್ರಸತ್ಯ ಪ್ರತಿಪಾದನೆಯನ್ನಲ್ಲ. ಅನುಭವಸತ್ಯ ಪ್ರತಿಪಾದನೆಯನ್ನು. ಚಾರಿತ್ರಕ ಸತ್ಯವನ್ನೆಲ್ಲ ನಿಷ್ಕೃಷ್ಟವಾಗಿ ಕಂಡುಹಿಡಿದು ಹೇಳಿದಮೇಲೆಯೂ ತತ್ಕಾರ್ಯಸಿದ್ಧನಾದ ಅಂಜನಾಸುತನ ಸತ್ಯತರ ವಾದ ಮಹದ್ ಮಹಿಮೆಯ ಅನುಭೂತಿ ಸಹೃದಯ ವಾಚಕರಲ್ಲಿ ಆವಿರ್ಭವಿಸ ದಿದ್ದರೆ ಕವಿಯ ಭಾಗಕ್ಕೆ ಆ ಪ್ರಯತ್ನವೆಲ್ಲ ವ್ಯರ್ಥ. ಆದರ ಸತ್ಯ ಸುಳ್ಳಿಗಿಂತಲೂ ಕೀಳಾದ ಶವಸತ್ಯ. ಆದ್ದರಿಂದಲೆ ಕವಿ ಆಂಜನೇಯನು ಸಮುದ್ರವನ್ನು ವಾಸ್ತವ ವಾಗಿ ಹೇಗೆ ದಾಟಿದನೆಂಬ ಚರಿತ್ರಸತ್ಯದ ಸಂಶೋಧನೆಯ ಮೋಘಕಾರ್ಯಕ್ಕೆ ಕೈಹಾಕದೆ ಸಾಗರೋಲ್ಲಂಘನದ ಮಹಾ ಪ್ರತಿಮಾರಚನೆಗೆ ತನ್ನ ಪ್ರತಿಭಾಸಮಸ್ತ ವನ್ನೂ ನಿವೇದಿಸಿದ್ದಾನೆ. ಆ ಪ್ರತಿಮೆ ರಾಮದೂತನ ವ್ಯೋಮಸಾಹಸದ ಸಂಪೂರ್ಣಾನುಭೂತಿಯನ್ನು ಅದನ್ನು ಓದಿದವರೆಲ್ಲರಿಗೂ ದಾನಮಾಡುತ್ತದೆ ಯಾದ್ದರಿಂದ ಅದೇ ನಿಜತರವಾದ ಸತ್ಯ, ಅಂತಸ್ಸತ್ಯ, ಅನುಭವ ಸತ್ಯ.[4]

ಪ್ರತಿಕೃತಿಯಿಂದ ಸಾಧ್ಯವಲ್ಲದಿರುವಾಗ ಪ್ರತಿಮೆಯ ಮೂಲಕ ಸತ್ಯಸ್ಯಸತ್ಯ ವಾದ ಅನುಭೂತಿಯನ್ನು ಸಹೃದಯರಲ್ಲಿ ಮೂಡಿಸುತ್ತದೆ ಕವಿಕೃತಿ.

ಮೇಲಣ ಸಮಾಲೋಚನೆ—ಪ್ರತಿಮಾರಚನೆ ಪ್ರಜ್ಞಾಪೂರ್ವಕವಾದ ಬುದ್ಧಿ ಪ್ರಯತ್ನದಿಂದ ಸಿದ್ಧವಾಗುತ್ತದೆ—ಎಂಬ ಭಾವನೆಗೆ ಅವಕಾಶನಿತ್ತಿದ್ದರೆ ಆ ತಪ್ಪನ್ನು ತಿದ್ದಿಕೊಳ್ಳುವುದು ಅವಶ್ಯ ಕರ್ತವ್ಯ. ಕಾವ್ಯಾಭಿವ್ಯಕ್ತಿಗೆ ಅಥವಾ ಭಾವ ಪ್ರಕಾಶನಕ್ಕೆ ಆವಶ್ಯಕವಾದ ಸಾಮಗ್ರಿ ಸಂವಿಧಾನಗಳು ಕವಿಪ್ರತಿಭೆಗೆ ಬಾಹ್ಯ ಜಗತ್ತಿನಿಂದ ಬುದ್ಧಿಯ ಮೂಲಕ ದೊರೆಯುತ್ತವಾದರೂ ಆ ಅಭಿವ್ಯಕ್ತಿಯ ಅಥವಾ ಪ್ರಕಾಶನದ ಸೃಷ್ಟಿಮುಹೂರ್ತವು ಬುದ್ಧಿಗತವಾಗಿರದೆ ಅದಕ್ಕೆ ಅತೀತವೂ ಭಿತ್ತಿ ರೂಪವೂ ಆಗಿರುವ 'ಅಪ್ರಜ್ಞಾವಲಯ'ಕ್ಕೆ ಸೇರಿರುತ್ತದೆ. ಏಕೆಂದರೆ ಅನುಭವಕ್ಕೆ ಸಾಂಕೇತಿಕವಾದ ಪ್ರತಿಮಾರಚನೆ ಸುಪ್ತಚಿತ್ರದಲ್ಲಿ ಸಾಗುವ ಗುಪ್ತಕರ್ಮ. ವಾಸನಾ ಸಂಸ್ಕಾರಗಳಿಗೆ ಪ್ರತಿಮಾಲೋಕಗಳನ್ನು ಸೃಜಿಸುವ ಸ್ವಪ್ನವು ಹೇಗೆ ನಮ್ಮ ಜಾಗ್ರತ್ತಿನ ಬುದ್ಧಿಗೆ ಒಳಗಾಗುವುದಿಲ್ಲವೋ ಹಾಗೆಯೆ ಕಾವ್ಯದಲ್ಲಿ ಕವೀಂದ್ರನ ಮಹದನುಭವಗಳಿಗೆ ಪ್ರತಿಮಾಭುವನಗಳನ್ನು ಕೃತಿಗೆಯ್ಯುವ ಕಲಾ ಪ್ರತಿಭೆಯೂ ಬುದ್ಧಿತಂತ್ರವಾಗಿರುವುದಿಲ್ಲ. ಹಾಗೆ ಬುದ್ಧಿತಂತ್ರವಲ್ಲದಿರುವುದ ರಿಂದಲೇ ಜನ್ಮತಃ ವರಕವಿಯಲ್ಲದ ಯಾವನೂ ಪಾಂಡಿತ್ಯಬಲದಿಂದ ಪ್ರಯತ್ನ ಪೂರ್ವಕವಾಗಿ ಮಹತ್ಕಾವ್ಯಗಳನ್ನಾಗಲಿ ಅಥವಾ ಇನ್ನಾವ ಕಲಾವಲಯದ ಮಹದ್ ಪ್ರತಿಮೆಗಳನ್ನಾಗಲಿ ಸೃಷ್ಟಿಸಲು ಅಸಮರ್ಥನಾಗುತ್ತಾನೆ.

---

[4] Form and matter can be valid only as shape and substance of manifestation for the incorporeal and immaterial. They are in their nature an act of divine consciousness, in their aim the representation of a status of the spirit.—*The Life Divine*, Page. ೫೫, Sri Aurobindo.

ಮೂಲಾನುಭವಕ್ಕೂ ಅದರ ಸಾಂಕೇತಿಕ ಪ್ರತಿಮೆಗೂ ಅತ್ಯಂತನಿಕಟವೂ ವಿಶ್ಲೇಷಣವಿದೂರವೂ ಆದ ಜೀವಸಂಬಂಧವಿರುತ್ತದೆ. ಪ್ರತಿಮೆ ಎಂಬುದು ಮೂಲಾನುಭವಕ್ಕೆ 'ನಾವು' ನೀಡುವ ಆಕಾರವಲ್ಲ. ಅದು ಮೂಲಾನುಭವವು ತನಗೆ ಅನಿವಾರ್ಯವೂ ಆವಶ್ಯಕವೂ ಆಗಿರುವ ಸಹಜಧರ್ಮದ ಪ್ರೇರಣಶಕ್ತಿಯಿಂದ ಪಡೆಯುವ ರೂಪಧಾರಣೆ. ಅದೊಂದು ಅವತರಣಕ್ರಿಯೆ.

ತತ್ತ್ವಶಾಸ್ತ್ರವೂ ವಿಜ್ಞಾನಶಾಸ್ತ್ರವೂ ಇಂದ್ರಿಯಗ್ರಾಹ್ಯವಾದ ಈ ಪ್ರಪಂಚವನ್ನೇ ಪ್ರತಿಮಾಕ್ರಿಯೆ ಎಂದು ಸಾರುತ್ತಿವೆ. ತತ್ತ್ವಶಾಸ್ತ್ರದಲ್ಲಿ ಅದು ಮಾಯಾವಾದದಿಂದ ಸೂಚಿತವಾಗಿದೆ. ನವೀನ ವಿಜ್ಞಾನವೂ ಇಂದ್ರಿಯ ಗ್ರಾಹ್ಯವಾದ ವರ್ಣಶಬ್ದಾದಿಗಳಿಂದ ನಮಗೆ ಅತ್ಯಂತ ವಾಸ್ತವವಾಗಿ ತೋರುತ್ತಿರುವ ಈ ಭೌತ ವಿಶ್ವವು ವಿದ್ಯುದಣುಗಳ ವರ್ತುಲನರ್ತನಕ್ಕೂ ಕಾಲದೇಶದ ವಂಕಿಮತೆಗೂ ಪಂಚೇಂದ್ರಿಯಾತ್ಮಕವಾದ ನಮ್ಮ "ಮೂಲಾವಿದ್ಯೆ" ನೀಡುವ ಪ್ರತಿಮಾ ಸಮುದಾಯಗಳ ಫಲ ಎಂದು ವಾದಿಸುತ್ತಿದೆ. ಆ ದೃಷ್ಟಿಯಿಂದ ವಿಚಾರಿಸಿದರೆ ಯಥಾರ್ಥವಾಗಿ, ಸ್ಥೂಲವಾಗಿ, ಸತ್ಯವಾಗಿ, ಶಾಶ್ವತವಾಗಿ ತೋರುತ್ತಿರುವ ಈ ಬೃಹಜ್ಜಗತ್ತೂ ಆತ್ಮದ ಸಂಸ್ಕಾರಕೋಟಿಯ ಅವಶ್ಯ ನಿಯಮಗಳಿಗನುಗುಣವಾಗಿ ಅನಿವಾರ್ಯವಾಗಿ ಮಾಡಿರುವ ಒಂದು ಮಹದ್ ಪ್ರತಿಮೆಯಾಗುತ್ತದೆ.[5]

ಸ್ವಪ್ನಸತ್ತೆ ಒಂದು ಪ್ರತಿಮಾಪ್ರಪಂಚ ಎಂಬುದನ್ನು ಹಿಂದೆ ವಿವರಿಸಿದ್ದೇವೆ. ಜಾಗ್ರತ್ತಿನ ಈ ಪ್ರಪಂಚವೂ ಒಂದು ಮಹಾ ಪ್ರತಿಮಾಸೃಷ್ಟಿ ಎಂಬುದನ್ನು ಗಣ್ಯವೂ ಅಗ್ರಗಣ್ಯವೂ ಆಗಿರುವ ತತ್ತ್ವ ಮತ್ತು ವಿಜ್ಞಾನ ಶಾಸ್ತ್ರಗಳೆರಡೂ ಒಪ್ಪಿಕೊಳ್ಳುತ್ತವೆ. ಕಾವ್ಯಸತ್ತೆ ಸ್ವಪ್ನ ಮತ್ತು ಜಾಗ್ರತ್ ಸತ್ತೆಗಳೆರಡರ ಲಕ್ಷಣಗಳನ್ನೂ ಒಳಗೊಂಡು ಅವೆರಡರ ನಡುವೆ ನಿಲ್ಲುವ ಮತ್ತೊಂದು ಪ್ರತಿಮಾಪ್ರಪಂಚವಾಗುತ್ತದೆ. ಎಂದರೆ, ಸ್ವಪ್ನಸತ್ಯ, ಕಾವ್ಯಸತ್ಯ ಮತ್ತು ಜಾಗ್ರತ್‌ಸತ್ಯ ಇವು ಮೂರೂ ಒಂದೇ ಮೂಲಾನುಭವವು ಬೇರೆ ಬೇರೆ ಭೂಮಿಕೆಗಳಲ್ಲಿ ವ್ಯೈದೋರುವ ಬೇರೆ ಬೇರೆ ಪ್ರತಿಮಾವಿಧಾನಗಳಾಗುತ್ತವೆ. ಅದರದರ ಪ್ರತಿಮಾಸತ್ಯ ಅದರದರ ಭೂಮಿಕೆಗೆ ಮಾತ್ರ ಅಭಾಧಿತವಾಗಿ ಅನ್ವಯವಾಗುತ್ತದೆ. ಆತ್ಮಾನುಭವ ಮಾತ್ರ ಎಲ್ಲ ಭೂಮಿಕೆಗಳಿಗೂ ಸಾಮಾನ್ಯ.

ಸ್ವಪ್ನಪ್ರಪಂಚವನ್ನು ಕಾವ್ಯಪ್ರಪಂಚದ ಒರೆಗಲ್ಲಿಗೆ ತಿಕ್ಕಿದರೆ ಸ್ವಪ್ನವು ಹುಸಿಯಾಗಿ ತೋರಬಹುದು. ಕಾವ್ಯಪ್ರಪಂಚವನ್ನು ಜಾಗ್ರತ್ ಪ್ರಪಂಚದ ಬೀದಿಗೆಳೆದರೆ ಅದೂ ಮಿಥ್ಯೆಯಾಗಿ ತೋರಬಹುದು. ಬ್ರಹ್ಮಾನುಭೂತಿಯು ಕೇವಲ ಸತ್ಯಕ್ಕೆ ಉಳಿದುವೆಲ್ಲವೂ ಮಾಯೆಯಾಗುತ್ತವೆ ಎಂಬುದು ಸಿದ್ಧಪುರುಷರೆಲ್ಲರ ನಿತ್ಯಪಲ್ಲವಿಯಾಗಿದೆ.

---

[5] ಯ ಏಕೋಽವರ್ಣೋ ಬಹುಧಾ ಶಕ್ತಿಯೋಗಾತ್ ।
ವರ್ಣಾನನೇಕಾನ್ನಿಹಿತಾರ್ಥೋ ದಧಾತಿ ॥

—ಶ್ವೇತಾಶ್ವತರೋಪನಿಷತ್

ಜಾಗ್ರಜ್ಜಗತ್ತಿನ ಪಂಚೇಂದ್ರಿಯ ಪ್ರತಿಮೆಗಳಿಗೂ ಸ್ವಪ್ನಜಗತ್ತಿನ ಪ್ರತಿಮೆಗಳಿಗೂ ವ್ಯಕ್ತಿ ಹೇಗೆ ಆತ್ಮತಂತ್ರ—ಅಸ್ವತಂತ್ರ ಕಾರಣನೋ ಹಾಗೆಯೆ ಕವಿಪ್ರತಿಭೆ ಕಾವ್ಯಜಗತ್ತಿನ ಪ್ರತಿಮೆಗಳಿಗೆ ಆತ್ಮತಂತ್ರ ಅಸ್ವತಂತ್ರ ಕಾರಣವಾಗುತ್ತದೆ.

ಆತ್ಮತಂತ್ರ ಏಕೆಂದರೆ, ಅನುಭವವು ತನ್ನ ಆತ್ಮಧರ್ಮದ ಕಟ್ಟಳೆಗಳಿಗೆ ಒಳಗಾಗಿ, ತನ್ನ ಅಂತರಾವಶ್ಯಕತೆಗಳಿಗೆ ಅನುರೂಪವಾಗಿ, ಪ್ರಕಾಶನದ ಸ್ವರೂಪವನ್ನೂ ನಾಮರೂಪಗಳನ್ನೂ ನಿರ್ಣಯಿಸಿಕೊಳ್ಳುತ್ತದೆ. ಅಸ್ವತಂತ್ರ ಏಕೆಂದರೆ, ಅಂತಹ ನಿರ್ಣಯದ ಫಲವಾಗಿ ಮೈದೋರುವ ಪ್ರತಿಮಾಲೋಕದ ಅನೇಕಾಂಶಗಳಲ್ಲಿ ಒಂದಂಶವಾಗಿರುವ ನಮ್ಮ ಬುದ್ಧಿ ಮತ್ತು ಅದರ ಪ್ರಯತ್ನಗಳು ತನಗೇ ಕಾರಣವಾದ ಆ ಪ್ರತಿಮಾಸೃಷ್ಟಿಗೇ ಕಾರಣವಾಗಲು ಸಾಧ್ಯವಲ್ಲ.

ಆದ್ದರಿಂದ ಮಹಾಕವಿಸೃಷ್ಟಿಯ ಪ್ರತಿಮಾಜಗತ್ತು, ಭಾವಸತ್ಯಾನುಭವದ ದೃಷ್ಟಿಯಿಂದ, ಬ್ರಹ್ಮಸೃಷ್ಟಿಯ ಪ್ರತಿಮಾಜಗತ್ತಿನಷ್ಟೇ ಸತ್ಯ ಅಥವಾ ಮಿಥ್ಯೆ.[6] ಇನ್ನೂ ಒಂದು ಹೆಜ್ಜೆ ಮುಂದುವರಿದು ಹೇಳುವುದಾದರೆ, ನಾಮರೂಪಗಳ ದೃಷ್ಟಿಯಿಂದಲೂ, ಕವಿಕೃತಿಲೋಕವು ಪ್ರಕೃತಿಲೋಕಕ್ಕಿಂತಲೂ ಹೆಚ್ಚು ಸ್ಥಿರ, ಮತ್ತು ಸತ್ಯತರ. ಕವಿಪ್ರತಿಭೆಯ ರಸಕ್ರಿಯೆ ಲೌಕಿಕ ನಶ್ವರಕ್ಕೆ ಅಮೃತತ್ವವನ್ನು ದಯಪಾಲಿಸುತ್ತದೆ; ಕಾಲದೇಶದ ಮೃತ್ಯುಪಂಜರದಿಂದ ಪಾರುಮಾಡಿ, ವಿಸ್ಮೃತಿಯ ವೈತರಣಿಯಲ್ಲಿ ಅದನ್ನು ಮುಳುಗಲೀಯದೆ ಉದ್ಧಾರಮಾಡುತ್ತದೆ. ಸ್ವಲ್ಪ ಸಂಖ್ಯೆಯ ಜನದ, ಸ್ವಲ್ಪ ಕಾಲದ ಮತ್ತು ಪರಿಮಿತ ದೇಶದ ಸ್ವಾರ್ಥತಾ ಸಂಕುಚಿತ ವಲಯ ಬದ್ಧವಾದ ಭಾವಾನುಭವಗಳನ್ನು ಅಸಂಖ್ಯಾತ ಮಾನವರ ಸಾರ್ವಕಾಲಿಕ ಮತ್ತು ಸಾರ್ವದೇಶಿಕವೂ, ಸ್ವಾರ್ಥತಾವಿಮುಕ್ತವೂ, ವಿಶ್ವವಿಶಾಲವೂ ಆದ ಭಾವಾನುಭವಗಳನ್ನಾಗಿ ಮಾಡಿ, ಅಚಿರವೂ ಪ್ರಾಪಂಚಿಕವೂ ಆದ ನಾಮರೂಪಕ ಸತ್ಯಗಳನ್ನು ಅಲೌಕಿಕವೂ ನಿತ್ಯವೂ ಆದ ಚಿರಾನುಭವ ಸತ್ಯಕ್ಕೆ ಪರಿವರ್ತಿಸುತ್ತದೆ.

ಆದ್ದರಿಂದಲೆ ಸಾಹಿತ್ಯಸೀಮೆಯಲ್ಲಿ ಮಾತ್ರವಲ್ಲದೆ ಇತರ ಕಲಾವಲಯಗಳಲ್ಲಿಯೂ ಮತ್ತು ಮತಪ್ರಪಂಚಗಳಲ್ಲಿಯೂ ಅಲ್ಪವೂ ಮಿತವೂ ಆಗಿರುವ ಪ್ರತಿಕೃತಿಯ ವಿಧಾನಕ್ಕೆ ಅಗಮ್ಯವಾದುದನ್ನು ಮಹಾದ್ಭುತವಾಗಿ ಸಾಧಿಸಿ, ಸರ್ವಜನಾದರಣೀಯವೂ ಸಕಲ ಸಹೃದಯ ಸಂಪೂಜ್ಯವೂ ಆಗಿ ಶೋಭಿಸುತ್ತಿದೆ ಪ್ರತಿಮಾವಿಧಾನ.[7]

— ಕುವೆಂಪು

---

[6] Its nature is to be not a part, nor yet a copy of the real world (as we commonly understand that phrase) but to be a world by itself, independent, complete, autonomous.—A. C. Bradley.

[7] "ಸಾಹಿತ್ಯದಲ್ಲಿ ಪ್ರತಿಮಾ" ಎಂಬ ಲೇಖನದಲ್ಲಿ ನಿದರ್ಶನಸಹಿತವಾದ ಇದರ ವಿವರಣೆ ದೊರೆಯುವುದು.

## ಅಸಂಭಾವ್ಯತೆಯಿಂದ ಕಾವ್ಯಕ್ಕೆ ಬರುವ ರಮ್ಯತೆ

ಮಹಾಕವಿಗಳ ವಿಚಾರದಲ್ಲಿ ಹೊಗಳುವವರೂ ಉಂಟು, ತೆಗಳುವವರೂ ಉಂಟು. ಅವರ ಕಾವ್ಯಗಳಲ್ಲಿ ಕಂಡುಬರುವ ಅಸಂಭಾವ್ಯ ಸಂದರ್ಭಗಳನ್ನು ಕುರಿತು ಈ ನಿಂದಾಸ್ತುತಿಗಳು ಸಾಮಾನ್ಯವಾಗಿ ಪ್ರವರ್ತಿಸುತ್ತವೆ. 'ಕಲ್ಲಿನಿಂದ ಕಡಲಿಗೆ ಸೇತುವೆ ಕಟ್ಟಿ ಕಪಿಗಳಿಂದ ರಕ್ಕಸರನ್ನು ಸದೆಬಡಿದನಂತೆ ರಾಮ, ಕಣೆಗಳಿಂದ ಆಕಾಶಕ್ಕೆ ಬಲೆಗಟ್ಟಿ ಮಳೆಯನ್ನು ತಡೆದನಂತೆ ಅರ್ಜುನ, ಸಾಗರವನ್ನೇ ಹೀರಿದನಂತೆ ಅಗಸ್ತ್ಯ.–ಹೀಗೆ ದೊಡ್ಡ ಹೆಸರಿನವರು ಏನು ಹೇಳಿದರೂ ನಡೆಯುತ್ತದೆ; ನಾವು ಎಷ್ಟೋ ಶಾಸ್ತ್ರಗಳನ್ನು ಓದಿ ಎಷ್ಟು ತರ್ಕಬದ್ಧವಾಗಿ ಎಂಥ ಕಾವ್ಯವನ್ನು ರಚಿಸಿದರೂ ಕೇಳುವವರೇ ಇಲ್ಲ'ಎಂದು ಕವಿ ಶಾಸ್ತ್ರಿಯೊಬ್ಬನು ಕೊರಗುತ್ತಾನೆ. 'ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿ ಸಂತತಿ........ ...ಏನಳವಗ್ಗಳಮೋ ಕವೀಂದ್ರರಾ'ಎಂದು ಈ ಅಸಂಭಾವ್ಯ ಸಂದರ್ಭಗಳನ್ನೇ ಮುಗಿಲಿಗೇರಿಸಿ ಮುಕ್ತಕಂಠದಿಂದ ಹೊಗಳುತ್ತಾನೆ ನೇಮಿಚಂದ್ರ. ಒಬ್ಬನಿಗೆ ಯಾವುದು ಕವಿಯ ದೌರ್ಬಲ್ಯವೆಂದು ತೋರುತ್ತದೊ ಮತ್ತೊಬ್ಬ ರಸಿಕನಿಗೆ ಅದೇ ಅಗ್ಗಳದ ಅಳವೆಂದು ತೋರುತ್ತದೆ. ಏಕೆಂದರೆ ಕಾವ್ಯದ ವಿಷಯದಲ್ಲಿ ಇವರಿಬ್ಬರ ಅಳೆಗೋಲುಗಳು ಬೇರೆ ಬೇರೆ ತರದವು. ಒಬ್ಬ ಜಡ-ಜೀವ-ಪಾರಮ್ಯವಾದಿ; ಮತ್ತೊಬ್ಬ ಜಡ-ಜೀವ-ರಸ-ಪಾರಮ್ಯವಾದಿ. ಕಾವ್ಯದಿಂದ ಭವದ ತೊಡಕುಗಳಲ್ಲಿ ರಮಿಸುವುದನ್ನು ಅಪೇಕ್ಷಿಸುತ್ತಾನೆ ಒಬ್ಬ; ಮತ್ತೊಬ್ಬ ಭವದ ತೊಡಕುಗಳಲ್ಲಿ ಬಲವಾಗಿ ತೊಡರಿಕೊಂಡಿದ್ದರೂ ಸ್ವಸಾಮರ್ಥ್ಯದಿಂದ ಬಿಡುಗಡೆಯನ್ನು ಗಳಿಸಿಕೊಂಡು ಬೇರೊಂದು ನಿಲುವಿನ ಪ್ರಶಾಂತವಾತಾವರಣದಲ್ಲಿ ಈ ತೊಡಕುಗನ್ನೇ ತನ್ನ ಸಂತೋಷಕ್ಕಾಗಿ ಬಳಸಿಕೊಳ್ಳಲು ಹವಣಿಸುತ್ತಾನೆ.

ಕಾವ್ಯರಸಾಸ್ವಾದನೆಯ ವಿಷಯದಲ್ಲಿ ನೇಮಿಚಂದ್ರನ ಗುಂಪಿಗೆ ಸೇರತಕ್ಕವರು ನಾವು. ಈ ಪಕ್ಷಕ್ಕೆ ಸೇರುವುದರಿಂದ ನಮಗೆ ಪ್ರಯೋಜನವಿಲ್ಲದಿಲ್ಲ. ಏಕೆಂದರೆ ಕವಿಯ ಅಗ್ಗಳಿಕೆ ಇರುವುದು ತಾನು ಲೌಕಿಕಾಕರ್ಷಣದಿಂದ ತಪ್ಪಿಸಿಕೊಂಡು ಬೇರೊಂದು ಮೇಲಾದ ನಿಲುಗಡೆಯಲ್ಲಿ ನಿಂತು ಈ ಭವದ ಮರ್ಮಗಳನ್ನು ನಮಗೆ ತೋರುವುದರಲ್ಲಿ. ಇಂಥ ಅಸಂಭಾವ್ಯ ಸಂದರ್ಭಗಳು ಆತ ನಮಗಾಗಿ ಈ ಪೆಡಸು ದಾರಿಯಲ್ಲಿ ನಿರ್ಮಿಸುವ ಕ್ಷೇಮಸ್ಥಾನಗಳು. ಈ ಸಂದರ್ಭಗಳು ಕವಿಲೋಕವನ್ನು ಭವಲೋಕದಿಂದ ಕ್ಷಣಮಾತ್ರದಲ್ಲಿ ಪ್ರತ್ಯೇಕಿಸಿ ನಮ್ಮನ್ನು ಬಿಡುಗಡೆಯ ನೆಲೆಗೇರಿಸುತ್ತವೆ. ಆ ನಿಲುವಿನಿಂದ ಕಾರ್ಯಕಾರಣ ಸಂಬದ್ಧವಾಗಿ ಪರಿಸರ ಪ್ರಚೋದಿತವಾದ ಇಹ ವ್ಯಾಪಾರಗಳೆಲ್ಲವೂ ನೋಡುವುದಕ್ಕೆ ಬಹಳ ಚೆನ್ನು. ಬೆನ್ನಟ್ಟಿ ಬರುವ ಹುಲಿಯನ್ನು ವಂಚಿಸಿ ಮರವನ್ನೇರಿ ನಿಂತು ಭಯವಿದೂರನಾಗಿ ಆ ಕ್ಷೇಮಸ್ಥಾನದಿಂದ ಆ ಹುಲಿಯನ್ನು ವೀಕ್ಷಿಸುತ್ತಾ "ಎಂಥ ಸುಂದರವಾದ ಪ್ರಾಣಿ "ಎನ್ನುವ ದಾರಿಗ

ನಂತೆ, ಕವಿ ನಮಗಾಗಿ ನಿರ್ಮಿಸುವ ಇಂಥ ಶಿವಸ್ಥಾನಗಳಿಂದ ಜಗತ್ತು ತನ್ನ ಅಶಿವತೆಯನ್ನೆಲ್ಲಾ ಕಳೆದುಕೊಂಡು ನಮಗೆ ರಮ್ಯವಾಗಿ ತೋರುತ್ತದೆ.

ಅಸಂಭಾವ್ಯ ಸಂದರ್ಭಗಳಿಂದ ವಾಸ್ತವಕ್ಕೆ ದೊರೆಯುವ ಅಪೂರ್ವ ಸೌಂದರ್ಯಕ್ಕೆ ವಿಪುಲವಾದ ಉದಾಹರಣೆಗಳನ್ನು ಸತ್ಕಾವ್ಯಗಳಿಂದ ಎತ್ತಿ ಎತ್ತಿ ಕೊಡಬಹುದು. ಬಹುಕಾಲದ ಹಿಂದೆ ಪ್ರಣೀತವಾಗಿ ಈಗಲೂ ನಮ್ಮಿಂದ ಆದರಿಸ ಲ್ಪಡುತ್ತಿರುವ ಕಾವ್ಯಗಳೆಲ್ಲವೂ ಈ ಅಲೌಕಿಕ ಆಲೋಕದಿಂದ ತುಂಬಿವೆ; ಆದುದ ರಿಂದಲೇ ಆದರಣೀಯವಾಗಿವೆ. ಉದಾಹರಣೆಗಾಗಿ, ಕುಮಾರವ್ಯಾಸನು ವರ್ಣಿಸಿರುವ ಕರ್ಣಜನನ ಪ್ರಸಂಗವನ್ನು ನೋಡೋಣ. ಕುಂತಿ ಸೂರ್ಯನನ್ನು ಮಂತ್ರದಿಂದ ನೆನೆದಳು; ಸೂರ್ಯ ಪ್ರತ್ಯಕ್ಷನಾಗಿ ಬಂದು ಆ ಭೀರುವನ್ನು ಮುಟ್ಟಿದ; ಶಿಶು ಜನಿಸಿತು. ಕುಲ ಕೆಡುವುದೆಂಬ ಭಯದಿಂದ ಆಕೆ ಆ ಕೂಸನ್ನು ಗಂಗಾನದಿಯಲ್ಲಿ ಬಿಸುಟಳು. ಆ ನದಿ ತನ್ನ ಅಲೆಗೈಗಳಲ್ಲಿ ಆ ಕಂದನನ್ನು ದಡಕ್ಕೆ ತಳ್ಳಿತು. ಮರಳಿನ ಮೇಲೆ ಆ ಮಗು ಅಂತರಿಕ್ಷದಲ್ಲಿರುವ ಸೂರ್ಯನನ್ನು ನೋಡುತ್ತಾ ಅಳುತ್ತಿದೆ. ಆದರೆ ತನ್ನ ಸ್ವಂತ ಮಗನನ್ನು ಸಂರಕ್ಷಿಸುವುದಕ್ಕೆ ಮಹಾಮಹಿಮನಾಗಿ ಜಗತ್ತನ್ನೇ ಹೊರೆಯು ತ್ತಿರುವ ಆ ಸೂರ್ಯನೂ ಅಸಮರ್ಥ. ಮಗು ತಂದೆಯನ್ನು ನೋಡಿ ಅಳುತ್ತಿದೆ; ತಂದೆ ನಿರುಪಾಯನಾಗಿ ಅದನ್ನು ಸುಮ್ಮನೆ ನಿಟ್ಟಿಸುತ್ತಾನೆ.

ಕೆದರಿ ಕಾಲಲಿ ಮಳಲ ರಾಶಿಯ
ನೊದೆದು ಕೈಗಳ ಕೊಡಹಿ ಭೋಯೆಂ
ದೊದರುತಿರ್ದನು ಶಿಶುಗಳರಸನು ರವಿಯನೀಕ್ಷಿಸುತ॥
ಇದನು ಕಂಡನು ಸೂತನೊಬ್ಬನು–

ಅನಾಥ ಶಿಶು ಕರುಣಾಸ್ಪದವೇ ಸರಿ. ಆದರೆ ಈ ಸಂದರ್ಭದಲ್ಲಿ ಮಗು ಸೂರ್ಯನಿಂದ ಜನಿಸಿದುದು ಎಂಬ ಅಸಂಭಾವ್ಯ ಸಂದರ್ಭದ ಹಿನ್ನೆಲೆಯಲ್ಲಿ ಈ ವರ್ಣನೆಗೆ ಎಷ್ಟೊಂದು ಕಳೆ ಬಂದಿದೆ! ಆ ಮಗುವಿನ ಮೇಲೆ ನಮ್ಮ ಕರುಣೆ ಸೂರ್ಯ ಮಂಡಲದವರೆಗೂ ವ್ಯಾಪಿಸಿ ಎಷ್ಟು ಆಳವಾಗುತ್ತದೆ! ಆ ಮಗುವಿನಂತೆ ಸೂರ್ಯನೂ ನಮ್ಮ ಮರುಕಕ್ಕೆ ಪಾತ್ರ. ಹೀಗೆಯೇ ಸೌಗಂಧಿಕಾ ಪುಷ್ಪಹರಣ ಪ್ರಸಂಗದಲ್ಲಿ ಮಂದಾನಿಲನು ಭೀಮನನ್ನು ಅಪ್ಪಿಕೊಳ್ಳುವ ಸಂದರ್ಭವೂ ಈಗ ನೆನೆದು ಸವಿಯಲು ಅರ್ಹವಾದುದು:

ಒಗುಮಿಗೆಯ ಪರಿಮಳದ ಕಂಪಿನ
ತಗಡತೆಕ್ಕೆಯ ಬೀದಿವರಿಗಳ
ಮುಗುಳಮೊಗ್ಗೆಯ ತಗೆವ ತುಂಬಿಯ ಲಳಿಯ ಲಗ್ಗೆಗಳ।
ಹೊಗರ ಹೊರಳಿಯ ಕಿರುದೆರೆಯ ಸೂ
ಕುಗಳ ತಳಿತ ತುಷಾರ ಭಾರದ
ಸೊಗಸ ಸೇರಿಸಿ ಮಂದಮಾರುತನಪ್ಪಿದನು ಮಗನ॥

ಇಲ್ಲಿ ಮಂದಮಾರುತ ಮೈಮೇಲೆ ಬೀಸಿದರೆ ಆಗುವ ಸುಖದ ವರ್ಣನೆಯಷ್ಟೇ ಇಲ್ಲ; ತಂದೆ ಮಗನನ್ನು ತಬ್ಬಿಕೊಂಡು ಮುದ್ದಿಸಿದ ಸುಖವಿದೆ. ಈ ಅಪ್ಪುಗೆಯಲ್ಲಿ ಎಷ್ಟು ಸಂಭ್ರಮ, ಎಷ್ಟು ಸಂತೋಷ, ಎಂಥ ತಂಪು! ಇಲ್ಲಿನ ಸೊಗಸಿಗೆ ಮಾತೃಕಾರೂಪವಾಗಿರುವುದು ಮಾರುತನ ಮಗ ಭೀಮ ಎಂಬ ಅಲೌಕಿಕ ಸಂದರ್ಭ.

ನಮ್ಮ ಪುರಾಣೇತಿಹಾಸಗಳಲ್ಲಿ ಇಂಥ ಅಸಂಭಾವ್ಯ ಸಂಭವಗಳೇ ತುಂಬಿವೆ. ದೇವಕುಮಾರರಾಗಿ ಹುಟ್ಟಿಯೂ ಪಾಂಡವರು ಪಟ್ಟ ಕಷ್ಟ ಎಂಥದು, ಧರ್ಮರಾಯನ ಸಹನೆ ಎಂಥದು–ಹೀಗೆ ನಮ್ಮ ಬುದ್ಧಿ ದೇವತೆಯು ನಿಲುವಿನಲ್ಲಿ ಓಡಿ ಆ ಸಂದರ್ಭಗಳ ರಸವನ್ನು ಸವಿಯುತ್ತದೆ. ಹಾಗೆಯೇ ರಾಮಾಯಣದಲ್ಲೂ ಕೂಡ. ಅದರಲ್ಲೂ ಸುಂದರಕಾಂಡದಲ್ಲಿನ ಆಂಜನೇಯನನ್ನು ನೆನೆದುಕೊಂಡರೆ ಯಾರ ಮನಸ್ಸು ಪ್ರಫುಲ್ಲವಾಗದು? ರಸಋತದ ಪ್ರಭುತ್ವಕ್ಕೆ ಆತ ಅಳವಟ್ಟಂತೆ ಮತ್ತೊಂದು ವ್ಯಕ್ತಿ ಅಳವಟ್ಟಿಲ್ಲ ಆ ಕಾವ್ಯದಲ್ಲಿ. ವಾಲ್ಮೀಕಿಯಷ್ಟು ಕುಶಾಗ್ರ ಬುದ್ಧಿಗಳೂ ವಿಶಾಲ ಬುದ್ಧಿಗಳೂ ಕವಿ ಪ್ರಪಂಚದಲ್ಲಿ ಅಪೂರ್ವ. ಆದರೆ ಆ ಬುದ್ಧಿಯೂ ಕೂಡ ಆ ಕವಿಯ ರಸಪ್ರತಿಭೆಯ ಹುಚ್ಚಿಗೆ ತಗ್ಗಿ ನಡೆಯುತ್ತದೆ. ಈ ಹುಚ್ಚಿನ ಗೆಲುಗಂಬದಂತೆ ಆಂಜನೇಯ ನಮ್ಮ ಮನಸ್ಸಿನಲ್ಲಿ ಮೆರೆಯುತ್ತಾನೆ. ಕವಿ ಕೇವಲ ತನ್ನ ಬುದ್ಧಿಗೆ ವಶನಾಗಿದ್ದರೆ ಹನುಮಂತ ಹ್ರಸ್ವನಾಗಿಯೇ ಉಳಿಯುತ್ತಿದ್ದ; ಆತನಿಗೆ ಈಗಿನ ಅಮರತ್ವ ದೊರೆಯುತ್ತಿತ್ತೋ ಇಲ್ಲವೋ. ಒಂದು ಸಂದರ್ಭವನ್ನು ವಿವೇಚಿಸೋಣ. ಕಪಿಗಳು ಕಡಲ ತಡಿಗೆ ಬಂದಿವೆ. ಲಂಕೆಗೆ ಹೋಗುವುದು ಹೇಗೆ ಎಂಬ ಸಮಸ್ಯೆ ತಲೆದೋರಿದೆ. ಕವಿಗೆ ಕವಿಯೇ ರಾಜ; ಆತನ ಬುದ್ಧಿಯೇ ಮಂತ್ರಿ. ಆ ತೊಡಕಿನ ಸಂದರ್ಭದಲ್ಲಿ ಕಥೆಯನ್ನು ಮುಂದುವರಿಸುವುದು ಹೇಗೆ ಎಂಬ ಸಮಸ್ಯೆ ಸಹಜವಾಗಿ ತಲೆದೋರಿ ಕವಿ ನಿಂತು ಬುದ್ಧಿಯನ್ನು ಕುರಿತು ಅಯ್ಯಾ, ಈ ಕಪಿಗಳು ಈ ಮಹಾಸಾಗರವನ್ನು ಹೇಗೆ ದಾಟುತ್ತವಯ್ಯಾ" ಎನ್ನುತ್ತಾನೆ. ಬುದ್ಧಿ ಎನ್ನುತ್ತದೆ, "ಇದು, ಹೇಗೆ ಯಾರಿಂದ ಸಾಧ್ಯ?", ಕವಿ: "ಹನುಮಂತನಿದ್ದಾನಲ್ಲ", ಬುದ್ಧಿ: "ಓ, ಆ ಋಷ್ಯಮೂಕ ಪರ್ವತದಲ್ಲಿ ಸುಗ್ರೀವನೊಡನೆ ತಲೆಗೆ ಮುಸುಕು ಹಾಕಿಕೊಂಡು ಓಡಾಡುತ್ತಿದ್ದ ಪರಿಜನ ಹನುಮಂತ ತಾನೆ?", ಕವಿ: "ಅಲ್ಲ ಅಲ್ಲ; ರಾಮದೂತ ಹನುಮಂತ, ಮಾರುತನ ಮಗ", ಬುದ್ಧಿ: "ಹಾಗೆಯೇ?", ಕವಿ: "ಅಹುದು ಹಾಗೆಯೇ, ಅಲ್ಲಿ ನೋಡಿದೆಯಾ, ನೀನು ಕಣ್ಮುಚ್ಚಿ ತೆಗೆಯುವುದರಲ್ಲಿ ಮಾರುತಿ ಹೇಗೆ ಬೆಳೆದು ನಿಂತಿದ್ದಾನೆ! ಈತನಿಗೆ ಈ ಕಡಲು ಅಸಾಧ್ಯವೆ?" ನೋಡಿ ಬುದ್ಧಿಯ ಕಣ್ಣು ಕೋರೈಸಿ ಹೋಗುತ್ತದೆ. ಕವಿಯ ಅಪ್ರತಿಹತವಾದ ರಸಪ್ರಜ್ಞೆಯ ಈ ನಿರ್ಮಿತಿಗೆ ಮಣಿದು ನಿಲ್ಲುತ್ತದೆ; ಇಳೆಯಿಂದ ಮುಗಿಲಿಗೆ ಬೆಳೆದ ಆ ಮಹಾಮೂರ್ತಿಯನ್ನು ಸ್ಫುರದುಪಮೆಗಳಿಂದ ಅಲಂಕರಿಸತೊಡಗುತ್ತದೆ. ಮಹಾಕವಿಯ ವಾಕ್ಯಗಳಿಗೆ ಬುದ್ಧಿಮಾಡತಕ್ಕ ಕೆಲಸವೇ ಇದು—ಈ ಶೋಭನವಾದ ದಾಸ್ಯವೃತ್ತಿ ಅಥವಾ ಕೈಂಕರ್ಯ.

'ಊರು ವೇಗೋದ್ಧತಾ ವೃಕ್ಷಾ ಮುಹೂರ್ತಂ ಕಪಿಮನ್ವಯುಃ
ಪ್ರಸ್ಥಿತಂ ದೀರ್ಘಮಧ್ವಾನಂ ಸ್ವಬಂಧುಮಿವ ಬಾಂಧವಾಃ
'ಸುಪುಷ್ಪಿತಾಗ್ರೈರ್ಬಹುಭಿಃ ಪಾದಪೈರನ್ವಿತಃ ಕಪಿಃ
ಹನೂಮಾನ್ ಪರ್ವತಾಕಾರೋ ಬಭೂವಾದ್ಭುತ ದರ್ಶನಃ'
'ಪ್ರವಿಶನ್ನಭ್ರ ಜಾಲಾನಿ ನಿಷ್ಪತಂಶ್ಚ ಪುನಃ ಪುನಃ
ಪ್ರಚ್ಛನ್ನಶ್ಚ ಪ್ರಕಾಶಶ್ಚ ಚಂದ್ರಮಾ ಇವ ಲಕ್ಷ್ಯತೇ'
('ತೊಡೆಜವಕೆ ಕಿತ್ತೆದ್ದ ಮರಗಳು ಕಪಿಯ ಬೆಂಗಡೆ ಬಂದವು
ದೂರಪಯಣಕೆ ಹೊರಟ ನೆಂಟನ ಬೀಳ್ಕೊಡುವ ನೆಂಟರ ತೆರ'
'ತುದಿಯರಳ ಬಲುಮರಗಳಿಂದಲಿ ಸುತ್ತುವರಿದಾ ಕಪಿವರ
ಬೆಟ್ಟದಂತಹ ಮೈಯ ಹಸುಸುನು ಬೆರಗತಂದನು ಕಣ್ಣಿಗೆ'
'ಮೋಡದೊಡ್ಡನು ಹೊಗುತಲಂತೆಯೆ ಹೊರಬರುತ ಮರಮರಳಿಯು
ಮರೆಗೊಳುತ ಮರೆತೆಗೆದು ಬೆಳಗುವ ಚಂದ್ರನಂದದಿ ಕಾಂಬನು')

ಹೀಗೆ ಆ ಅದ್ಭುತವ್ಯಕ್ತಿಯನ್ನು ಬುದ್ಧಿ ಬಣ್ಣಿಸತೀರದು. ನಮ್ಮ ಮನಸ್ಸಿನಲ್ಲಿ ನಿಲ್ಲುವ ರಸಮೂರ್ತಿಯೂ ಇದೇ. ಸುಗ್ರೀವನೊಡನೆ ಸಾಮಾನ್ಯನಂತೆ ಭೀರುವಾಗಿ ಬಂಡೆಯಿಂದ ಬಂಡೆಗೆ ನೆಗೆದಾಡುತ್ತಿದ್ದ ವಾಸ್ತವ ಮೂರ್ತಿ ಇನ್ನು ನಮ್ಮ ಪಾಲಿಗೆ ಉಳಿಯುವುದಿಲ್ಲ. ಇಂತು ರಸದ ನೆಲೆಯಲ್ಲಿ ಕವಿಗೆ ಪ್ರಾಪ್ತವಾಗುವ ಅಲೌಕಿಕ ಆಲೋಕದಿಂದ ದೃಶ್ಯವಾಗುವ ಮತ್ತು ಬುದ್ಧಿಯಿಂದ ಪ್ರಸಾದಿತವಾಗುವ ವಸ್ತುವಿಗೆ ಸೌಂದರ್ಯವೊಂದೇ ಅಲ್ಲದೆ ಸತ್ಯವೆನ್ನಿಸಿಕೊಳ್ಳುವ ಪದವಿಯೂ ಪ್ರಾಪ್ತವಾಗುತ್ತದೆ. ಆ ಬೆಳಕಿನಿಂದಲೇ ವಾಸ್ತವಕ್ಕೂ ಕಳೆ. ಬುದ್ಧಿಯೋ ಜೀವ—ಜಡ ಧರ್ಮಾನುಯಾಯಿ; ಅದರ ಸಂತತಾನುಸರಣೆಯಿಂದ ರಸಸ್ಥಾನವನ್ನು ತಲಪುವುದು ಕಷ್ಟ. ಆ ನೆಲೆಯನ್ನು ತಲಪಬಯಸುವ ಕವಿ ಆಗಾಗ ತನ್ನ ಪ್ರಭುತ್ವವನ್ನು ಚಲಾಯಿಸಬೇಕಾಗುತ್ತದೆ; ಇಷ್ಟದಂತೆ ಪಾತ್ರಗಳನ್ನು ಕುಣಿಸಬೇಕಾಗುತ್ತದೆ; ಅವಿನೀತವೂ ಅಶಿಕ್ಷಿತವೂ ಆದ ಬುದ್ಧಿ ಇದೇನು ಹುಚ್ಚೆನ್ನುವ ಅಸಂಭಾವ್ಯ ಸಂದರ್ಭಗಳನ್ನೂ ನಿರ್ಮಿಸಬೇಕಾಗುತ್ತದೆ. ಆಗ ಪ್ರಭುವಿನ ಬೆಲೆಯನ್ನರಿತ ಬುದ್ಧಿ "ಹಸಾದ"ವೆಂದು ಆ ವಿಶೇಷಾಜ್ಞೆಗಳನ್ನು ಒಪ್ಪಿ ಕಾವ್ಯವನ್ನು ನಡೆಗೊಳಿಸುತ್ತದೆ—ಇಂಗ್ಲಿಷರ ರಾಜ್ಯಭಾರದಲ್ಲಿನ ಐ. ಸಿ. ಎಸ್. ಗುಂಪಿನಂತೆ. ರಸಖುತವನ್ನನುಸರಿಸಿ ಕಡಲನ್ನು ದಾಟುವಾಗ ಬೆಳೆದ ಕಪಿ, ಅಂತಃಪುರದಲ್ಲಿ ಓಡಾಡುವಾಗ ಕಿರಿದಾಗಲೂ ಬಲ್ಲುದು. ಹೀಗೆ ಕಿರಿದಾಗಿ ವಾಸ್ತವಕ್ಕೆ ಮರಳುವ ಪವಾಡವೂ ಮೋದಾವಹವೇ ಆಗುತ್ತದೆ. 'ಆಸ್ಫೋಟಯಾಮಾಸ ಚುಚುಂಬ ಪುಚ್ಛಂ'—ಕವಿಯ ಹುಚ್ಚಿನಿಂದ ನಿರ್ಮಿತವಾದ ಆ ಮಹಾಕಪಿಯ ಹಿನ್ನೆಲೆಯಲ್ಲಿ ಈ ವಾಸ್ತವವೂ ಎಷ್ಟು ಮುದ್ದಾಗಿದೆ! ಹಾಗೆಯೇ, ಬಕಮಹಾರಾಕ್ಷಸನ ಹಿನ್ನೆಲೆಯಲ್ಲಿ ಹಂಚಿಕಡ್ಡಿಯನ್ನು ಜಳಪಿಸುತ್ತಾ ಆ ರಕ್ಕಸನನ್ನು ಸದೆಬಡಿವೆನೆಂದು ಆಟೋಪಿಸುವ ಏಕಚಕ್ರನಗರದ ಬ್ರಾಹ್ಮಣ ದಂಪತಿಗಳ ಮಗುವೂ ಎಷ್ಟು ಮುದ್ದಾಗುತ್ತದೆ!

ಸತ್ಕಾವ್ಯಗಳಲ್ಲಿ ವಾಸ್ತವ ಚಿತ್ರಣಕ್ಕೆ ಬರುವ ಇನ್ನಿಲ್ಲದ ಕಾಂತಿಗೆ ಕಾರಣವನ್ನು ನಾವು ಅಲೌಕಿಕವೂ ಆಗಾಗ ಇಂಥ ಅಸಂಭಾವ್ಯ ಸಂದರ್ಭಗಳಲ್ಲಿ ಸ್ಪಷ್ಟವೂ ಆಗುತ್ತಿರುವ ಕವಿಯ ರಸನಿಷ್ಠೆಯಲ್ಲಿ ಅರಸಬೇಕು. ರಾಮಾಯಣ ಮಹಾಭಾರತ ಪುರಾಣಗಳು ಮುನಿ ಪ್ರಣೀತಗಳು; ಅವನ್ನು ಬಿಟ್ಟರೂ ಮಹಾಕವಿ ಕಾಳಿದಾಸನ ಕಾವ್ಯ ನಾಟಕಗಳನ್ನೇ ತೆಗೆದುಕೊಳ್ಳೋಣ. ರಸಘಟ್ಟಿಯಾದ ಶಾಕುಂತಳದ ಅಸ್ತಿಭಾರ ದುಷ್ಯಂತನ ಶಾಪದ ಮೇಲೆ. ಶಾಪಕ್ಕೆಲ್ಲಾದರೂ ಇಷ್ಟು ಸತ್ವವುಂಟೇ ಎಂದರೆ ನಾಟಕವೇ ಮಾಯವಾಗಿ ಹೋಗುತ್ತದೆ! ಆಮೇಲೆ ಶಕುಂತಳೆಯನ್ನು ಮೇನಕೆ ಮುಗಿಲಿನಿಂದಿಳಿದು ಎತ್ತಿಕೊಂಡು ಹೋಗಿ ಮಾರೀಚಾಶ್ರಮದಲ್ಲಿ ಇಳಿಸದೇ ಹೋಗಿದ್ದರೆ ಕತೆಯ ಗತಿಯೇನು? ಆಶ್ರಿತನಾದ ರಾಜಪುರೋಹಿತನ ಮನೆಯಲ್ಲಿ ಕಣ್ಣೆಸರಾದ ದುಷ್ಯಂತನ ಅರಮನೆಯ ಸನಿಯದಲ್ಲೇ, ಆ ಕಲುಷಿತ ವಾತಾವರಣದಲ್ಲೇ, ಕೇವಲ ಅನಾಥೆಯಂತೆ ಕಣ್ವನ ಮಗಳು ಸದಾ ಕಣ್ಣೀರಿಡುತ್ತಾ ಬಾಳತಕ್ಕದ್ದೇ—(ಕವಿ ತನ್ನ ಬುದ್ಧಿಯನ್ನೇ ಅನುಸರಿಸಿದ್ದರೆ ಅದು ಆಕೆಯನ್ನು ಅಲ್ಲಿ ಕೆಡಹುತ್ತಿತ್ತು)—ಅಥವಾ (ಕವಿ ತನ್ನ ದಿವ್ಯದೃಷ್ಟಿಯನ್ನನುಸರಿಸಿ) ಸ್ವರ್ಗದ ಹತ್ತಿರ ದೇವಕನ್ಯೆಯಾದ ತಾಯಿಯ ಅಕ್ಕರೆಯಲ್ಲಿ, ಮಹರ್ಷಿಯ ಪವಿತ್ರ ಸಾನ್ನಿಧ್ಯದಲ್ಲಿ ನಿರ್ಘೃಣನಾದ ಪತಿಯಿಂದಲೂ ಕಠಿಣರೋ ಅನುಕಂಪಿಸುವರೋ ಆದ ಬಂಧುಮಿತ್ರರಿಂದಲೂ ಸುದೂರಳೂ ಸ್ವತಂತ್ರಳೂ ಆಗಿ ಬಾಳತಕ್ಕದ್ದೇ? ಯಾವುದು ಮೇಲು? ಇಂಥ ಸಂದರ್ಭಗಳಲ್ಲಿ ತರ್ಕಕ್ಕೂ ಕಾರ್ಯಕಾರಣನಿಯತ ಭವವೃತ್ತಿಗೂ ರಸನಿಷ್ಠನಾದ ಕವಿ ಮನಗೊಂಡನು. ಅವನ್ನು ತಡೆಗಟ್ಟಿ ತನ್ನ ಪ್ರಭುತ್ವವನ್ನು ಚಲಾಯಿಸುತ್ತಾನೆ. ಆಗ ರಸಖುತದ ಪ್ರವರ್ತನೆಗೆ ಸಂಭವಿಸುವ ಅಡಚಣೆಗಳು ಹೋಗುವಂತೆ ಹೀಗೆ ಏರ್ಪಡುವುದು ಅನಿವಾರ್ಯವೆಂಬಂತೆ, ಅಸಂಭಾವ್ಯತೆಗಳು ಏರ್ಪಡುತ್ತವೆ; ಕಾವ್ಯ, ಸುಗಮವಾಗಿ ನೆಲೆಯನ್ನು ಮುಟ್ಟಿ ಆ ನೆಲೆಯಲ್ಲಿ ತನ್ನ ದಿವ್ಯಕಾಂತಿಯಿಂದ ಭೂಮಿಯನ್ನೂ ಸ್ವರ್ಗವನ್ನೂ ದ್ಯೋತನ ಮಾಡುತ್ತಾ ಭುವನಮೋಹಕವಾಗುತ್ತದೆ.

ಪಳಿಯುತೆ ನಿಜಭಾಗ್ಯವನಾ
ಯೆಳಿಯನ್ ತೋಳೆತ್ತಿ ಗೋಳಿಡಲ್ಕುಜ್ಜಗಿಸಲ್
ಬೆಳಗೊಂದು ಪೆಣ್ಣ ರೂಪಿಂ
ದೆಳೆದೊಯ್ದತ್ತವಳನಪ್ಸರಸ್ಸರದೆಡೆಯೊಳ್

ಇದನ್ನು ಓದಿದ ಕ್ಷಣ ನಮ್ಮ ಮನಸ್ಸು ನೆಮ್ಮದಿ ಪಡೆಯುತ್ತದಲ್ಲದೆ ಈ ಅಸಂಭಾವ್ಯ ಸಂದರ್ಭದಿಂದ ಸಪ್ತಮಾಂಕಕ್ಕೆ ದೊರೆಯುವ ಸೊಗಸನ್ನು ನೆನೆದು ಕವಿಯ ಹುಚ್ಚಿಗೆ ಕೃತಜ್ಞವೂ ಆಗುತ್ತದೆ—ತಾಳಕ್ಕೆ ನಡೆಯುತ್ತಿರುವ ಪಲ್ಲವಿಯ ನಡುವೆ ಇದ್ದಕ್ಕಿದ್ದ ಹಾಗೆ ಸುಳಿದು ಮನವನ್ನು ಕೋರೈಸುವ ರಾಗಾಲಾಪನೆಯ ಸುರುಳಿಯಂತಲ್ಲವೆ ಇಂಥ ಸಂದರ್ಭಗಳು?

ಹೀಗೆಯೇ ವಿಪುಲವಾಗಿ ಉದಾಹರಣೆಗಳನ್ನು ಕೊಡುತ್ತಾ ಈ ವಾದವನ್ನು ಸಮರ್ಥಿಸಬಹುದು. ಮೇಘದೂತದ ತುಂಬ ಚೆಚ್ಚರದ ಕುಟ್ಟಿಮದಲ್ಲಿ ಲಾಸ್ಯ ವಾಡುತ್ತಿರುವ ಕವಿಯ ಹುಚ್ಚಿನ ಅಲೌಕಿಕ ಕಾಂತಿ ತುಂಬಿದೆ ; ಆದುದರಿಂದಲೇ ಆ ಬೆಳಕಿನಲ್ಲಿ ಕಾಣುವ ಜಗತ್ತು ಅಷ್ಟು ಸುಂದರ, ಅಷ್ಟು ಸತ್ಯ. ನಂಬಿಯಣ್ಣನ ರಗಳೆಯಲ್ಲಿನ ಸರಸ ಸಂದರ್ಭಗಳ ಮೂಲದಲ್ಲಿ ಈ ಶಿವದೃಷ್ಟಿಯಿದೆ. ಈ ಬಿಡುಗಡೆಯ ನೆಲೆಯಿಂದ ಅಲ್ಲಿನ ಕತೆಯಲ್ಲಿ ಕಾಣಬರುವ ಭವದ ತೊಡಕುಗಳು ತುಂಬ ರಮ್ಯ. ಶಿವ ವೃದ್ಧ ಬ್ರಾಹ್ಮಣನಾಗಿ ನಡೆಸಿದ ಆಚಾತುರ್ಯಗಳೆಲ್ಲವೂ ಎಂಥ ಕಳೆ ಪಡೆದಿವೆ ಈ ರಸದೃಷ್ಟಿಯಿಂದ. ಭವದ ತೊಡಕುಗಳಿಂದ ಸಂಪೂರ್ಣವಾಗಿ ಮುಕ್ತಿಯನ್ನು ಪಡೆದ ಹೊರತು ರಸದ ನೆಲೆ ದೊರೆಯದು. ಕವಿಜನಕ್ಕೆ ಈ ನೆಲೆ ದೊರೆಯ ಬೇಕಾದರೆ ಒಂದು ತರದ ಹುಚ್ಚಿನಿಂದ ಮಾತ್ರ. ಆ ನೆಲೆಯನ್ನು ಮುಟ್ಟಿ ನಿಂತ ಕವಿಯ ಸೃಷ್ಟಿಗೆ ನಿಯತಿಕೃತಿನಿಯಮಗಳು ಪೂರ್ಣವಾಗಿ ಸಲ್ಲವು.

'ನತ್ವಹಂ ತೇಷು—ತೇ ಮಯಿ' 'ಅವುಗಳಲ್ಲಿ ನಾನಿಲ್ಲ, ಅವು ನನ್ನಲ್ಲಿವೆ' ಎನ್ನುತ್ತದೆ ರಸಸ್ಥಿತಿ ಭವದ ಅವಸ್ಥೆಗಳಿಗೆ. ರಸದ ನೆಲೆಯನ್ನು ಮುಟ್ಟಬಲ್ಲ ಸತ್ಕವಿಯ ಕಾವ್ಯದಲ್ಲಿ ಕಂಡುಬರುವ ಅಸಂಭಾವ್ಯ ಸಂದರ್ಭಗಳು 'ನತ್ವಹಂ ತೇಷು'—'ನಾನು ಅವುಗಳಲ್ಲಿಲ್ಲ,' ಎಂಬುದನ್ನು ನಮಗೆ ಜ್ಞಾಪಿಸಿದರೆ, ಅಲ್ಲೇ ಕಂಡುಬರುವ ಮುದ್ದಾದ ವಾಸ್ತವ ಚಿತ್ರಗಳೋ 'ತೇ ಮಯಿ' (ಇವೆಲ್ಲ ನನ್ನಲ್ಲೇ ಇವೆ) ಎಂಬುದನ್ನು ನೆನಪಿಗೆ ತರುತ್ತವೆ. ರಸದ ನೆಲೆಯೇ ಬೇರೆ. ಆದರಿಂದ ವಾಸ್ತವಕ್ಕೆ ಕಾವ್ಯದಲ್ಲೂ ಕಲೆಯಲ್ಲೂ ನೆಲೆ ಮತ್ತು ಬೆಲೆ.

— ಪು.ತಿ.ನ.

# ಸಹೃದಯ

ಕಾವ್ಯಪ್ರೇಮಿಗೆ ಭಾರತೀಯ ಕಾವ್ಯಮೀಮಾಂಸೆಯಲ್ಲಿ ದೊರೆತಿರುವಷ್ಟು ಪ್ರಾಶಸ್ತ್ಯ ಮತ್ತೆಲ್ಲಿಯೂ ದೊರೆತಿಲ್ಲ. ಕವಿಯೇನೋ ಅಂತರಂಗದ ಪ್ರಚೋದನೆ ಯಿಂದ ಪದ್ಯರಚನೆಮಾಡಿ ತನ್ನ ಎದೆಯ ಭಾರ ಇಳಿಯಿತೆಂದು ಕ್ಷಣಕಾಲ ತೃಪ್ತಿಪಡಬಹುದು ; ಆದರೆ ಹಾಗೆ ಕಟ್ಟಿದ ಕಾವ್ಯವನ್ನು ಓದಿ ಸುಖಪಡುವವರು ಇಲ್ಲದೆ ಹೋದರೆ ಏನು ಪ್ರಯೋಜನ? "ಕಟ್ಟಿಯುಮೇನೊ? ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ!"[1] ಕಾವ್ಯವು ಸಾರ್ಥಕ ವಾಗುವುದು ರಸಿಕನ ಹೃದಯದಲ್ಲಿ ಮತ್ತೆ ನೆಲೆಗೊಂಡಾಗ. ಆದಕಾರಣವೇ, ಕವಿ–

[1] ಜನ್ನ: ಅನಂತನಾಥ ಪುರಾಣ, i–45

ಸಹೃದಯರಿಬ್ಬರೂ ಒಂದೇ ಸಾರಸ್ವತ ತತ್ತ್ವದ ಅಂಗಗಳೆಂದೂ ಇಬ್ಬರೂ ಒಂದು ಗೂಡಿಯೇ ಕಾವ್ಯವಾಗುವುದೆಂದೂ ಅರ್ಥ ಬರುವಂತೆ ಅಭಿನವಗುಪ್ತನು "ಸರಸ್ವತ್ಯಾಸ್ತತ್ತ್ವಂ ಕವಿಸಹೃದಯಾಖ್ಯಂ ವಿಜಯತೇ" ಎಂದು ಪ್ರಶಂಸೆ ಮಾಡಿದನು. ಇದಕ್ಕಿಂತ ಹೆಚ್ಚಿನ ಮಹತ್ತ್ವ ಓದುಗನಿಗೆ ಯಾವುದು? ಇದರ ಮೇಲೆ, ಕವಿಗೇ ಉತ್ತೇಜನ ಬೇಕು; ತನ್ನ ಕೃತಿಯನ್ನು ಆದರಿಸುವವರಿಲ್ಲದೆ ಹೋದರೆ ಅವನ ಉತ್ಸಾಹ ಕುಗ್ಗಬಹುದು, ಸೃಷ್ಟಿಕಾರ್ಯ ನಿಂತುಬಿಡಲೂಬಹುದು. ಸಹಾನುಭೂತಿಯಿಂದ ಆಲಿಸುವವರು ದೊರೆಯದೆ "ಜೀರ್ಣಮಂಗೇ ಸುಭಾಷಿತಂ" ("ಸೂಕ್ತಿಯೆಲ್ಲ ಮೈಯೊಳಗೇ ಮುಪ್ಪಾಯಿತು.") ಎಂದು ಇದುವರೆಗೆ ಎಷ್ಟುಮಂದಿ ಕವಿಗಳು ನೊಂದು ನುಡಿದಿದ್ದಾರೋ! ಸಹೃದಯರ ಸಂತುಷ್ಟಿ ಕವಿಪ್ರತಿಭೆಯ ಕುಡಿಯನ್ನು ಮೀಟಿ ಉದ್ದೀಪಿಸುತ್ತದೆ.

"ಸಹೃದಯ" ಎಂಬುದು ಅರ್ಥವತ್ತಾದ ಹೆಸರು. (ಕವಿ ಹೃದಯಕ್ಕೆ) ಸಮಾನವಾದ ಹೃದಯವುಳ್ಳವನೇ ಸಹೃದಯ. ಎಂದರೆ, ಕಾವ್ಯವನ್ನು ಓದುವಾಗ, ಕವಿಯ ಹೃದಯದೊಂದಿಗೆ ಇವನ ಹೃದಯವೂ ಸಮತಾನವಾಗಿ ಮಿಡಿಯುತ್ತದೆ. ಅವನ ಅನುಭವಗಳಲ್ಲಿ ಇವನೂ ಪಾಲುಗಾರನಾಗುತ್ತಾನೆ. ಅವನ ಆಶಯವನ್ನು, ಇಂಗಿತವನ್ನು ಸಹಾನುಭೂತಿಯಿಂದ ಅರಿಯುತ್ತಾನೆ. ಸಹೃದಯನು ಯಾರೆಂಬುದು ಅಭಿನವಗುಪ್ತನ ಈ ವಾಕ್ಯದಲ್ಲಿ ರಮ್ಯವಾಗಿ ನಿರೂಪಿತವಾಗಿದೆ. "ಯೇಷಾಂ ಕಾವ್ಯಾನುಶೀಲನವಶಾತ್ ವಿಶದೀಭೂತೇ ಮನೋಮುಕುರೇ ವರ್ಣನೀಯ ತನ್ಮಯೀಭವನಯೋಗ್ಯತಾ ತೇ ಹೃದಯಸಂವಾದಭಾಜಃ ಸಹೃದಯಾಃ" (ಧ್ವನ್ಯಾ. ಲೋಚನ, ಪು ೧೧) ("ಕಾವ್ಯಗಳನ್ನು ಪರಿಶೀಲಿಸಿ, ಮನಸ್ಸೆಂಬ ಕನ್ನಡಿ ನಿರ್ಮಲವಾಗಿರುವುದರಿಂದ, ವರ್ಣಿತವಿಷಯದಲ್ಲಿ ತನ್ಮಯವಾಗುವ ಯೋಗ್ಯತೆ ಯಾರಿಗುಂಟೋ ಅವರೇ ಸಹೃದಯರು-(ಕವಿಯೊಂದಿಗೆ) ಹೃದಯದ ಹೊಂದಿಕೆಯನ್ನುಳ್ಳವರು)[2]. ಕವಿಯ ಹೃದಯವೂ ರಸಿಕನ ಹೃದಯವೂ ಸಮಶ್ರುತಿಯನ್ನುಳ್ಳ ಎರಡು ವೀಣೆಗಳಂತೆ; ಒಂದನ್ನು ನುಡಿಸಿದಾಗ ಇನ್ನೊಂದು ಅದಕ್ಕೆ ಸಮತಾನವಾಗಿ ಝೇಂಕರಿಸುತ್ತದೆ. ಇಂಥ ಸಹೃದಯನನ್ನು ಲಾಕ್ಷಣಿಕರು ಪ್ರಶಂಸಿಸುತ್ತಾರೆ, ಕವಿಗಳು ಅಪೇಕ್ಷಿಸುತ್ತಾರೆ. ಆದರೆ ಅವನು ದೊರೆಯುವುದು ದುರ್ಲಭ.

ಈಗಿನ ಕಾಲದಲ್ಲಿ ಕವಿ ತನ್ನ ಪದ್ಯಗಳನ್ನು ಅಚ್ಚುಹಾಕಿಸಿ ದೇಶಕ್ಕೆಲ್ಲಾ ಹಂಚಬಹುದು; ಪ್ರತಿಗಳನ್ನು ಕೊಳ್ಳುವವರಿಲ್ಲ, ಓದುವವರಿಲ್ಲ ಎಂದು ವ್ಯಸನಪಡುವುದೇನೋ ನಿಜ; ಆದರೆ ಅದಕ್ಕಿಂತಲೂ ಘೋರವಾದ ಇನ್ನೊಂದು ಸಂಕಟಕ್ಕೆ ಅವನು ಗುರಿಯಾಗಬೇಕಾಗಿಲ್ಲ. ಹಿಂದಿನ ಕಾಲದಲ್ಲಾಗಿದ್ದರೆ ಅವನು ಆಸ್ಥಾನಗಳಲ್ಲಿ, ಸಭೆಗಳಲ್ಲಿ ತನ್ನ ಕೃತಿಯನ್ನು ಪ್ರತ್ಯಕ್ಷವಾಗಿ ಓದಿ ಶ್ರೋತೃಗಳನ್ನು

---

2 "ರಸಜ್ಞತಾ ಏವ ಸಹೃದಯತ್ವಂ" (ಧ್ವನ್ಯಾಲೋಕ, ಪು. ೧೬೦)—ಈ ಮಾತನ್ನು ಹೋಲಿಸಿ.

ಮೆಚ್ಚಿಸಬೇಕಾಗುತ್ತಿತ್ತು. ರಸಿಕನಲ್ಲದವನಿಗೆ ತನ್ನ ಕಾವ್ಯವನ್ನು ಒಪ್ಪಿಸಬೇಕಾಗಿ ಬಂದಾಗ ಕವಿಯ ಹೃದಯ ಎಷ್ಟು ವ್ಯಥೆಗೊಂಡಿರಬೇಕು! ಇದರ ಯಾತನೆಯನ್ನು ಅನುಭವಿಸಿದ ಒಬ್ಬಾತನು ಹೀಗೆ ಮೊರೆಯಿಡುತ್ತಾನೆ :

ಇತರಕರ್ಮಫಲಾನಿ ಯದೃಚ್ಛಯಾ
ವಿತರ ತಾನಿ ಸಹೇ ಚತುರಾನನ |
ಅರಸಿಕೇಷು ಕವಿತ್ವನಿವೇದನಂ
ಶಿರಸಿ ಮಾ ಲಿಖ ಮಾ ಲಿಖ ಮಾ ಲಿಖ ||

('ಸುಭಾಷಿತರತ್ನಭಾಂಡಾಗಾರ', ಪು. ೪೦, ಪ. ೪೭.

(ಉಳಿದೆಲ್ಲ ಕರ್ಮಫಲಗಳನು ಮನಬಂದಂತೆ
ಕಳುಹು ; ಸಹಿಸುವೆನಯ್ಯ ನಾನವನು ವಿಧಿಯೆ,
ಅರಸಿಕರ ಮುಂದೆ ಕವಿತೆಯನೊಪ್ಪಿಸುವುದೊಂದ
ಬರೆಯದಿರು ಬರೆಯದಿರು ಬರೆಯದಿರು ಶಿರದಿ !)

ಕೆಚ್ಚುಳ್ಳ ಕವಿ ತನ್ನ ಕಾಲದ, ದೇಶದ ಜನರ ಅಸಡ್ಡೆ ತಿರಸ್ಕಾರಗಳನ್ನು ಲೆಕ್ಕಿಸದೆ ಕೃತಿಗಳನ್ನು ರಚಿಸುತ್ತಾನೆ. ಆದರೆ, ಅವನಿಗೂ ಒಂದಲ್ಲ ಒಂದು ದಿನ ಸರಿಯಾದ ವಾಚಕನನ್ನು ಪಡೆಯುವ ಗುರಿ ಇದ್ದೇ ಇರುತ್ತದೆ. ಭವಭೂತಿ 'ಮಾಲತೀಮಾಧವ'ದ ಪ್ರಸ್ತಾವನೆಯಲ್ಲಿ (i.೮) ಆಡಿರುವ ಮಾತುಗಳನ್ನು ಲಕ್ಷಿಸಿ :

ಯೇ ನಾಮ ಕೇಚಿದಿಹ ನಃ ಪ್ರಥಯಂತ್ಯವಜ್ಞಾಂ
ಜಾನಂತಿ ತೇ ಕಿಮಪಿ ತಾನ್ ಪ್ರತಿ ನೈಷ ಯತ್ನಃ
ಉತ್ಪತ್ಸ್ಯತೇಽಸ್ತಿ ಮಮ ಕೋಽಪಿ ಸಮಾನಧರ್ಮಾ
ಕಾಲೋ ಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ

(ಇಲ್ಲಿ ಕೆಲರಾರುಂಟೋ ನಮ್ಮನವಗಣಿಸುವವರು
ಬಲ್ಲರವರೇನನೋ—ಈ ಯತ್ನವವರಿಗಲ್ಲ.
ಜನಿಸಲಿಹನಿಹನು ತಾನಾರೊ ಸಮಧರ್ಮಿ ನನಗೆ:
ಕೊನೆಯುಂಟೆ ಕಾಲಕ್ಕೆ, ಮತ್ತೆ ಪರಿಮಿತವೆ ಪೃಥಿವಿ !)

"ಲೋಕೋ ಭಿನ್ನರುಚಿಃ"—ಒಬ್ಬೊಬ್ಬರ ಅಭಿರುಚಿ ಒಂದೊಂದು ಬಗೆಯಾಗಿರುತ್ತದೆ. ಕಾವ್ಯವನ್ನು ಓದುವವರಲ್ಲಿ ಎಲ್ಲರೂ ಒಂದೇ ರೀತಿಯ ಸೊಗಸನ್ನು ಅಪೇಕ್ಷಿಸುವುದಿಲ್ಲ. ಹಲವರು ಶಬ್ದಚಮತ್ಕಾರಕ್ಕೇ ಬೆರಗಾಗುತ್ತಾರೆ; ಇನ್ನಷ್ಟು ಮಂದಿಗೆ ಅಲಂಕಾರ ವೈಚಿತ್ರ್ಯಬೇಕು; ಒಳಗಿನ ಭಾವದ ಸೊಬಗನ್ನು ಹಿಡಿಯುವವರು ಎಲ್ಲೋ ಕೆಲವರು. ಕಾವ್ಯದ ಸಮಸ್ತ ಸೌಂದರ್ಯಕ್ಕೂ ಹೃದಯವನ್ನು ತೆರೆದಿಟ್ಟು, ಯಾವ ಒಂದು ಅಂಶವನ್ನೂ ಬಿಡದೆ, ಯಾವುದಕ್ಕೂ ಅದರ ಸ್ಥಾನಕ್ಕೆ

ಮಾರಿದ ಬೆಲೆಯನ್ನು ಕೊಡದೆ, ಒಂದೊಂದನ್ನೂ ಎಳೆಬಿಡಿಸಿ ಪರೀಕ್ಷಿಸುತ್ತಾ ಕುಳ್ಳಿರದೆ, ಅಖಂಡವಾಗಿ ಸ್ವಾರಸ್ಯವನ್ನು ಸವಿಯುತಕ್ಕವರಂತೂ ಬಲು ವಿರಳ.

ಇನ್ನು ತಮ್ಮ ಸಂತುಷ್ಟಿಯನ್ನು ವ್ಯಕ್ತಪಡಿಸುವುದರಲ್ಲೂ ಅಷ್ಟೇ; ಒಬ್ಬೊಬ್ಬರದು ಒಂದೊಂದು ವಿಧ. ಕೆಲವರು "ಭಲಾ, ಭೇಷ್, ಆಹಾ!" ಎನ್ನುತ್ತಾರೆ. ಕೆಲವರು ಕುಣಿದಾಡಿಬಿಡುತ್ತಾರೆ; ಇನ್ನು ಕೆಲವರು ಹೃದಯದಲ್ಲೇ ಮೆಚ್ಚಿಕೆಯನ್ನು ಅಡಗಿಸಿಕೊಳ್ಳುತ್ತಾರೆ; ಎಲ್ಲೋ ಒಬ್ಬೊಬ್ಬರು ಅಪ್ರಯತ್ನವಾಗಿ ಮೈಯಲ್ಲಿ ಹುರಿಗೊಂಡ ಪುಳಕದಿಂದ, ಅರಳಿದ ಕಣ್ಣುಗಳಿಂದ ಅದನ್ನು ಮೌನವಾಗಿಯೇ ವ್ಯಕ್ತಪಡಿಸುತ್ತಾರೆ[3]. ಕವಿ ಬಯಸುವುದು ಈ ಕೊನೆಯವರ್ಗದ ಭಾವಕನನ್ನು. ವಿಜ್ಜಾಕಾ ಎಂಬ ಕಬ್ಬಿಗಿತಿ ಅವನನ್ನು ಈ ರೀತಿ ವರ್ಣಿಸಿ ವಂದಿಸುತ್ತಾಳೆ:

ಕವೇರಭಿಪ್ರಾಯಮಶಬ್ದಗೋಚರಂ
ಸ್ಫುರಂತಮಾರ್ದ್ರೇಷು ಪದೇಷು ಕೇವಲಂ
ವದದ್ಭಿರಂಗೈಃ ಕೃತರೋಮವಿಕ್ರಿಯೈಃ
ಜನಸ್ಯ ತೂಷ್ಣೀಂಭವತೋऽಯಮಂಜಲಿಃ[4]

(ನುಡಿಗೆ ನಿಲುಕದ ಕವಿಯ ಬಗೆಯ ಭಾವವನು
ಆರ್ದ್ರಪದಗಳಲಿ ಕೇವಲ ಮಿನುಗುವುದನು
ಪುಳಕ ಹುರಿಗೊಂಡಂಗಗಳಲಿ ಮಾರ್ನುಡಿದು
ಮೌನವಾಂತವನಿಗಿದೊ ಮಣಿವೆ ಕೈಮುಗಿದು.)

ಕಾವ್ಯದ ತಿರುಳನ್ನು ಸರಿಯಾಗಿ ಹಿಡಿದು ಸವಿಯುವುದಕ್ಕೆ ವಾಚಕನಿಗೂ ಶಕ್ತಿ ಬೇಕು, ಸಿದ್ಧತೆ ಬೇಕು. ಮಾತಿನ ಹೊದಿಕೆಯನ್ನು ಭೇದಿಸಿ ಅದರೊಳಗೆ ಮಿಡಿಯುತ್ತಿರುವ ಕವಿಯ ಸೂಕ್ಷ್ಮಭಾವವನ್ನು ತನ್ನದಾಗಿ ಮಾಡಿಕೊಳ್ಳಬೇಕಾದರೆ ಸಹೃದಯನೂ ದೃಷ್ಟಿಯನ್ನು ಚುರುಕು ಮಾಡಿಕೊಳ್ಳಬೇಕು, ಅಂತಃಕರಣವನ್ನು

---

[3] ವಾಗ್ಭಾವಕೋ ಭವೇತ್ ಕಶ್ಚಿತ್ ಕಶ್ಚಿತ್ ಹೃದಯಭಾವಕಃ।
ಸಾತ್ತ್ವಿಕೈರಾಂಗಿಕೈಃ ಕಶ್ಚಿದನುಭಾವೈಶ್ಚ ಭಾವಕಃ ॥ (ಕಾವ್ಯಮೀಮಾಂಸಾ, ಪು. ೧೫)

ಈ ಉಕ್ತಿಗೆ ಆಧಾರ ಭರತನಾಟ್ಯಶಾಸ್ತ್ರದ ಕೆಲವು ಶ್ಲೋಕಗಳೆಂದು ತೋರುತ್ತವೆ: ನಾಟ್ಯಪ್ರಯೋಗವು ಸಿದ್ಧಿಸಿದ್ದಕ್ಕೆ ಗುರುತೇನೆಂಬುದನ್ನು ಇಲ್ಲಿ ಭರತನು ವರ್ಣಿಸುತ್ತಾನೆ:

ಸ್ಮಿತಾರ್ಧಹಾಸಾತಿಹಾಸ ಸಾಧ್ವಹೋ ಕಷ್ಟಮೇವ ಚ
ಪ್ರವೃದ್ಧನಾದಾ ಚ ತಥಾ ಜ್ಞೇಯಾ ಸಿದ್ಧಿಸ್ತು ವಾಙ್ಮಯೀ
ಪುಲಕೈಶ್ಚ ಸರೋಮಾಂಚೈಃ ಅಭ್ಯುತ್ಥಾನೈಸ್ತಥೈವ ಚ
ಚೇಲದಾನಾಂಗುಲಿಕ್ಷೇಪೈಃ ಶಾರೀರೀ ಸಿದ್ಧಿರಿಷ್ಯತೇ

(ನಾಟ್ಯಶಾಸ್ತ್ರ, ಕಾಶೀ ಮುದ್ರಣ, xxvii ೪, ೫).

[4] ಸುಭಾಷಿತಾವಲಿ, ೧೫೮. ಈ 'ವಿಜ್ಜಾಕಾ' ಎಂಬಾಕೆ ನಮ್ಮ ವಿಜ್ಜಿಕೆಯೇ ಆಗಿರಬಹುದು.

ಪಳಗಿಸಿಕೊಳ್ಳಬೇಕು. ತನ್ನ ಪ್ರತಿಭೆಯ ಬಲದಿಂದ ಕವಿ ಒಂದು ಹೊಸ ಪ್ರಪಂಚವನ್ನು ಮಾತುಗಳಲ್ಲಿ ಕಟ್ಟುತ್ತಾನೆ. ಕಾವ್ಯದ ಓದುಗನಿಗೆ ದೊರೆಯುವುದು ಈ ಮಾತು ಮಾತ್ರ; ಇದನ್ನು ಅವನು ತನ್ನ ಒಳಗಣ್ಣಿನಿಂದ ನೋಡಿ ಜೀವಗೊಂಡ ವ್ಯಕ್ತಿಗಳನ್ನಾಗಿ, ಅವರ ಚರ್ಯೆಗಳನ್ನಾಗಿ ಮಾರ್ಪಡಿಸಿಕೊಳ್ಳದಿದ್ದರೆ ಕಾವ್ಯವು ಕಾಗದದ ಮೇಲಿನ ಕರಿಯ ಗೆರೆಗಳಾಗಿಯೇ ಉಳಿಯುತ್ತದೆ.[5] ಇಷ್ಟೇ ಅಲ್ಲ. ಕವಿಯ ಭಾವ ಯಾವಾಗಲೂ ಮಾತಿನ ಆಚೆಗೆ ಇರುತ್ತದೆ. ಅದನ್ನು ಅವನು ಕೇವಲ ಸೂಚಿಸಿ ಬಿಟ್ಟಿರುತ್ತಾನೆ. ಅದನ್ನು ಅರಿಯಲು ಸಹೃದಯನೇ ಮುಂದುವರಿಯಬೇಕಾಗುತ್ತದೆ. ಕವಿ ಹೇಳದೆ ಹೇಳಲಾರದೆ ಬಿಟ್ಟದ್ದನ್ನೆಲ್ಲಾ ತಾನೇ ಭಾವಿಸಿಕೊಳ್ಳಬೇಕಾಗುತ್ತದೆ. ಇದಕ್ಕೆಲ್ಲ ಸಹೃದಯನಿಗೂ ಪ್ರತಿಭೆ ಬೇಕು. ರಸಾಸ್ವಾದಮಾಡಲು ಯಾರು ತಕ್ಕವರೆಂಬುದನ್ನು ಹೇಳುವಾಗ ಅಭಿನವಗುಪ್ತನು, "ಅಧಿಕಾರೀ ಚಾತ್ರ ವಿಮಲ ಪ್ರತಿಭಾನಶಾಲೀ ಸಹೃದಯಃ" (ಅಭಿನವಭಾರತೀ, i. ೨೭೯) ಎಂದು ಹೇಳಿ ಈ ಕಡೆಗೆ ನಮ್ಮ ಗಮನವನ್ನೆಳೆಯುತ್ತಾನೆ. ಕವಿಯ ಮೂಲಾನುಭವವನ್ನು ತಾನು ಪಡೆದ ಹೊರತು, ಅವನ ಪ್ರತಿಭಾವೇಶವನ್ನೇ ತಾನು ಉಕ್ಕಿಸಿಕೊಂಡ ಹೊರತು ಅವನಿಗೆ ರಸವು ಸಿದ್ಧಿಸುವುದಿಲ್ಲ.[6] ಕವಿಯ ಪ್ರತಿಭೆಗಿಂತ ಸಹೃದಯನ ಪ್ರತಿಭೆ ಕೆಳಮಟ್ಟದ್ದೆಂಬುದು ನಿಜ; ಏಕೆಂದರೆ ಕವಿಯದು ಸೃಷ್ಟಿಕಾರ್ಯವಾದರೆ, ಇವನದು ಅನುಸೃಷ್ಟಿ ಮಾತ್ರ. ಆದರೆ ಇವೆರಡು ಪ್ರತಿಭೆಗಳ ಸಹಕಾರವಿಲ್ಲದೆ ಕಾವ್ಯ ಪೂರ್ಣವಾಗಲಾರದು.[7] ಸಹೃದಯನಿಗೆ ಆವಶ್ಯಕವಾದ ಪ್ರತಿಭೆಗೆ ರಾಜಶೇಖರನು 'ಭಾವಯಿತ್ರೀ' ಎಂದು ಹೆಸರು ಕೊಡುತ್ತಾನೆ.[8]

ತನ್ನ ಕಾವ್ಯದ ಸವಿಯನ್ನು ಕವಿ ಅನುಭವಿಸುತ್ತಾನೆಯೋ ಇಲ್ಲವೇ ಎಂಬುದು ಹಿಂದಿನಿಂದಲೂ ಚರ್ಚೆಗೆ ಒಳಗಾಗಿರುವ ಪ್ರಶ್ನೆ. ಅದನ್ನು ಕುರಿತು ಎರಡು ಮಾತನ್ನು ಇಲ್ಲಿ ತಿಳಿಸಬಹುದು. "ಕವಿತಾರಸಮಾಧುರ್ಯಂ ರಸಿಕೋ ವೇತ್ತಿ ನೋ ಕವಿಃ" ಎಂದು ಹೇಳುವುದುಂಟು. ಕಾವ್ಯದ ಸವಿಯನ್ನು ಅರಿಯುವವನು ರಸಿಕನು ಮಾತ್ರ; ಅದನ್ನು ಕಟ್ಟಿದ ಕವಿಗೇ ಆ ಅದೃಷ್ಟವಿಲ್ಲ: ಶ್ರಮವೆಲ್ಲ ಕವಿಗೆ, ಫಲವೆಲ್ಲ ಇತರರಿಗೆ—ಎಂದಿಷ್ಟೇ ಇದರ ತಾತ್ಪರ್ಯವಾದರೆ ಒಪ್ಪುವುದು ಕಷ್ಟ. ತನ್ನ

---

[5] ಈ ಮಾತು ಮುಖ್ಯವಾಗಿ ಓದುವ ಅಥವಾ ಕೇಳುವ ಕಾವ್ಯಕ್ಕೆ ಅನ್ವಯಿಸುತ್ತದೆ; ನಾಟಕದಲ್ಲಿ ಸಾಮಾಜಿಕನ ಪ್ರತಿಭೆಗೆ ಇಷ್ಟು ಕೆಲಸವಿಲ್ಲ. ಆದರೆ ರಸಭಾವಗಳನ್ನು ಗ್ರಹಿಸುವುದರಲ್ಲಿ ಅವನಿಗೂ ಕಾವ್ಯವಾಚಕನಿಗೂ ಯಾವ ಭೇದವೂ ಇಲ್ಲ.

[6] ಪ್ರತಿಪತ್ತೄನ್ ಪ್ರತಿ ಸಾ ಪ್ರತಿಭಾ ನ ಅನುಮೀಯಮಾನಾ ಅಪಿ ತು ತದಾವೇಶೇನ ಭಾಸಮಾನಾ (ಧ್ವನ್ಯಾ. ಲೋಚನ, ಪು. ೨೯).

[7] ವಕ್ತೃಪ್ರತಿಪತ್ತೃ ಪ್ರತಿಭಾಸಹಕಾರಿತ್ವಂ ಹಿ ಅಸ್ಮಾಭಿಃ ದ್ಯೋತನಸ್ಯ ಪ್ರಾಣತ್ವೇನೋಕ್ತಂ (ಧ್ವನ್ಯಾ. ಲೋಚನ, ಪು. ೧೯).

[8] ಕಾವ್ಯಮೀಮಾಂಸಾ, ಪು. ೧೩.

ಕಾವ್ಯವನ್ನು ಓದಿ ಆನಂದಿಸುವಾಗ ಅವನು ಕವಿಯಾಗಿರುವುದಿಲ್ಲ, ತಾನೂ ಒಬ್ಬ ಭಾವಕನಾಗಿರುತ್ತಾನೆ ಎಂದು ಹೇಳುವ ಪಕ್ಷದಲ್ಲಿ ಸಮ್ಮತಿಸಬಹುದು. ಇಲ್ಲಿ ಕೂಡ ಮೊದಲಲ್ಲಿ ಕವಿಗೆ ರಸಾನುಭವವಿಲ್ಲದಿದ್ದರೆ ಕಾವ್ಯವೇ ಹೊಮ್ಮುತ್ತಿರಲಿಲ್ಲ ವೆಂಬುದನ್ನೂ, ಅವನ ಅನುಭವವನ್ನೇ ತಾನೂ ಪಡೆಯುವ ಯತ್ನ ಸಹೃದಯನ ದೆಂಬುದನ್ನೂ ಮರೆಯಬಾರದು. ಆದರೆ ಇಷ್ಟು ನಿಜ. ಕವಿಯ ಪ್ರಥಮ ಭಾವವು ಮಾತಿನಲ್ಲಿ ರೂಪುಗೊಳ್ಳುವ ಸಮಯದಲ್ಲಿ ಮಾರ್ಪಾಡು ಹೊಂದುವುದು ಸಾಧ್ಯವೆಂದು ಹಿಂದೆ ಒಂದು ಅಧ್ಯಾಯದಲ್ಲಿ ನೋಡಿದ್ದೇವೆ. ಹೀಗೆ ಸಂಸ್ಕಾರ ಹೊಂದಿ ಖಚಿತವಾದ ರೂಪದಲ್ಲಿ ನಿಂತದ್ದಕ್ಕೂ ಮೂಲಾನುಭವಕ್ಕೂ ಕೆಲವು ಮಟ್ಟಿಗಾದರೂ ವ್ಯತ್ಯಾಸವಿದ್ದೇ ಇರುತ್ತದೆ. ಏಕೆಂದರೆ, ಕಾವ್ಯರಚನೆಗೆ ಪ್ರಾರಂಭಿಸಿದ ವೇಳೆಯಲ್ಲಿ ಇದರ ಸ್ವರೂಪ ಹೀಗಾದೀತೆಂಬುದನ್ನು ಕವಿಯೇ ನಿರ್ದಿಷ್ಟವಾಗಿ ಕಂಡಿರಲಾರನು. ರಚನೆ ಮುಗಿದ ಬಳಿಕ ಸಮಗ್ರ ಕೃತಿಯನ್ನು ಓದುವಾಗ ಕವಿಗೂ ಕೆಲವು ಅಂಶಗಳು ಸಾಮಾಜಿಕರಿಗಾಗುವಂತೆ ಹೊಸದಾಗಿಯೇ ಗೋಚರವಾಗಬೇಕು. ಈ ದೃಷ್ಟಿಯಿಂದ ನೋಡಿದಲ್ಲಿ ತನ್ನ ಪೂರ್ಣ ಕೃತಿಯನ್ನು ಕವಿ ಭಾವಕನಾಗಿಯೇ ಓದಿ ಆಸ್ವಾದಿಸುವನೆಂದು ಒಪ್ಪಬಹುದು.

ಆದರೆ, ಭಾವಕತ್ವವು ಎಲ್ಲ ಕವಿಗಳಲ್ಲಿಯೂ ಉಜ್ಜ್ವಲವಾಗಿರುವುದೆಂದು ಹೇಳಲು ಸಾಧ್ಯವಿಲ್ಲ. ಇದು ತನ್ನ ಕೃತಿಯೆಂಬ ಮಮತೆ ಅಡ್ಡಿಯಾಗಿ ಬಂದು ಕವಿಗೆ ಸರಿಯಾದ ರಸಾನುಭವ ಒದಗದಿರುವ ಸಂಭವವುಂಟು. "ಹೆತ್ತವರಿಗೆ ಹೆಗ್ಗಣ ಮುದ್ದು"; ತಾನು ಬರೆದದ್ದೆಲ್ಲಾ ಅವನಿಗೆ ಚೆನ್ನಾಗಿ ಕಾಣಬಹುದು. ವಿವೇಚನೆಯಿಲ್ಲದ ಈ ಅಭಿಮಾನವನ್ನು ಕಾವ್ಯಾಸ್ವಾದವೆಂದು ಕರೆಯುವುದು ಹೇಗೆ? ಅಷ್ಟೇ ಅಲ್ಲ. ತನ್ನ ಕೃತಿಯಲ್ಲೇ ಮನಸ್ಸು ನಟ್ಟುಹೋಗಿ, ಇನ್ನೊಬ್ಬರ ಕಾವ್ಯರುಚಿಯನ್ನು ಕಾಣುವ ಶಕ್ತಿಯನ್ನೇ ಒಬ್ಬನು ಕಳೆದುಕೊಳ್ಳಬಹುದು; ಒಂದು ವೇಳೆ ಉಳಿದಿದ್ದರೂ, ಮಾತ್ಸರ್ಯ ಅದನ್ನು ಮುಚ್ಚಿಬಿಡಬಹುದು.[೨] ಈ ಅರ್ಥಕೊಡುವ ಪದ್ಯವೊಂದನ್ನು ರಾಜಶೇಖರನು ಉದಾಹರಿಸಿದ್ದಾನೆ:

> ಕಸ್ತ್ವಂ ಭೋಃ ಕವಿರಸ್ಮಿ ಕಾಪ್ಯಭಿನವಾ ಸೂಕ್ತಿಃ ಸಖೇ ಪಠ್ಯತಾಂ-
> ತ್ಯಕ್ತಾ ಕಾವ್ಯಕಥೈವ ಸಂಪ್ರತಿ ಮಯಾ ಕಸ್ಮಾದಿದಂ ಶ್ರೂಯತಾಂ!
> ಯಃ ಸಮ್ಯಗ್ವಿವಿನಕ್ತಿ ದೋಷಗುಣಯೋಃ ಸಾರಂ ಸ್ವಯಂ ಸತ್ಕವಿಃ
> ಸೋಽಸ್ಮಿನ್ ಭಾವಕ ಏವ ನಾಸ್ತ್ಯಥ ಭವೇದ್ದೈವಾನ್ನ ನಿರ್ಮತ್ಸರಃ ॥
>
> (ಕಾವ್ಯಮೀಮಾಂಸಾ, ಪು. ೧೪)

'ಯಾರಪ್ಪ ನೀನು?' 'ನಾನೊಬ್ಬ ಕವಿ.' 'ಹೊಸದೇನಾದರೂ ಸುಭಾಷಿತವಿದ್ದರೆ ಹೇಳಯ್ಯ.' 'ಈಗ ಕಾವ್ಯದ ಮಾತನ್ನೇ ಬಿಟ್ಟಿದ್ದೇನೆ.' 'ಅದೇಕೆ?'

---

೨ "ಕವಿಗೆ ಕವಿ ಮುನಿವಂ" ಎಂಬ ವಾಕ್ಯವನ್ನು (ಶಬ್ದಮಣಿದರ್ಪಣ, ಸೂ. ೧೩೦ ಪ್ರಯೋಗ) ಹೋಲಿಸಿ.

'ಕೇಳು: ತಾನೇ ಸತ್ಕವಿಯಾಗಿ ಯಾರು ಗುಣದೋಷಗಳ ಸಾರವನ್ನು ಚೆನ್ನಾಗಿ ವಿವೇಚಿಸಬಲ್ಲನೋ ಆತನು ನನ್ನ ಕೃತಿಯ ವಿಷಯದಲ್ಲಿ ಭಾವಕನೇ ಆಗಿರುವುದಿಲ್ಲ; ದೈವವಶದಿಂದ ಒಂದು ವೇಳೆ ಆದರೂ, ನಿರ್ಮತ್ಸರನಾಗಿರುವುದಿಲ್ಲ.'

ಇದೆಲ್ಲ ನಿಜವೆಂಬುದಕ್ಕೆ ಕವಿಕಥೆಗಳಲ್ಲಿ ನಿದರ್ಶನವುಂಟು. ಆದರೆ ಇವು ನಿಜವಾಗಿ ವ್ಯಕ್ತಿದೋಷಗಳು. ಕವಿಯೂ ಒಬ್ಬ ಮನುಷ್ಯ. ಮಮತೆ ಮಾತ್ಸರ್ಯಗಳು ಇತರರಂತೆ ಅವನನ್ನು ಮುಸುಕುವುದರಲ್ಲಿ ಅಸಂಭವತ್ವವಾಗಲಿ ಆಶ್ಚರ್ಯವಾಗಲಿ ಇಲ್ಲ. ಇಷ್ಟು ಮಾತ್ರಕ್ಕೆ ಸ್ವಕಾವ್ಯ ಪರಕಾವ್ಯಗಳಲ್ಲಿ ರಸವನ್ನು ಆಸ್ವಾದಿಸುವ ಶಕ್ತಿ ಕವಿಜಾತಿಗೇ ಇಲ್ಲವೆಂದು ಹೇಳಿದರೆ ಪರಿಹಾಸಾಸ್ಪದವಾಗುತ್ತದೆ.

ಕವಿ–ಸಹೃದಯರನ್ನು ಸ್ತುತಿಸಿ ಅವರವರ ಕಾರ್ಯವೇನೆಂಬುದನ್ನು ವಿಶದಪಡಿಸುವ ಕೆಳಗಿನ ಮನೋಹರವಾದ ಪದ್ಯವನ್ನು ಉದಾಹರಿಸಿ ಈ ಅಧ್ಯಾಯವನ್ನು ಮುಗಿಸೋಣ:

ಲೀನಂ ವಸ್ತುನಿ ಯೇನ ಸೂಕ್ಷ್ಮಸುಭಗಂ ತತ್ತ್ವಂ ಗಿರಾ ಕೃಷ್ಯತೇ
ನಿರ್ಮಾತುಂ ಪ್ರಭವೇನ್ಮನೋಹರಮಿದಂ ವಾಚೈವ ಯೋ ವಾ ಬಹಿಃ
ವಂದೇ ದ್ವಾವಪಿ ತಾವಹಂ ಕವಿವರೌ ವಂದೇತರಾಂ ತಂ ಪುನಃ
ಯೋ ವಿಜ್ಞಾತಪರಿಶ್ರಮೋಽಯಮನಯೋರ್ಭಾರಾವತಾರಕ್ಷಮಃ[10]

"ಒಬ್ಬನು ಪದಾರ್ಥಗಳಲ್ಲಿ ಅಡಗಿರುವ ಸೂಕ್ಷ್ಮಸುಂದರವಾದ ತತ್ತ್ವವನ್ನು ಮಾತಿನಿಂದ ಹೊರಸೆಳೆಯುವವನು; ಇನ್ನೊಬ್ಬನು ಕೇವಲ ಮಾತಿನಿಂದಲೇ ನೂತನವಾದೊಂದು ಮನೋಹರ ರೂಪವನ್ನು ನಿರ್ಮಿಸಬಲ್ಲವನು: ಈ ಕವಿವರ್ಯರಿಬ್ಬರನ್ನೂ ನಾನು ವಂದಿಸುತ್ತೇನೆ. ಇವರಿಬ್ಬರ ಶ್ರಮವನ್ನರಿತು ಅವರ ಭಾರವನ್ನು ಇಳಿಸಿಕೊಳ್ಳಬಲ್ಲವನನ್ನು ಇನ್ನೂ ಮಿಗಿಲಾಗಿ ವಂದಿಸುತ್ತೇನೆ."

ಕವಿಪ್ರತಿಭೆಯ ದೃಷ್ಟಿಕಾರ್ಯ ಸೃಷ್ಟಿಕಾರ್ಯಗಳು, ಸಹೃದಯಪ್ರತಿಭೆಯ ಅನುಸೃಷ್ಟಿ ಕಾರ್ಯ—ಈ ಮೂರನ್ನೂ ಈ ಪದ್ಯವು ಗ್ರಹಿಸಿ, ಒಟ್ಟು ಪ್ರತಿಭಾತತ್ತ್ವಕ್ಕೇ ಕೈಗನ್ನಡಿಯಂತಿದೆ.

— ತೀ. ನಂ. ಶ್ರೀ.

10. ವಕ್ರೋಕ್ತಿಜೀವಿತ, ೨.೧೮೭.

# ಸಾಹಿತ್ಯ ಚರಿತ್ರೆಯ ಸ್ವರೂಪ

ಸಾಹಿತ್ಯವೆಂದರೆ, ಅದರ ವಿಶಾಲವಾದ ಅರ್ಥದಲ್ಲಿ ಒಂದು ಭಾಷೆಯಲ್ಲಿ ಉತ್ಪನ್ನವಾಗಿರುವ ಗ್ರಂಥಸಮುದಾಯ. ಇದರಲ್ಲಿ ಸ್ಥೂಲವಾಗಿ ಎರಡು ವಿಭಾಗಗಳನ್ನು ಮಾಡಬಹುದು. ಒಂದನೆಯದು ಶಾಸ್ತ್ರ; ಜ್ಞಾನಪ್ರಸಾರವೇ ಇದರ ಮುಖ್ಯ ಉದ್ದೇಶ. ಮಾನವನ ಲೌಕಿಕ ಜೀವನಕ್ಕೆ ಬೇಕಾದ ನಾನಾ ಬಗೆಯಾದ ವಸ್ತುವಿಜ್ಞಾನವೇ ಈ ಗ್ರಂಥಗಳ ಸಾರ. ಲೇಖಕನ ರಾಗಾವೇಶಗಳ ಆವಿಷ್ಕಾರಕ್ಕೆ ಇಲ್ಲಿ ಎಡೆಯಿಲ್ಲ. ರೈಲುಗಳು ಹೊರಡುವ ವೇಳಾಪಟ್ಟಿಯಿಂದ ಹಿಡಿದು ಭೌತ ಪ್ರಪಂಚದ ಮರ್ಮವನ್ನು ಭೇದಿಸಲು ಹವಣಿಸುವ ಮಾನವನ ಬುದ್ಧಿಯ ಸಾಹಸವನ್ನು ಒಳಕೊಂಡಿರುವ ಗ್ರಂಥಗಳವರೆಗೆ ಎಲ್ಲವನ್ನೂ ಶಾಸ್ತ್ರವೆಂದಾಗಲಿ ಲೌಕಿಕ ವಸ್ತು ವ್ಯಾವರ್ಣನೆಯೆಂದಾಗಲಿ ಕರೆಯಬಹುದು. ವಿವೇಚನೆ, ತರ್ಕ ಮುಂತಾದ ಬುದ್ಧಿಕಾರ್ಯಗಳಿಗೆ ಇಲ್ಲಿ ಅವಕಾಶ ಅಧಿಕವಾಗಿರುತ್ತದೆ. ಏನಾದರೂ ಹೊಸ ವಿಷಯವೊಂದನ್ನು ಕಂಡುಹಿಡಿದಾಗ ಸಂತೋಷವೂ ಉಂಟಾಗುತ್ತದೆ. ಇದು ಬುದ್ಧಿಯ ವಿಲಾಸದಿಂದ ಬರುವ ಹರ್ಷ, ತೃಪ್ತಿ. ಎರಡನೆಯದು ಕಾವ್ಯ; ಹೃದಯ ವಿಕಸನವೇ ಇದರ ಮುಖ್ಯ ಗುರಿ. ಮಾನವನ ಮನೋಮಂದಿರದಲ್ಲಿ ನೆಲಸಿರುವ ಅಸಂಖ್ಯಾತವಾದ ರಾಗಾವೇಶ ಭಾವಗಳನ್ನು ಉದ್ದೀಪನಗೊಳಿಸಿ ತನ್ಮೂಲಕ ಆನಂದಾನುಭೂತಿಯನ್ನು ಉಂಟುಮಾಡಿಕೊಡುವುದು ಕಾವ್ಯದ ಕಾರ್ಯ. ಇದು ರಸಪ್ರಧಾನವಾದ ಗ್ರಂಥಜಾತಿ. ಇದರಲ್ಲಿ ಬುದ್ಧಿಕಾರ್ಯಕ್ಕಿಂತಲೂ ಭಾವನಾಬಲಕ್ಕೆ ಪ್ರಾಮುಖ್ಯ ಅಧಿಕ. ಮೊದಲನೆಯದು ಜ್ಞಾನ ಸಾಹಿತ್ಯ, ಎರಡನೆಯದು ಶಕ್ತಿಸಾಹಿತ್ಯ. ಈ ಎರಡನೆಯ ವರ್ಗಕ್ಕೆ ಸೇರಿದ ಗ್ರಂಥಗಳನ್ನು ಮಾತ್ರ ಸಾಹಿತ್ಯ ಶಬ್ದದಿಂದ ನಿರ್ದೇಶಿಸುವ ವಾಡಿಕೆ ಇದೆ. ಪರಿಮಿತವಾದ ಅರ್ಥದಲ್ಲಿ ಸಾಹಿತ್ಯವೆಂದರೆ ರಸಪ್ರಧಾನವಾದ ಗ್ರಂಥಜಾತಿಯೆಂದು ಗ್ರಹಿಸಬೇಕು. ಎಷ್ಟೋ ವೇಳೆ ಶಾಸ್ತ್ರವಿಷಯಗಳನ್ನು ಕಾವ್ಯಮಾರ್ಗದಲ್ಲಿ ಪ್ರತಿಪಾದಿಸಿರುವುದೂ ಉಂಟು.* ಇಂಥ ಗ್ರಂಥಗಳನ್ನು ಸಾಹಿತ್ಯವೆಂದೇ ಪರಿಗಣಿಸಬೇಕಾಗುತ್ತದೆ. ಆದ್ದರಿಂದ ಸಾಹಿತ್ಯ ಶಬ್ದದ ಪರಿಮಿತ ವ್ಯಾಪ್ತಿಯನ್ನು ಕೊಂಚ ವಿಸ್ತರಿಸಿಕೊಳ್ಳುವುದು ಆವಶ್ಯಕ.

ಒಂದು ಭಾಷೆಯಲ್ಲಿ ಹುಟ್ಟಿರುವ ಸಾಹಿತ್ಯರಾಶಿಯ ಅಭ್ಯಾಸವನ್ನು ಆಮೂಲಾಗ್ರವಾಗಿ ಕೈಕೊಳ್ಳುವವರು ಒಂದು ಕ್ರಮವನ್ನು ಹಿಡಿಯಬೇಕಾಗುತ್ತದೆ.

---

* ಶಾಸ್ತ್ರಂ ಕಾವ್ಯಂ ಶಾಸ್ತ್ರಕಾವ್ಯಂ ಕಾವ್ಯಶಾಸ್ತ್ರಂ ಚ ಭೇದತಃ । ಚತುಷ್ಪ್ರಕಾರಃ ಪ್ರಸರಃ ಸತಾಂ ಸಾರಸ್ವತೋಮತಃ ॥

— ಕ್ಷೇಮೇಂದ್ರ

ಆ ಸಾಹಿತ್ಯ ಹೇಗೆ ಆರಂಭವಾಗಿ ಕಾಲಕಾಲಕ್ಕೆ ಹೇಗೆ ಬೆಳೆದು ಬಂದಿದೆ ಎಂಬುದನ್ನು ಸ್ಪಷ್ಟವಾಗಿ ತಿಳಿಯಬೇಕು. ಕಾಲಧರ್ಮಕ್ಕನುಗುಣವಾಗಿ ಅದರಲ್ಲಿ ಆಗಿರುವ ವ್ಯತ್ಯಾಸಗಳು, ಅವಕ್ಕೆ ಕಾರಣಗಳು, ಅವುಗಳಿಂದ ಸಾಹಿತ್ಯ ಕಲೆಗೆ ಆಗಿರುವ ಪ್ರಯೋಜನಗಳು ಮುಂತಾದ ಅನೇಕ ವಿಷಯಗಳು ವಿಚಾರಕ್ಕೆ ಒಳಪಡುತ್ತವೆ. ಸಾಹಿತ್ಯವನ್ನು ಸೃಷ್ಟಿಸಿರುವ ಕವಿಗಳ ಕಾಲ ಮತ್ತು ಅವರ ಜೀವನಕ್ಕೆ ಸಂಬಂಧಿಸಿದ ಸಂಗತಿಗಳು; ಅವರಿಂದ ನಿರ್ಮಿತವಾಗಿರುವ ಗ್ರಂಥಗಳ ಕಾಲ ಮತ್ತು ಅವು ರಚಿತವಾದ ಸಂದರ್ಭ ಸನ್ನಿವೇಶಗಳು—ಇವುಗಳ ಪರಿಜ್ಞಾನ ಸಾಹಿತ್ಯ ಚರಿತ್ರೆಗೆ ಮೂಲಾಧಾರ. ಇವು ಎಷ್ಟೆಷ್ಟು ಖಚಿತವಾಗಿ ತಿಳಿದುಬರುತ್ತವೆಯೋ ಅಷ್ಟಷ್ಟು ಸಮರ್ಪಕವಾಗಿ ಸಾಹಿತ್ಯದ ಚರಿತ್ರೆಯನ್ನು ಬರೆಯಲು ಸಾಧ್ಯವಾಗುತ್ತದೆ. ಆದ್ದರಿಂದ ಕವಿಗಳ ಮತ್ತು ಗ್ರಂಥಗಳ ಕಾಲ ನಿರ್ಣಯ ಚರಿತ್ರೆ ಬರೆಯುವಾಗ ಅತಿ ಮುಖ್ಯವಾದ ಅಂಶವಾಗಿದೆ; ಚರಿತ್ರಕಾರನು ಇವುಗಳ ನಿರ್ಣಯಕ್ಕಾಗಿ ಎಷ್ಟೋ ವೇಳೆ ಬಹಳ ಶ್ರಮಪಡಬೇಕಾಗುವುದು. ಇಂಗ್ಲಿಷ್, ಫ್ರೆಂಚ್ ಮುಂತಾದ ಸಾಹಿತ್ಯಗಳ ಚರಿತ್ರಕಾರರಿಗೆ ಈ ಕಷ್ಟ ಹೆಚ್ಚಾಗಿಲ್ಲ; ಏಕೆಂದರೆ ಪ್ರತಿಯೊಂದು ಗ್ರಂಥದ ಮತ್ತು ಅದರ ಕವಿಯ ಕಾಲಸನ್ನಿವೇಶಗಳನ್ನು ಕುರಿತ ಚರಿತ್ರೆಯ ಸಾಹಿತ್ಯ ಆ ಭಾಷೆಗಳಲ್ಲಿ ಹೇರಳವಾಗಿದೆ. ಇಂಥ ಸಾಮಗ್ರಿ ಭರತಖಂಡದ ಭಾಷಾ ಸಾಹಿತ್ಯಗಳ ಚರಿತ್ರಕಾರರಿಗೆ ದೊರೆಯುವುದಿಲ್ಲವಾದ್ದರಿಂದ ಕವಿಯ ಕಾಲ ನಿರ್ಣಯಾದಿಗಳನ್ನು ಅತಿ ಸ್ಥೂಲವಾಗಿ ಊಹಿಸಬೇಕಾದ ಪರಿಸ್ಥಿತಿ ಉಂಟು. ಸಾಹಿತ್ಯದ ಬೆಳವಣಿಗೆಯನ್ನು ಚರಿತ್ರೆಯ ರೂಪದಲ್ಲಿ ಪ್ರತಿಪಾದಿಸುವಾಗ ನಿರ್ದಿಷ್ಟವಾದ ಕಾಲಕ್ರಮವನ್ನು ಅವಲಂಬಿಸಿ ಸಾಗಬೇಕಾಗುತ್ತದೆ. ಅದರ ಅಭ್ಯಾಸವನ್ನು ನಡೆಸುವವರೂ ಇದೇ ಕ್ರಮದಲ್ಲಿ ಮುಂದುವರಿಯಬೇಕಾಗುತ್ತದೆ.

ಸಾಹಿತ್ಯ ಚರಿತ್ರೆಯಲ್ಲಿ ಸಾಮಾನ್ಯವಾಗಿ ಪರ್ಯಾಲೋಚಿಸಬೇಕಾದ ವಿಷಯಗಳು ಹಲವುಂಟು. ಕವಿಗಳ ಜೀವನ ಚರಿತ್ರೆ, ಅವರ ಮನಸ್ಸಿನ ಮೇಲೆ ಆಗಿರುವ ನಾನಾ ಪ್ರಭಾವಗಳ ಮಹಿಮೆ, ಅವರ ವಿದ್ಯಾಭ್ಯಾಸ, ಅವರ ಕೃತಿಗಳಿಗೆ ಪ್ರೇರಕವಾದ ಸಂದರ್ಭಗಳ ಪರಿಚಯ, ಅವರ ಧರ್ಮಾನುರಾಗ, ಅವರ ರಾಜಕೀಯ ಪಕ್ಷ ಪ್ರತಿಪಕ್ಷಗಳ ಪರಿಜ್ಞಾನ, ಅವರ ಕಾಲದ ಸಮಾಜದ ಪರಿಸ್ಥಿತಿ—ಇವೇ ಮೊದಲಾದ ಅಂಶಗಳ ವಿವರಣೆ ಹೇರಳವಾಗಿ ಬೇಕು. ಅಲ್ಲದೆ ಕವಿಯಾದವನು "ತಾನು" ಎಂಬ ಹೊಸ ವಸ್ತುವೊಂದನ್ನು ಪ್ರಪಂಚಕ್ಕೆ ತರುತ್ತಾನೆ. ಇದರಲ್ಲಿ ಅವನ ವ್ಯಕ್ತಿಗತವಾದ ಮನೋಧರ್ಮ, ಅವನ ಆದರ್ಶ ಆಕಾಂಕ್ಷೆಗಳು, ಅವನ ನೋವು ನಲಿವುಗಳು ಮುಂತಾದ ಅನೇಕ ಅಪೂರ್ವ ಅಂಶಗಳು ಅಡಗಿರುತ್ತವೆ; ಇವು ಅವನ ಕೃತಿಗಳಲ್ಲಿ ವ್ಯಕ್ತವಾಗಿಯೋ ಅವ್ಯಕ್ತವಾಗಿಯೋ ಪ್ರತಿಫಲಿಸಿರುತ್ತವೆ. ಇವನ್ನೆಲ್ಲ ಕಂಡುಹಿಡಿದು ಕವಿಯ ಮಾನಸಿಕ ಮತ್ತು ಆಧ್ಯಾತ್ಮಿಕ ಜೀವನ ಚರಿತ್ರೆಯನ್ನು ಬಿಡಿಸಿ ತೋರಿಸಿಕೊಡುವುದು ಸಾಹಿತ್ಯ ಚರಿತ್ರಕಾರನ ಕರ್ತವ್ಯ.

ಇದನ್ನು ಅವನು ಸಮರ್ಪಕವಾಗಿ ನಿರ್ವಹಿಸಬೇಕಾದರೆ ಮೇಲೆ ಕಂಡ ಅಂಶಗಳ ವಿಷಯವಾಗಿ ಬೇಕಾದ ತಿಳಿವಳಿಕೆಯನ್ನುಂಟುಮಾಡುವ ಲಿಖಿತ ರೂಪವಾದ ಸಾಮಗ್ರಿ ಅವನ ಹಸ್ತಗತವಾಗಿರಬೇಕು. ಕವಿಯ ಸಮಕಾಲಿಕರ ಹೇಳಿಕೆಗಳು ಬರವಣಿಗೆಗಳು, ಕವಿಯ ಒಡನಾಡಿಗಳಾಗಿದ್ದು ಅವನ ಅಂತರಂಗವನ್ನು ತಿಳಿದ ಅವನ ಆಪ್ತ ಜನರ ಉಲ್ಲೇಖಗಳು—ಇವು ದೊರೆತಷ್ಟೂ ಒಳ್ಳೆಯದೇ. ಪ್ರಪಂಚದ ಕೆಲವು ಭಾಷೆಗಳ ಸಾಹಿತ್ಯಗಳಿಗೆ ಮಾತ್ರ ಇಂಥ ಮೂಲಸಾಮಗ್ರಿಯ ಸಂಪತ್ತಿ ಉಂಟು. ಒಬ್ಬ ಇಂಗ್ಲಿಷ್ ಕವಿಯನ್ನು ಅಭ್ಯಾಸಕ್ಕಾಗಿ ಎತ್ತಿಕೊಂಡರೆ ಅವನ ವಿಚಾರವಾಗಿ ತಿಳಿಯಬೇಕಾದ ಅಂಶಗಳೆಲ್ಲವನ್ನೂ ತಿಳಿಸಿಕೊಡುವ ವಿಪುಲವಾದ ಗ್ರಂಥ ರಾಶಿಯೊಂದು ಸ್ಪಷ್ಟವಾಗಿರುವುದು ಕಂಡುಬರುತ್ತದೆ. ಜೊತೆಗೆ ಕವಿ ತನ್ನ ಜೀವ ಮಾನದಲ್ಲಿ ನಡಸಿರುವ ಪತ್ರವ್ಯವಹಾರದ ಸಾಹಿತ್ಯವೂ ಅಭ್ಯಾಸಕ್ಕೆ ಸಿಕ್ಕುತ್ತದೆ. ಕನ್ನಡ ಸಾಹಿತ್ಯ ಚರಿತ್ರಕಾರನಿಗೆ ಇಂಥ ಮೂಲ ಸಾಮಗ್ರಿಯ ಅಭಾವ ಎಷ್ಟಿದೆ ಯೆಂದರೆ ಗ್ರಂಥಕರ್ತನ ಹೆಸರು ಕೂಡ ದೊರೆಯದೆ ಎಷ್ಟೋ ವೇಳೆ ಅವನು ನಿರಾಶನಾಗಿ ಬಾಯಿಕಟ್ಟಿ ಮೌನಿಯಾಗಿರಬೇಕಾದಷ್ಟೂ ಉಂಟು. ಈ ದೃಷ್ಟಿ ಯಿಂದ ಕನ್ನಡ, ತಮಿಳು ಮುಂತಾದ ಸಾಹಿತ್ಯಗಳ ಚರಿತ್ರೆಗಳು ಎಂದಿಗೂ ಪರಿ ಪೂರ್ಣತೆಯನ್ನು ಪಡೆಯಲಾರವು. ಕವಿಯ ಹೆಸರು, ಅವನ ಗ್ರಂಥ, ಅವನ ಕಾಲ—ಇಷ್ಟು ಮಾತ್ರ ತಿಳಿದರೆ ಕನ್ನಡ ಸಾಹಿತ್ಯ ಚರಿತ್ರಕಾರ ಹಿಗ್ಗಬೇಕಾದ ಪರಿಸ್ಥಿತಿ ಇದೆ. ಮೂಲಸಾಮಗ್ರಿಯ ವಿಷಯದಲ್ಲಿ ಅವನಿಗಿರುವ ದಾರಿದ್ರ್ಯ ಅಪರಿಹಾರ್ಯವಾದದ್ದು. ಆದರ್ಶ ಸಾಹಿತ್ಯ ಚರಿತ್ರೆಯಲ್ಲಿ ಕವಿಯ ಜೀವನ ಕಥೆಗೆ ಅಗ್ರಸ್ಥಾನವಿರಬೇಕೆಂಬ ಅಂಶವನ್ನು ಮಾತ್ರ ಮರೆಯಲಾಗದು.

ಕವಿಯ ಕೃತಿಗಳನ್ನು ವಿಮರ್ಶೆಗೆ ಒಳಪಡಿಸಿ ಕಲೆಯ ದೃಷ್ಟಿಯಿಂದ ಅವುಗಳ ಬೆಲೆಯನ್ನು ನಿರ್ಣಯಿಸುವುದೂ ಸಾಹಿತ್ಯ ಚರಿತ್ರೆಯ ಕೆಲಸ. ಪ್ರತಿಯೊಂದು ತಲೆಮಾರಿನ ಜನರು ತಮ್ಮ ಹಿಂದಿನ ತಲೆಮಾರಿನ ಸಾಹಿತ್ಯವನ್ನು ವಿಮರ್ಶಿಸಿ ಅವುಗಳ ಸಾರಾಸಾರತೆಯನ್ನು ತಿಳಿಯುವ ಪ್ರಯತ್ನವನ್ನು ಮಾಡಿದ್ದರೆ ಈ ಕೆಲಸ ಅತಿ ಸುಲಭವಾಗುತ್ತದೆ. ಇಲ್ಲದಿದ್ದರೆ ಬಹಳ ಶ್ರಮವೂ ವ್ಯಾಸಂಗವೂ ಒಬ್ಬನ ತಲೆಗೆ ಗಂಟುಬಿದ್ದು ಕಾಲಹರಣವಾಗಿ ಕೆಲಸ ಮುಗಿಯುವುದು ಕಷ್ಟವಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಇಂಥ ವಿಮರ್ಶನ ಕಾರ್ಯವನ್ನು ಕಾಲಕಾಲಕ್ಕೆ ಕೈಕೊಂಡು ನಡಸದೆ ಇರುವುದು ಚರಿತ್ರಕಾರನ ದೃಷ್ಟಿಯಿಂದ ದೊಡ್ಡ ಕೊರತೆ. ಸಾಹಿತ್ಯ ವಿಮರ್ಶೆಯೇ ಒಂದು ದೊಡ್ಡ ಶಾಖೆಯಾಗಿ ಬೆಳೆದುಕೊಂಡು ಬಂದಿದೆ ಇಂಗ್ಲಿಷ್ ಮುಂತಾದ ಸಾಹಿತ್ಯಗಳಲ್ಲಿ. ಒಬ್ಬ ಕವಿಯ ಸ್ಥಾನಮಾನಗಳ ನಿರ್ದೇಶಮಾಡು ವಾಗ ಅವನ ಕೃತಿಯ ಗುಣಾವಗುಣಗಳ ತಾರತಮ್ಯ ಪರಿಜ್ಞಾನ ಆವಶ್ಯಕ. ಸಾಹಿತ್ಯ ಚರಿತ್ರೆಯಲ್ಲಿ ವಿಮರ್ಶನ ಕಾರ್ಯ ಆದಷ್ಟು ಸಂಗ್ರಹವಾಗಿಯೂ ಖಚಿತ ವಾಗಿಯೂ ನಡೆದು ಕವಿಗಳ ಕಲೆಯ ಹಿರಿಮೆ ವಿಶದವಾಗಿ ತಿಳಿಯುವಂತಿರಬೇಕು ಪ್ರತಿಯೊಬ್ಬ ಕವಿಯ ವೈಶಿಷ್ಟ್ಯವೇನೆಂಬುದು ಅಭಿವ್ಯಕ್ತವಾಗಬೇಕು.

ಪ್ರತಿಭಾನ್ವಿತರೂ ಅಧಿಕ ಶಕ್ತಿವಂತರೂ ಆದ ಕವಿಗಳ ರಚನೆ ಸಾಹಿತ್ಯದ ಬೆಳವಣಿಗೆಗೆ ಪ್ರೇರಕವಾಗುತ್ತದೆ. ಇಂಥ ಕವಿಗಳನ್ನು ಅನುಕರಣಮಾಡಿ ಅವರು ನಡೆದ ಮಾರ್ಗದಲ್ಲಿ ನಡೆಯುವ ಹಲವು ಸಾಧಾರಣ ಕವಿಗಳ ಪಂಗಡವೊಂದು ನಿರ್ಮಿತವಾಗುತ್ತದೆ. ಮಾರ್ಗದರ್ಶಕರಾದ ಇಂಥ ಕವಿಗಳು ಅನುಕರಣೀಯರಾಗಿ ಸಾಹಿತ್ಯದಲ್ಲಿ ಬೇರೆಬೇರೆ ಶಾಖೆಗಳೂ ಪಕ್ಷಗಳೂ ತಲೆದೋರುತ್ತವೆ. ಇವುಗಳಲ್ಲಿ ಪರಸ್ಪರ ಸ್ಪರ್ಧೆಗಳೂ ಭಿನ್ನಾದರ್ಶಗಳೂ ಉಂಟಾಗಿ ಸಾಹಿತ್ಯದಲ್ಲಿ ಹೊಸ ಹೊಸ ಪ್ರಯೋಗಗಳಿಗೆ ಅವಕಾಶವುಂಟಾಗುತ್ತದೆ. ಕನ್ನಡ ಚಂಪೂಕೃತಿ ನಿರ್ಮಾಣದಲ್ಲಿ ಪಂಪನು ತನ್ನ ಕೃತಿ ರಚನೆಗಳಿಂದ ಉತ್ಕೃಷ್ಟಸಿದ್ಧಿಯನ್ನು ಪಡೆದ ಮೇಲೆ, ಆ ಸಂಪ್ರದಾಯಕ್ಕೆ ಅವನು ಮಾರ್ಗದರ್ಶಕನಾದ ಮೇಲೆ, ಅವನು ಹೋದ ಮಾರ್ಗದಲ್ಲಿಯೇ ನಡೆದು ಚಂಪೂಕಾವ್ಯಗಳನ್ನು ಬರೆದಿರುವ ಕವಿಗಳ ಸಂಖ್ಯೆ ಹೇರಳವಾಗಿದೆ. ಪಂಪನ ಪ್ರಭಾವ ಕನ್ನಡ ಕವಿಗಳಮೇಲೆ ಇಂದಿನ ವರೆಗೂ ನಡೆದುಕೊಂಡು ಬಂದಿದೆ. ಹೀಗೆಯೇ ವಚನರಚನೆಯಲ್ಲೂ ಬಸವಣ್ಣ ನವರು ನೇರ್ಪಡಿಸಿದ ಸುಂದರವಾದ ಮಾರ್ಗದಲ್ಲಿ ಹೋಗಬಯಸಿ ಅವರ ಸಮಕಾಲಿಕರೂ, ಅವರಿಂದೀಚೆಗೆ ಬಂದವರೂ ಆ ಸಾಹಿತ್ಯವನ್ನು ಬೆಳೆಯಿಸಿಕೊಂಡು ಬಂದಿರುವುದು ಕಾಣುತ್ತದೆ. ಇಂಗ್ಲಿಷ್ ಸಾಹಿತ್ಯದಲ್ಲಿ ಪೋಪ್ ಕವಿ ಒಂದು ಸಂಪ್ರದಾಯಕ್ಕೆ ನಾಯಕನಾಗಿ ನಿಂತು ಹಲವು ಕವಿಗಳಿಗೆ ಗುರುವಾಗಿ, ಪ್ರೇರಕನಾಗಿ ಆ ಸಾಹಿತ್ಯ ಬೆಳೆಯಲು ಕಾರಣನಾದನು. ವರ್ಡ್ಸ್‌ವರ್ತ್‌ನ ಕಾಲದವರೆಗೆ ಪೋಪ್ ಕವಿಯ ಸ್ಥಾನ ಮಹತ್ವಕ್ಕೆ ಚ್ಯುತಿಯುಂಟಾಗಲಿಲ್ಲ. ವರ್ಡ್ಸ್‌ವರ್ತ್ ನೂತನ ಮಾರ್ಗದಲ್ಲಿ ನಡೆಯಲಾರಂಭಿಸಿ ಹಿಂದಿನ ಸಂಪ್ರದಾಯದ ಸಂಕೋಲೆ ಯನ್ನು ಮುರಿದು ಬೀಸಾಡಿ ಸಾಹಿತ್ಯದಲ್ಲಿ ಸ್ವತಂತ್ರ ಮಾರ್ಗವನ್ನು ಸ್ಥಾಪಿಸಿದನು. ಹೀಗೆ ಸಂಪ್ರದಾಯಕ್ಕೂ ಸ್ವಾತಂತ್ರ್ಯಕ್ಕೂ ಮೇಲಿಂದ ಮೇಲೆ ಹೋರಾಟ ನಡೆಯುತ್ತಿದ್ದರೆ ಸಾಹಿತ್ಯ ತರುವಿಗೆ ಅದು ದೋಹದ ಕ್ರಿಯೆಯಾಗಿ ಪರಿಣಮಿಸಿ ನೂತನ ಫಲ ಲಭಿಸುವಂತಾಗುತ್ತದೆ. ಆ ಸಾಹಿತ್ಯವು ನವಚೈತನ್ಯದಿಂದ ತುಂಬು ವಂತಾಗುತ್ತದೆ. ಇದಕ್ಕೆ ಮುಖ್ಯ ಕಾರಣರು ಧೀರರೂ ಪ್ರಜ್ಞಾಶಾಲಿಗಳೂ ಶಕ್ತಿಸಮನ್ವಿತರೂ ಆಗಿರುವ ಶ್ರೇಷ್ಠ ಕವಿಗಳು.

ಕವಿಗಳ ವ್ಯಕ್ತಿಗತವಾದ ಶಕ್ತಿ ವಿಶೇಷಗಳು ಸಾಹಿತ್ಯದ ಬೆಳವಣಿಗೆಗೆ ಒಂದು ಕಡೆ ಕಾರಣವಾಗಿದ್ದರೆ ಇನ್ನೊಂದು ಕಡೆ ಅವನ ಸುತ್ತಲಿನ ಸಮಾಜ ಜೀವನದಲ್ಲಿ ನಡೆಯುವ ವ್ಯತ್ಯಾಸಗಳು ಅವನಿಗೆ ಪ್ರೇರಕವಾಗಿ ಅವನಿಂದ ಸಾಹಿತ್ಯಸೃಷ್ಟಿಯನ್ನು ಮಾಡಿಸಬಲ್ಲುವು. ಸಮಾಜದಲ್ಲಿ ನೂತನವಾದ ಮತಧರ್ಮಗಳೋ ನವೀನವಾದ ಜೀವನ ಸಿದ್ಧಾಂತಗಳೋ ಪ್ರಸಾರವಾಗಬೇಕಾದ ಸಂದರ್ಭಗಳಲ್ಲಿ ಆಯಾ ಮತ ಪ್ರವರ್ತಕರೂ - ತತ್ವಜ್ಞಾನಿಗಳೂ ನಾನಾ ಬಗೆಯಾದ ಗ್ರಂಥರಚನೆಯಲ್ಲಿ ತೊಡಗ ಬೇಕಾಗುತ್ತದೆ. ಇಂಥ ಗ್ರಂಥಗಳಲ್ಲಿ ಎಷ್ಟೋ ಸಾಹಿತ್ಯದ ಕಾಂತಿಯಿಂದ ಕಂಗೊಳಿ

ಸುತ್ತ ರಸವತ್ಕೃತಿಗಳಾಗಿರುತ್ತವೆ. ಕನ್ನಡನಾಡಿಗೆ ಜೈನಧರ್ಮ ಬಂದು ನೆಲಸಿ ಪ್ರಸಾರಗೊಳ್ಳುವ ಕಾಲದಲ್ಲೂ ಅದರ ಉಛ್ರಾಯದಶೆಯಲ್ಲೂ ಹಲವಾರು ರಸಕೃತಿಗಳು ಕನ್ನಡಕ್ಕೆ ಬಂದುವು. ಕನ್ನಡದಲ್ಲಿ ಸಾಹಿತ್ಯಸೃಷ್ಟಿ ಆರಂಭವಾದದ್ದೇ ಜೈನಮತ ಪ್ರಚಾರೋದ್ದೇಶದಿಂದ ಎಂದು ಕೂಡ ಹೇಳಬಹುದು. ಹೀಗೆಯೇ ನೂತನವಾದ ವೀರಶೈವಮತದ ಉಪದೇಶಪ್ರಚಾರಗಳು ಕಾರಣವಾಗಿ ವಿಶಾಲವಾದ ಸಾಹಿತ್ಯಸೃಷ್ಟಿಯಾಯಿತು. ಇಂದಿಗೂ ಇಂಥ ಸಾಹಿತ್ಯದ ರಚನೆ ನಿಂತಿಲ್ಲ. ಇಂಗ್ಲಿಷ್ ಸಾಹಿತ್ಯದ ಬೆಳವಣಿಗೆಯಲ್ಲೂ ಮತಧರ್ಮಗಳು ವಹಿಸಿರುವ ಪಾತ್ರ ಗಮನಾರ್ಹವಾಗಿದೆ. ಜಾನ್ ಬನಿಯನ್, ಮಿಲ್ಟನ್ ಮುಂತಾದವರ ಕಾವ್ಯಗಳಲ್ಲಿ ಅವರವರು ಒಪ್ಪಿಕೊಂಡ ಕ್ರೈಸಮತ ಪ್ರಭೇದದ ಪ್ರಭಾವ ಸಾಂದ್ರವಾಗಿ ರೂಪುಗೊಂಡಿದೆ. ಒಟ್ಟಿನಲ್ಲಿ ಮತಧರ್ಮಗಳ ಅನುಯಾಯಿಯಾಗಿ ಸಾಹಿತ್ಯ ಬೆಳೆದಿರುವುದೂ ಅದು ಅವುಗಳ ಪ್ರಚಾರಾಂಗವಾಗಿ ಉಪಕರಣಮಾತ್ರವಾಗಿರುವುದೂ ಗೋಚರವಾಗುತ್ತದೆ. ಭರತ ಖಂಡದ ಎಲ್ಲ ಸಾಹಿತ್ಯಗಳಿಗೂ ಈ ಮಾತು ಹೆಚ್ಚಿನ ಪ್ರಮಾಣದಲ್ಲಿ ಅನ್ವಯಿಸುತ್ತದೆ. ಇದು ಕವಿಯೊಬ್ಬನು ಕಂಡ ತತ್ವದ ಪ್ರಸಾರಣೆಗಾಗಿ ಹುಟ್ಟಿರುವ ಅವನ ಸಾಹಿತ್ಯಕ್ಕೂ ಸಂಬಂಧಿಸಿದೆ. ಜೀವನದಲ್ಲಿ ಪುರುಷಪ್ರಯತ್ನದ ಮಹಿಮೆಯನ್ನು ಸಾರಿ ಹೇಳುವ ಷೆಲ್ಲಿ ಕವಿಯ ಕೃತಿಗಳೂ ನಾನಾ ತತ್ವದೃಷ್ಟಿಗಳನ್ನೊಳಗೊಂಡಿರುವ ಭಗವದ್ಗೀತೆಯಂಥ ಕಾವ್ಯಶಾಸ್ತ್ರಗಳೂ ಮಾನವನ ಆಧ್ಯಾತ್ಮಿಕ ಅನ್ವೇಷಣೆಯ ಪ್ರತೀಕಗಳು. ಇವು ಸಾಹಿತ್ಯದ ರಸದ ಲೇಪವುಳ್ಳವು ; ಮನುಷ್ಯನ ನಾಗರಿಕತೆಯ ತವನಿಧಿಗಳು.

ಧರ್ಮದಂತೆಯೇ ರಾಜಕೀಯವೂ ಸಾಹಿತ್ಯರಚನೆಗೆ ಮೂಲಕಾರಣವಾಗುತ್ತದೆ. ನೆಲಸಿ ನಿಂತಿರುವ ಆಡಳಿತ ಪದ್ಧತಿಯಲ್ಲಿ ಸುಧಾರಣೆಗಳಾಗಬೇಕೆಂದಾಗಲಿ ಪೂರ್ಣವಾದ ಮಾರ್ಪಾಟೇ ಆಗಬೇಕೆಂದಾಗಲಿ ಪ್ರಜೆಗಳು ಬಯಸಿ ಕಾರ್ಯೋನ್ಮುಖರಾದರೆ ಸರ್ಕಾರಕ್ಕೂ ಪ್ರಜೆಗಳಿಗೂ ಘರ್ಷಣೆಯುಂಟಾಗುವುದು ಅನಿವಾರ್ಯ. ನಿರಂಕುಶಾಧಿಕಾರವನ್ನು ನಿರ್ಮೂಲಗೊಳಿಸಿ ಪ್ರಜಾರಾಜ್ಯವನ್ನು ಪ್ರತಿಷ್ಠಿಸಬೇಕೆಂಬ ಸಂಕಲ್ಪದಿಂದ ಪ್ರೇರಿತವಾದ ಜನಸಮುದಾಯ ತಡೆಗಟ್ಟಲಸಾಧ್ಯವಾದ ವಿಪ್ಲವವಾಹಿನಿಯನ್ನು ದೇಶದಾದ್ಯಂತ ಹರಿಯಿಸುತ್ತದೆ. ಈ ಕ್ರಾಂತಿಯ ಸುಳಿಯಲ್ಲಿ ಸಿಲುಕಿ ಸಾಹಿತಿಗಳು ಕೃತಿರಚನೆ ಮಾಡುತ್ತಾರೆ; ಹೊಸ ಪರಿಸ್ಥಿತಿಯ ಸಂದೇಶವನ್ನು ತಮ್ಮ ಹಾಡುಗಳಿಂದಲೂ ಕತೆಗಳಿಂದಲೂ ಸವಿಸವಿಯಾಗಿ ನಾಡಿನ ಮೂಲೆ ಮೂಲೆಗೂ ತಲುಪಿಸಿ ದೇಶಪ್ರೇಮವನ್ನು ಉಜ್ವಲಗೊಳಿಸುತ್ತಾರೆ. ಇಂಥ ಸಂಕ್ಷೋಭೆಗಳಿಂದ ಸಾಹಿತ್ಯೋತ್ಪತ್ತಿಯಾಗುವಂತೆಯೇ ಸಾಹಿತ್ಯದಿಂದಲೂ ಕ್ರಾಂತಿಮಯ ವಾತಾವರಣವು ನಿರ್ಮಿತವಾಗಬಹುದು. ಫ್ರಾನ್ಸ್ ದೇಶದಲ್ಲಿ ನಡೆದ ರಾಜಕೀಯ ವಿಪ್ಲವಕ್ಕೆ ಆಳರಸರ ದುಷ್ಟವರ್ತನೆಯೂ ಹಿಂಸಾರಭಸಮತಿಯೂ ಎಷ್ಟರಮಟ್ಟಿಗೆ ಕಾರಣವೋ ಅಷ್ಟೇ ಮಟ್ಟಿಗೆ ಆ ಕಾಲದ ಸಾಹಿತಿಗಳೂ ಮೇಧಾವಿಗಳೂ ಜನ

ನಾಯಕರೂ ಆದ ರೋಸೋ, ಡಿಡಿರೊ, ರಾಬಸ್ಪೀಯರ್, ವಾಲ್ಟೈರ್ ಮುಂತಾದವರ ಲೇಖನಗಳೂ ಕಾರಣ. ಮಹಾತ್ಮ ಗಾಂಧೀಜಿ ಅವರ ಉನ್ನತ ಆತ್ಮಶಕ್ತಿಯಿಂದ ಹೊಮ್ಮಿಬಂದ ಲೇಖನಗಳೂ ಭಾಷಣಗಳೂ ಮೃತಪ್ರಾಯರಾಗಿದ್ದ ನಮ್ಮ ಜನರಲ್ಲಿ ಪ್ರಾಣಸಂಚಾರವನ್ನುಂಟುಮಾಡಿ ಕ್ರಿಯಾಶಕ್ತಿಯಿಂದಲೂ ಧೈರ್ಯದಿಂದಲೂ ತುಂಬಿ ನಮ್ಮ ನಾಡಿನ ಕಳೆದ ರಾಜಕೀಯ ಕ್ರಾಂತಿಗೆ ಹೇಗೆ ಕಾರಣವಾದುವೋ ಹಾಗೆಯೇ ಆ ಕ್ರಾಂತಿ ನೂತನ ಸಾಹಿತ್ಯನಿರ್ಮಾಣಕ್ಕೆ ಆಧಾರವಾಗಿ ನಿಂತಿದೆ. ಆದ್ದರಿಂದ ಸಾಹಿತ್ಯವೂ ರಾಜಕೀಯವೂ ಪರಸ್ಪರ ಉಪಜೀವಿಗಳು; ಒಂದರಿಂದ ಇನ್ನೊಂದಕ್ಕೆ ಪ್ರೇರಣೆ; ಒಂದರ ಬೆಳವಣಿಗೆ ಇನ್ನೊಂದರ ಏಳಿಗೆ. ಇಂಥ ಕ್ರಾಂತಿಗಳಿಗೆ ಸಾಹಿತ್ಯಚರಿತ್ರೆಯಲ್ಲಿ ಮನ್ನಣೆಯ ಸ್ಥಾನ ದೊರೆಯುತ್ತದೆ.

ಇನ್ನೂ ನಾನಾ ಬಗೆಯಾದ ಹೋರಾಟಗಳು ಸಮಾಜದಲ್ಲಿ ನಡೆಯುತ್ತಲೇ ಇರುತ್ತವೆ. ಒಂದೊಂದು ಕಾಲದಲ್ಲಿ ಕೆಲಕೆಲವು ಪ್ರಧಾನವಾಗಿದ್ದು ಉಳಿದುವು ಗೌಣವಾಗಿರುತ್ತವೆ. ಶ್ರೀಮಂತರು ಬಡವರು, ಬಂಡವಾಳಗಾರರು ಕಾರ್ಮಿಕರು, ಕಲಿತವರು ಕಲಿಯದವರು, ಭಕ್ತರು ಭವಿಗಳು, ಬಿಳಿಜನ ಕರಿಜನ, ಆರ್ಯರು ದ್ರಾವಿಡರು, ಸ್ಪೃಶ್ಯರು ಅಸ್ಪೃಶ್ಯರು, ಮುಂತಾದ ಅನೇಕ ಜಾತಿಯ ದ್ವಂದ್ವಗಳಿಗೆ ಪರಸ್ಪರ ಘರ್ಷಣೆ ಉಂಟಾಗಿ ದ್ವೇಷಾಸೂಯೆಗಳು ಇಡೀ ಸಮಾಜವನ್ನೇ ಆವರಿಸಿಬಿಡುತ್ತವೆ. ಈ ಪಕ್ಷ ಪ್ರತಿಪಕ್ಷಗಳ ನಡುವೆ ನಡೆಯುವ ಕ್ರಿಯೆ ಪ್ರತಿಕ್ರಿಯೆಗಳಿಂದ ಸಾಹಿತ್ಯರಚನೆಗೆ ಸಾಮಗ್ರಿಯೂ ಪ್ರಚೋದನೆಯೂ ಏಕಕಾಲದಲ್ಲಿಯೇ ಲಭಿಸುತ್ತವೆ. ಒಟ್ಟಿನಲ್ಲಿ ಜನಜೀವನವೂ ಸಾಹಿತ್ಯವೂ ಅನ್ಯೋನ್ಯಾಶ್ರಯಿಗಳಾಗಿದ್ದು ಒಂದು ಇನ್ನೊಂದನ್ನು ತಿದ್ದುವ ಕಾರ್ಯದಲ್ಲಿ ನಿರತವಾಗುತ್ತವೆ. ಮಹಾಕವಿಯೊಬ್ಬನ ಎತ್ತಿ ಹಿಡಿದಿರುವ ಆದರ್ಶಗಳಿಂದ ಜನಜೀವನದಲ್ಲಿ ಮೇಲ್ಮೆ ಉಂಟಾಗುತ್ತದೆ. ಅಸ್ಪೃಶ್ಯರ ವಿಷಯವಾಗಿ ನಮ್ಮ ದೇಶದಲ್ಲಿ ಮೂಡಿರುವ ಕರುಣೆಯ ಆವರಣಕ್ಕೆ ಕಾರಣ ಗಾಂಧೀಜಿ ಅವರು ಸೃಷ್ಟಿಸಿರುವ ಹೃದಯಸ್ಪರ್ಶಿಯಾದ ಸಾಹಿತ್ಯ. ಶಾಸನ ಸಭೆಗಳು ಮಾಡಲಾರದ ಹೃದಯ ಪರಿವರ್ತನವನ್ನು ಸಾಹಿತಿ ಗಾಂಧೀಜಿ ಅವರು ಮಾಡಿದ್ದಾರೆ. ಜನತೆಯ ಶಾಸನಕರ್ತರು ಆಡಳಿತಕಾರರು—ಇದನ್ನು ಒಪ್ಪಲಿ ಒಪ್ಪದಿರಲಿ—ನಿಜವಾಗಿ ಕವಿಗಳೇ ಎಂಬ ಷೆಲ್ಲಿಯ ಅಭಿಪ್ರಾಯ ಸರ್ವಕಾಲಕ್ಕೂ ಗ್ರಾಹ್ಯ.* ಆದ್ದರಿಂದ ಜನಜೀವನಕ್ಕಿಂತಲೂ ಅದನ್ನು ತಿದ್ದಿ ಉನ್ನತಿಯ ನೆಲೆಗೆ ಕೊಂಡೊಯ್ಯುವ ಕವಿಯ ಶಕ್ತಿ ದೊಡ್ಡದು. ಇಂಥ ಅಂಶಗಳ ವಿವರಣೆ ಸಾಹಿತ್ಯ ಚರಿತ್ರೆಯಲ್ಲಿ ತಕ್ಕಷ್ಟಿರಬೇಕು.

ದೇಶವನ್ನು ಆಳುವ ದೊರೆಗಳು ಧರ್ಮಭೀರುಗಳೂ ಪ್ರಜಾವತ್ಸಲರೂ

---

*Poets are the unacknowledged legislators of the world. Shelly, *Defence of Poetry*.

ಆಗಿದ್ದರೆ ಶಾಂತಿಯ ಆವರಣವೊಂದು ಸ್ಪಷ್ಟವಾಗಿ ಸಾಹಿತ್ಯವೇ ಮುಂತಾದ ಲಲಿತ ಕಲೆಗಳ ಅಭಿವೃದ್ಧಿಗೆ ಕಾರಣವಾಗುತ್ತದೆ. ಎಲ್ಲ ಸಾಹಿತ್ಯಗಳಲ್ಲೂ ರಾಜಾಶ್ರಯದಲ್ಲಿ ರಚಿತವಾಗಿರುವ ಗ್ರಂಥಸಮುದಾಯವಿರುತ್ತದೆ. ರಾಜರು ತೋರಿಸಿರುವ ಪ್ರೋತ್ಸಾಹದ ಮೇಲ್ಪಂಕ್ತಿಯನ್ನು ಅವನ ಮಂತ್ರಿ ಸಾಮಂತ ದಂಡನಾಯಕರೂ ಇತರ ಶ್ರೀಮಂತರೂ ಅನುಸರಿಸಿ ಹಲವು ಕವಿಗಳಿಗೆ ಆಶ್ರಯದಾತರಾಗಿ ಕಾವ್ಯ ಸಂಪತ್ತಿಯ ಸಮೃದ್ಧಿಯನ್ನುಂಟುಮಾಡುತ್ತಾರೆ. ಅವರೇ ಸ್ವತಃ ಕಾವ್ಯರಚನೆಯನ್ನೂ ಮಾಡುವವರಾಗುತ್ತಾರೆ. ಹೀಗೆ ರಾಜಾಸ್ಥಾನಗಳಲ್ಲಿ ಬೆಳೆದ ಸಾಹಿತ್ಯ ರಾಜರ ಕೀರ್ತಿ ಪ್ರತಿಷ್ಠೆ ಪ್ರತಾಪಗಳನ್ನು ಹೊಗಳುವ ಕಾರ್ಯವನ್ನೂ ಮಾಡಬೇಕಾಗುತ್ತದೆ. ರಾಜಾಸ್ಥಾನಕ್ಕೂ ಸಾಮಾನ್ಯ ಜನಜೀವನಕ್ಕೂ ಅಂತರ ಹೆಚ್ಚಾದಂತೆಲ್ಲಾ ರಾಜಾಶ್ರಯದಲ್ಲಿ ತಲೆದೋರುವ ಸಾಹಿತ್ಯ ಕೃತಕವಾಗಿ ನೀರಸವಾಗುತ್ತದೆ; ಕವಿಯ ಸ್ವಾತಂತ್ರ್ಯಕ್ಕೆ ಮಿತಿಯುಂಟಾಗಿ ಅವನು ಸಂಪ್ರದಾಯದ ಶಿಶುವಾಗುವನು. ಸಾಹಿತ್ಯ ಚರಿತ್ರೆಯಲ್ಲಿ ರಾಜರ ಪ್ರಭಾವ ಎಂಥದೆಂಬುದರ ನಿರೂಪಣೆ ಅಡಕವಾಗಿರುತ್ತದೆ.

ಸಾಹಿತ್ಯ ಚರಿತ್ರೆಯಲ್ಲಿ ಗಮನಾರ್ಹವಾದ ಮತ್ತೊಂದು ಮುಖ್ಯಾಂಶ ಕಾಲ ಕಾಲಕ್ಕೆ ಮಾರ್ಪಡುವ ಅಭಿರುಚಿ ವಿಶೇಷಗಳು. ಜನರಲ್ಲೂ ಕವಿಗಳಲ್ಲೂ ಉತ್ತಮವಾದ ಅಭಿರುಚಿ ನೆಲಸಿದ್ದರೆ ಅವರಿಂದ ರಚಿತವಾಗುವ ಕಾವ್ಯಗಳೂ ಉತ್ಕೃಷ್ಟವಾಗಿರುತ್ತವೆ. ಒಂದು ಕಾಲದಲ್ಲಿ ರಸಕ್ಕೆ ಪ್ರಾಧಾನ್ಯವಿದ್ದರೆ ಮತ್ತೊಂದು ಕಾಲದಲ್ಲಿ ರೀತಿಗೆ ಪ್ರಧಾನತೆ ಬಂದುಬಿಡುತ್ತದೆ. ಒಂದು ಕಾಲದವರಿಗೆ ವೀರರಸ ಇಷ್ಟವಾಗಿದ್ದರೆ ಇನ್ನೊಂದು ಕಾಲದವರಿಗೆ ಶೃಂಗಾರದಲ್ಲಿ ಮೆಚ್ಚಿಗೆ ಉಂಟಾಗುತ್ತದೆ. ಹತ್ತನೆಯ ಶತಮಾನದ ಕನ್ನಡಿಗರಿಗೆ ವೀರರಸಕ್ಕಾಗರವಾದ ಕಾವ್ಯಗಳು ಇಷ್ಟವಾಗಿದ್ದರೆ ಹನ್ನೊಂದನೆಯ ಶತಮಾನದವರಿಗೆ ಶಾಸ್ತ್ರಕಾವ್ಯಗಳಲ್ಲಿ ಹೆಚ್ಚು ಆದರವುಂಟಾಗಿತ್ತು. ಹೀಗೆ ಕಾಲಕಾಲಕ್ಕೆ ನಡೆಯುವ ಅಭಿರುಚಿ ವ್ಯತ್ಯಾಸಗಳಿಗೆ ಕಾರಣಗಳೇನೆಂಬುದನ್ನೂ ಅವು ಹೇಗೆ ಸಾಹಿತ್ಯದಲ್ಲಿ ನಾನಾ ರೀತಿಯಾದ ರಚನೆಗಳಿಗೆ ಇಂಬುಗೊಟ್ಟವೆಂಬುದನ್ನೂ ಸಾಹಿತ್ಯಚರಿತ್ರೆ ಕೂಲಂಕಷವಾಗಿ ವಿಮರ್ಶಿಸಿ ಕಂಡುಹಿಡಿಯಲು ಪ್ರಯತ್ನಿಸಬೇಕು. ನಿಜವಾದ ಶಕ್ತಿ ಸಂಪನ್ನನಾದ ಕವಿ ಜನರ ಅಭಿರುಚಿಯ ಮಟ್ಟಕ್ಕೆ ತಾನು ಇಳಿಯದೆ ತನ್ನ ಅಭಿರುಚಿಯ ಎತ್ತರಕ್ಕೆ ಜನರನ್ನು ಏರಿಸಲು ಸಮರ್ಥನಿರುತ್ತಾನೆ. ಹೀಗೆ ಜನರ ಅಭಿರುಚಿ ಸಂಸ್ಕಾರಗಳು ಕವಿಯ ಮೇಲೂ ಕವಿಯ ಅಭಿರುಚಿ ಜನರ ಮೇಲೂ ಪರಿಣಾಮವನ್ನುಂಟು ಮಾಡುತ್ತಿರುತ್ತವೆ.

ಒಂದು ಸಾಹಿತ್ಯಕ್ಕೆ ಪ್ರಬಲವೂ ಭಿನ್ನವೂ ಆದ ಮತ್ತೊಂದು ಸಾಹಿತ್ಯ ಸಂಸ್ಕೃತಿಯ ಸಂಪರ್ಕವುಂಟಾದರೆ ನವೀನ ಕೃತಿ ನಿರ್ಮಾಣಕ್ಕೆ ಅವಕಾಶವುಂಟಾಗುತ್ತದೆ. ಆ ಸಂಪರ್ಕವು ದೀರ್ಘಕಾಲಿಕವೂ ಸಾಂದ್ರವೂ ಸ್ನೇಹಯುಕ್ತವೂ

ಆಗಿದ್ದರೆ ಅದರ ಪ್ರಭಾವ ಇನ್ನೂ ಅತಿಶಯವಾಗಿರುತ್ತದೆ. ಗ್ರೀಕ್, ಲ್ಯಾಟಿನ್ ಸಾಹಿತ್ಯಗಳು ಐರೋಪ್ಯ ಸಾಹಿತ್ಯಗಳ ಮೇಲೆ ನಾನಾ ರೀತಿಗಳಲ್ಲಿ ಪರಿಣಾಮ ವನ್ನುಂಟುಮಾಡಿವೆ. ಸಾಹಿತ್ಯ ಕಲೆಯ ಹಿರಿಯ ಆದರ್ಶಗಳೆಲ್ಲ ಇಂಗ್ಲಿಷ್ ನವರಿಗೂ ಯೂರೋಪಿನ ಇತರ ಜನಾಂಗಗಳವರಿಗೂ ದೊರೆತದ್ದು ಗ್ರೀಕ್ ಲ್ಯಾಟಿನ್‌ಗಳಿಂದ. ಆರ್ಯರ ಸಾಹಿತ್ಯ ಸಂಸ್ಕೃತಿಗಳ ಸಂಪರ್ಕ ದ್ರಾವಿಡ ಭಾಷಾ ವರ್ಗದವರಿಗೆ ಎಂದು ಉಂಟಾಯಿತೋ ಅಂದಿನಿಂದ ದ್ರಾವಿಡ ಭಾಷಾ ಸಾಹಿತ್ಯ ಗಳು ಬೆಳೆಯಲು ತೊಡಗಿದುವು. ಸಂಸ್ಕೃತದ ಪ್ರಭಾವ ಸಾವಿರಾರು ವರ್ಷಗಳಿಂದ ನಡೆದುಬಂದು ಭರತಖಂಡದ ಇತರ ಭಾಷೆಗಳಲ್ಲಿ ಸಾಹಿತ್ಯ ಸೃಷ್ಟಿಗೆ ಕಾರಣವಾಗಿ ನಿಂತಿದೆ. ಒಂದು ರೀತಿಯಾದ ಸಂಸ್ಕೃತಿಯ ಐಕಮತ್ಯ ಕಾಶ್ಮೀರದಿಂದ ಕನ್ಯಾ ಕುಮಾರಿಯವರೆಗೆ ಏರ್ಪಟ್ಟಿದೆ. ಇಂಥ ಸಂಪರ್ಕಗಳ ರಭಸವನ್ನು ತಾಳಲಾರದೆ ಎಷ್ಟೋವೇಳೆ ದುರ್ಬಲವಾದ ಭಾಷಾ ಸಾಹಿತ್ಯಗಳು ನಷ್ಟವಾಗುವುದೂ ಉಂಟು; ಅಂತಶ್ಚೈತನ್ಯವುಳ್ಳ ದ್ರಾವಿಡ ಭಾಷೆಗಳು ಹೀಗೆ ನಷ್ಟವಾಗದೆ ಪುಷ್ಟವಾದುವು. ಇದರ ಪರಿಣಾಮ ವಿಪುಲವಾದ ಸಾಹಿತ್ಯ ಸೃಷ್ಟಿ. ಕಾವ್ಯಕಲೆಯ ಉನ್ನತ ಆದರ್ಶ ಗಳು ಸಂಸ್ಕೃತದಿಂದ ಹರಿದು ಬಂದು ದ್ರಾವಿಡ ಸಾಹಿತ್ಯಗಳನ್ನು ರೂಪಿಸಿದುವು, ರೂಪಿಸುತ್ತಲಿವೆ. ಈಗಿನ ಕಾಲದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಭರತ ಖಂಡದ ನಾಗರಿಕತೆಯ ಮೇಲೆ ಹೇರಳವಾಗಿ ನಡೆಯುತ್ತಿದೆ. ಇಂಗ್ಲಿಷ್ ಭಾಷಾ ಸಾಹಿತ್ಯಗಳ ಸಂಪರ್ಕ ನಮಗೆ ದೀರ್ಘಕಾಲಿಕವೂ ನಿಕಟವೂ ಮೈತ್ರಿಯುತವೂ ಆಗಿ ಆ ಸಂಸ್ಕೃತಿಯ ಪರಿಚಯ ಉಂಟಾದುದಲ್ಲದೆ ಆ ಮೂಲಕ ಪಾಶ್ಚಾತ್ಯ ಪ್ರಪಂಚದ ನಾಗರಿಕತೆಯ ವಿಶಾಲ ಪರಿಚಯವೂ ದೊರೆಯುವಂತಾಯಿತು. ಇದರಿಂದ ಭರತಖಂಡದ ಸಾಹಿತ್ಯಗಳು ನೂತನ ಮಾರ್ಗಗಳಲ್ಲಿ ಬೆಳೆಯಲಾರಂಭಿಸಿ ಉತ್ಕೃಷ್ಟ ವಾದ ಸಿದ್ಧಿಯನ್ನು ಪಡೆದಿವೆ. ಭರತಖಂಡದ ಸಮಗ್ರಜೀವನದಲ್ಲಿ ಇಂದು ಪಾಶ್ಚಾತ್ಯರ ವೈಜ್ಞಾನಿಕ ಯುಗದ ಪ್ರಭಾವ ಪ್ರೇರಣೆಗಳು ಬಲವಾಗಿ ನಡೆಯು ತ್ತಲಿವೆ. ಇದರಿಂದ ಭರತಖಂಡದ ಸಾಹಿತ್ಯಗಳ ಪುನರುಜ್ಜೀವನವಾಗುತ್ತಲಿದೆ. ಸಾಹಿತ್ಯ ಚರಿತ್ರೆಯಲ್ಲಿ ಇಂಥ ಅನ್ಯ ಸಂಸ್ಕೃತಿ ಸಂಪರ್ಕಗಳ ಪರಿಣಾಮದ ವಿವರಣೆ ಸೇರಿಕೊಂಡಿರುತ್ತದೆ.

ದೇಶಚರಿತ್ರೆಗೂ ಸಾಹಿತ್ಯಚರಿತ್ರೆಗೂ ಇರುವ ಸಂಬಂಧವನ್ನು ಕೊಂಚ ಪರಿಶೀಲಿಸಬಹುದು. ದೇಶಚರಿತ್ರೆಯೆಂದರೆ ಸಾಮಾನ್ಯವಾಗಿ ಅದರ ಅರಸುಗಳ ಚರಿತ್ರೆ. ಅವರು ಮಾಡಿದ ಕಾರ್ಯಗಳು, ಹೂಡಿದ ಯುದ್ಧಗಳು, ನಡೆಸಿದ ಪಿತೂರಿ ಗಳು—ಇದೇ ಮೊದಲಾದುವು ಅಲ್ಲಿ ಪ್ರತಿಪಾದ್ಯವಾಗುವ ವಿಷಯಗಳು. ಸ್ಥೂಲ ವಾಗಿ ಇದು ಆ ದೇಶದ ಜೀವನಚರಿತ್ರೆ. ಸಾಹಿತ್ಯಚರಿತ್ರೆಯಾದರೆ ದೇಶದ ಆತ್ಮಕಥೆ. ದೇಶದ ಆತ್ಮವಿಕಸನ ಕಥೆಯನ್ನು ಸಾಹಿತ್ಯ ವಿಶದವಾಗಿ ಮನೋಹರವಾಗಿ ನಿರೂಪಿ ಸುತ್ತದೆ. ಭರತಖಂಡದ ಲೌಕಿಕ ಚರಿತ್ರೆಯ ಪರಿಜ್ಞಾನ ನಮ್ಮ ಜನಸಾಮಾನ್ಯಕ್ಕೆ

ಇಲ್ಲವೇ ಇಲ್ಲವೆಂದು ಹೇಳಬಹುದು. ಆದರೆ ಅದರ ಆತ್ಮಕಥೆ ಅವರಿಗೆ ಚೆನ್ನಾಗಿ ತಿಳಿದಿದೆ; ಅದೇ ಅವರ ಬಾಳನ್ನು ನಡೆಸುತ್ತಲೂ ಇದೆ. ರಾಮಾಯಣ ಮಹಾಭಾರತಗಳು ಭರತಖಂಡದ ಸಂಸ್ಕೃತಿಯ ಸಾರವಾಗಿವೆ; ಇವು ಅದರ ಆತ್ಮಕಥೆ. ಜನತೆಯ ಹೃದಯದಲ್ಲಿ ಇದು ಸಹಸ್ರಾರು ವರ್ಷಗಳಿಂದ ನೆಲೆಯಾಗಿ ನಿಂತು ಅದರ ರಕ್ತಗತವಾಗಿ ಹೋಗಿದೆ. ಒಂದು ಜನಾಂಗದ ಆತ್ಮಪರಿಚಯಮಾಡಿಕೊಳ್ಳಬೇಕಾದರೆ ಅದರ ಸಾಹಿತ್ಯಾಭ್ಯಾಸವೊಂದೇ ರಾಜಮಾರ್ಗ. ಈ ಕಾರ್ಯದಲ್ಲಿ ಸಾಹಿತ್ಯ ಚರಿತ್ರೆ ನೆರವಾಗಿ ಮಾರ್ಗದರ್ಶಕನಾದ ಸ್ನೇಹಿತನಂತೆ ಆಚರಿಸುತ್ತದೆ. ಇದರಿಂದ ಸಾಹಿತ್ಯ ಚರಿತ್ರೆಯ ಬೆಲೆಯೂ ಮಹತ್ವವೂ ವೇದ್ಯವಾಗುತ್ತದೆ. ದೇಶಚರಿತ್ರೆಯನ್ನು ಎಲ್ಲ ದೃಷ್ಟಿಗಳಿಂದಲೂ ಸಾಹಿತ್ಯಚರಿತ್ರೆ ಪರಿಪೂರ್ಣಗೊಳಿಸುತ್ತದೆ. ಸಾಹಿತ್ಯಕ್ಕೆ ವಸ್ತುವಾಗದ ಜೀವನವ್ಯಾಪಾರವಾವುದೂ ಇಲ್ಲದಿರುವುದರಿಂದ ಇದರಲ್ಲಿರುವ ಪರಿಪೂರ್ಣತೆ ಬೇರೆಲ್ಲಿಯೂ ಇಲ್ಲ.

ಸಾಹಿತ್ಯ ಚರಿತ್ರೆಯ ಸ್ವರೂಪವೇನೆಂಬುದನ್ನೂ ಅದರಲ್ಲಿ ಸಮಾವೇಶವಾಗುವ ವಿಷಯಗಳಾವುವೆಂಬುದನ್ನೂ ಸ್ಥೂಲವಾಗಿ ವಿವರಿಸಿ ಆಯಿತು. ಸಾಹಿತ್ಯಚರಿತ್ರೆಕಾರನು ಯಾವ ಆದರ್ಶಗಳನ್ನು ಕಣ್ಣಮುಂದೆ ನಿಲ್ಲಿಸಿಕೊಂಡು ಮುಂದುವರಿಯಬೇಕೆಂಬುದು ತಿಳಿದಂತಾಯಿತು. ಎಲ್ಲ ದೃಷ್ಟಿಗಳಿಂದಲೂ ತುಂಬಿ ಪರಿಪುಷ್ಟವಾಗಿರುವ ಸಾಹಿತ್ಯಚರಿತ್ರೆಯ ನಿರ್ಮಾಣ ಸ್ಪೃಹಣೀಯವಾದರೂ ಎಷ್ಟೋವೇಳೆ ಮೂಲಸಾಮಗ್ರಿಗಳ ಅಭಾವದಿಂದ ಆದರ್ಶಸಾಧನೆ ಅಸಾಧ್ಯವಾಗುತ್ತದೆ. ಇಂಥ ಸಂದರ್ಭಗಳಲ್ಲಿ ಆದಷ್ಟು ಸಮಗ್ರತೆಯನ್ನು ಸಾಧಿಸುವ ಪ್ರಯತ್ನವನ್ನು ಮಾತ್ರ ಬಿಡದೆ ಮಾಡಲೇಬೇಕು. ಇದಕ್ಕೆ ಸಾಹಿತ್ಯಸಂಶೋಧಕರು ಸಂತತವಾಗಿ ದುಡಿದು ಕಾಲಪುರುಷನು ಅಡಿಗಿಸಿಟ್ಟುಕೊಂಡಿರುವ ಅನೇಕ ಸಂಗತಿಗಳನ್ನು ಹೊರಕ್ಕೆಳೆದು ಹಾಕಬೇಕು. ಸಾಹಿತ್ಯಚರಿತ್ರಕಾರನಿಗೆ ಬೇಕಾಗಿರುವ ಮೂಲಸಾಮಗ್ರಿ ಈ ರೀತಿ ಕಾಲ ಕಾಲಕ್ಕೆ ಒದಗುತ್ತಲೇ ಇರಬೇಕು. ಹೀಗಾದರೆ ಎಂದಾದರೂ ಒಂದು ಕಾಲದಲ್ಲಿ ಆದರ್ಶವನ್ನು ಸಾಧಿಸಬಹುದು; ಅದು ಕಷ್ಟಸಾಧ್ಯವಾದರೂ ಆದರ್ಶದಲ್ಲೇ ದತ್ತದೃಷ್ಟಿಗಳಾಗಿ ಅದರ ಹತ್ತಿರ ಹತ್ತಿರಕ್ಕೆ ಪ್ರಯಾಣಮಾಡಿ ಸೇರಬಹುದು. ಆದರ್ಶವನ್ನು ಮುಟ್ಟುವುದಕ್ಕಿಂತ ಅದರ ಕಡೆಗೆ ಹೋಗುವುದೇ ಎಷ್ಟೋವೇಳೆ ಆನಂದಕರ. ಸಾಹಿತ್ಯ ಚರಿತ್ರೆಯ ರಚನೆಯೂ ಆನಂದದ ನೆಲೆಯನ್ನು ಕಾಣಿಸುವ ಒಂದು ಮಾರ್ಗ.

— ಡಿ. ಎಲ್. ನರಸಿಂಹಾಚಾರ್

# ಭಾವಶಿಕ್ಷಣ

ಕ್ರೋಧಾದ್ಭವತಿ ಸಂಮೋಹಸ್ಸಂಮೋಹಾತ್ ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥
ರಾಗ ದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥

(ಭಗವದ್ಗೀತೆ)

ಮನುಷ್ಯನಿಗೆ ಯಾವಾಗ ತೀವ್ರ ವಿಷಯಾಸಕ್ತಿಯುಂಟಾಗುವುದೋ ಆಗ ಕಾಮ ಕ್ರೋಧಾದಿ ಭಾವೋದ್ರೇಕಗಳಿಂದ ಅವನಿಗೆ ಆತ್ಮಸಂಯಮವಿಲ್ಲದೆ ಹೋಗುವುದು. ತಮ್ಮ ಇಚ್ಛೆ ಪ್ರತಿಹತವಾದರೆ ಆಗ ಕ್ರೋಧವು ಉಂಟಾಗುವುದು. ಈ ಕ್ರೋಧವು ಬುದ್ಧಿಯನ್ನು ಕೆಡಿಸುವುದು. ವ್ಯಕ್ತಿತ್ವವು ಅವ್ಯವಸ್ಥೆ ಹೊಂದುವುದು. ಮನುಷ್ಯನು ತನ್ನ ರಾಗದ್ವೇಷಗಳನ್ನು ನಿಗ್ರಹಿಸಿದರೆ ಆಗ ಮನಸ್ಸು ತನ್ನ ಸ್ವಾಧೀನವಾಗುವುದು.

ಹೀಗೆ ಮನೋಭಾವಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದನ್ನು ಭಾವಶಿಕ್ಷಣ ವೆಂದು ಕರೆಯಬಹುದು. ಇದುವರೆವಿಗೂ ವಿವರಿಸಿದ ಹಾಗೆ ಮಗುವು ಬೆಳೆಯುತ್ತ ಬೆಳೆಯುತ್ತ ಭಯ, ಕೋಪ ಮುಂತಾದ ಭಾವಗಳು ತನ್ನ ಆವರಣದಲ್ಲಿರುವ ಮನುಷ್ಯರ ಮೇಲೆಯೂ ಇತರ ಪದಾರ್ಥಗಳ ಮೇಲೆಯೂ ಉದ್ರಿಕ್ತವಾಗುವುವು. ಈ ಭಾವಾ ವೇಶಗಳನ್ನು ಮನುಷ್ಯನು ಉಚಿತ ಮಾರ್ಗದಲ್ಲಿ ಉಪಯೋಗಿಸಿದರೆ ಅವು ಅವನಿಗೆ ಹಿತಕಾರಿಗಳಾಗಿಯೂ ಇಲ್ಲದಿದ್ದರೆ ಹಾನಿಕರವಾಗಿಯೂ ಪರಿಣಮಿಸುವುವು. ಈ ಮನೋಭಾವಗಳಿಂದ ಜನಿಸುವ ಶಕ್ತಿಗಳು ನಮ್ಮ ವರ್ತನೆಗೆ ಬಹಳ ಅನುಕೂಲ ವಾದುವು; ಇವು ಜೀವನದ ಕಾರ್ಯಗಳಲ್ಲಿ ಆಸಕ್ತಿಯನ್ನು ಹುಟ್ಟಿಸಿ ಜೀವನವನ್ನು ರಸಭರಿತವನ್ನಾಗಿ ಮಾಡುವುವು. ಆದರೆ ಇವುಗಳನ್ನು ನಾವು ಒಂದು ಹತೋಟಿ ಯಲ್ಲಿಟ್ಟಿರಬೇಕು. ನಮ್ಮ ಭಾವಗಳು ಅತಿ ತೀವ್ರವಾದರೆ ಗೀತೆಯಲ್ಲಿ ಹೇಳಿದಂತೆ ಬುದ್ಧಿನಾಶವಾಗಿ ನಮ್ಮ ಪ್ರತಿಕ್ರಿಯೆಗಳ ಮೇಲೆ ನಮಗೆ ಸ್ವಾಧೀನವಿಲ್ಲದೆ ಹೋಗುವುದು. ದಮನ ಶಕ್ತಿಯು ಚಿಕ್ಕ ವಯಸ್ಸಿನಿಂದಲೂ ಬೆಳೆಯಬೇಕು. ಮಕ್ಕಳಿಗೆ ತಮ್ಮ ಭಾವಗಳ ಮೇಲೆ ಸ್ವಾಧೀನ ಉಂಟಾಗಬೇಕಾದರೆ ತಂದೆತಾಯಿಗಳು ಅವರಿಗೆ ಚಿಕ್ಕಂದಿ ನಿಂದಲೂ ತಕ್ಕ ಆವರಣವನ್ನು ಕಲ್ಪಿಸಿಕೊಡಬೇಕು. ಇತ್ತೀಚೆಗೆ ಫ್ರಾಯ್ಡ್ ಎಂಬ ಪ್ರಸಿದ್ಧ ಮನಶ್ಶಾಸ್ತ್ರಜ್ಞನು ಮಕ್ಕಳಿಗೆ ಭಾವಶಿಕ್ಷಣ ಬಹಳ ಮುಖ್ಯವಾದುದೆಂದು ಬೋಧಿಸಿರುವನು. ಮನಶ್ಶಾಂತಿಯಿಲ್ಲದಿರುವ ಅಥವಾ ಉನ್ಮತ್ತರಾದ ವಯಸ್ಕರನ್ನು ಪರೀಕ್ಷಿಸಿದುದರಲ್ಲಿ ಅವರ ದುರವಸ್ಥೆಗೆ ಅವರು ಸಣ್ಣ ಮಕ್ಕಳಾಗಿರುವಾಗ ಭಾವಶಿಕ್ಷಣ ಹದಗೆಟ್ಟುದೇ ಕಾರಣವೆಂದು ತಿಳಿಯಬಂದಿದೆ. ದೊಡ್ಡವರಾದಮೇಲೆ ಹುಟ್ಟಬೇಕಾದ ಮನಶ್ಶಾಂತಿಗೆ ಈ ಸಣ್ಣ ವಯಸ್ಸಿನಲ್ಲಿ ದೊರಕುವ ಭಾವಶಿಕ್ಷಣವೇ ಅಸ್ತಿಭಾರವಾಗಿರು ವುದು. ಬಹಳ ತೊಡಕಾದ ಮತ್ತು ಅಗಾಧವಾದ ಈ ಭಾವಶಿಕ್ಷಣದ ವಿಷಯವಾಗಿ

ಈ ಪುಟ್ಟ ಪುಸ್ತಕದ ಒಂದು ಅಧ್ಯಾಯದಲ್ಲಿ ನಾಲ್ಕಾರು ಮಾತುಗಳನ್ನು ಮಾತ್ರ ಹೇಳಲು ಸಾಧ್ಯ.

ಸಾಧಾರಣವಾಗಿ ನಾವು ಮಕ್ಕಳನ್ನು ಆಟದ ಗೊಂಬೆಗಳಂತೆ ಭಾವಿಸುತ್ತೇವೆ. ನಮಗೆ ಸಂತೋಷವಾಗಿರುವಾಗ ಅವರನ್ನು ಹತ್ತಿರ ಕರೆದು ಮುದ್ದಾಡುತ್ತೇವೆ; ನಾವು ಕೆಲಸಗಳಲ್ಲಿ ತೊಡಗಿರುವಾಗ ಅಥವಾ ನಮಗೆ ಅಸಮಾಧಾನವುಂಟಾಗಿರುವಾಗ ಅವರನ್ನು ನಿರ್ಲಕ್ಷಿಸಿ ದೂರ ಮಾಡುತ್ತೇವೆ. ಹೀಗೆ ಮಕ್ಕಳ ಜೊತೆಯಲ್ಲಿ ನಾವು ಯಾವ ರೀತಿ ವರ್ತಿಸುವೆವೆಂಬುದು ನಮ್ಮ ಆ ಕ್ಷಣದ ಮನೋಭಾವಗಳನ್ನು ಅನುಸರಿಸಿರುತ್ತದೆ. ನಮ್ಮ ಈ ವರ್ತನೆಯು ಮಕ್ಕಳ ಮನಸ್ಸಿನ ಮೇಲೆ ಒಂದು ದುಷ್ಪರಿಣಾಮವನ್ನುಂಟುಮಾಡುವುದು. ಅವರಿಗೆ ನಮ್ಮನ್ನು ಕಂಡರೆ ಹೆದರಿಕೆಯುಂಟಾಗುವುದು. ನಾವು ಅವರನ್ನು ಆದರಿಸಿ ಕರೆಯುತ್ತೇವೆಯೋ ಅಥವಾ ಕೋಪಿಸಿಕೊಂಡು ದೂರ ಮಾಡುತ್ತೇವೆಯೋ ಎಂಬ ಸಂಶಯವು ಅವರಲ್ಲಿ ಹುಟ್ಟುವುದು. ಈ ಸಂಶಯದಿಂದ ಅವರ ಮನಸ್ಸಿನಲ್ಲಿ ಒಂದು ಒಳತೋಟಿಯುಂಟಾಗುವುದು. ಇಂತಹ ಒಳತೋಟಿಯು ಯಾವಾಗಲೂ ಮಕ್ಕಳ ಮನಸ್ಸನ್ನಾಕ್ರಮಿಸಿದರೆ ಅದು ಅವರ ವ್ಯಕ್ತಿತ್ವಕ್ಕೆ ಕುಂದು ತರುವುದು. ಆದುದರಿಂದ ನಾವು ಅವರಿಗೂ ಆತ್ಮಗೌರವ, ಕೋಪತಾಪಗಳಿವೆ ಎಂಬುದನ್ನು ಅಲಕ್ಷಿಸಿ ವರ್ತಿಸಬಾರದು. ಅವರ ವ್ಯಕ್ತಿತ್ವದ ವಿಕಸನಕ್ಕೆ ತಕ್ಕ ಸಲಕರಣೆಗಳನ್ನೊದಗಿಸುವುದು ನಮ್ಮ ಧರ್ಮ.

ಅಮೇರಿಕಾ ದೇಶದಲ್ಲಿ ಒಂದು ಶಿಶುವಿಹಾರದಲ್ಲಿ ಮಧ್ಯಾಹ್ನದ ಹೊತ್ತಿನಲ್ಲಿ ಆ ಶಾಲೆಯ ಮಕ್ಕಳ ತಾಯಿಯರೇ ಬಂದು ಆ ಮಕ್ಕಳನ್ನು ನೋಡಿಕೊಳ್ಳುವರು. ಇಂತಹ ಶಾಲೆಗೆ ಒಬ್ಬ ಮನಶ್ಶಾಸ್ತ್ರಜ್ಞನು ಮಕ್ಕಳ ಬುದ್ಧಿಯನ್ನಳೆಯಲೆಂದು ಹೋದನು. ಆ ಸಮಯದಲ್ಲಿ ಒಬ್ಬೊಬ್ಬ ತಾಯಿಯು ಮಕ್ಕಳ ಜೊತೆಯಲ್ಲಿ ಯಾವ ರೀತಿ ವರ್ತಿಸುವಳೆಂಬುದನ್ನು ಪರಿಶೀಲಿಸಿ ನೋಡಿದನು. ಒಂದೇ ಸನ್ನಿವೇಶದಲ್ಲಿ ಬೇರೆ ಬೇರೆ ತಾಯಂದಿರು ಬೇರೆ ಬೇರೆ ರೀತಿಗಳಲ್ಲಿ ವರ್ತಿಸುವರೆಂಬುದು ಕಂಡುಬಂತು. ಉದಾಹರಣೆಗೆ ಮಗುವು ಅನುಚಿತವಾದ ಆಟವನ್ನು ಆಡುತ್ತಿರುವಾಗ ಒಬ್ಬ ತಾಯಿಯು ಆ ಮಗುವನ್ನು ಲಕ್ಷಿಸದೆ ಆಟ ಆಡಲೆಂದು ಬಿಟ್ಟುಬಿಟ್ಟಳು. ಇನ್ನೊಬ್ಬಾಕೆ ಹುಡುಗನನ್ನು ಬಯ್ದು ಆ ಕೆಲಸ ಮಾಡಬೇಡವೆಂದು ದೂರ ತಳ್ಳಿದಳು. ಮತ್ತೊಬ್ಬ ತಾಯಿ ಮಗುವನ್ನು ಹೀಯಾಳಿಸಿ, ಅವನ ಸಂಗಡಿಗರನ್ನು ಬಹು ಒಳ್ಳೆಯವರೆಂದು ಹೊಗಳಿದಳು. ಮತ್ತೊಬ್ಬ ತಾಯಿಯು ಆ ರೀತಿ ಆಡಬಾರದೆಂದು ಗದರಿಸಿಬಿಟ್ಟಳು. ಆದರೆ ಅದು ಆಡಿತೋ ಬಿಟ್ಟಿತೋ ಎನ್ನುವುದನ್ನು ಗಮನಿಸಲಿಲ್ಲ. ಹೀಗೆ ತಾಯಿಯರು ಒಬ್ಬೊಬ್ಬರೂ ಒಂದೊಂದು ವಿಧವಾಗಿ ವರ್ತಿಸುವುದು ಮಕ್ಕಳಲ್ಲಿರುವ ವಿವಿಧ ವ್ಯಕ್ತಿತ್ವಗಳಿಗೆ ಒಂದು ಕಾರಣ. ಮಗುವು ಹಟಮಾಡುತ್ತ ಅಳುತ್ತಿದ್ದರೆ ಕೆಲವು ತಂದೆತಾಯಿಗಳು ಹಟಮಾಡಿದರೂ ಚಿಂತೆಯಿಲ್ಲ ಎಂದು ಸುಮ್ಮನಿರುವರು. ಆದರೆ ಮತ್ತೆ ಕೆಲವರು ಹಟಮಾಡುವ ಮಗುವಿಗೆ ಯಾವುದು ಬೇಕಾಗಿದೆಯೋ ಅದನ್ನು

ಕೊಟ್ಟು ಸಮಾಧಾನಪಡಿಸುವರು. ಕೆಲವರು ತಮ್ಮ ಮಕ್ಕಳನ್ನು ಬೇರೆಯವರ ಎದುರಿಗೆ ಅತಿಯಾಗಿ ಹೊಗಳುವರು; ಮತ್ತೆ ಕೆಲವರು ಅವರ ಎದುರಿಗೆ ನಿಂದಿಸುವರು. ಕೆಲವರು 'ಗೊಗ್ಗಯ್ಯ, ಗುಮ್ಮ,' ಎಂದು ಹೆದರಿಸುವರು. ಈ ರೀತಿಯ ವರ್ತನೆಗಳು ಮಕ್ಕಳಲ್ಲಿ ದುಷ್ಪರಿಣಾಮವನ್ನುಂಟುಮಾಡುವುವು. ತಂದೆತಾಯಿಗಳು ಮಕ್ಕಳೊಡನೆ ಯಾವಾಗಲೂ ಏಕರೀತಿಯಿಂದ ವರ್ತಿಸಬೇಕು; ಮಕ್ಕಳ ವಿಚಾರದಲ್ಲಿ ಒಂದು ಸಮಯ ದಲ್ಲಿ ಅತಿ ಕಠಿಣವಾಗಿಯೂ ಮತ್ತೊಂದು ಸಮಯದಲ್ಲಿ ಅತಿ ಸರಸವಾಗಿಯೂ ಇದ್ದರೆ ಮಕ್ಕಳ ಬೆಳವಣಿಗೆಯು ಎಂದಿಗೂ ಕ್ರಮಬದ್ಧವಾಗಲಾರದು.

ಮನೆಯಲ್ಲಿ ಬೆಳೆದ ಮಕ್ಕಳು ಊಟಮಾಡುವಾಗ, ಮಲಮೂತ್ರವಿಸರ್ಜನೆ ಮಾಡುವಾಗ, ಮುಖ ತೊಳೆಯುವಾಗ, ಸ್ನಾನಮಾಡುವಾಗ, ಮಲಗಿಕೊಳ್ಳುವಾಗ ಸಾಧಾರಣವಾಗಿ ಅಳುವರು. ಆದರೆ ಅದೇ ಸನ್ನಿವೇಶಗಳಲ್ಲಿ ಶಿಶುವಿಹಾರಗಳಲ್ಲಿ ಬೆಳೆದ ಮಕ್ಕಳು ಅಳುವುದಿಲ್ಲ. ಮನೆಯಲ್ಲಿ ಮಕ್ಕಳನ್ನು ನೋಡಿಕೊಳ್ಳುವುದಕ್ಕೂ ಶಿಶುವಿಹಾರ ದಲ್ಲಿ ಮಕ್ಕಳನ್ನು ನೋಡಿಕೊಳ್ಳುವುದಕ್ಕೂ ಇರುವ ವ್ಯತ್ಯಾಸವೇ ಇದಕ್ಕೆ ಕಾರಣ; ಶಿಶುವಿಹಾರದಲ್ಲಿ ಉಪಾಧ್ಯಾಯಿನಿಯರು ಮಕ್ಕಳಿಗೆ ಊಟಮಾಡಿಸುವಾಗ, ಮುಖ ತೊಳೆಯುವಾಗ, ಬಟ್ಟೆ ಹಾಕುವಾಗ ಪ್ರತಿದಿನವೂ ಒಂದೇ ಕ್ರಮಬದ್ಧವಾದ ರೀತಿಯಲ್ಲಿ ನಡೆದುಕೊಳ್ಳುವರು. ಆದಕಾರಣ ಮಕ್ಕಳು ಈ ಕೆಲಸಗಳನ್ನು ಸರಾಗವಾಗಿ ಮಾಡುವರು. ಸಾಧಾರಣವಾಗಿ ಮನೆಗಳಲ್ಲಿ ದೊಡ್ಡವರು ಈ ರೀತಿ ಒಂದೇ ಪ್ರಕಾರ ಕ್ರಮಬದ್ಧವಾಗಿ ನಡೆಯುವುದು ಅಸಂಭವ. ಕೆಲವು ಸಮಯಗಳಲ್ಲಿ ಈ ಕೆಲಸಗಳನ್ನು ಆತುರದಿಂದ ಮಾಡಿಸುವರು; ಕೆಲವು ಸಮಯಗಳಲ್ಲಿ ನಿಧಾನವಾದರೂ ಸುಮ್ಮನಿರುವರು. ಕೆಲವುವೇಳೆ ಬೇಸರ ಪಡುವರು; ಕೆಲವು ವೇಳೆ ತಮ್ಮ ಮನಸ್ಸಿನ ಕೋಪವನ್ನು ಮಕ್ಕಳಮೇಲೆ ತೋರಿಸುವರು. ಹೀಗೆ ಮಾಡುವುದರಿಂದ ಎಲ್ಲಾ ಸಮಯದಲ್ಲೂ ಮಕ್ಕಳು ಒಂದೇ ಸಮನಾಗಿ ವರ್ತಿಸುವುದಿಲ್ಲ. ಅನೇಕವೇಳೆ ಮಕ್ಕಳು ತಮ್ಮ ಈ ಕಾರ್ಯವನ್ನು ದೊಡ್ಡವರ ಪ್ರೀತಿಗಳಿಸುವುದಕ್ಕೋಸ್ಕರ ಮಾಡುವರು; ಇದು ತಂದೆತಾಯಿಯರ ಅಸಮವರ್ತನೆಯ ಒಂದು ಪರಿಣಾಮ.

ನಮ್ಮಿಂದ ಉಪಚಾರವನ್ನು ನಿರೀಕ್ಷಿಸದೆ ಮಕ್ಕಳು ತಮ್ಮ ಕೆಲಸಗಳನ್ನು ತಾವು ಮಾಡುವುದನ್ನು ಕಲಿಯಬೇಕು. ಮಕ್ಕಳು ಬೆಳೆಯುತ್ತ ಪರಾಧೀನದಿಂದ ಬಿಡುಗಡೆ ಹೊಂದಿ ಸ್ವತಂತ್ರರಾಗಬೇಕೆಂಬುದು ಮಕ್ಕಳ ಶಿಕ್ಷಣದ ಮುಖ್ಯಧ್ಯೇಯ. ಅವರು ಸಣ್ಣವರಾಗಿರುವಾಗ, ಮುಖ್ಯವಾಗಿ ಮೊದಲನೆಯ ಮೂರು ನಾಲ್ಕು ವರ್ಷಗಳಲ್ಲಿ ತಮ್ಮ ತಾಯಿತಂದೆಗಳ ಅಧೀನದಲ್ಲಿಯೇ ಇರುವರು. ಮಕ್ಕಳಿಗೆ ಅತ್ತಿತ್ತ ಓಡಾಡುವುದಕ್ಕೆ, ತಮ್ಮ ಇಚ್ಛೆಗಳನ್ನು ಪೂರ್ತಿಗೊಳಿಸುವುದಕ್ಕೆ ದೊಡ್ಡವರ ಬೆಂಬಲವಿಲ್ಲದೆ ಆಗುವುದಿಲ್ಲ. ಇಂಥ ಮಕ್ಕಳು ತಾವೇ ಸ್ವತಃ ತಮ್ಮ ಕೆಲಸಗಳನ್ನು ಮಾಡಿಕೊಂಡು ಸ್ವತಂತ್ರರಾಗಿ ಬೆಳೆಯುವಂತೆ ದೊಡ್ಡವರಾದ ನಾವು ಅವರಿಗೆ ಸಹಾಯಮಾಡಬೇಕು.

ಪ್ರಾರಂಭದಿಂದಲೂ ಮಕ್ಕಳು ಸ್ವತಂತ್ರರಾಗಿರಲು ಪ್ರಯತ್ನಪಡುವರು. ಅಂಬೆ

ಗಾಲಿಡುವ ಸಮಯದಲ್ಲಿ ಕೂಡ ಮಕ್ಕಳು ಮನೆಯಲ್ಲೆಲ್ಲ ತಮ್ಮಿಷ್ಟಕ್ಕೆ ತಾವೇ ಓಡಾಡಲು ಪ್ರಯತ್ನ ಪಡುವರು. ಇನ್ನು ಸ್ವಲ್ಪ ಬೆಳೆದ ಮೇಲೆ ತಿಂಡಿ ತೀರ್ಥಗಳನ್ನು ತಾವೇ ತೆಗೆದುಕೊಳ್ಳಬೇಕೆಂದು ಹಟಹಿಡಿಯುವರು. ಮತ್ತೆ ಸ್ವಲ್ಪ ದೊಡ್ಡವರಾಗಲು ಸ್ನಾನ, ಬಟ್ಟೆಹಾಕಿಕೊಳ್ಳುವುದು ಈ ಮೊದಲಾದ ಕಾರ್ಯಗಳನ್ನೂ ತಮಗೆ ಸಾಮರ್ಥ್ಯವಿಲ್ಲ ದಿದ್ದರೂ ತಾವೆಲ್ಲ ಮಾಡಬೇಕೆಂದು ಹಟ ಹಿಡಿಯುವರು. ಹೀಗೆ ಮಕ್ಕಳು ಸ್ವಾತಂತ್ರ್ಯ ವನ್ನು ಕೋರುವುದು ಸ್ವಾಭಾವಿಕ. ಆದರೆ ಅವರ ಈ ರೀತಿಯ ವರ್ತನೆಯು ತಾಯಂದಿರಿಗೆ ಸ್ವಲ್ಪ ತೊಂದರೆಯನ್ನೂ ಸ್ವಲ್ಪ ಕಾಲಹರಣವನ್ನೂ ಉಂಟುಮಾಡು ವುದು. ತಾಯಂದಿರು ಮಕ್ಕಳಿಗೆ ಸ್ವಾತಂತ್ರ್ಯದಿಂದ ತಮ್ಮ ಕೆಲಸಗಳನ್ನು ಮಾಡಿ ಕೊಳ್ಳಲು ಸಹಾಯಮಾಡಿ ಮುಂದೆ ಅವರಿಗೂ ತಮಗೂ ಅನುಕೂಲವಾಗುವ ರೀತಿಯಲ್ಲಿ ವರ್ತಿಸಬೇಕು. ಕೆಲವು ತಾಯಂದಿರಿಗೆ ತಮ್ಮ ಮಕ್ಕಳು ಪ್ರತಿಯೊಂದು ಕೆಲಸಕ್ಕೂ ತಮ್ಮ ಸಹಾಯವನ್ನು ಕೋರದಿದ್ದರೆ ಸಮಾಧಾನವಿಲ್ಲ. ಆದರೆ ಇದು ಮಕ್ಕಳಿಗೆ ಬಹು ಕೆಟ್ಟದ್ದು. ಈ ರೀತಿ ಬೆಳೆದ ಮಕ್ಕಳು ದೊಡ್ಡವರಾದರೂ ಪರಾಧೀನ ರಾಗಿಯೇ ಇರಲು ಆಶಿಸುವರು. ಮನೆಯಲ್ಲಿ ದೊರಕುವ ಸಹಾನುಭೂತಿ ಸಹಾಯ ಗಳನ್ನು ಹೊರಗೂ ಅಪೇಕ್ಷಿಸಿ ಅವು ದೊರಕದಿರಲು ಹತಾಶರಾಗುವರು. ಕೆಲವು ಮಂದಿ ವಯಸ್ಕರು ನಿರುದ್ಯೋಗಿಗಳಾಗಿಯೂ ತಮ್ಮ ಜೀವನದಲ್ಲಿ ನಿರುತ್ಸಾಹಿಗಳಾಗಿಯೂ ಇರಲು ಈ ರೀತಿ ಚಿಕ್ಕಂದಿನಿಂದಲೂ ಪರಾಧೀನತೆಯಲ್ಲಿ ಬೆಳೆದಿರುವುದೇ ಮುಖ್ಯಕಾರಣ. ಅಲ್ಲದೆ ಈ ಪರಾಧೀನತೆ ಅವರ ದಾಂಪತ್ಯಜೀವನದಲ್ಲಿಯೂ ಒಂದು ದುಷ್ಪರಿಣಾಮ ವನ್ನುಂಟುಮಾಡುವುದು. ತಾಯಿಗೆ ಅಧೀನನಾಗಿರುವ ಮಗನು ತನ್ನ ಹೆಂಡತಿಯ ಮೇಲೆ ಅಷ್ಟೊಂದು ಪ್ರೀತಿ ವಿಶ್ವಾಸಗಳನ್ನು ಸಾಮಾನ್ಯವಾಗಿ ತೋರಿಸಲಾರನು; ಹಾಗೆಯೇ ತಂದೆಯಲ್ಲಿ ಹೆಚ್ಚು ಪ್ರೀತಿಯಿರುವ ಮಗಳಿಗೆ ಕೈಹಿಡಿದ ಗಂಡನಲ್ಲಿ ಸಾಮಾನ್ಯವಾಗಿ ಹೆಚ್ಚು ಪ್ರೀತಿ ವಿಶ್ವಾಸಗಳಿರಲಾರವು. ಇದರಿಂದ ಗೃಹಕೃತ್ಯದಲ್ಲಿ ಅನೇಕ ಕಿರುಕುಳವುಂಟಾಗುವುದು. ಆದುದರಿಂದ ತಂದೆತಾಯಿಯರು ಮಕ್ಕಳು ಚಿಕ್ಕಂದಿ ನಿಂದ ಕೈಲಾದಷ್ಟು ಸ್ವತಂತ್ರರಾಗಿರಲು ಅವರಿಗೆ ಅವಕಾಶ ಕೊಡಬೇಕು.

ಉಪಯೋಗಿಸುತ್ತಾ ಉಪಯೋಗಿಸುತ್ತಾ ಕತ್ತಿ ಹೇಗೆ ಹೆಚ್ಚು ಹೆಚ್ಚು ಹೊಳೆಯುವುದೋ ಹಾಗೆಯೇ ಬುದ್ಧಿಶಕ್ತಿಯೂ ಸಹ ಉಪಯೋಗದಿಂದ ಹೆಚ್ಚು ಹೆಚ್ಚು ಚುರುಕಾಗುವುದು. ಬೆಳೆಯುತ್ತಿರುವ ಮಗುವಿಗೆ ಯಾವುದಾದರೂ ಒಂದು ಕೆಲಸವನ್ನು ಮಾಡಬೇಕೆಂದು ಕುತೂಹಲವಿರುವುದು. ಅವರ ದೈಹಿಕ ಬೆಳವಣಿಗೆಗೆ ಅತ್ಯಂತ ಸಹಕಾರಿ; ಹಗಲೆಲ್ಲಾ ಚಟುವಟಿಕೆಯಿಂದಿರುವುದೇ ಬೆಳೆಯುವ ಹುಡುಗನ ಸ್ವಭಾವ. ಆದ್ದರಿಂದಲೇ ನಾಲ್ಕೈದು ವರ್ಷಗಳವರೆಗೂ ಮಕ್ಕಳು ಯಾವಾಗಲೂ ಚಟುವಟಿಕೆಯಿಂದಿರುವರೇ ಹೊರತು ಸೋಮಾರಿಗಳಾಗಿರುವುದಿಲ್ಲ. ಈ ವಯಸ್ಸಿನಲ್ಲಿ ಅವರಿಗೆ ಓಡಾಡುವುದಕ್ಕೆ ಮತ್ತು ಕೆಲಸಮಾಡುವುದಕ್ಕೆ ಸಲಕರಣೆಗಳು ಸರಿಯಾಗಿಲ್ಲ ದಿದ್ದರೆ ದೊಡ್ಡವರ ಹತ್ತಿರ ಬಂದು ಅವರು ಕೆಲಸಗಳಿಗೆ ಅಡಚಣೆಯನ್ನುಂಟು

ಮಾಡುವರು. ಈ ಚೇಷ್ಟೆಗಳಿಗೆ ಮುಖ್ಯ ಕಾರಣ ಅವರಿಗೆ ಆಟಪಾಟಗಳಿಗೆ ಅವಕಾಶ ಗಳನ್ನು ಕಲ್ಪಿಸದಿರುವುದು. ಆದುದರಿಂದಲೇ ನಾವು ಅವರಿಗೆ ಕೈಲಾದಷ್ಟು ಆಟದ ಸಾಮಾನುಗಳನ್ನು ಒದಗಿಸಿಕೊಡಬೇಕು. ಅದರಲ್ಲಿಯೂ ಮಗುವಿನ ಕಲ್ಪನಾಶಕ್ತಿ ಯನ್ನು ಪ್ರಚೋದನಗೊಳಿಸುವಂತಹವಾದರೆ ಉತ್ತಮ. ಈ ದೃಷ್ಟಿಯಿಂದ ಮರದ ಗೊಂಬೆಗಳಿಗಿಂತ ಹತ್ತಿಪ್ಪತ್ತು ಮರದ ಕರಣಗಳೇ ಉತ್ತಮ. ಮಕ್ಕಳಿಗೆ ಆಟದ ಸಾಮಾನುಗಳನ್ನು ಮುರಿದು ಅವುಗಳನ್ನು ಜೋಡಿಸುವುದೆಂದರೆ ಆಸೆ. ಆದುದರಿಂದ ಬೆಲೆಯುಳ್ಳ ಗೊಂಬೆಗಳನ್ನು ಕೊಡದೆ ಸುಲಭವಾಗಿ ಕಿತ್ತು ಪುನಃ ಜೋಡಿಸಬಹು ದಾದಂಥ ಭಾಗಗಳುಳ್ಳ ಆಟದ ಸಾಮಾನುಗಳನ್ನೇ ಕೊಡಬೇಕು.

ಶಾಲೆಗೆ ಹೋಗುವ ದೊಡ್ಡ ಮಕ್ಕಳು ಕೆಲವು ವೇಳೆ ಸೋಮಾರಿತನವನ್ನು ತೋರಿಸುವರು. ಈ ಸೋಮಾರಿತನಕ್ಕೆ ಮುಖ್ಯ ಕಾರಣಗಳು ಅನಾರೋಗ್ಯ, ಮತ್ತು ಕೆಲಸದಲ್ಲಿ ಅಭಿರುಚಿಯಿಲ್ಲದೆ ಇರುವುದು. ಶಾಲೆಯ ಪಾಠಗಳನ್ನು ಹುಡುಗರಿಗೆ ಅಭಿರುಚಿ ಹುಟ್ಟುವ ಹಾಗೆ ಹೇಳಿಕೊಟ್ಟರೆ ಆಗ ಸೋಮಾರಿತನವು ಎಂದಿಗೂ ಇರಲಾರದು. ಇದನ್ನು ಬಿಟ್ಟು ಹುಡುಗನನ್ನು 'ನೀನು ಸೋಮಾರಿ, ಓದು ನಿನ್ನ ತಲೆಗೆ ಹತ್ತುವುದಿಲ್ಲ' ಎಂದು ಮೂದಲಿಸಿ ಬಯ್ದರೆ ಅದರಿಂದ ಬಹಳ ಕೆಡಕುಂಟಾಗು ವುದು ; ಹುಡುಗನಿಗೆ ವಿದ್ಯೆಯಲ್ಲಿ ನಿರಾಶೆಹುಟ್ಟಿ ಅವನು ಖಂಡಿತ ಹಿಂದೆ ಬೀಳುವನು. ಹುಡುಗನಿಗೆ ದೊಡ್ಡವರ ಮಾತಿನಲ್ಲಿ ಬಹಳ ನಂಬಿಕೆ. ದೊಡ್ಡವರು ತನ್ನನ್ನು ಕೆಲಸಕ್ಕೆ ಬಾರದವನೆಂದು ಬಯ್ದರೆ ತಾನು ಕೆಲಸಕ್ಕೆ ಬಾರದವನೆಂದೇ ನಂಬಿ ಹಿಂದುಳಿಯುವನು. ಅಣ್ಣತಮ್ಮಂದಿರಲ್ಲಿ, ಅಕ್ಕತಂಗಿಯರಲ್ಲಿ ಅಸೂಯೆ ಹುಟ್ಟುವುದಕ್ಕೆ ಇದು ಮೂಲ ಕಾರಣ. ಯಾವಾಗಲೂ ಇತರ ಹುಡುಗರನ್ನು ಹೊಗಳಿ ಈ ಹುಡುಗನನ್ನು ನಿಂದಿಸಿದರೆ ಅವನಲ್ಲಿ ತಾನು ಕೀಳೆಂಬ ಭಾವನೆಯು ಶಾಶ್ವತವಾಗಿ ನಿಲ್ಲುವುದು ; ಮತ್ತು ಇತರ ಹುಡುಗರಲ್ಲಿ ದ್ವೇಷ ಮತ್ತು ಅಸೂಯೆ ಹುಟ್ಟುವುದು. ಮಗುವಿಗೆ ಯಾವಾಗಲೂ ಸ್ವಾಭಿಮಾನ ಹೆಚ್ಚು. ಅವನನ್ನು ದೊಡ್ಡವರೆದುರಿಗಾಗಲಿ, ಬೇರೆ ಮಕ್ಕಳೆದುರಿಗಾಗಲಿ ಅವಮಾನಪಡಿಸಿದರೆ ಬಹಳ ಪರಿತಾಪ ಪಡುವನು ; ಮತ್ತು ಈ ಪರಿತಾಪವನ್ನು ತಕ್ಷಣವೇ ಯಾರ ಮೇಲಾದರೂ ರೇಗಿಬಿದ್ದು ವ್ಯಕ್ತಪಡಿಸುವನು ; ನೆರೆಹೊರೆಯವರು ಮನೆಗೆ ಬಂದಾಗ ತಾಯಿ ತಂದೆಗಳಿಗೆ ಬೇಸರಹುಟ್ಟುವಂತೆ ವರ್ತಿಸುವನು. ಇಂಥಾ ಸಮಯದಲ್ಲಿ ಅವನನ್ನು ಬಯ್ಯದೇ ಯಾವುದಾದರೂ ಇತರ ಕೆಲಸವನ್ನು ಮಾಡುವಂತೆ ಹೇಳಬೇಕು.

ದೊಡ್ಡ ಮಕ್ಕಳಲ್ಲಿರುವ ಅನೇಕ ಹೆದರಿಕೆಗಳು ಹುಟ್ಟು ಹೆದರಿಕೆಗಳಲ್ಲ ; ಅವು ಸಂಸರ್ಗಜನ್ಯವಾದ ಹೆದರಿಕೆಗಳು. ಆದುದರಿಂದ ಮಕ್ಕಳನ್ನು ಎಚ್ಚರಿಕೆಯಿಂದ ನೋಡಿ ಕೊಂಡರೆ ಅವರಿಗೆ ಕತ್ತಲೆ, ಕಳ್ಳರು, ಮೃಗಗಳು, ಹೊಸಬರು ಮುಂತಾದವರ ವಿಷಯ ದಲ್ಲಿರುವ ಹೆದರಿಕೆಗಳನ್ನು ತಪ್ಪಿಸಬಹುದು. ಮಗುವು ಯಾವುದಾದರೂ ಒಂದು ಚೇಷ್ಟೆಯನ್ನು ಮಾಡುತ್ತಿರುವಾಗ, ಅದನ್ನು ತಪ್ಪಿಸಲು ತಂದೆತಾಯಿಗಳು 'ಗುಮ್ಮ

ಬರುತ್ತಾನೆ' ಎಂದು ಸಾಧಾರಣವಾಗಿ ಹೆದರಿಸುವರು. ಈ ರೀತಿ ಹೆದರಿಕೆಯನ್ನು ಮಗುವಿನಲ್ಲಿ ಉಂಟುಮಾಡುವುದು ಅನುಚಿತ. ಹೀಗೆ ಹುಟ್ಟಿದ ಹೆದರಿಕೆಗಳು ಸುಪ್ತಚೇತನದಲ್ಲಿದ್ದು ದೊಡ್ಡವರಾದಮೇಲೂ ಅವರನ್ನು ಪೀಡಿಸುವುವು. ಆದುದರಿಂದ ತಾಯಿತಂದೆಗಳು ಈ ರೀತಿಯ ಹೆದರಿಕೆಗಳು ಮಕ್ಕಳಲ್ಲಿ ಹುಟ್ಟದ ಹಾಗೆ ಜಾಗರೂಕತೆಯಿಂದ ನೋಡಿಕೊಳ್ಳಬೇಕು.

ಮಕ್ಕಳು ಯಾವುದಾದರೂ ಒಂದು ತಪ್ಪು ಕೆಲಸವನ್ನು ಮಾಡಿದರೆ ತಂದೆತಾಯಿಯರು ಸಾಮಾನ್ಯವಾಗಿ ಅವರನ್ನು ಗದರಿಸಿ ಶಿಕ್ಷಿಸುವರು. ಇದರಿಂದ ಮಗುವಿಗೆ ಗದರಿಸಿ ಹೊಡೆಯುವವರಲ್ಲಿ ಒಂದು ಹೆದರಿಕೆಯುಂಟಾಗುವುದು; ಶಿಕ್ಷೆಯ ಉದ್ದೇಶ ಮಗುವು ಕೆಟ್ಟ ಕೆಲಸವನ್ನು ಮಾಡದೆ ಇರಲೆಂದು. ಆದರೆ ಹೀಗೆ ಶಿಕ್ಷಿಸುವುದರಿಂದ ಯಾರು ಶಿಕ್ಷಿಸುತ್ತಾರೆಯೋ ಅವರಲ್ಲಿ ಮಗುವಿಗೆ ಹೆದರಿಕೆಯು ಹುಟ್ಟುವುದು. ಹುಡುಗರು ಸುಳ್ಳು ಹೇಳಲು ಈ ರೀತಿಯ ಹೆದರಿಕೆ ಒಂದು ಮುಖ್ಯ ಕಾರಣ. ನಿಜವನ್ನು ಹೇಳಿದರೆ ಎಲ್ಲಿ ತಂದೆ ತಾಯಿಯರು ಕೋಪದಿಂದ ಹೊಡೆಯುವರೋ ಎಂದು ಸುಳ್ಳು ಹೇಳಿ ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಪ್ರಯತ್ನ ಮಾಡುವರು. ಈ ಸುಳ್ಳು ಹೇಳುವುದೇ ಕ್ರಮೇಣ ಒಂದು ದುರಭ್ಯಾಸವಾಗುವುದು. ಆದ್ದರಿಂದ ತಂದೆತಾಯಿಗಳು ತಮ್ಮಲ್ಲಿ ಮಕ್ಕಳಿಗೆ ಹೆದರಿಕೆಯುಂಟಾಗದ ರೀತಿಯಲ್ಲಿ ವರ್ತಿಸಬೇಕು. ಯಾವಾಗಲೂ ತಾವು ಮಕ್ಕಳ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿರಬೇಕು. ಮಕ್ಕಳಿಗೆ ಯಾವ ರೀತಿಯಾದ ಕಷ್ಟ ಅಥವಾ ಸಂಶಯಗಳುಂಟಾದರೂ ಅವುಗಳನ್ನು ಪರಿಹರಿಸಿಕೊಳ್ಳಲು ತಾಯಿತಂದೆಗಳ ಸಹಾಯವನ್ನು ಕೋರುವಷ್ಟು ಅವರಲ್ಲಿ ಸಲಿಗೆ ಮತ್ತು ಪ್ರೀತಿ ವಿಶ್ವಾಸಗಳಿರಬೇಕು. ಹೀಗೆ ಮಕ್ಕಳಿಗೆ ತಾಯಿತಂದೆಗಳಲ್ಲಿ ಸಲಿಗೆ ಪ್ರೀತಿ ವಿಶ್ವಾಸಗಳಿಲ್ಲದಿರುವುದೇ ಮಕ್ಕಳು ದುರ್ಮಾರ್ಗಕ್ಕೆ ಬೀಳಲು ಕಾರಣ.

ಮಕ್ಕಳು ಅನುಚಿತವಾದ ಕೆಲಸವನ್ನು ಮಾಡಿದರೆ ಕೂಡಲೇ ಅವರನ್ನು ಗದರಿಸಬೇಕು. ಅದು ಕೆಟ್ಟ ಕೆಲಸವೆಂದು ಅವರ ಮನಸ್ಸಿಗೆ ಹತ್ತುವಂತೆ ತಿಳಿವಳಿಕೆ ಹೇಳಬೇಕು. ಸಾಧಾರಣವಾಗಿ ಮಗುವು ಒಂದು ಕೆಟ್ಟ ಕೆಲಸ ಮಾಡಿದರೆ 'ಸಾಯಂಕಾಲ ನಿಮ್ಮ ತಂದೆಯವರು ಬರಲಿ, ಅವರಿಗೆ ಹೇಳಿ ನಿನಗೆ ತಕ್ಕ ಶಿಕ್ಷೆ ಮಾಡಿಸುತ್ತೇನೆ' ಎಂದು ತಾಯಿಯರು ಹೆದರಿಸುವುದುಂಟು. ಇದೂ ಸರಿಯಲ್ಲ. ಸಣ್ಣ ಮಗುವಾದರೆ ತಂದೆ ಬರುವಷ್ಟರಲ್ಲಿ ತಾನು ಮಾಡಿದ ತಪ್ಪನ್ನು ಮರೆತಿರುವುದು. ದೊಡ್ಡ ಮಗುವಾದರೆ ತನಗೆ ಯಾವ ಘೋರಶಿಕ್ಷೆ ಕಾದಿದೆಯೋ ಎಂದು ತಪಿಸುತ್ತಾ ತಂದೆ ಬರುವವರೆಗೂ ತನ್ನ ದೈನಂದಿನ ಕಾರ್ಯಗಳಲ್ಲಿ ನಿರುತ್ಸಾಹಿಯಾಗಿರುವುದು. ಆದುದರಿಂದ ತಪ್ಪು ಕೆಲಸ ಮಾಡಿದ ಒಡನೆಯೇ ಮಗುವಿಗೆ ಸರಿಯಾದ ಬುದ್ಧಿ ಕಲಿಸುವುದು ಉತ್ತಮ.

ಮಕ್ಕಳು ಯಾವುದಾದರೂ ತಪ್ಪು ಮಾಡಿದಾಗ ನಮ್ಮ ಕೋಪವನ್ನು ವ್ಯಕ್ತಪಡಿಸಿ ಶಿಕ್ಷಿಸುವುದು ತಪ್ಪು. ಮಗುವು ಪುನಃ ಆ ಕೆಟ್ಟ ಕೆಲಸವನ್ನು ಮಾಡದಿರಲೆಂಬುದು ಶಿಕ್ಷೆಯ ಉದ್ದೇಶವೇ ಹೊರತು ಕೋಪ ಪ್ರದರ್ಶನವಲ್ಲ.

ಮಕ್ಕಳಿಗೆ ತಮ್ಮ ಸುತ್ತಮುತ್ತಲಿನ ವಿಷಯಗಳನ್ನು ತಿಳಿಯಬೇಕೆಂಬ ಕುತೂಹಲ ಬಹುವಾಗಿರುತ್ತದೆ. ಈ ಕುತೂಹಲದಿಂದ ಅವರು ತಾಯಿತಂದೆಗಳನ್ನು ಪದೇ ಪದೇ ಪ್ರಶ್ನಿಸುವರು. ಮಕ್ಕಳ ಪ್ರಶ್ನೆಗಳನ್ನು ನಿರಾಕರಿಸದೆ, ಅವರು ಕೇಳಿದ ಸಮಯದಲ್ಲಿ ತಾಯಿತಂದೆಗಳು ತಮಗೆ ಗೊತ್ತಿರುವಷ್ಟನ್ನು ಅವರಿಗೆ ತಿಳಿಯುವ ಹಾಗೆ ಹೇಳಬೇಕು. ಆದರೆ ಇದು ಸುಲಭವಲ್ಲ; ನಮ್ಮ ಸಮಾಜದಲ್ಲಿ ತಾಯಿತಂದೆಗಳ ತಿಳಿವಳಿಕೆಯ ಮಟ್ಟವೇ ಕಡಿಮೆ. ಅಲ್ಲದೆ ಕೆಲವು ವಿಷಯಗಳನ್ನು ಕುರಿತು ಮಾತನಾಡಲು ಸಂಕೋಚ. ಆದುದರಿಂದ, ಅಜ್ಞಾನದಿಂದಲೋ ಅಥವಾ ಸಂಕೋಚದಿಂದಲೋ ಅವರು ಮಕ್ಕಳಿಗೆ ಸತ್ಯವನ್ನು ಹೇಳುವುದಕ್ಕೆ ಹಿಂಜರಿಯುವರು. ಈ ಕಾರಣಗಳಿಂದಲೇ ಉಪಾಧ್ಯಾಯರೂ ಸಹ ನಿಜಾಂಶವನ್ನು ಹೇಳುವುದಕ್ಕೆ ಹಿಂಜರಿಯುವರು. ಸತ್ಯವನ್ನು ಹೇಳಿದರೆ ಊಹೆ ಅನುಮಾನಗಳು ಹೋಗುವುವು. ಇಲ್ಲದಿದ್ದರೆ ಇದರಲ್ಲಿ ಏನೋ ಗೂಢಾರ್ಥವಿದೆಯೆಂದು ಊಹಿಸಿ, ಅವನ್ನು ತಿಳಿಯುವ ಕುತೂಹಲವು ಅತಿಯಾಗುವುದು. ಇದರಿಂದ ಮಕ್ಕಳ ವರ್ತನೆಯಲ್ಲಿ ಒಂದು ಕೆಟ್ಟ ಪರಿಣಾಮವುಂಟಾಗುವುದು.

ಸಮಾಜದಲ್ಲಿ ಒಬ್ಬ ವ್ಯಕ್ತಿ ಒಳ್ಳೆಯ ರೀತಿಯಲ್ಲಿ ವರ್ತಿಸಬೇಕಾದರೆ ತನ್ನ ಭಾವೋದ್ರೇಕಗಳನ್ನು ಹತೋಟಿಯಲ್ಲಿಟ್ಟುಕೊಂಡು ಸಮಭಾವದಿಂದಿರಬೇಕು. ಭಯ, ಕೋಪ ಮೊದಲಾದ ಭಾವೋದ್ರೇಕಗಳನ್ನು ಹತೋಟಿಯಲ್ಲಿಡದೆ ಅವುಗಳ ಅಧೀನನಾದರೆ ಮನುಷ್ಯನು ಪಶುಗಳಿಗೆ ಸಮಾನನಾಗುವನು. ಮತ್ತೆ ಈ ಭಾವಗಳು ಯಾವನಲ್ಲಿ ಉದ್ರಿಕ್ತವಾಗುವುದಿಲ್ಲವೋ ಅವನು ಜಡಸ್ವಭಾವವುಳ್ಳವನು. ಸಮಾಜದಲ್ಲಿ ತಾನೂ ಒಬ್ಬ ವ್ಯಕ್ತಿಯೆನಿಸಿಕೊಳ್ಳಲು ಮನುಷ್ಯನಿಗೆ ಭಾವಗಳ ಪ್ರವೃತ್ತಿಯೂ ಇರಬೇಕು. ಅವುಗಳನ್ನು ಸಂಯಮ ಮಾಡುವ ಶಕ್ತಿಯೂ ಇರಬೇಕು. ಮನಸ್ಥೈರ್ಯ ಹುಟ್ಟಬೇಕಾದರೆ ನಾವು ಮಕ್ಕಳನ್ನು ಚಿಕ್ಕಂದಿನಿಂದಲೂ ಸರಿಯಾದ ರೀತಿಯಲ್ಲಿ ಸಾಕಬೇಕು. ಅವರಲ್ಲಿ ಅನಾವಶ್ಯಕ ಹೆದರಿಕೆಗಳುಂಟಾಗಲು ಅವಕಾಶಕೊಡಬಾರದು. ಯಾವಾಗಲೂ ಮಕ್ಕಳನ್ನು ನಮ್ಮ ಅಧೀನದಲ್ಲೇ ಇಟ್ಟುಕೊಂಡು ಅವರ ವ್ಯಕ್ತಿತ್ವವನ್ನು ಹಾಳುಮಾಡಬಾರದು. ಅವರಲ್ಲಿ ಮುಂಗೋಪವಿಲ್ಲದ ಹಾಗೆ ನೋಡಿಕೊಳ್ಳಬೇಕು. ತಮ್ಮ ಕೆಲಸಗಳನ್ನು ಹರ್ಷದಿಂದಲೂ ಉತ್ಸಾಹದಿಂದಲೂ ಮಾಡುವ ಮನೋವೃತ್ತಿಯನ್ನು ಅವರಲ್ಲಿ ಅಭಿವೃದ್ಧಿಗೊಳಿಸಬೇಕು. ಅವರನ್ನು ಪದೇ ಪದೇ ಬಯ್ದು ಅವರಿಗೆ ನಮ್ಮಲ್ಲಿ ಭಯ, ಕೋಪ, ದ್ವೇಷ ಮುಂತಾದ ಭಾವೋದ್ರೇಕಗಳುಂಟಾಗದಂತೆ ನೋಡಿಕೊಳ್ಳಬೇಕು. ಅವರನ್ನು ಚಿಕ್ಕವರೆಂದು ಉದಾಸೀನಮಾಡದೆ ಅವರು ನಮ್ಮ ಸಮಾನರೆಂಬ ಭಾವನೆಯಿಟ್ಟು ಅವರ ಬುದ್ಧಿ ವಿವೇಕಗಳನ್ನು ಅಭಿವೃದ್ಧಿಗೊಳಿಸಬೇಕು. ಚಿಕ್ಕಂದಿನಿಂದಲೂ ಜಾಗರೂಕತೆಯಿಂದ ಮಕ್ಕಳನ್ನು ಬೆಳೆಸಿದರೆ ಅವರು ದೊಡ್ಡವರಾದ ಮೇಲೆ ಚಿತ್ತಸ್ಥೈರ್ಯ ಆತ್ಮಸಂಯಮಾದಿ ಗುಣಗಳುಳ್ಳ ವ್ಯಕ್ತಿಗಳಾಗಿ ಸಮಾಜದ ಏಳಿಗೆಗೆ ನೆರವಾಗುವರು.

— ಬಿ. ಕುಪ್ಪುಸ್ವಾಮಿ

# ಜಾಗರದಾಚೆ ಜಾಗರ

ಮಾನವನ ದೇಹ ಇಂದ್ರಿಯ ಕರಣ, ಅರಿವು ಇರವನ್ನು ಆವರಿಸಿದೆ ಕತ್ತಲೆ. ಈ ಕತ್ತಲೆಯೇ ಅಜ್ಞಾನ, ಅವಿದ್ಯೆ. ತನ್ನ ನಿಜರೂಪವನ್ನು, ತನ್ನ ನಿಜ ನಿರಾಳದಿರವನ್ನು ಮುಸುಕಿರುವ ಈ ಅಜ್ಞಾನ ತಿಮಿರದಾಚೆ ಬೆಳಗಿನ ಸೀಮೆ, 'ಮಾತು ಮನಂಗಳಿಂದತ್ತತ್ತ ಮೀರಿದ, ಸಾತಿಶಯದ ನಿರುಪಾಧಿಕ ನಿರ್ಮಲ'ವಾದ ಪರಂಜ್ಯೋತಿಯ ಸಾಮ್ರಾಜ್ಯ ಬೆಳಗುತ್ತಿದೆ ಎಂದು ಬಲ್ಲವರು ಹೇಳುತ್ತಾರೆ. ವಿಶ್ವಬೀಜವಾಗಿ ವಿಶ್ವವ್ಯಾಪಿಯಾಗಿ, ವಿಶ್ವಮುಖವಾಗಿ ವಿಶ್ವಗಂಭೀರವಾಗಿ ವಿಶ್ವೋನ್ನತವಾಗಿ ವಿಶ್ವಾತೀತವಾಗಿ, ವಿಶ್ವಲೀಲೆಯ ವಿಶ್ವಾನಂದದ ಸಾರಸಾಗರವಾಗಿ, ವಿಶ್ವಂಭರವಾಗಿರುವ ಮಹಾಬೆಳಗಿನಲ್ಲಿ ಮುಳುಗಿ ಬೆಳಗಾಗಿ ಬಾಳುವ ಮಹಾಂತರು ತಮ್ಮ ಮಹಾನುಭೂತಿಯ ಪರಮ ರಹಸ್ಯವನ್ನು ಕತ್ತಲೆಯ ಕೋಟೆಗೆ ಸಾರಿ ಸಾರಿ ಹೇಳಿದ್ದಾರೆ. ಆದರೆ ಅಜ್ಞಾನದ ಮಾಯಾನಿದ್ರೆಯಲ್ಲಿ ಮರೆದೊರಗಿರುವ ಮಾನವಕುಲಕ್ಕೆ ಕೇಳುವರೆ ಕಿವಿಯಿಲ್ಲ; ನೋಡುವರೆ ಕಣ್ಣಿಲ್ಲ.

> ನಾನೆಂಬಹಂಕಾರ ತಲೆದೋರಿದಲ್ಲಿ ಅಟಮಟ
> ಕುಟಿಲ ಕುಹಕವೆಂಬ ಬಿರುಗಾಳಿ ಹುಟ್ಟಿತ್ತು.
> ಆ ಬಿರುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತು
> ಜ್ಞಾನಜ್ಯೋತಿ ಕೆಡಲೊಡನೆ ನಾ ಬಲ್ಲೆ ಬಲ್ಲಿದರೆಂಬ
> ಅರುಹಿರಿಯರೆಲ್ಲರು ತಾಮಸಕ್ಕೊಳಗಾಗಿ ಸೀಮೆದಪ್ಪಿ
> ಕೆಟ್ಟರು ಕಾಣಾ ಗೂಹೇಶ್ವರಾ[1].

ಮಾನವನಿರುವುದು ಮಾಯೆಯ ಪಂಜರದೊಳಗೆ, ಅಹಂಭಾವದ ಅಜ್ಞಾನ ಸಮಾಧಿಯಲ್ಲಿ. ಇಲ್ಲಿ ಕೇಳುವುದು ಕಾಣುವುದು ಲೋಕ ಲೌಕಿಕವಷ್ಟೆ.

ನಾನೆಂಬುದೇನು? ಅಜ್ಞಾನವೆಂದರೇನು? ನಾನು ಮರೆದೊರಗಿರುವ ಮಾಯಾನಿದ್ರೆ, ಸಮಾಧಿ—ಅದೆಂಥದು? ನನಗೆ ಕಣ್ಣು ಕಿವಿ ಇದ್ದು 'ನೋಡುವರೆ ಕಣ್ಣಿಲ್ಲ, ಕೇಳುವರೆ ಕಿವಿ ಇಲ್ಲ'—ಎಂದು ನೀವು ಹೇಳುವುದೇಕೆ? ಬಲ್ಲವರು, ಮಹಾಂತರು—ಅವರೂ ನಮ್ಮಂತೆ ಇಲ್ಲವೆ? ಬೆಳಗಾಗಿ ಬಾಳುವುದು—ಇದನ್ನಂತೂ ನಾನು ಎಲ್ಲೆಲ್ಲಿಯೂ ಕಂಡಿಲ್ಲ. ಮೋಸ ಮಾಡುವ ಈ ಹೊಸ ಯುಕ್ತಿಯನ್ನು ಎಷ್ಟು ತಪಮಾಡಿ ಪಡೆದಿರಿ?—ನೀವು ಹೀಗೆ ಕೇಳುವುದು, ಹೇಳುವುದು ಯೋಗ್ಯ, ಸಹಜ, ಸ್ವಾಭಾವಿಕ.

ಯಾರು ನಾನು?—ಎಂಬ ಪ್ರಶ್ನೆಗೆ ಲೌಕಿಕ ದೃಷ್ಟಿಯಿಂದ ಉತ್ತರ ಕೊಡುವ ಕಾರಣವೇ ಇಲ್ಲ. ಆ ಪ್ರಶ್ನೆಯ ಉತ್ತರವನ್ನೇ ಮಾನವಕುಲವೆಲ್ಲ ಅಪರೋಕ್ಷವಾಗಿ ಅನುಭವಿಸುತ್ತಿದೆ. ಹಾಗಾದರೆ ನೀನಾರು ಎಂದು ಕೇಳುವಿರಾ? ನಾನು ಮೊದಲು

---

[1] ಲಿಂಗಲೀಲಾವಿಲಾಸಚಾರಿತ್ರ ಪು. ೬೧, ವ. ೧೦.

ಕಲ್ಲಪ್ಪ. ಹೆಸರೇಕೋ ಚೆನ್ನಾಗಿಲ್ಲವೆಂದು ಹೆಸರು ಬದಲು ಮಾಡಿದೆ; ಈಗ ನಾನು ಕಲಾಕಾಂತ. ನಾನು ವೀರಶೈವ ಹತ್ತು ವರ್ಷಗಳ ಹಿಂದೆ. ಏನೋ ಸುದೈವ—ಅಥವಾ ದುರ್ದೈವ, 'ಜೇನ'ಳಲ್ಲಿ ಮನನಟ್ಟು ತಿರುಗಿ ಬರಲೇ ಇಲ್ಲ. ಲಗ್ನವಾಯಿತು. ಅದರೊಡನೆ ಭಿನ್ನವಾಯಿತು ನನ್ನ ವರ್ಣ. ಹೆಸರು ಬದಲಾದರೂ ನಾನು ನಾನೇ. ಮತ ಭಿನ್ನ ವಾಗಿದ್ದರೂ ನನಗೆ ನಾನು ಭಿನ್ನವಾಗಿಲ್ಲ. ಉದ್ಯೋಗ? ನಾವು ಒಕ್ಕಲ ಮಕ್ಕಳು. ಸಣ್ಣವನಿದ್ದಾಗ ನಾನು ಸಾಲೆಗೆ ಹೋಗುತ್ತಿದ್ದರೂ ಮೇಲಿನ ಕೆಲಸ ಮಾಡುತ್ತಾ ಇದ್ದೆ. ಮಾಡುವುದೆಲ್ಲಾ ಮಾಡಿ 'ಮ್ಯಾಟ್ರಿಕ್ ಆದೆ.' ಕಾಲೇಜದ ಕಟ್ಟೆ ಹತ್ತಿದೆ. ಆದರೆ ಕಾಲೇಜ ಮಾತ್ರ ನನಗೆ ಎಷ್ಟೂ ಹತ್ತಲಿಲ್ಲ. ಕಾರಕೂನ ಆದೆ. ಏನೋ ಆರೋಪ ಹೊರಿಸಿ ನೌಕರಿ ತೆಗದರು. ಈಗ ವ್ಯಾಪಾರ ಧಂದೆ. ಒಕ್ಕಲುತನ ನೌಕರಿ ವ್ಯಾಪಾರ ಮಾಡಿದರೂ, ಸಣ್ಣವನೇ ದೊಡ್ಡವನಾಗಿದ್ದರೂ, ಕಲಿತು ಮೂಢನಾಗಿದ್ದರೂ ನಾನು ಮಾತ್ರ ನಾನೇ ಆಗಿ ಉಳಿದಿದ್ದೇನೆ—ದೇವರ ಕೃಪೆಯಿಂದ.

ಮತ್ತೆ, ನೀನಾರು? ಒಳ್ಳೆ ಪ್ರಶ್ನೆ ! ಕಾಣುವುದಿಲ್ಲವೇ ಮೂರುವರೆ ಮೊಳ ದೇಹ, ಕೈಕಾಲು, ಕಣ್ಣು ಮೂಗು? ಉಸುರಾಡಿಸುತ್ತಿದ್ದೇನೆ; ನನಗೂ ಮನಸ್ಸು, ಬುದ್ಧಿಯಿದೆ. ಇಲ್ಲವಾದರೆ ನಿಮ್ಮ ಪ್ರಶ್ನೆ ನನಗೆ ಹೇಗೆ ತಿಳಿಯಬೇಕು? ನಿಮಗೆ ಉತ್ತರ ಕೊಡುತ್ತಿರುವ ನಾನು ನಾನೇ. ಶೀತ ಉಷ್ಣ, ಸುಖ ದುಃಖ, ಕಾಮ ಕ್ರೋಧ, ಮಾನ ಅಪಮಾನ, ವಾರ್ತೆ ಕೀರ್ತಿ, ರೋಗ ರುಜಿನ, ಸಂಪತ್ತು ಬಡತನ, ವಿದ್ಯೆ ಮೂಢತನ—ಇವನ್ನು ಇನ್ನೂ ಹಲವನ್ನು ಕಂಡು ಉಂಡು ಅನುಭವಿಸುವ ಮೂರ್ತಿ ನಾನೇ. ಇದೆಲ್ಲ ನಿಮಗೆ ಕಾಣಲಿಕ್ಕಿಲ್ಲ. ಅದು ನನಗೇ ಗೊತ್ತು. ನೀವೂ ಹೀಗೆಯೆ ಅನುಭವಿಸುತ್ತಿರಬೇಕು. ಅದು ನಿಮಗೇ ಗೊತ್ತು.

ಮತ್ತೆ ನೀನಾರು? ವಿಚಿತ್ರ ಪ್ರಶ್ನೆ! ಆದರೂ ನನಗೆ ತಿಳಿದ ಮಟ್ಟಿಗೆ ಹೇಳುವದ ನ್ನೆಲ್ಲ ಹೇಳಿಬಿಡುತ್ತೇನೆ: ಇದು ನನ್ನ ಹೊಸ ಮನೆ, ನಮ್ಮ ಹಿರಿಯರಿಂದ ಬಂದ ಮನೆ–ಅಕೋ ಆಚೆ ಕಡೆಯದು, ಸಾವಕಾರ ನಿಂಗಪ್ಪ ಮೋಸಮಾಡಿ ಬರೆಸಿಕೊಂಡು ಎತ್ತಿಹಾಕಿದ. ನಾನು ಹೋದರೂ ಬಿಡುತ್ತಿದ್ದಿಲ್ಲ, ಮಾನ–ಮರ್ಯಾದೆಗೆ ಹೆದರಿದೆ. ಕೈಬಿಟ್ಟಿತು ನಮ್ಮ ಹಿರಿಯರ ಮನೆ. ಮನೆ ನನ್ನ ಕೈಬಿಟ್ಟರೂ ಅದರ ಕೈಬಿಟ್ಟಿಲ್ಲ ನಾನು. ಇದೋ ಇವಳೇ ನನ್ನ ಹೆಂಡತಿ—ಅಂದರೆ ನನ್ನ ಅರ್ಧಾಂಗಿ. ಇವರೇ ನನ್ನ ಮಕ್ಕಳು—ಅಂದರೆ ನನ್ನ ಗಿರ್ಧಾಂಗಗಳು. ಅಕೋ ಅಲ್ಲಿ ಕಾಣುವ ಕೆರೆಯ ಕೆಳಗಿನದೇ ನನ್ನ ಹೊಲ. ಹಣ ಸ್ವಲ್ಪ ಗಳಿಸಿದ್ದೇನೆ. ಬಂಧುಬಳಗದವರು ಇಷ್ಟರು ಮಿತ್ರರು ಸಾಕಷ್ಟು ಇದ್ದಾರೆ ಸನಗೆ. ನಿಮ್ಮ 'ನೀನಾರು' ಪ್ರಶ್ನೆಗೆ 'ನನ್ನ, ನನಗೆ' ಎಂಬ ಉತ್ತರ ಸರಿಯಾಗಿಲ್ಲವೆಂದು ತಿಳಿಯಬೇಡಿ. ಮನೆ–ಮಾರು, ಹೆಂಡತಿ–ಮಕ್ಕಳು ಆಪ್ತೇಷ್ಟರು—ಮುಂತಾದುವೆಲ್ಲ ನಾನೆಂಬ ವೃಕ್ಷ ವಿವಿಧರೂಪವಾಗಿ, ವಿಲಕ್ಷಣವಾಗಿ ಪಸರಿಸಿರುವ ನನ್ನ ಶಾಖೆಗಳೇ. ಇದರಂತೆ ನನ್ನ ದೇಶಭಾಷೆ ಜನಾಂಗ. ನಾನು ಇಂದ್ರಿಯಮುಖವಾಗಿ ಮಾಡುತ್ತಿರುವ, ಅನುಭವಿಸುತ್ತಿರುವ ಪ್ರಪಂಚವೆಲ್ಲ ನನ್ನ ಶಾಖೆ ಉಪಶಾಖೆಗಳೆ.

ಇವಕ್ಕೆಲ್ಲ ಮೂಲ ಬೊಡ್ಡೆಯಂತಿರುವ ನನ್ನ ಪ್ರಾಣರಸ ಈ ಶಾಖೋಪಶಾಖೆಗಳಲ್ಲಿ, ಎಲೆ ಹೂ ಕಾಯಿ ಹಣ್ಣುಗಳಲ್ಲಿ ಹರಿದಿದೆ. ಎಲೆಗೆ ಧಕ್ಕೆಯಾದರೆ ಮರಕ್ಕೆ ನೋವು; ಟೊಂಗೆ ಟೊಂಗೆ ಪಲ್ಲವಿಸಿ, ಹೂತು ಕಾತು ಹಣ್ಣಾದರೆ ಮರಕ್ಕೆ ಆನಂದ. ಹೆಂಡತಿಗೆ ತಲೆನೋವಾದರೆ, ನನಗೆ ಮೊದಲು ಅಮೃತಾಂಜನ ಬೇಕು. ಹೊಲದ ಬೆಳೆ ಸೊಂಪಾಗಿದ್ದರೆ ನಾನೇ ಹೊಗರೇರಿ ಹೊಡೆಯಾಗಿ ನಿಂತಂತೆ. 'ಎಲ್ಲಿ ನೋಡಿದಡಲ್ಲಿ ನೀನೆ ದೇವಾ'—ಎಂದು ನೀವು ಹೇಳಿದರೆ, ನಾನು ಕಾಣುತ್ತಿರುವುದು 'ಎಲ್ಲಿ ನೋಡಿದಡಲ್ಲಿ ನಾನೆ ದೇವ.' ನಿಮಗೆ ಬೇಕಾದರೆ ಈ ದೇವನ ಚಿತ್ರವನ್ನು ಹೀಗೆ ರೂಪಿಸಿಕೊಳ್ಳಿ: ನಿಮಗೆ ಕಾಣದ ನನ್ನಬುದ್ಧಿ ಭಾವ ಸುಖದುಃಖ ಮುಂತಾದ ನಾನು ನನ್ನ ಅಂತರಂಗ; ನಿಮಗೆ ಕಾಣುತ್ತಿರುವ ನನ್ನ ದೇಹ ಕರ್ಮ—ಜ್ಞಾನೇಂದ್ರಿಯಾದಿ ನಾನು ನನ್ನ ಬಹಿರಂಗ; ಈ ನನಗೆ ಹೊರಗಾಗಿ ನಿಮಗೆ ತೋರುತ್ತಿರುವ ಹೆಂಡತಿ ಮಕ್ಕಳು, ಮನೆಮಾರು ಮುಂತಾದ ನಾನು ಸರ್ವಾಂಗ. ಈ ಅಂತರಂಗ ಬಹಿರಂಗ ಸರ್ವಾಂಗದ ಸಂಘಾತವೆ ಪೂರ್ಣ ನಾನು. ನಿಮ್ಮ ಕಥೆಯಾದರೂ ಇಷ್ಟೇ ಇರಬಹುದಲ್ಲವೆ?

ಅರಸು–ನಾನು, ಮಂತ್ರಿ–ನಾನು, ಅಧಿಕಾರಿ–ನಾನು, ನೌಕರ–ನಾನು, ವ್ಯಾಪಾರಿ–ನಾನು, ಒಕ್ಕಲಿಗ–ನಾನು, ಶ್ರೀಮಂತ–ನಾನು, ಬಡವ–ನಾನು, ಕವಿ–ನಾನು, ಭಕ್ತ–ನಾನು, ಬ್ರಾಹ್ಮಣ–ನಾನು, ಬೌದ್ಧ–ನಾನು, ವಿಜ್ಞಾನಿ–ನಾನು, ತತ್ವಜ್ಞಾನಿ–ನಾನು, ಹೆಣ್ಣು–ನಾನು, ಗಂಡು–ನಾನು........ಎಂಬೀ ನಾನುಗಳು ಕೋಟಿರೂಪವಾಗಿ ತೋರುತ್ತಿದ್ದರೂ, ವರ್ತಿಸುತ್ತಿದ್ದರೂ ಚೌಕಟ್ಟು ಮಾತ್ರ ಒಂದೇ—ಅದೇ ಅಹಂಭಾವದ ಚೌಕಟ್ಟು. ಒಂದರ್ಥದಲ್ಲಿ ಹೇಳುವುದಾದರೆ 'ದೇವನೊಬ್ಬ, ನಾಮ ಹಲವು.'

ಅಹಂಭಾವ, ಅಹಂಕಾರ, ಹಮ್ಮು ಎಂದು ಹೇಳಿಸಿಕೊಳ್ಳುವ ಈ ನಾನಿನ ಮೂಲಾಧಾರ, ಜನ್ಮಭೂಮಿಯೆ ಆತ್ಮ. ಈ ಆತ್ಮನ ಚಿತ್–ಚೈತನ್ಯ (Conscious Energy), ಅಂದರೆ ಅರಿವಿನ ಚೈತನ್ಯದಿಂದಲೇ ಅಹಂಭಾವಕ್ಕೆ ಅಹಂಕರಿಸುವ ಗುಣವಿದೆ ಬುದ್ಧಿ ವಿಚಾರ ಮಾಡುತ್ತದೆ; ಮನ ಸಂಕಲ್ಪವಿಕಲ್ಪಗಳಲ್ಲಿ ಸಂಚಲಿಸುತ್ತದೆ. ನೋಡುವ ಕಣ್ಣು ಕೇಳುವ ಕಿವಿಗೆ ಅರಿವಿನ ಚೈತನ್ಯ ಅವಶ್ಯ. ನುಡಿವ ನಾಲಗೆ ಹಿಡಿವ ಕೈಗೂ ಈ ಚಿಚ್ಚೈತನ್ಯ ಅತ್ಯಗತ್ಯ. ಕರ್ಮೇಂದ್ರಿಯಗಳ ವ್ಯಾಪಾರ ಕ್ರಿಯಾಚೈತನ್ಯವೆಂದು ತೋರಿದರೂ, ಈ ಕ್ರಿಯೆಯಲ್ಲಿ ಅರಿವು ಸದಾ ಸನ್ನಿಹಿತ. ಕ್ರಿಯಾಶಕ್ತಿ ನಿಜವಾಗಿ ಜ್ಞಾನಶಕ್ತಿಯ ಸಂತತಿ. ಆತ್ಮನ ಈ ಚಿತ್‌ಚೈತನ್ಯದ ಮಂದಪ್ರಕಾಶದಲ್ಲಿಯೆ ನಡೆದಿದೆ ಮಾನವ ಜೀವನದ ತುದಿ ಮೊದಲಿಲ್ಲದ ನಾಟಕ. ನಿತ್ಯನೂತನವಾದ, ನಿತ್ಯ ರಮ್ಯವಾದ ಈ ನಾಟಕದ ಮೂಲಸೂತ್ರವಾದ ಆತ್ಮರುಗಳ ಸ್ವರೂಪವೇನು? ಸಾವಧಾನ! ಸ್ವಲ್ಪ ಸಾವಕಾಶ! ಆತ್ಮರು ಅಂದರೆ ಅನೇಕಾತ್ಮರು ಎಂದರ್ಥ; ಅನ್ಯೋನ್ಯ ಭಿನ್ನವಾಗಿರುವ ಆತ್ಮರೆಂದೂ ಅರ್ಥ. ಅವರೇ ಜೀವಾತ್ಮರು. ಅವರನ್ನೇ ನಾವು ಸಾಮಾನ್ಯವಾಗಿ

ಮಾನವ, ಮನುಷ್ಯರೆಂದು ಕರೆವುದು. ಆದರೆ ಈ ಆತ್ಮರುಗಳ ಸಂಖ್ಯೆ 'ಅಣುಕೋಟಿ.'[1] ಅಂದರೆ ಮಾನವಕೋಟಿಯೊಂದಕ್ಕೇ 'ಆತ್ಮ'ವೆಂದು ತಿಳಿದು ಕೊಂಡಿದ್ದರೆ ಅದು ತಪ್ಪು.

ಜೀವಾತ್ಮರು ಹಲವರಾಗಿ ತೋರುವುದು ಅಜ್ಞಾನದ ಅರೆಗತ್ತಲೆಯಲ್ಲಿ, ಮಾಯೆ ನೆಯ್ದಿರುವ ದ್ವೈತಜಾಲದಲ್ಲಿ. ಆಕಾಶದಂತೆ ವಿಭುವಾಗಿರುವ ಆತ್ಮ ಅ–ಪರಿಚ್ಛಿನ್ನ, ಅ–ಖಂಡ. ಪರಿಚ್ಛಿನ್ನವಾಗಿ ಹಲವಾಗಿ ಕಂಡರೆ ಹಾಗೆ ಕಾಣುವುದು ದೋಷದೃಷ್ಟಿ— ಅದೇ ಮಿಥ್ಯಾದೃಷ್ಟಿ, ಭಿನ್ನದೃಷ್ಟಿ. ಮಠದ ಆಕಾಶಕ್ಕೆ ಮಠದ ಆಕಾರ, ಘಟದ ಆಕಾಶಕ್ಕೆ ಘಟದ ಆಕಾರ. ಚೆಂಡಿನಲ್ಲಿರುವ ಆಕಾಶ ದುಂಡಗಿದ್ದರೆ, ಪೆಟ್ಟಿಗೆಯ ಆಕಾಶ ತಾನು ಚೌಕು ಎಂದು ಹೇಳುತ್ತದೆ. ಹೀಗಲ್ಲ, ಆಕಾಶಕ್ಕೆ ಆಕಾರವೇ ಇಲ್ಲವೆಂದು ಹೇಳಿದರೆ ನಮ್ಮ ಹುಡುಗ ಸಿಟ್ಟಿಗೇಳುತ್ತಾನೆ. ಕೊಪ್ಪರಿಗೆ ಚೌಕು ದುಂಡಗೆ, ಸೇರು ಚಟಾಕು ಸೊಲಗೆಯಾಕಾರ ಪ್ರತ್ಯಕ್ಷ ಕಣ್ಣಿಗೆ ಕಾಣುತ್ತಿರುವಾಗ, ಅಲ್ಲಲ್ಲಿ ಬೇರೆ ಬೇರೆ ಆಕಾರ ಸ್ವತಃ ಸಿದ್ಧವಾಗಿರುವಾಗ, ಮಠ ಗಡಿಗೆ ಸೇರು ಪಡಿ ಹರವಿ ಹಂಡೆ—ಎಲ್ಲಾ ಒಂದೇ, ನಿರಾಕಾರ ಎಂದು ಹೇಳಿದರೆ ಧೃತರಾಷ್ಟ್ರರು ಒಪ್ಪಬೇಕು, ಅಷ್ಟೇ!—ಎಂದು ನನಗೆ ಬುದ್ಧಿ ಹೇಳಿ ನಗುತ್ತಾನೆ. ನನ್ನ ಕಣ್ಣಿನಲ್ಲಿ ನನಗೆ ವಿಶ್ವಾಸ ವಿದೆ ನಿಜ; ಆದರೆ ನಮ್ಮ ಹುಡುಗನಿಗೆ ನನಗಿಂತ ನೂರು ಪಟ್ಟು ಹೆಚ್ಚು ತೀಕ್ಷ್ಣ ವಿಶ್ವಾಸವಿದೆ ತನ್ನ ಕಣ್ಣಲ್ಲಿ.

ಇಲ್ಲಿ ತಪ್ಪು ಯಾರದು? ನಿಜವಾಗಿ ನೋಡಿದರೆ ಇಬ್ಬರದೂ ತಪ್ಪಲ್ಲ. ತನಗೆ ಕಂಡ ಪ್ರತ್ಯಕ್ಷ ಅನುಭವ ನಮ್ಮ ಹುಡುಗ ಹೇಳುತ್ತಾನೆ; ನನ್ನದು ನಾನು ಹೇಳುತ್ತೇನೆ. ಈಗ ಹಗಲು ಎಂದು ನಾನು ಹೇಳಿದರೆ, ಈಗ ರಾತ್ರಿ ಎಂದು ಪ್ರತಿಭಟಿಸುತ್ತಾನೆ ಅಮೇರಿಕಾದ ವಿಲ್ಸನ್. ಗೋಲವಾದ ಭೂಮಿಯ ಮೇಲೆ ನಾನು ತಲೆ ಮೇಲಾಗಿ ನಡೆವುದು ನಿಜವಿದ್ದರೆ, ವಿಲ್ಸನ್ ತಲೆ ಕೆಳಗಾಗಿ ನಡೆವುದು ಅಷ್ಟೇ ನಿಜ. ಆದರೆ ಆತ ಒಪ್ಪಬಹುದೆ? ತನ್ನ ಅನುಭವವಲ್ಲದುದನ್ನು ಆತನೇಕೆ ಒಪ್ಪಬೇಕು? ನಾಲ್ಕು ಮೂರು, ಏಳು ಎಂದು ನಾನು ಹೇಳುತ್ತೇನೆ. ಈ ಏಳು ಅಂದರೆ ಒಂದು ಎಂದು ಹೇಳುತ್ತಾನೆ ನ್ಯೂಟನ್.—ಹೀಗೆ ಪರಸ್ಪರ ವಿರೋಧವೆನಿಸುವ ಮತ, ಅಭಿಪ್ರಾಯಗಳಿಗೆ ಕಾರಣ ಅವರವರ ಅನುಭವ. ಇಂಥ ಅಭಿಪ್ರಾಯಗಳಲ್ಲಿ ಅದು ತಪ್ಪು ಇದು ಒಪ್ಪು ಎಂದು ಅಂತಿಮ ನಿರ್ಧಾರಕ್ಕೆ ಬರುವದಕ್ಕಿಂತ ಆಯಾ ಅಭಿಪ್ರಾಯಗಳ ಹಿಂದಿರುವ ಅನುಭವ ಗಳನ್ನು ನಿರ್ವಿಕಾರ ಬುದ್ಧಿಯಿಂದ ಪರಿತಃ ಈಕ್ಷಿಸಬೇಕು, ನಿರ್ಮಲ ಭಾವದಿಂದ ತಿಳಿದು ನೋಡಬೇಕು. ನನಗೆ ಅದು ಮೀರಿದರೆ ಬಲ್ಲವರನ್ನು ಕೇಳಿ, ತಿಳಿದುಕೊಳ್ಳಬೇಕು.

---

1 ಶೂನ್ಯ ಸಂಪಾದನೆ ಪು. ೪, ಪ್ರ.

ಈ ಮಾತು 'ಅನಂತಕೋಟಿ ಬ್ರಹ್ಮಾಂಡಂಗಳಿ'ಗೆ ಅನ್ವಯವಾಗುತ್ತದೆ ಎಂಬುದನ್ನು ಲಕ್ಷ್ಯದಲ್ಲಿಟ್ಟಿರಬೇಕು.

ನನ್ನ ಆತ್ಮ ಮತ್ತೂ ನಿಮ್ಮ ಆತ್ಮ. ಅಂದರೆ ನನ್ನ ನಿಮ್ಮಲ್ಲಿರುವ ಒಂದು ಆತ್ಮ ಅದು ಅ–ಖಂಡಿತ, ಪರಿಪೂರ್ಣ. ಅದು ಚಿಚ್ಛೈತನ್ಯಾತ್ಮಕವಾದ ಚಿದಾಕಾಶ, ಅಂದರೆ ಅರಿವ ಬಯಲು ಅಥವಾ ಚಿದ್‌ಬಯಲು. ನನ್ನಲ್ಲಿದ್ದು ಅ–ಪರಿಚ್ಛಿನ್ನವಾಗಿ, ಅ–ಖಂಡಿತವಾಗಿ, ನಿಮ್ಮಲ್ಲಿಯೂ ಅಂತೆ ಆಗಿದ್ದು, 'ಒಂದೆ ಆಗಿದ್ದು' ಈ ಆತ್ಮ ಅಂದರೆ ಈ ಚಿದ್ ಬಯಲು ತನಗೆ ತಾನು ಕಾಣದಿರುವುದೇಕೆ? ನಿಮ್ಮ ಅರಿವು ನನಗೆ ಕಾಣಲಿಲ್ಲ; ನನ್ನ ಅರಿವು ನಿಮಗೆ ಕಂಡಂತೆ ನನಗೆ ತೋರುವುದಿಲ್ಲ. ಅಲ್ಲವೇ? ಅಷ್ಟೇಕೆ? ನಿಮ್ಮ ವಿಚಾರದ ಗಾಡಿ ನನಗೆ ಕತ್ತಲೆ. ನನ್ನ ವಿಚಾರದ ಲಹರಿಗಳು ನಿಮಗೇನೋ! ಅದು ನನಗೆ ಗೊತ್ತಿಲ್ಲ....ನಿಜ, ನೀವು ಹೇಳುತ್ತಿರುವುದು ದಿಟ, ದಿಟ. ಆದರೆ ಒಂದು ಪ್ರಶ್ನೆ. ನನ್ನ ಅರಿವನ್ನು ನೋಡಬಯಸುವ ನಿಮ್ಮ ಅರಿವು ಕುಳಿತಿರುವುದೆಲ್ಲಿ? ಈ ಮೊದಲು ನಾವು ನೋಡಿರುವ ಜೀವಾತ್ಮನ 'ಅಹಂಭಾವ'ದ ಚೌಕಟ್ಟಿನಲ್ಲಿ ಅಲ್ಲವೆ? ಈ ಚೌಕಟ್ಟನ್ನು ಕೊರೆದು ಅಲ್ಲಿ ನಿಮ್ಮನ್ನು ಹೊಂದಿಕೆಮಾಡಿ ಕುಳ್ಳಿರಿಸಿರುವ ಶಕ್ತಿ ಪ್ರಕೃತಿ, ಮಾಯೆ. ಈ ಶಕ್ತಿಯನ್ನು ಮೀರುವ ಶಕ್ತಿ ನಿಮಗಿಲ್ಲ, ನನಗಿಲ್ಲ. ಅದೇಕೆ? ಸುರ ನರ ಉರಗ ದಾನವ ಮಾನವ ಮನು ಮುನಿಗಳಿಗಿಲ್ಲ. ಅರಿವಿನಿಂದ ನಾನನ್ನು, ನನ್ನಿಂದ ಮಾಯಾಪ್ರಕೃತಿಯನ್ನು ಕಿತ್ತೊಗೆವುದು ಅಸದಳ, ಅಸಾಧ್ಯವಲ್ಲದಿದ್ದರೂ ಸುದುಸ್ಸಾಧ್ಯ. ಈ ಮಾತಿಗೆ ನಿಮಗೆ ಪ್ರತ್ಯಕ್ಷ ಪ್ರಮಾಣ ಬೇಕಿದ್ದರೆ ನಮ್ಮ ಮನೆಗೆ ಬನ್ನಿ, ತೋರಿಸುತ್ತೇನೆ.

ನಾನು ಗಾಢವಾಗಿ ನಿದ್ರಿಸುತ್ತಿದ್ದೇನೆ. ನನ್ನ ಬದಿ ನೀವು ಕುಳಿತು: 'ನೀನು ಕಲ್ಲಪ್ಪ—ಅಲ್ಲ, ಕಲಾಕಾಂತ. ನಿನ್ನ ಹೆಂಡತಿ ಜೇನ್. ನಿನ್ನ ಹೊಲ ಮನೆ ಇವು....' ಎಂದು ಮುಂತಾಗಿ ನನ್ನ ಸಂಗತಿ ನನಗೇ ಹೇಳಿದರೂ ಅದನ್ನು ನಾನು ನಂಬಬಹುದೇ? ಮಲಗುವಾಗ ನಾನೂ ಕಿವಿ ತೆರೆದಿಟ್ಟೇ ಮಲಗಿಕೊಳ್ಳುತ್ತೇನೆ. ಆದರೂ ನಿಮ್ಮ ಮಾತು ನನಗೆ ಕೇಳಬಹುದೆ? ನಿದ್ರೆಯ ನನ್ನ ಈ ಅರಿವಿನ ಸ್ಥಲದಲ್ಲಿ ನೀವು ಕತ್ತಲೆ. ನಿಮ್ಮ ಮಾತು ಕತ್ತಲೆ. ನೀವೇ ಕತ್ತಲೆಯಾಗಿರುವಾಗ ನಿಮ್ಮ ಮಾತನ್ನು ನಂಬುವ ಪ್ರಶ್ನೆ ಎಲ್ಲಿಂದ ಬಂತು? ಅರಿವಿನ ಈ ಗಾಢಾಂಧಕಾರದಲ್ಲಿ ನನ್ನ ದೇಹ ಪ್ರಾಣಾದಿ, ನನ್ನ ಹೆಂಡತಿ ಮಕ್ಕಳು ಮುಂತಾಗಿ ಏನೂ ಕಾಣುವುದಿಲ್ಲ ನನಗೆ. ಇಷ್ಟೇ ಏಕೆ, ನನಗೆ ನಾನೇ ಕತ್ತಲೆ, ಕಾಣುವುದಿಲ್ಲ. ಈ ನಿದ್ರಾವಸ್ಥೆಯ ಅರಿವಿನ ತಮಸ್ಸಿನಲ್ಲಿ 'ನಾನು' ಎಲ್ಲಿ ಮಾಯವಾಗಿರುವೆನೋ ಏನೋ? ಒಂದು ಗಳಿಗೆಯ ಮೇಲೆ ನಾನು ಕನವರಿಸುತ್ತಿದ್ದೇನೆ. ನನಗೆ ಕನಸು—ದುಸ್ಸ್ವಪ್ನ: ಮೋಟಾರದಲ್ಲಿ ಕುಳಿತು ನನ್ನ ಅರ್ಧಾಂಗಿಯೊಡನೆ ಬೆಂಗಳೂರಿಗೆ ಪ್ರವಾಸ—ವೇಗದಲ್ಲಿ ಟ್ರಕ್ಕಿಗೆ ಅಪ್ಪಳಿಸಿದ ಮೋಟಾರಕ್ಕೆ ಅಪಘಾತ. ಜೇನಳ ಕಾಲು ಮುರಿದಿದೆ, ನನ್ನ ತಲೆ ಒಡೆದಿದೆ. ಒಂದೇ ಸವನೆ ರಕ್ತಸ್ರಾವ. ಕತ್ತಲೆ ಕವಿಯುತ್ತಿದೆ. ಕತ್ತಲೆಯ ರಕ್ಕಸರಂತಿದ್ದ ಕಳ್ಳರು, ಮನ ಬಂದಂತೆ ಪ್ರಯಾಣಿಕರನ್ನು ಥಳಿಸುತ್ತಿದ್ದಾರೆ. ನನ್ನ ಕಡೆ ಒಂದು ಕರಾಳಕಾಲ. ಬಡಿಗೆ ಎತ್ತಿ ತೂರಿದಾಗಲೆ ಚೀರಿದೆ, ಎಚ್ಚತ್ತೆ. ಕನಸಿನಲ್ಲಿ ನಾನು ನನ್ನ ಮನೆಯಲ್ಲಿ

ಮಲಗಿರಲಿಲ್ಲ. ನೀವು ನನ್ನ ಬದಿಯಲ್ಲಿ ಕುಳಿತಿರಲಿಲ್ಲ. ಮೋಟಾರಿನ ಪ್ರವಾಸವೇ ಸತ್ಯ. ಅಪಘಾತ ನೀವು ನನ್ನಿದಿರು ಕುಳಿತಿರುವಷ್ಟು ಗಟ್ಟಿ. ಹೆಂಡತಿಯ ಕಾಲು ಮುರಿದುದು, ನನ್ನ ತಲೆಯೊಡೆದುದು, ರಕ್ಕಸಗಳ್ಳರ ಕರಾಳ ಆಕೃತಿ, ಕೃತಿ—ಇವೇ ನಡೆದ ಸಂಗತಿ, ನಾನು ಇಲ್ಲಿ ಮಲಗಿ ಕನಸು ಕಂಡುದು—ಅದೇ ನಡೆಯದ ಸಂಗತಿ. ಕನಸಿನಲ್ಲಿ ಕನಸೇ ಸತ್ಯ, ಕಣಸೇ ಅಸತ್ಯ. ಎಚ್ಚತ್ತ ಮೇಲೆ, ಈಗ ನಾನು ನಾನು, ನೀವು ನೀವು. ನನ್ನ ತಲೆ ಭದ್ರವಾಗಿದೆ. ನನ್ನ ಹೆಂಡತಿಯ ಕಾಲು ಸುರಕ್ಷಿತವಾಗಿದೆ. ಎಲ್ಲಾ 'ಬರೋಬರಿ' ಅದೆ.

> 'ಸ್ಥೂಲ ತನುವಿನ ಜಾಗ್ರ ಸ್ವಪ್ನದ
> ಕಾಲದಲಿ ಹುಸಿ ಸೂಕ್ಷ್ಮ ತನುವಿಗೆ
> ಮೇಲೆ ಕಾರಣ ತನುವಿನಲ್ಲಿ ಸುಷುಪ್ತಿ ಪಸರಿಸಲು।
> ಬೀಳು ಬಿದ್ದುವು ಜಾಗ್ರ ಸ್ವಪ್ನಗ–
> ಳಾಳುತಿಹುದಿವಸೊಂದೆ ಮನಪಾ–
> ಕಾಳುಮನವೊಂದಳಿದುದಾದರೆ ನಿತ್ಯರಹರೆಂದ' ॥[1]

ನಾನು ಮಲಗಿದರೆ ವಿಶ್ವವೆ ಮಲಗುತ್ತದೆ; ನಾನು ಕನಸು ಕಂಡರೆ ನಾನಿರುವುದು ಕನಸಿನ ವಿಶ್ವದಲ್ಲಿ; ನಾನು ಎಚ್ಚತ್ತು ಕಾಣುವ ಈ ವಿಶ್ವದ ಭಾವನೆ ಅಲ್ಲಿಲ್ಲ. ಮೂರು ನಾನು, ಮತ್ತು ನನ್ನೊಡನೆ ಮಲಗಿ ಏಳುತ್ತಿರುವ ಮೂರು ವಿಶ್ವಗಳಲ್ಲಿ ಯಾವುದು ಸತ್ಯ, ನೀವೇ ಹೇಳಿ. ಒಂದೊಂದು 'ನಾನು' ಅವಸ್ಥಾತ್ರಯಕ್ಕನುಗುಣವಾಗಿ ಕುಳಿತುಕೊಳ್ಳುವ ಒಂದೊಂದು ವಿಶ್ವದ ಪೆಟ್ಟಿಗೆಯಿಂದ ನನ್ನನ್ನು ಹೊರಗೆ ತೆಗೆವುದು ಅಥವಾ ಆ ಪೆಟ್ಟಿಗೆಯನ್ನೊಡೆವುದು ನಿಮ್ಮ 'ಕುವ್ವತ್ತ'ಲ್ಲ. ಹರಿಹರಬ್ರಹ್ಮಾದಿಗಳಿಗೂ ಅಸಾಧ್ಯ! ಅಂದಮೇಲೆ ಪಾಪ ನಿಮ್ಮ ಪಾಡೇನು? ಈ ಸಂದರ್ಭದಲ್ಲಿ ಒಂದು ರುದ್ರ ಸುಂದರ ಘಟನೆಯನ್ನು ನಿಮ್ಮ ಮುಂದಿಡುತ್ತೇನೆ: ನಮ್ಮೂರಲ್ಲಿ ಹಿಂದೆ ಆಡಿದ ಒಂದು ದೊಡ್ಡಾಟ—'ಮಹಿಷಾಸುರಮರ್ದಿನಿ.' ರುದ್ರಪ್ಪ ದೇವಿಯ 'ಪಾರ್ಟು,' ಭೀಮಣ್ಣ ಮಹಿಷಾಸುರ. ಒಳ್ಳೇ ರಭಸದಿಂದ, 'ಹಲ, ಹಲಲಲಲಲಲಲಲ'ಗಳಿಂದ ಬ್ರಹ್ಮಾಂಡ ಕಟಾಹವೇ ಬಿರಿಯುತ್ತ ಆಟ 'ರಂಗಿ'ಗೇರಿತು. ಯುದ್ಧದ ಆರ್ಭಟದಲ್ಲಿ ದೇವಿಯ 'ಪಾರ್ಟು ಮಾಡುವ ರುದ್ರಪ್ಪ' ಮಾಯವಾದ. ಉಳಿದವಳು ಚಾಮುಂಡಿ, ಮಹಾ ಕಾಳಿ, ದೇವಿ ಮಾತ್ರ. ದೇವಿ ಅಸುರನನ್ನೆತ್ತಿ ಕೆಳಗಿಕ್ಕರಿಸುವಾಗ ಅಸುರ ಒದರಿದ: 'ಎಲೇ ನಾನೋಲೇ ಭೀಮ....' ಕೆಳಗೆ ಬೀಳುವಷ್ಟರಲ್ಲಿ ದೇವಿಯ ದಿವ್ಯಾಸ್ತ್ರದಿಂದ ಅಸುರ ಸಂಹಾರವಾಯ್ತು! ಮಹಿಷಾಸುರಮರ್ದಿನಿಯ ಮರ್ದನೆ ಹಿಂದುಗಡೆ ಕೂಡಿದವರೆಲ್ಲ ಮಾಡಿದರು.

ರುದ್ರಪ್ಪ ತನ್ನಲ್ಲಿ ದೇವಿಯನ್ನು ಆರೋಪ ಮಾಡಿಕೊಂಡು ತನ್ನ ಮರೆದು ನಿಜವಾಗಿ ದೇವಿಯಾದ. ದೇವಿಗೆ ಆಟ ಯುದ್ಧವಾಯ್ತು. ಅಸುರನ ಮರೆಯ

---

1 ಪ್ರಭುಲಿಂಗಲೀಲೆ ಗ. ೩೪, ಪ. ೮.

ಪಾಪ! ಭೀಮಣ್ಣ ಆಕೆಗೆ ಕಾಣಿಸಲಿಲ್ಲ. ಪರಿಣಾಮ—ಭೀಮಣ್ಣನ ಇಹಲೋಕ ಯಾತ್ರೆ ಅಂದೇ ಸಮಾಪ್ತವಾಯ್ತು.—ಆರೋಪಿತವಾದ ಅರಿವಿನ ಅಹಂಭಾವದಲ್ಲಿ ಈ ರಭಸವಿದ್ದ ಮೇಲೆ ಒಡಹುಟ್ಟಿ, ಒಡನಾಡಿ ಒಡನೆ ಬೆಳೆದಿರುವ ಜೀವಾತ್ಮನ ಅಹಂಭಾವ, ಆತನಿರುವ ವಿಶ್ವ ಎಷ್ಟು ಘಟ್ಟಿ ಇರಬಹುದು? ಅಹಂಭಾವದ ಚೌಕಟ್ಟಿನಲ್ಲಿ ಬಿಚ್ಚಬಾರ ದಂತೆ ಒಂದಾಗಿ ಹೊಂದಿಕೊಂಡು, ತನ್ನ ವಿಶ್ವದ ಪೆಟ್ಟಿಗೆಯಲ್ಲಿರುವ ಮಾನವನಿಗೆ ಬಯಲು ದೇಹಿಗಳು ಬಂದು, 'ಐ ಪೂರ್ಣಮದಃ ಪೂರ್ಣಮಿದಂ'....'ಅಣುವಿಗೆ ಅಣು, ಮಹತ್ತಿಗೆ ಮಹತ್ತು....ಅನಂತ ದೇಹಗಳ ಅಂತರಾಳದಲ್ಲಿ ನಿಗೂಢವಾಗಿರುವ; ಮಹಾಂತ ವಿಭುವಾಗಿರುವ, ಅವಸ್ಥಾತ್ರಯಗಳನ್ನು ಮೀರಿ ನಿರವಸ್ಥೆಯಲ್ಲಿ ನಿಂದಿರುವ, ಕಾಯವೇ ಕೈಲಾಸವಾಗಿ, ಮನವೇ ಸಿಂಹಾಸನವಾಗಿ ಮೇಲೆ ಬೆಳಗುವ ಪರಿಪೂರ್ಣ ಪರಂಜ್ಯೋತಿಯನ್ನು 'ಇದು ನಿನ್ನ ಗಂಭೀರ ಸತ್ಯ.' 'ಇದೇ ನೀನು' 'ತತ್‌ತ್ವಮ್ ಅಸಿ' ಎಂದು ಹೇಳಿದರೆ ಆತನಿಗೆ ಕೇಳಬೇಕೇನು? ಕಾಣಬೇಕೇನು? ತನಗೆ ತಿಳಿಯದ ಅದು ಅಸತ್ಯ, ತನಗೆ ತಿಳಿವ ಇದುವೇ ಸತ್ಯ.[3]

ದೇವಿಯ ದೊಡ್ಡಾಟದಂತಿದೆ ಮಾನವನ ವ್ಯವಹಾರ, ಆತನ ಸಂಸಾರ. ಚಿದಂಶಿಕನಾದ ಆತ್ಮ ತಾನೇ ಜೀವನೆಂದು ತಾನೇ ಪ್ರಕೃತಿಪಿಂಡವೆಂದು, ತನ್ನ ನಿಜವ ತಾ ಮರೆದು ಇರುವುದೇ ಅಜ್ಞಾನ. ಮಲಗಿರುವ ಎಚ್ಚರ ಇದು. ತನ್ನ ಜಾಗ್ರದವಸ್ಥೆಯೆ ತಾನಿರಬಲ್ಲ ಚರಮಾವಸ್ಥೆ, ಅದೇ ಪರಮಾವಸ್ಥೆಯೆಂಬ 'ಅಜ್ಞಭಾವ'ದಲ್ಲಿ ಎಚ್ಚತ್ತು ನಿತ್ಯ ನಿರಂತರ ನಿದ್ರಿಸುತ್ತಿದ್ದಾನೆ ಮಾನವ. 'ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ' ಯಾರಿಗೆ? 'ಪಶ್ಯತೋ ಮುನೇಃ'. ಸುಪ್ತಿಯಲ್ಲಿ ಸ್ವಪ್ನ ಜಾಗರವು ಕಾಣುವುದಿಲ್ಲ. ಸ್ವಪ್ನದಲ್ಲಿ ಸುಪ್ತಿ ಜಾಗರ ಕಾಣುವುದಿಲ್ಲ. ಆದರೆ ಜಾಗರದಲ್ಲಿ ಸ್ವಪ್ನ ಸುಪ್ತಿಗಳ ಸ್ವರೂಪ ವೇದ್ಯವಾಗುತ್ತದೆ. ಇದರಂತೆ ಜಾಗರದಾಚೆ ಜಾಗರವಾಗುವುದು ಮನುಷ್ಯ ಕಾಣದ ಜಾಗರ. ಆದರೆ ಈ ಅತಿ-ಜಾಗ್ರದವಸ್ಥೆ 'ಪಶ್ಯತೋ ಮುನಿ'ಗೆ ಸಹಜ. ಅಂತೆಯೇ ಈತ ನೋಡಬಲ್ಲ ಭೂತಜಾತದ ಜಾಗ್ರದವಸ್ಥೆಯ ನಿಶೆಯನ್ನು. ಆದರೆ ನಿಜಾವಸ್ಥೆಯಲ್ಲಿ ಎಚ್ಚರವಾಗಿರುವ ಮುನಿ ಜಾಗ್ರದವಸ್ಥೆಯ ಭೂತಜಾತಕ್ಕೆ—'ಇದು ಕತ್ತಲೆ, ನೀವು ನಿದ್ರಿಸುತ್ತಿದ್ದೀರಿ' ಎಂದು ಹೇಳಿದರೆ ಅವರು ಹೇಗೆ ನಂಬಬೇಕು? ನಂಬದಿರುವುದು ಅವರ ತಪ್ಪಲ್ಲ, ಅದು ಅವರು ವಾಸಮಾಡುತ್ತಿರುವ ಅಜ್ಞಾನಸ್ಥಲದ ಶಕ್ತಿದೋಷ.

—ಸಂ. ಶಿ. ಭೂಸನೂರಮಠ

---

[3] ಇಲ್ಲಿ ರ. ಠಾಕೂರ ಅವರು ಹೇಳುವ ವನದ ಹಕ್ಕಿ ಮತ್ತು ಮನೆಯ ಹಕ್ಕಿ ಎಂಬ '*The Gardener*'ದಲ್ಲಿರುವ ಕಥೆ ನೋಡಿರಿ. (ಪು. ೧೪, ಪದ್ಯ ೬.)

# ಗ್ರಂಥ ರಕ್ಷಣೆ

ಅಕ್ಷರ ಪ್ರಚಾರ, ಯಂತ್ರಶೋಧ ಮತ್ತು ಮುದ್ರಣ ಸೌಕರ್ಯಗಳ ಈ ಇಪ್ಪತ್ತನೆಯ ಶತಮಾನದಲ್ಲಿ ಗ್ರಂಥ ರಕ್ಷಣೆ ಎಂಬ ವಿಷಯದ ಮೇಲೆ ಸಾಧಕವಾದ ಶೈಲಿಯಲ್ಲಿ ಮಾತನಾಡುವದೆಂದರೆ ಅದೊಂದು ವೈಚಿತ್ರ್ಯವೆನಿಸಬಹುದು. ಆದರೆ ಆಧುನಿಕ ಸಂಶೋಧನಗಳು ಹೆಚ್ಚಾಗುತ್ತ ನಡೆದ ಈ ಕಾಲದಲ್ಲಿ ಕೂಡ ಗ್ರಂಥಗಳ ರಕ್ಷಣೆಯನ್ನು ಮಾಡುವದು ಉಚಿತವೆನಿಸುವದಷ್ಟೆ ಅಲ್ಲದೆ ಅವಶ್ಯಕವೂ ಎನಿಸುತ್ತದೆ.

ಮೊದಲು ಒಂದು ವಿಷಯದ ಸ್ಪಷ್ಟೀಕರಣವು ಅಗತ್ಯವೆನಿಸುತ್ತದೆ. ಗ್ರಂಥ ರಕ್ಷಣೆಯೆಂದರೆ ಕೇವಲ ಪುಸ್ತಕಗಳನ್ನು ಕಾಯುವದು ಇಲ್ಲವೆ ಜನರಿಗೆ ದೊರಕದಂತಹ ಸ್ಥಿತಿಯಲ್ಲಿರಿಸುವುದು ಎಂದು ಮಾತ್ರ ಯಾರೂ ಅರ್ಥಮಾಡಿಕೊಳ್ಳಬಾರದು. ಪುಸ್ತಕಗಳ ರಕ್ಷಣೆಯೆಂದರೆ ಅವುಗಳ ಜೋಪಾನ ಮಾಡುವದಿಷ್ಟೆ ಅಲ್ಲದೆ ಅವುಗಳು ಅನ್ಯಥಾ ಕೆಡದಂತೆ ಸಿಕ್ಕಿದವರ ಕೈಯಲ್ಲಿ ಬೀಳದಂತೆ, ಮಾಡುವದು ಮತ್ತು ಅಲ್ಲದ ಅಪಾಯಕ್ಕೀಡಾಗದಂತೆ ನೋಡಿಕೊಳ್ಳುವದೂ ಹೌದು; ಅವುಗಳ ಸರಿಯಾದ ಉಪಯೋಗವು ಸಕಲರಿಗೂ ಸಿಕ್ಕುವಂತೆ ನೋಡಿಕೊಳ್ಳುವದೂ ಒಂದು ಗ್ರಂಥಪಾಲನೆಯ ರೀತಿಯೆ ಆಗಿದೆಯೆಂಬುದನ್ನು ನಾವು ಮೊದಲು ತಿಳಿದುಕೊಳ್ಳಬೇಕು.

ಪುಸ್ತಕಗಳ ಮತ್ತು ಪುಸ್ತಕಾಲಯಗಳ ಚರಿತ್ರೆಯನ್ನು ನೋಡಲಾಗಿ ನಮಗೆ ಈ ವಿಷಯದಲ್ಲಿ ಅನೇಕ ಮಹತ್ವದ ಮತ್ತು ಮರ್ಮಯುಕ್ತವಾದ ಮಾತುಗಳು ತಿಳಿದುಬರುತ್ತವೆ. ಜಗತ್ತಿನಲ್ಲಿ ಮುದ್ರಣಾಲಯ ಮತ್ತು ಪಡಿಯಚ್ಚುಗಳ ಶೋಧವಾಗುವುದಕ್ಕಿಂತ ಮೊದಲು ಶಿಲಾಲೇಖನ ಮತ್ತು ಪತ್ರಲೇಖನಗಳ ಕಾಲದಲ್ಲಿ ಕೂಡ ಗ್ರಂಥಗಳ ರಕ್ಷಣೆಯ ಕಾರ್ಯವು ಹೆಚ್ಚಿನ ಹೊಣೆಯದಾಗಿತ್ತು ಎಂಬುದು ತಿಳಿದ ಮಾತಾಗಿದೆ. ಆಗಿನ ದಿನಗಳಲ್ಲಿ ಕಲ್ಲುಗಳ, ಕಟ್ಟಿಗೆಯ ಮತ್ತು ಇಟ್ಟಿಗೆಗಳ ತುಣುಕುಗಳ ಮೇಲೆ ಮತ್ತು ಅದರಂತೆಯೆ ಮುಂದೆ ಎಲೆ, ತೊಗಟೆ, ಚರ್ಮ, ಕಾಗದ ಮುಂತಾದವುಗಳ ಮೇಲೆ ಬರೆಯುವ ಮೂಲಪದ್ಧತಿಯು ಕೆಲವರಿಗೆ ಮಾತ್ರ ಅವಗತವಾದ ಕಲೆಯಾದುದರಿಂದ ಅವುಗಳ ಅನೇಕ ಪ್ರತಿಗಳನ್ನು ಈಗಿನಂತೆ ಮಾಡಿಸುವದು ಸಾಧ್ಯವಾಗುತ್ತಿರಲಿಲ್ಲ. ಅಂತೆಯೆ ಅಮೂಲ್ಯವಾದ ಆ ಬಗೆಯ ಗ್ರಂಥಗಳ ಸಂಗ್ರಹವನ್ನು, ಹೆಚ್ಚು ಜನರ ಅನುಕೂಲ ಉಪಯೋಗಗಳಿಗಾಗಿ ಕಾಯುವದೆ ಅಗತ್ಯವಾಗಿತ್ತು. ಅಂತಹ ಪುಸ್ತಕಗಳನ್ನು ಕಾಯುವದೆಂದರೆ, ಅವುಗಳ ಪೂರ್ಣ ಪರಿಚಯ, ಯೋಗ್ಯವಾದ ಸಮಯಕ್ಕೆ ಅವಶ್ಯಕವಾದ ಪುಸ್ತಕಗಳನ್ನು ಅಣಿಮಾಡಿಕೊಡುವದು, ಇಂತಹ ಎಲ್ಲ ಕರ್ತವ್ಯಗಳೂ ಸಮಾವೇಶ ಹೊಂದಿರುತ್ತಿದ್ದವು. ಆಗಿನ ಕಾಲದಲ್ಲಿಯ ಪುಸ್ತಕ ಸಂಗ್ರಹಗಳ ಮೇಲಧಿಕಾರಿಗೆ

ಇಂದಿನಂತೆ ಭಾಂಡಾರಿಗ (Librarian) ಎಂದೆನ್ನದೆ ಪುಸ್ತಕರಕ್ಷಕ ಇಲ್ಲವೆ ಗ್ರಂಥಪಾಲ ಎಂದೇ ಎನ್ನುವದು ಸರಿಯೆನಿಸುವದು.

ಇನ್ನು ಇತ್ತ ಭಾರತ ಮತ್ತು ಮಿಕ್ಕ ಮೂಡಣದ ರಾಷ್ಟ್ರಗಳಲ್ಲಿಯ ಪರಿಸ್ಥಿತಿಯೊಂದು ಬೇರೆ ರೀತಿಯದೆ ಆಗಿತ್ತು. ಜಗತ್ತಿನಲ್ಲಿಯ ಅತಿ ಪುರಾತನ, ಅತಿಶ್ರೇಷ್ಠ ಮತ್ತು ವ್ಯಾಪಕವಾದ ಸಂಸ್ಕೃತಿಗಳ ಆಗರವಾದ ಆಸ್ಯಖಂಡದಲ್ಲಿ ಪುಸ್ತಕಗಳ ವಿಷಯವಾಗಿಯೂ ಒಂದು ಆದರ್ಶವಾದ ರಕ್ಷಣ ಪದ್ಧತಿಯು ಪ್ರಚಾರದಲ್ಲಿದ್ದಿತು ಎಂದು ಹೇಳಿದರೆ ಆಶ್ಚರ್ಯವೆಂತಹದು ? ಸಕಲಶಾಸ್ತ್ರಗಳ ತವರು ಎಲ್ಲಬಗೆಯ ಜ್ಞಾನಕ್ಕೂ ಉಗಮಸ್ಥಾನ ಎಂದೆನಿಸಿಕೊಳ್ಳಬಹುದಾದ ಭರತ ಖಂಡದಲ್ಲಿ ವಿದ್ಯೆಯನ್ನಾಗಲಿ, ಜ್ಞಾನವನ್ನಾಗಲಿ ಬರೆದಿಡುವ ಗೊಡವೆಯನ್ನೆ ಮಾಡುತ್ತಿರಲಿಲ್ಲ. ಮುಖದಿಂದ ಕಿವಿಗೆ, ತಂದೆಯಿಂದ ಮಗನಿಗೆ, ಗುರುವಿನಿಂದ ಶಿಷ್ಯನಿಗೆ, ಪೀಳಿಗೆಯಿಂದ ಪೀಳಿಗೆಗೆ ಪರಂಪರೆಯಾಗಿ ಸಾಗುವದೇ ಜ್ಞಾನತೀರ್ಥದ ವೈಶಿಷ್ಟ್ಯವಾಗಿತ್ತು. ಈ ರೀತಿಯಾಗಿ ಜ್ಞಾನದ ಸಂರಕ್ಷಣೆಯಾಗುವದು ಆದರ್ಶಮಾರ್ಗವೆನಿಸುವದೇನೋ ನಿಜ. "ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ" ಎಂಬ ಶ್ಲೋಕದ ಪೂರ್ಣಾರ್ಥವನ್ನು ಪಡೆಯುವಂತಹದಾಗಿದೆ ಈ ಪದ್ಧತಿ! ಆದರೆ ಮಾನವ ಎಷ್ಟೆಂದರೂ ಮರೆವು, ಮೋಸ, ಬೇಸರ ಮುಂತಾದವುಗಳಿಗೆ ಅಧೀನನಾದವ, ಅಂತೆಯೆ ನಮ್ಮ ಪ್ರಾಚೀನಕಾಲದ ಶಾಸ್ತ್ರಸಂಪತ್ತು ಈಗ ಕೆಲವು ಕಡೆ ಹರಕು ಮುರುಕಾದ ಅವಸ್ಥೆಯಲ್ಲಿ ಸಿಕ್ಕುತ್ತಿದ್ದರೆ ಎಷ್ಟೋ ಸಲ ಮೂಲರೂಪದ ಗುರುತು ಸಹ ಹತ್ತದಷ್ಟು ಪರಿವರ್ತನೆಯನ್ನು ಹೊಂದಿದ ಸ್ಥಿತಿಯಲ್ಲಿರುತ್ತದೆ.

ಮುಂದೆ ಮಧ್ಯಯುಗಕ್ಕೆ ಬಂದಂತೆ, ನಮಗೆ ಬರೆವಣಿಗೆಯ ಬೆಳೆವಣಿಗೆಯೊಡನೆ ಜ್ಞಾನದ ವಿಸ್ತೃತ ಪ್ರಚಾರವಾಗುತ್ತ ನಡೆದುದು ಕಂಡುಬರುತ್ತದೆ. ಆದರೆ ಅದರ ಜೊತೆಯಲ್ಲಿಯೆ ಗ್ರಂಥರಕ್ಷಣೆಯ ಸಮಸ್ಯೆಗಳೂ ಹೆಚ್ಚಾಗುತ್ತ ನಡೆದುದೂ ಒಂದು ವಿಶೇಷವಾದ ಸಂಗತಿ. ಒಬ್ಬ ವ್ಯಕ್ತಿಯ ಕಡೆಯಿಂದ ಗ್ರಂಥಗಳನ್ನು ಕದ್ದೊಯ್ಯುವದು, ಒಬ್ಬ ರಾಜನ ಆಶ್ರಯದಲ್ಲಿದ್ದ ಗ್ರಂಥಾಲಯವನ್ನು ಅಪಹರಿಸುವದು, ಒಂದು ಧರ್ಮದವರ ಪುಸ್ತಕ ಭಾಂಡಾರವನ್ನು ಸುಡುವದು, ಒಂದು ಕಾಲದ ಜ್ಞಾನನಿಧಿಯನ್ನು ಪರ್ಯಾಯವಾಗಿ ನಾಶಮಾಡುವದು ಮುಂತಾದ ಅಪಕೃತ್ಯಗಳು ಆಗ್ಗೆ ನಡೆದುವು. ಥಾಮ್‌ಸನ್ ಇವರು ತಮ್ಮ "ಪ್ರಾಚೀನ ಗ್ರಂಥಾಲಯಗಳು" ಎಂಬ ಪುಸ್ತಕದಲ್ಲಿ ಹೇಳುವ ಕೆಲವು ಸಂಗತಿಗಳು ಇಲ್ಲಿ ಮಾರ್ಮಿಕ ಎನಿಸುವಂತೆಯೆ ಮಾರ್ಗದರ್ಶಕವಾದುವೂ ಇರುತ್ತವೆ. ಅರಿಸ್ಟಾಟಲ್‌ರು ಅತ್ಯಂತ ಶ್ರಮ ಮತ್ತು ವೆಚ್ಚವನ್ನು ವಹಿಸಿ ಸಂಗ್ರಹಿಸಿಟ್ಟ ತಮ್ಮ ಅಮೋಘವಾದ ಬರಹಗಳು ಮತ್ತು ತಮ್ಮ ಸಮಕಾಲೀನರ ಕೆಲವು ಗ್ರಂಥಗಳ ಸಂಗ್ರಹವು ಅವರ ನಂತರ ಅವರ ಶಿಷ್ಯರಿಗೆ, ಶಿಷ್ಯರ ಶಿಷ್ಯರಿಗೆ ಇಳಿದುಬಂದಿತು. ಆದರೆ ಮುಂದೆ ಎರಡನೆಯ ಯುಮೆರಿಸನು ಪರ್ಗಮಮ್ ಎಂಬಲ್ಲಿ ತನ್ನದೊಂದು

ಗ್ರಂಥಾಲಯವನ್ನು ಮಾಡುವ ಉದ್ದೇಶದಿಂದ ಹಳೆಯ ಪುಸ್ತಕಗಳನ್ನೆಲ್ಲ ಕಸಿಯು ಹತ್ತಿರುವನೆಂಬುದು ತಿಳಿದಕೂಡಲೆ ಅರಿಸ್ಟಾಟಲ್‌ರ ಶಿಷ್ಯರಾದ ಥಿಯೋಕ್ರಾಸ್ಟಸ್ ಎಂಬವನು ಆ ಎಲ್ಲ ಪ್ರತಿಗಳನ್ನು ಭೂಮಿಯಲ್ಲಿ ಹುಗಿದಿಟ್ಟನು. ಹೆದರಿಕೆ ಮತ್ತು ಹೇವಗಳ ಮೂಲಕ ಹೂಳಿಟ್ಟ ಈ ಉತ್ತಮವಾದ ಗ್ರಂಥಸಂಗ್ರಹವು ಮುಂದೆ ೧೮೭ ವರುಷಗಳ ನಂತರ ದೊರೆತರೆ ಹುಳು ಮಣ್ಣುಗಳ ಪಾಲಾದ ಅದು ಯಾವ ಸ್ಥಿತಿಯಲ್ಲಿ ದೊರೆಯಬಹುದು? ಅಗಸ್ಟಸ್ ಎಂಬ ರೋಮದ ಸಮ್ರಾಟನು ಸ್ಥಾಪಿಸಿದ ಅಷ್ಟಪಾತ್ರ ಗ್ರಂಥಾಲಯವು ನೀರೋನ ಕಾಲದಲ್ಲಾದ ಭಯಂಕರವಾದ ಪ್ರಳಯಾಗ್ನಿಯ ತುತ್ತಾಗದೆ ಉಳಿದರೂ ಮುಂದೆ ಟಿಟಸ್‌ದೊರೆಯ ಕಾಲದ ಬೆಂಕಿ ಯಲ್ಲಿ ಬೂದಿಯಾಯಿತು. ಪೇಗನ್ ಎಂಬ ಕೀಳು ಹೆಸರಿನಿಂದ ಕರೆಯುತ್ತಿದ್ದರೂ ಕ್ರಿಶ್ಚಿಯನ್ ಧರ್ಮದವರು ತಮ್ಮ ಎಲ್ಲ ಆಚಾರವಿಚಾರಗಳನ್ನು ಅದೇ ಮೂಲ ದಿಂದ ಪಡೆದಿದ್ದರೂ ಮೊದಮೊದಲು ಸಂಗ್ರಹವಾಗಿದ್ದ ರೋಮನ್ ಗ್ರಂಥಗಳನ್ನು ಜನರು ಪಡೆಯದಂತೆ ಆಯಾ ಮಠಗಳ ಇಲ್ಲವೆ ಮಂದಿರಗಳ ಬಾಗಿಲುಗಳಿಗೆ ಬೀಗ ಗಳನ್ನು ಜಡಿಯುತ್ತಿದ್ದರಂತೆ! ಇದಕ್ಕೂ ಅರ್ವಾಚೀನ ಕಾಲದಲ್ಲಿ ಮುಸಲ್ಮಾನ ಧರ್ಮಾಧಿಕಾರಿ ಮತ್ತು ರಾಜ್ಯಾಧಿಕಾರಿಗಳು ತಾವು ಗೆದ್ದ ಪ್ರದೇಶಗಳಲ್ಲಿದ್ದ ಗ್ರಂಥ ಸಂಗ್ರಹಗಳನ್ನು ಸುಡುವ ಇಲ್ಲವೆ ಸುಲಿಯುವ ಕಾಲಕ್ಕೆ ಹೇಳುತ್ತಿದ್ದ ಮಾತು ಸಾಕಷ್ಟು ಪ್ರಚಾರಿತವಾದುದಿರುತ್ತದೆ: 'ಇವರಲ್ಲಿರುವ ಜ್ಞಾನವೆಲ್ಲ ಇಸ್ಲಾಮ ದಲ್ಲಿರುತ್ತದೆ, ಇನ್ನು ಇಸ್ಲಾಮದಲ್ಲಿಲ್ಲದಿರುವದು ಈ ಗ್ರಂಥ ಸಂಗ್ರಹದಲ್ಲಿದ್ದರೆ ಅದು ಇರಲಿಕ್ಕೆ ಯೋಗ್ಯವಾದುದಲ್ಲ!'

ಯಾವದೊಂದು ವಿಷಯವು ಶಾಸನ ಇಲ್ಲವೆ ಶಾಸ್ತ್ರವೆನ್ನಿಸಿಕೊಳ್ಳುವದಕ್ಕಿಂತ ಮುಂಚೆಯೆ ಅದು ರೀತಿಯಲ್ಲಿದ್ದದು, ರೂಢಿಯಲ್ಲಿ ಬಂದುದು ಎಂಬ ಸಂಗತಿ ಸ್ಪಷ್ಟವೇ ಸೈ! ಅದರಂತೆಯೆ ಈ ಗ್ರಂಥರಕ್ಷಣೆ ಮತ್ತು ಗ್ರಂಥಭಾಂಡಾರ, ಗ್ರಂಥಾ ಲಯಶಾಸ್ತ್ರ ಮುಂತಾದ ವಿಷಯಗಳು ಅಪಹಾರ, ಅಪಾಯ ಮುಂತಾದವುಗಳಿಂದ ಕಾಯುವದಷ್ಟೆ ಗ್ರಂಥರಕ್ಷಣೆಯ ಕಾರಣವಾಗಿರದೆ, ಅದಕ್ಕೆ ಹೆಚ್ಚು ವಿಧಾಯಕ ವಾದ ಉದ್ದೇಶವೂ ಇರುತ್ತದೆ. ಮುದ್ರಣವು ಪ್ರಚಾರದಲ್ಲಿ ಬರುವದಕ್ಕಿಂತ ಮೊದಲು ಪ್ರತಿಗಳ ಅಭಾವದ ಮೂಲಕ ಮೂಲಕೃತಿಗಳನ್ನು ರಕ್ಷಿಸುವದು, ಅವುಗಳ ಉಪಯೋಗದ ದೃಷ್ಟಿಯಿಂದಲೂ, ಪ್ರಚಾರದ ಕಾರಣಕ್ಕಾಗಿಯೂ ಆವಶ್ಯಕ ಎನಿಸುತ್ತಿತ್ತು. ಅಂತೆಯೆ ಇಂಗ್ಲಂಡ ಮುಂತಾದ ಯೂರೋಪಿಯನ್ ರಾಷ್ಟ್ರಗಳಲ್ಲಿ ಮೊದಲಕಾಲದ ಅಂತಹ ಗ್ರಂಥಗಳನ್ನು ಹಿತ್ತಾಳೆಯ ಚೌಕಟ್ಟಿ ನಲ್ಲಿಟ್ಟು, ಅವುಗಳನ್ನು ಒಂದು ಫಲಕಕ್ಕೆ ಬಿಗಿದು, ಆ ಚೌಕಟ್ಟುಗಳಿಗೆ ಉದ್ದವಾದ ಒಂದು ಕಬ್ಬಿಣದ ಸರಪಳಿಯನ್ನು ಕಟ್ಟುತ್ತಿದ್ದರು. ಅಂತೆಯೆ ಆಗಿನಕಾಲದ ಅಮೂಲ್ಯವಾದ ಪುಸ್ತಕಗಳಿಗೆ 'ಬೇಡಿಯಲ್ಲಿದ್ದ ಗ್ರಂಥಗಳು' (Books in chains) ಎನ್ನುತ್ತಿದ್ದರು. ಅದರಿಂದ ಕಳವು ಕಡಿಮೆಯಾಗಿ, ಸವಕಳಿಯು

ಸಾವಕಾಶವೆನಿಸುತ್ತಿದ್ದರೂ, ಅವುಗಳ ಸಾಕಷ್ಟು ಪ್ರಸಾರವೂ ಆಗುತ್ತಿದ್ದಿಲ್ಲ ಎಂಬ ಮಾತು ಸತ್ಯವಾದುದು. ಅಲ್ಲಿಯೆ ಬಂದು ಓದುವವರಿಂದ ಅವುಗಳ ಸುರಕ್ಷಿತತೆಯು ನಿಶ್ಚಿತವಾಗಿದ್ದರೂ ಅಲ್ಲಿಯೆ ಬಂದು ಓದಬೇಕು ಎಂಬ ವಿಚಾರವೆ ಒಂದು ಕೊರತೆಯೆನಿಸಿ, ಅವುಗಳ ಅನುಕೂಲ-ಲಾಭಗಳನ್ನು ಪಡೆಯುವವರ ಸಂಖ್ಯೆಯು ಸಣ್ಣ ಪ್ರಮಾಣದಲ್ಲಿರುತ್ತಿತ್ತು.

ಇತ್ತ ಆಧುನಿಕ ಕಾಲಕ್ಕೆ ಬಂದಂತೆ ಮುದ್ರಣ ಸೌಕರ್ಯವುಂಟಾಗಿ ಜನರಿಗೆ ಲಕ್ಷಗಟ್ಟಲೆ ಪ್ರತಿಗಳನ್ನು ತೆಗೆದು ಒಂದು ಪುಸ್ತಕವನ್ನು ಹಂಚುವಂತೆ ಆಯಿತು ಇತ್ತೀಚೆಗಂತೂ ಇಂಗ್ಲಂಡ-ಅಮೇರಿಕೆ ರಶಿಯಾಗಳಲ್ಲಿ ಪ್ರತಿವರುಷ ಹೊರಡುವ ಗ್ರಂಥಗಳ ಸಂಖ್ಯೆಯನ್ನು ಕೋಟಿ, ಅಬ್ಜಗಳಲ್ಲಿ ಮಾತ್ರ ಎಣಿಸಬಹುದು. ಅಕ್ಷರ ಪ್ರಚಾರವಾಗಿ, ಜನರಲ್ಲಿ ಜ್ಞಾನಪಿಪಾಸೆಯು ಬೆಳೆದಂತೆ ಈಗ ಪ್ರತಿಯೊಂದು ಸಣ್ಣ ಹಳ್ಳಿಯಲ್ಲಿಯೂ ಒಂದು ಗ್ರಂಥಸಂಗ್ರಹವಿರುತ್ತದೆ; ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಒಂದು ಚಿಕ್ಕ ಪುಸ್ತಕ ಭಾಂಡಾರವನ್ನು ಮಾಡಿಕೊಂಡಿರುತ್ತಾನೆ. ಇತ್ತ ದೊಡ್ಡ ದೊಡ್ಡ ಊರುಗಳಲ್ಲಿ ಒಣಿಗೊಂದು ಭವ್ಯವಾದ ಸಾರ್ವಜನಿಕ ಗ್ರಂಥಾಲಯವಿದ್ದು ಅದು ಎಲ್ಲರಿಗೂ ಮುಕ್ತದ್ವಾರವಾಗಿರುವದು ಸಹಜವಾದ ಸಂಗತಿಯಾಗಿದೆ. ಅದರಂತೆಯೆ ಈಗ ಭಾರತದಲ್ಲಿ ಕೂಡ ಸಾಕ್ಷರತೆಯ ಆಂದೋಲನವು ಭರದಿಂದ ಮುಂದುವರಿದುದರಿಂದ ಹಿಂದುಸ್ಥಾನದ ಎಲ್ಲ ಪ್ರಾದೇಶಿಕ ಭಾಷೆಗಳು, ದೇಶದೊಳಗಿನ ವಿಶಿಷ್ಟವಾದ ರಾಜಕೀಯ ಮತ್ತು ಸಾಮಾಜಿಕ ಕಾರಣಗಳ ಪರಿಣಾಮವಾಗಿ, ಸಾಕಷ್ಟು ವಿಕಾಸಹೊಂದುತ್ತ, ವಿಸ್ತೃತವಾಗುತ್ತ ನಡೆದಿವೆ. ಕನ್ನಡದಲ್ಲಿ ಕೂಡ ಈಗ ಹೊರಡುವಷ್ಟು ಪುಸ್ತಕ, ಪತ್ರಿಕೆಗಳು ಹಿಂದೆ ಎಂದೂ ಹೊರಡುತ್ತಿದ್ದಿರಲಿಕ್ಕಿಲ್ಲ ಎಂದು ಧೈರ್ಯವಾಗಿ ಹೇಳಬಹುದು.

ಆದರೆ ಅದರಿಂದ ಗ್ರಂಥರಕ್ಷಣೆಯ ಸಮಸ್ಯೆಯು ಪರಿಹಾರವಾಗಿರುವದು ಎಂದು ಮಾತ್ರ ತಿಳಿಯಬಾರದು. ಅನುಕೂಲತೆಗಳು ಹೆಚ್ಚಾದಂತೆ ಮನುಷ್ಯನಿಗೆ ಮರೆವು ವ್ಯಯುಣ್ಣಹತ್ತುತ್ತದೆ; ಸೌಕರ್ಯಗಳು ಬೆಳೆಯತೊಡಗಿದಂತೆ ಬೇಸರವೂ ಮನೆ ಮಾಡಹತ್ತುತ್ತದೆ; ಸಂಖ್ಯೆಯು ಏರುತ್ತ ನಡೆದಂತೆ ಅನಾಸ್ಥೆ-ನಿಷ್ಕಾಳಜಿಗಳು ನಿರ್ಧಾರಹೊಂದುತ್ತವೆ. ಅಂತೆಯೆ ಪುಸ್ತಕಗಳ ಪ್ರಕಾರ ಪ್ರಮಾಣಗಳು ವೃದ್ಧಿಯಾಗುತ್ತ ಬಂದರೂ ಗ್ರಂಥ ರಕ್ಷಣೆಯ ಹೊಣೆಯು ಕೂಡ ಹೆಚ್ಚಾಗುತ್ತ ಇದೆ. ಈಗಿನ ಕಾಲದಲ್ಲಿ ಗ್ರಂಥರಕ್ಷಣೆಯನ್ನು ಮೂರು ವಿಧವಾಗಿ ವಿಂಗಡಿಸಬಹುದು.

೧. ರೂಪ
೨. ಗುಣ
ಮತ್ತು ೩. ಪ್ರಮಾಣ

ಒಂದೊಂದಾಗಿ ಈ ಮೂರು ಬಗೆಯ ಸಂರಕ್ಷಣೆಯ ವಿಚಾರ ಮಾಡಬಹುದು.

ರೂಪದ ರಕ್ಷಣೆಯೆಂದರೆ ಅದರ ಬಾಹ್ಯ ರೂಪ–ಆಕಾರಗಳನ್ನು ಭದ್ರವಾಗಿರಿಸುವದು. ಮಹತ್ವದ ಪುಸ್ತಕ ಎನ್ನಿಸಿಕೊಳ್ಳುವ ಪುಸ್ತಕಗಳನ್ನು ತೀರ ತಾತ್ಪೂರ್ತಿಕವಾದ ರೀತಿಯಲ್ಲಾದರೂ ಇಡಬೇಕು ಇಲ್ಲವೆ ಶಾಶ್ವತ ಎನಿಸುವಂತಹ ಕವಚದಲ್ಲಿಯಾದರೂ ಕಟ್ಟಿಸಬೇಕು. ತಾತ್ಪೂರ್ತಿಕವಾದ ಕಟ್ಟಿನಲ್ಲಿ ಇಂತಹ ಪುಸ್ತಕಗಳನ್ನು ಪ್ರಕಟಿಸಿದರೆ, ಅವುಗಳನ್ನು ಕೊಂಡವರು, ಅದರ ಮಹತ್ವವನ್ನು ಮನಗಂಡು ಗಟ್ಟಿಯಾದ ಕಟ್ಟಿನಲ್ಲಿ ಇಟ್ಟುಕೊಳ್ಳುವ ಮೊದಲ ಕೆಲಸವನ್ನು ಕೈಕೊಳ್ಳುವರು. ಸಾಮಾನ್ಯವಾಗಿ ಇಂದಿನ ಕಟ್ಟುಗಳಲ್ಲಿ ನೂರಕ್ಕೆ ತೊಂಬತ್ತು ನಾಲ್ಕಾರು ತಿಂಗಳಲ್ಲಿ ಹರಿದು ಚೂರಾಗುತ್ತವೆ. ಅಂತೆಯೆ ಒಳ್ಳೆಯ ಗ್ರಂಥಗಳನ್ನು ಮೊದಲಾಗಿಯೆ ಬಂಧುರವಾದ ಚರ್ಮದ ಇಲ್ಲವೆ ಬಟ್ಟೆಯ ಕಟ್ಟಿನಲ್ಲಿ ಪ್ರಕಟಿಸುವದು ಉಚಿತವಾದ ಮಾತು. ವ್ಯಾಸಂಗಿಗಳಿಗಾಗಲಿ, ವಾಚನಮಂದಿರಗಳಿಗಾಗಲಿ ಮೇಲಿಂದಮೇಲೆ ಹೊಸಕಟ್ಟು ಹಾಕಿಸುವ ವೆಚ್ಚವನ್ನು ಉಳಿಸುವ ಉದ್ದೇಶದಿಂದ ಬಾಳುವ ಹೊದಿಕೆಗಳಲ್ಲಿ ಹೊತ್ತಿಗೆಗಳನ್ನು ಹೊರಡಿಸುವದೆ ಒಳ್ಳೆಯದು. ಇನ್ನು ಇಷ್ಟಾದರೂ ಸವಕಳಿ, ದುರುಪಯೋಗ ಮುಂತಾದ ಕಾರಣಗಳಿಗಾಗಿ ಪುಸ್ತಕಗಳ ಮೂಲೆಗಳನ್ನು ಮುಚ್ಚಳಗಳನ್ನು ಆಗಾಗ್ಗೆ ಬದಲಿಸಬೇಕಾಗುತ್ತದೆ; ಸರಿಪಡಿಸಬೇಕಾಗುತ್ತದೆ. ಇತ್ತ ಒಳಗಿನ ವಿಷಯಕ್ಕೂ, ಹೊರಗಿನ ರೂಪಕ್ಕೂ ಒಂದಿಷ್ಟಾದರೂ ಹೋಲಿಕೆಯಿರುವಂತೆ ನೋಡಿಕೊಳ್ಳುವದೊಂದು ಅಗತ್ಯದ ಸೂಚನೆಯೆಂದು ತಿಳಿಯಬಹುದು. ಪ್ರಕಟನೆ, ಮುದ್ರಣ ಚಿತ್ರಗಾರಿಕೆಗಳು ಸಹಜ-ಸುಲಭವಾದ ಈ ದಿನಗಳಲ್ಲಿ ಮೇಲಿನ ಥಳಕುಮಾತ್ರ ಹೆಚ್ಚಿನದಾಗಿರುವ ಉದಾಹರಣೆಗಳು ಹೇರಳವಾಗುವ ಸಂಭವವುಂಟು. ಅಂತೆಯೆ ಪುಸ್ತಕಗಳು ರೂಪ ಮತ್ತು ಗುಣ ಈ ಎರಡೂ ಬಗೆಯಲ್ಲಿ ಅನುಚಿತವೆನಿಸದಂತೆ ಒಂದನ್ನೊಂದು ಹೊಂದಿಸಿಕೊಳ್ಳಬೇಕು.

ಎರಡನೆಯದಾಗಿ ಪುಸ್ತಕಗಳ ಗುಣದ ರಕ್ಷಣೆ ಮಾಡುವದೊಂದು ತುಸು ಬಿಗಿಯಾದ ಕೆಲಸ. ಆದರೂ ಭಾಂಡಾರಿಗನಾದ ಇಂದಿನ ವ್ಯಕ್ತಿಯು ಅವಶ್ಯವಾಗಿ ಕೈಕೊಳ್ಳತಕ್ಕ ಕರ್ತವ್ಯವಿದು. ಒಂದು ಗ್ರಂಥದ ಗುಣದ ದುರುಪಯೋಗವು ಮೂರುಬಗೆಯಾಗಿ ಆಗುತ್ತಿರುವದು. ಕೆಲವರು ಅದನ್ನು ಓದದೆ ಅದರ ಅಪಾರ್ಥವನ್ನು ಮಾಡಿಕೊಂಡಿರುತ್ತಾರೆ ; ಇನ್ನು ಕೆಲವರು ಓದಿದ್ದರೂ, ತಮ್ಮ ಪೂರ್ವಗ್ರಹದ ಮೂಲಕವಾಗಿ ಇಲ್ಲವೆ ಬೇರೆ ಕಾರಣಗಳ ಸಲುವಾಗಿ ಅದನ್ನು ತಪ್ಪು ತಿಳಿದುಕೊಂಡಿದ್ದಾರೆ. ಅತ್ತ ಬೇರೆ ಕೆಲವರು ಆ ಪುಸ್ತಕದ ಮರ್ಮವನ್ನು ಚೆನ್ನಾಗಿ ಅರಿದುಕೊಂಡು ಅರಿತಿದ್ದರೂ ತಮ್ಮ ಉದ್ದೇಶವನ್ನು ಸಾಧಿಸುವ ಹವ್ಯಾಸದಲ್ಲಿ ಅದನ್ನು ಬೇರೆ ರೀತಿಯಾಗಿ ಅಣಿಮಾಡಿಕೊಳ್ಳುತ್ತಾರೆ. ಈ ಮೂರು ರೀತಿಯ ಉಪಯೋಗವನ್ನು ಭಾಂಡಾರಿಗನಾಗಲಿ, ಬೇರೆ ಸಂಗ್ರಾಹಕನಾಗಲಿ ತಪ್ಪಿಸಬಹುದು. ಮೊದಲಿನ ಪಂಗಡದವರಿಗೆ ಪುಸ್ತಕವನ್ನು ಲಭಿಸಿಕೊಡುವ ಸಹಾಯದಿಂದ ಆ

ಕೊರತೆಯನ್ನು ಹೋಗಲಾಡಿಸಬಹುದು. ಎರಡನೆಯ ಪಂಗಡದವರಿಗೆ ಪೂರ್ವಗ್ರಹದ ಮೂಲಕ ಅವರ ಆ ಗ್ರಂಥದ ಅಭಿಪ್ರಾಯವು ಹೇಗೆ ದೂಷಿತವಾಗಿರುವದು ಎಂಬುದನ್ನು ತೋರಿಸಿ, ತಿಳಿಸಿ, ಬಿಂಬಿಸಿ, ಆ ಅಪಗ್ರಾಹವನ್ನು ಅಲ್ಲಗಳೆಯಬಹುದು. ಇನ್ನು ಮೂರನೆಯ ಪಂಗಡದವರ ಪರಿಣಾಮವನ್ನು, ಅವರಿಂದ ಕಲುಷಿತವಾದ ವಾತಾವರಣವನ್ನು ಆ ಗ್ರಂಥದ ಮೂಲಪ್ರತಿಗಳನ್ನೆ ಹೆಚ್ಚಾಗಿ ಜನರಿಗೆ ಸಿಗುವಂತೆ ಮಾಡುವದರಿಂದ ಕಡಿಮೆಮಾಡಬಹುದು. ಭಾಂಡಾರಿಗನಿಗೆ ಈ ಬಗೆಯ ವ್ಯಾಸಂಗ, ಈ ಬಗೆಯ ಸಹನಶಕ್ತಿಗಳು ಇರುವದು ಎಲ್ಲಕ್ಕಿಂತ ಮಹತ್ವದ ಮಾತು.

ಇನ್ನು ಕೊನೆಯದಾಗಿ ಪುಸ್ತಕಗಳ ಪ್ರಮಾಣವನ್ನು ರಕ್ಷಿಸುವದು. ಈ ಸಂಬಂಧದಲ್ಲಿ ಇಂಗ್ಲಂಡ ಮುಂತಾದ ರಾಷ್ಟ್ರಗಳಲ್ಲಿ ಗ್ರಂಥರಕ್ಷಣೆಯ ನಿಯಮ ನಿರ್ಬಂಧಗಳು ಹೇಗೆ ಪರಿವರ್ತನ ಹೊಂದುತ್ತ ನಡೆದಿವೆಯೆಂಬುದೊಂದು ಮನೋರಂಜಕವಾದ ಕಲೆಯೆ ಆಗಿದೆ. ಹೆಚ್ಚು ಹೆಚ್ಚು ಪ್ರತಿಗಳನ್ನು ಹೊರಡಿಸುವ ಮುದ್ರಣ ಸೌಕರ್ಯವು ಒದಗಿ, ಮೂಲೆ ಮೂಲೆಗಳಲ್ಲಿ ಗ್ರಂಥ ಭಾಂಡಾರಗಳು ಕಾಣಹತ್ತಿದಂತೆ ಗ್ರಂಥರಕ್ಷಣೆಯ ಬಗೆಯಲ್ಲಿ ಹೆಚ್ಚು ಪ್ರಾಗತಿಕ ವಿಚಾರಗಳು ರೂಢಿಯಲ್ಲಿ ಬರಹತ್ತಿದವು. ಗ್ರಂಥಭಾಂಡಾರವೆಂದರೆ ಎಲ್ಲಿಂದಲೊ ದೊರಕಿಸಿಟ್ಟ ಕೆಲವು ಹುಳ ಹತ್ತಿದ ಪುಸ್ತಕಗಳನ್ನು ಹೆರವರಿಗಾರಿಗೂ ದೊರೆಯದಂತೆ ಸರ್ಪಗಾವಲಿಸಿಂದ ಸುರಕ್ಷಿತವಾದ ಸ್ಥಳವೊಂದಾಗಿದ್ದುದು, ಬರಬರುತ್ತ ಜನರ ಓದುವ ಚಟವು ಬಲಿಯತೊಡಗಿದಂತೆ, ಆ ಅಭಿರುಚಿಯನ್ನು ಪ್ರೋತ್ಸಾಹಿಸುವ, ಸ್ಫೂರ್ತಿಯಿಂದ ತುಂಬುವ, ಬಲಗೊಳಿಸುವ ಒಂದು ಸಾಮಾಜಿಕ ಸಂಸ್ಥೆಯಾಗಿದೆ ಇಂದು! ಮೊದಲಿನ 'ಪಾಲನೆಗಾಗಿಯೆ ಪುಸ್ತಕಗಳು' ಎಂಬ ವಿಚಾರವು ಇಲ್ಲದಂತಾಗಿ ಅದರ ಬದಲು 'ಎಲ್ಲರಿಗಾಗಿ ಪುಸ್ತಕಗಳು' 'ಉಪಯೋಗಕ್ಕಾಗಿ ಗ್ರಂಥಗಳು' ಎಂಬ ಉದ್ದೇಶವು ನೆಲಗೊಂಡಿರುತ್ತದೆ.

ಆದರೂ ಭಾಂಡಾರಿಗರಿಗೆ ಗ್ರಂಥರಕ್ಷಣೆಯ ಒಂದೆರಡು ಅಂಶಗಳು ಅತಿ ಪ್ರಯಾಸವನ್ನುಂಟುಮಾಡುತ್ತವೆ. ಹುಳುಗಳು, ಬೆಂಕಿ, ನೀರು ಮುಂತಾದವುಗಳಿಂದ ಗ್ರಂಥಗಳಿಗೆ ಅಪಾಯವೇನಾಗುವದು ಎಂಬುದನ್ನು ಕಂಡುಹಿಡಿದು ಅದಕ್ಕೆ ತಕ್ಕ ಪರಿಹಾರಗಳನ್ನು ಹುಡುಕಿ ತೆಗೆದಿರುತ್ತಾರೆ. ಆದರೆ ಮನುಷ್ಯನ ಅಪೂರ್ಣತೆಗೆ ಮಾತ್ರ ಉಪಾಯಗಳನ್ನು ಶೋಧಿಸುವದು ಕಠಿಣವಾಗಿರುತ್ತದೆ. ಒಯ್ದ ಪುಸ್ತಕಗಳನ್ನು ತಪ್ಪದೆ, ತಡಮಾಡದೆ ತಿರುಗಿಕೊಡುವದು, ಸ್ವಾರ್ಥದ ಸಂಕಟದಲ್ಲಿ ಮಹತ್ವದ ಗ್ರಂಥಗಳನ್ನಾಗಲಿ, ಗ್ರಂಥಭಾಗಗಳನ್ನಾಗಲಿ ಕದ್ದೊಯ್ಯುವದು, ಮುಂತಾದ ಪ್ರಕಾರಗಳು ಇನ್ನೂ ನಡೆದೇ ಇರುತ್ತದೆ. ಆದರಿಂದ 'ಉಪಯೋಗಕ್ಕಾಗಿ ಪುಸ್ತಕಗಳು' 'ಸಕಲರಿಗೂ ಗ್ರಂಥಗಳ ಸಮಾನ ಲಾಭ' ಮುಂತಾದ ಸರ್ವಸಮ್ಮತವಾದ ತತ್ವಗಳಿಗೆ ಭಂಗ ಬರುವದು. ಈ ಬಗೆಯ ಕೊರತೆಗಾಗಿಯೆ ಮನುಷ್ಯನಿಗೆ ಕ್ರಿಮಿಕೀಟಕ, ನಿಸರ್ಗಕೋಪ ಮುಂತಾದವುಗಳಿಗಿಂತ ಕ್ಲೇಶಕಾರಕ ಶತ್ರುವು ಮನುಷ್ಯನೆ ಆಗಿರುವನು ಎಂಬ ಮಾತು ನಿಜವೆನಿಸುವದು.

ನಿಯಮ ನಿರ್ಬಂಧಗಳ ಚೌಕಟ್ಟಿನಲ್ಲಿ ಅತಿಬಿಗಿಯಾದ ಆಡಳಿತವನ್ನಿಟ್ಟು ಜನರನ್ನು ಪೀಡಿಸುತ್ತ ಸರ್ವಾಧಿಕಾರಿಯಾಗಿ ಮೆರೆಯುವ ಭಾಂಡಾರಿಗನು ಇಂದು ಅದೃಶ್ಯನಾಗಿರುವನು. ಸೃಷ್ಟಿ ಸಂಹೃತಿಗಳಿಗಿಂತಲೂ 'ಸ್ಥಿತಿ'ಯೆ ಹೆಚ್ಚು ಮಹತ್ವವಾದ ಅವಸ್ಥೆಯೆಂದೇ ಅದರೊಡೆಯನಾದ ವಿಷ್ಣುವಿನ ಹೊಣೆಯು ಹೆಚ್ಚಿನದಿರುವಂತೆ ಗ್ರಂಥಕರ್ತ ಮತ್ತು ಓದುಗ ಇವರಿಗಿಂತ ಪ್ರಜಾಪ್ರಭುತ್ವದ ಈ ಕಾಲದಲ್ಲಿ ಭಾಂಡಾರಿಗನದು ವಿಶಿಷ್ಟವಾದ ಸ್ಥಾನವಾಗಿರುತ್ತದೆ. ಅಂತೆಯೆ ಗ್ರಂಥಾಲಯಗಳು ಇಂದು ಸಕಲರಿಗೂ ಸಮವಾದ ಸೌಕರ್ಯಗಳನ್ನೊದಗಿಸಿಕೊಡುವ ಸಾಮಾಜಿಕ ಸಂಸ್ಥೆಯಾಗಬೇಕಾದರೆ ಭಾಂಡಾರಿಗ ಮತ್ತು ಓದುಗರು ಅತ್ಯಂತ ಸಹನೆ ಮತ್ತು ಪೂರ್ಣಸಹಕಾರದಿಂದ ನಡೆದುಕೊಳ್ಳಬೇಕಾಗುತ್ತದೆ!

— ಎಚ್. ಎಸ್. ಪಾಟೀಲ

# ಭೌಗೋಳಿಕ ಪರಿಸರ ಮತ್ತು ಸಮಾಜ

ಒಂದು ಪ್ರದೇಶದ ಸುತ್ತಲೂ ಹರಡಿಕೊಂಡಿರುವ ಭೌತಿಕವಸ್ತುಗಳಿಂದ ಕಲ್ಪಿತವಾಗಿರುವ ವಾತಾವರಣವನ್ನು ಭೌಗೋಳಿಕ ಪರಿಸರವೆಂದು ಕರೆಯುತ್ತೇವೆ. ಭೂಮಿಯ ಮೇಲ್ಮೈಲಕ್ಷಣ, ನದಿ, ಬೆಟ್ಟ, ಸರೋವರ ಮೊದಲಾದ ಸ್ವಾಭಾವಿಕ ಎಲ್ಲೆಕಟ್ಟುಗಳು, ವಾಯುಗುಣ, ಭೂಮಿಯ ಉತ್ಪನ್ನಗಳು ಮೊದಲಾದುವು ಭೌಗೋಳಿಕ ಪರಿಸರಕ್ಕೆ ಸೇರಿದವು. ಇವುಗಳಲ್ಲದೆ ಭೌಗೋಳಿಕ ಪರಿಸರದಲ್ಲಿ ಗಿಡಮರಗಳು, ಪ್ರಾಣಿಗಳು, ಸಮುದ್ರಗಳು, ಮರುಭೂಮಿ:, ಜ್ವಾಲಾಮುಖಿ, ಗುರುತ್ವಾಕರ್ಷಣಶಕ್ತಿ ಮೊದಲಾದುವು ಸಹ ಸೇರಿವೆ.[1]

ಮನುಷ್ಯನು ಜೀವನದ ಮೇಲೆ ಪ್ರಭಾವ ಬೀರುವ ಭೌಗೋಳಿಕ ಶಕ್ತಿಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಅವು ಯಾವುವೆಂದರೆ : (ಅ) ಮನುಷ್ಯನ ನಿಯಂತ್ರಣಕ್ಕೆ ಒಳಪಡದ ಶಕ್ತಿಗಳು ಮತ್ತು (ಆ) ಮನುಷ್ಯನ ಅಂಕೆಗೆ ಒಳಪಟ್ಟಿರುವ ಶಕ್ತಿಗಳು.[2]

ಮನುಷ್ಯನ ಅಂಕೆಗೆ ಸಿಲುಕದಿರುವ ಶಕ್ತಿಗಳಲ್ಲಿ ಭೂಮಿ ಮತ್ತು ಭೂಮಿಯ ಮೇಲೆ ಹರಡಿಕೊಂಡಿರುವ ಜಲರಾಶಿ ; ಸೂರ್ಯನಿಗೂ-ಭೂಮಿಗೂ ಮತ್ತು ಭೂಮಿಗೂ-ಚಂದ್ರನಿಗೂ ಇರುವ ಪ್ರಾಕೃತಿಕ ಸಂಬಂಧಗಳು ; ಮತ್ತು ಈ ಸಂಬಂಧಗಳಿಂದಾಗುವ ಕತ್ತಲೆ-ಬೆಳಕು, ಉಬ್ಬರ ವಿಳಿತ, ಗ್ರಹಣ ; ಪರ್ವತಗಳು, ಮೈದಾನ

[1] R. M. Mac Iver and C. H, Page. *Society: An Introductory Analysis*. ಪು. ೯೮

[2] ಅದೇ : ಪುಟ ೯೮

ಗಳು, ನದಿಗಳು, ಖನಿಜಗಳು, ವಾಯುಗುಣ, ಮಾರುತಗಳು ಇತ್ಯಾದಿ ಅತಿ ಮುಖ್ಯವಾದುವು. ಇವುಗಳನ್ನು ಮನುಷ್ಯನು ತನ್ನ ನಿಯಂತ್ರಣಕ್ಕೆ ಒಳಪಡಿಸಿಕೊಳ್ಳಲು ಸಾಧ್ಯವಿಲ್ಲ. ಕೆಲವು ಭೌಗೋಳಿಕ ಶಕ್ತಿಗಳನ್ನು ಮನುಷ್ಯನು ತನ್ನ ಸೌಕರ್ಯಗಳಿಗಾಗಿ ಉಪಯೋಗಿಸಬಹುದು. ಪರ್ವತಗಳನ್ನು ಮನುಷ್ಯನು ಬೇರೆಯ ಸ್ಥಳಕ್ಕೆ ಬದಲಾಯಿಸಲು ಸಾಧ್ಯವಿಲ್ಲ; ಆದರೆ, ಅವುಗಳಲ್ಲಿ ಸುರಂಗಮಾರ್ಗಗಳನ್ನು ನಿರ್ಮಿಸಬಲ್ಲನು. ಋತುಗಳನ್ನು ಬದಲಾಯಿಸುವ ಶಕ್ತಿಯನ್ನು ಮನುಷ್ಯನು ಪಡೆದಿಲ್ಲ; ಆದರೆ ವಿವಿಧ ಋತುಗಳಿಗೆ ಹೊಂದಿಕೊಂಡು ಹೋಗುವ ವಿವಿಧ ಮಾರ್ಗಗಳನ್ನು ಕಂಡುಹಿಡಿಯುವ ಶಕ್ತಿಯನ್ನು ಅವನು ಹೊಂದಿರುತ್ತಾನೆ. ಗಾಳಿಬೀಸುವ ದಿಕ್ಕನ್ನು ಬದಲಾಯಿಸಲು ಅವನಿಗೆ ಸಾಧ್ಯವಿಲ್ಲ. ಆದರೆ ಗಾಳಿಯಂತ್ರದಂಥ ಸಾಧನಗಳಿಂದ (wind-mill) ಗಾಳಿಯನ್ನು ತನ್ನ ಅನುಕೂಲಕ್ಕಾಗಿ ಬಳಸಿಕೊಳ್ಳಬಹುದು.

ಮನುಷ್ಯನ ನಿಯಂತ್ರಣಕ್ಕೆ ಒಳಪಟ್ಟಿರುವ ಭೌಗೋಳಿಕ ವಸ್ತುಗಳು ಕೆಲವಿವೆ. ಅವುಗಳನ್ನು ಆತನು ತನ್ನ ಶಕ್ತಿಸಾಮರ್ಥ್ಯಗಳಿಂದ ಬದಲಾಯಿಸಿ ತನ್ನ ಉಪಯೋಗಕ್ಕೆ ಅಳವಡಿಸಿಕೊಳ್ಳಬಹುದು. ಇವುಗಳಲ್ಲಿ ಮುಖ್ಯವಾದುವು ಗಿಡಗಳು, ಪ್ರಾಣಿಗಳು ಮತ್ತು ಭೂಮಿಯ ಫಲಶಕ್ತಿ. ಮನುಷ್ಯನು ತನ್ನ ಉಪಯೋಗಕ್ಕೆ ಬರುವ ಅನೇಕ ಪ್ರಾಣಿಗಳನ್ನು ಪಳಗಿಸಿ ಸಾಕುತ್ತಾನೆ. ಅಪಾಯಕಾರಕ ಕ್ರಿಮಿಕೀಟಗಳನ್ನೂ ಮತ್ತು ಪ್ರಾಣಿಗಳನ್ನೂ ನಿರ್ಮೂಲ ಮಾಡುತ್ತಾನೆ. ವಿವಿಧ ಗಿಡಮರಗಳನ್ನು ಬೆಳಸಿ ಉಪಯೋಗಿಸಿಕೊಳ್ಳುತ್ತಾನೆ. ಹೀಗೆ ಭೂಮಿಯ ಮೇಲಿರುವ ವಿವಿಧ ಜೈವಿಕ ಶಕ್ತಿಗಳನ್ನು ತನ್ನ ಜೀವನದ ಮೇಲ್ಮೆಗೆ ಉಪಯೋಗಿಸುತ್ತಾನೆ. ಇವು ಅವನ ಜೀವನದ ಮೇಲೆ ಮಹತ್ತರ ಪರಿಣಾಮಗಳನ್ನುಂಟು ಮಾಡಿವೆ. ಮನುಷ್ಯನ ಭೌತಿಕವಸ್ತುಗಳ ಮೇಲಣ ನಿಯಂತ್ರಣವು ನಿರಂತರವಾಗಿ ಬೆಳೆಯುತ್ತಿದೆ. ಆದರೆ, ಇದರಿಂದ ಮನುಷ್ಯನು ಜೈವಿಕ ಪರಿಸರದ ಮೇಲೆ ಸಂಪೂರ್ಣ ಹತೋಟಿಯನ್ನು ಹೊಂದಿರುವನೆಂದು ತಿಳಿದರೆ ತಪ್ಪಾದೀತು.

ಪುರಾತನ ಕಾಲದಿಂದಲೂ ಮನುಷ್ಯನು ತನಗೂ, ಭೂಮಿ ಮತ್ತು ನೈಸರ್ಗಿಕ ಶಕ್ತಿಗಳಿಗೂ ಇರುವ ಸಂಬಂಧಗಳನ್ನು ಕುರಿತು ವಿವೇಚಿಸಿದ್ದಾನೆ. ಜನಜೀವನದ ಮೇಲೆ ಭೌಗೋಳಿಕ ಪ್ರಭಾವವನ್ನೂ, ಮನುಷ್ಯನಿಗೂ ಮತ್ತು ಭೌಗೋಳಿಕ ಪರಿಸರಕ್ಕೂ ಇರುವ ನಿಕಟ ಸಂಬಂಧವನ್ನೂ ಅರಿಯಲು ಪ್ರಯತ್ನಿಸಿ, ಈ ಸಂಬಂಧಗಳ ಸ್ವರೂಪವನ್ನು ನಿರೂಪಿಸಿದ್ದಾನೆ. ಈ ಸಂಬಂಧಗಳ ನಿರೂಪಣೆಯು ಕೇವಲ ಪ್ರವೀಣರಿಗೆ ಮೀಸಲಾಗಿಲ್ಲ. ಸಾಮಾನ್ಯ ಮನುಷ್ಯ ತನ್ನ ಅನುಭವದಿಂದ ಅನೇಕ ವಿಷಯಗಳನ್ನು ತಿಳಿದುಕೊಂಡಿದ್ದಾನೆ. ಚಳಿಯ ಪ್ರದೇಶಗಳಲ್ಲಿ ವಾಸಮಾಡುವವರು ಚಟುವಟಿಕೆಯಿಂದ ಹೆಚ್ಚು ಕೆಲಸಮಾಡುತ್ತಾರೆ. ಬಿಸಿಲಿನ ಪ್ರದೇಶಗಳಲ್ಲಿ ಕೆಲಸಮಾಡುವವರು ಹೆಚ್ಚಾಗಿ ಶ್ರಮವಹಿಸಲು ಸಾಧ್ಯವಿಲ್ಲ. ಹೀಗಾಗಲು ಹವಾ

ಮಾನವ ಪ್ರಭಾವವೇ ಕಾರಣ ಎಂಬುದನ್ನು ಅವನು ತಿಳಿದಿದ್ದಾನೆ. ಒಟ್ಟಿನಲ್ಲಿ, ವಿವಿಧ ಭೂಭಾಗಗಳಲ್ಲಿ ವಾಸಿಸುವ ಜನರ ಜೀವನದಲ್ಲಿ ಕಾಣಬರುವ ವ್ಯತ್ಯಾಸಗಳಿಗೆ ಭೌಗೋಳಿಕ ಪರಿಸರವು ಅತಿ ಮುಖ್ಯವಾದ ಕಾರಣವೆಂದು ಅನೇಕ ಸಮಾಜ ಶಾಸ್ತ್ರಜ್ಞರು ವಿವರಿಸಿದ್ದಾರೆ.

ವಿಶ್ವದ ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುವ ಆದಿವಾಸಿಗಳ ಜೀವನವನ್ನು ಪರಿಶೀಲಿಸಿದರೆ ಅವರಲ್ಲಿ ಕಂಡುಬರುವ ಅನೇಕ ವ್ಯತ್ಯಾಸಗಳನ್ನು ಗ್ರಹಿಸಬಹುದು. ಶೀತವಲಯಗಳಲ್ಲಿ ವಾಸಿಸುವ ಎಸ್ಕಿಮೋಗಳ 'ಇಗ್ಲೂ' ಮನೆಗೂ, ಅವರು ಸೇವಿಸುವ ಆಹಾರಕ್ಕೂ, ಬಯಲು ಪ್ರದೇಶಗಳಲ್ಲಿ ವಾಸಮಾಡುವ ಕ್ರೋ ಇಂಡಿಯನರು ವಾಸಮಾಡುವ ಮನೆಗೂ, ಅವರ ಆಹಾರಕ್ಕೂ ವ್ಯತ್ಯಾಸಗಳಿವೆ. ಈ ಎರಡು ಜನಾಂಗಗಳ ಸಾಮಾಜಿಕ ವ್ಯವಸ್ಥೆಗಳಲ್ಲಿಯೂ ಹಲವಾರು ಪ್ರಮುಖ ವ್ಯತ್ಯಾಸಗಳಿವೆ. ಹೀಗೆ ನಾವು ವಿವಿಧ ಸಾಮಾಜಿಕ ಸಮುದಾಯಗಳನ್ನು ಪರಿಶೀಲಿಸಿದರೆ, ಅವುಗಳ ಜೀವನದ ರೀತಿಯಲ್ಲಿ ಅನೇಕ ಪ್ರಮುಖ ವ್ಯತ್ಯಾಸಗಳು ಗೋಚರಿಸುತ್ತವೆ. ಇಷ್ಟೇ ಅಲ್ಲದೆ, ಕೆಲವು ಪ್ರದೇಶಗಳಲ್ಲಿ ವಾಸಮಾಡುವ ಜನರು ಬೆಳ್ಳಗೆ ಎತ್ತರವಾಗಿದ್ದರೆ, ಇನ್ನು ಕೆಲವು ಪ್ರದೇಶಗಳಲ್ಲಿ ವಾಸಮಾಡುವವರು ಕಪ್ಪಗೆ ಗಿಡ್ಡರಾಗಿರುತ್ತಾರೆ. ಇನ್ನು ಕೆಲವು ಜನರು ಹಳದಿಮಿಶ್ರಿತ ಬಿಳುಪು ಬಣ್ಣವನ್ನು ಹೊಂದಿರುವರು. ಕೆಲವರ ತಲೆಗಳು ಉದ್ದವಾಗಿದ್ದರೆ ಮತ್ತೆ ಕೆಲವರ ತಲೆಗಳು ಅಗಲವಾಗಿರುತ್ತವೆ. ಕಣ್ಣುಗಳ ಬಣ್ಣದಲ್ಲಿ ಕೂದಲಿನ ಬಣ್ಣ ಮತ್ತು ನೀಳದಲ್ಲಿ ವ್ಯತ್ಯಾಸಗಳು ಕಾಣಬರುತ್ತವೆ. ಕೆಲವರ ಮೂಗು ನೀಳವಾಗಿ ಚೂಪಾಗಿದ್ದರೆ, ಇನ್ನು ಕೆಲವರ ಮೂಗು ಮೊಂಡಾಗಿರುತ್ತದೆ. ಹೀಗೆ ಜನರ ರೂಪ ಮತ್ತು ದೇಹ ರಚನೆಯಲ್ಲಿ ಹಲವಾರು ವ್ಯತ್ಯಾಸಗಳನ್ನು ಕಾಣಬಹುದು.

ನಮ್ಮ ದೇಶದಲ್ಲಿ ವಿವಿಧ ಪ್ರದೇಶಗಳಲ್ಲಿ ವಾಸವಾಗಿರುವ ಜನರ ಜೀವನದಲ್ಲಿ ಸಹ, ಭೌಗೋಳಿಕ ಪರಿಸರದ ಪ್ರಭಾವದಿಂದ ಹಲವು ಪ್ರಮುಖ ವ್ಯತ್ಯಾಸಗಳು ಕಾಣಬರುತ್ತವೆ. ಉತ್ತರ ಪ್ರದೇಶಗಳ ಪರ್ವತಶ್ರೇಣಿಗಳಲ್ಲಿ ವಾಸಮಾಡುವವರ ಜೀವನಕ್ರಮಕ್ಕೂ, ಗಂಗಾ–ಯಮುನಾ ನದಿಗಳ ಬಯಲುಪ್ರದೇಶಗಳಲ್ಲಿ ವಾಸ ಮಾಡುವವರ ಜೀವನಕ್ರಮಕ್ಕೂ ಅನೇಕ ವ್ಯತ್ಯಾಸಗಳಿವೆ. ಹಾಗೆಯೇ, ಮೈಸೂರು ರಾಜ್ಯದ ಮಲೆನಾಡಿನ ಜೀವನಕ್ಕೂ ಮತ್ತು ಮೈದಾನಪ್ರದೇಶದ ಜೀವನಕ್ಕೂ ವ್ಯತ್ಯಾಸಗಳನ್ನು ಕಾಣಬಹುದು. ಆಧುನಿಕ ನಾಗರಿಕತೆಯ ಪರಿಣಾಮವಾಗಿ ಜೀವನದ ರೀತಿನೀತಿಗಳಲ್ಲಿ ಸಮಾನತೆ ಕಂಡುಬಂದರೂ, ಭೌಗೋಳಿಕ ಪರಿಸರದ ಪ್ರಭಾವದಿಂದ ಜನಜೀವನದ ಮೇಲೆ ಕೆಲವು ವ್ಯತ್ಯಾಸಗಳು ಇದ್ದೇ ಇರುತ್ತವೆ.

ಹೀಗೆ, ವಿಶ್ವದ ವಿವಿಧ ಜನಗಳ ಮೈಕಟ್ಟು, ಬಣ್ಣ, ಜೀವನಕ್ರಮಗಳಲ್ಲಿ ಕಾಣುವ ವ್ಯತ್ಯಾಸಗಳಿಗೆ ಭೌಗೋಳಿಕ ಪರಿಸರವು ಅತ್ಯಂತ ಪ್ರಮುಖ ಕಾರಣವೆಂದು ಅನೇಕ ಸಮಾಜಶಾಸ್ತ್ರಜ್ಞರು ಪ್ರತಿಪಾದಿಸಿರುವರು. ಪ್ರಕೃತಿಯಲ್ಲಿರುವ ಅನೇಕ ವಸ್ತುಗಳು

ನಮ್ಮ ಜೀವನಕ್ಕೆ ಅತ್ಯಗತ್ಯವಾಗಿ ಬೇಕು. ಗಾಳಿ, ಬೆಳಕು, ನೀರು ಮೊದಲಾದುವು ಗಳಿಲ್ಲದೆ ನಾವು ಜೀವಿಸಲಾರೆವು. ಆದುದರಿಂದ, ನಮಗೆ ಪ್ರಕೃತಿಯ ನೆರವು ಅಗತ್ಯ. ಹೀಗೆ ಭೌಗೋಳಿಕ ಪರಿಸರಕ್ಕೂ, ಮನುಷ್ಯನ ಜೀವನಕ್ಕೂ ನಿಕಟ ಸಂಬಂಧವಿದೆ. ಭೌಗೋಳಿಕ ಪರಿಸರದ ಪ್ರಭಾವವನ್ನು ವಿವರಿಸುವ ಸಮಾಜಶಾಸ್ತ್ರಜ್ಞರ ವಿಚಾರ ಸರಣಿಯಿಂದ ಒಂದು ಪ್ರತ್ಯೇಕ ಪಂಥವೇ ಹುಟ್ಟಿತು. ಇದನ್ನು ಸಮಾಜಶಾಸ್ತ್ರದಲ್ಲಿ ಭೌಗೋಳಿಕ ಪಂಥವೆಂದು ಕರೆಯಲಾಗಿದೆ. ಈ ಪಂಥಕ್ಕೆ ಸೇರಿದವರು ಮನುಷ್ಯನ ಜೀವನದ ಮೇಲೆ ನೈಸರ್ಗಿಕ ಶಕ್ತಿಗಳ ಪ್ರಭಾವವನ್ನು ವಿವಿಧ ರೀತಿಯಲ್ಲಿ ವಿವರಿಸಿರುವರು. ಈ ಪಂಥದ ಉಗ್ರಗಾಮಿಗಳು, ಮನುಷ್ಯನ ಜೀವನದ ಸರ್ವವ್ಯವಹಾರಗಳೂ ಭೌಗೋಳಿಕ ಅಂಶಗಳಿಂದ ನಿಶ್ಚಿತವಾಗಿವೆ ಎಂದು ಪ್ರತಿಪಾದಿಸಿದರು. ಈ ಸಮಾಜ ಶಾಸ್ತ್ರಜ್ಞರಲ್ಲಿ ಮಾಂಟೆಸ್‌ಕ್ಯು, ಲಿಪ್ಲೆ, ಡೆಮೊಲಿನ್ಸ್, ಓಡಮ್, ರ್‍ಯಾಟ್ಸಲ್, ಬಕಲ್, ಸೆಂಪೆಲ್, ಡೆಕ್ಸ್‌ಟರ್ ಮತ್ತು ಹಂಟಿಂಗ್‌ಟನ್ನರು ಪ್ರಮುಖರು.[3] ಈ ಸಮಾಜ ಶಾಸ್ತ್ರಜ್ಞರು ಭೌಗೋಳಿಕ ಅಂಶಗಳು ಮನುಷ್ಯನ ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಮೇಲೆ ಬೀರುವ ಪ್ರಭಾವಗಳನ್ನು ನಿರೂಪಿಸಿದುವರು. ಆದರೆ, ಇವರ ಅಭಿಪ್ರಾಯಗಳು ಏಕಪಕ್ಷೀಯವುಗಳಾದುದರಿಂದ, ಅವುಗಳನ್ನು ಒಪ್ಪಲಾಗುವುದಿಲ್ಲ. ಇವರು ಭೌಗೋಳಿಕ ಪರಿಸರಕ್ಕೆ ಮಾತ್ರವೇ ಪ್ರಾಮುಖ್ಯವನ್ನು ಕೊಟ್ಟು, ಅದು ಮನುಷ್ಯನ ಸಾಮಾಜಿಕ ಜೀವನವನ್ನು ನಿಷ್ಕರ್ಷಿಸುವ ಏಕೈಕ ಅಂಶವೆಂದು ಪ್ರತಿಪಾದಿಸಿದರು. ಸಮಾಜವಿಜ್ಞಾನಿ ಲಿಪ್ಲೆಯ ಪ್ರಕಾರ, ಒಂದು ಕುಟುಂಬದ ರಚನೆಯು ಅದು ಕೈಗೊಳ್ಳುವ ಕೆಲಸಗಳ ಸಂದರ್ಭಗಳಿಗನುಸಾರ ವಾಗಿರುತ್ತದೆ ಮತ್ತು ಅಂಥ ಕೆಲಸಗಳು ಆ ಕುಟುಂಬವು ವಾಸಮಾಡುತ್ತಿರುವ ಪ್ರದೇಶದ ಪರಿಸರಕ್ಕನುಗುಣವಾಗಿರುತ್ತವೆ. ಆದರೆ, ನಾವು ಒಂದೇ ವೃತ್ತಿಯನ್ನನು ಸರಿಸುವ ಕುಟುಂಬಗಳು ವಿವಿಧ ಭೌಗೋಳಿಕ ಸನ್ನಿವೇಶಗಳಲ್ಲಿರುವುದನ್ನು ನೋಡ ಬಹುದು. ಹಾಗೆಯೇ ಒಂದೇ ವಿಧವಾದ ಭೌಗೋಳಿಕ ಪರಿಸರದಲ್ಲಿ ವಿವಿಧ ವೃತ್ತಿ ಗಳನ್ನನುಸರಿಸುವ ಕುಟುಂಬಗಳನ್ನು ಕಾಣಬಹುದು. ಒಂದು ಸಮುದಾಯದ ಅಭಿವೃದ್ಧಿ ಮತ್ತು ಐಶ್ವರ್ಯ, ಅದು ಇರುವ ಸ್ಥಳ ಮತ್ತು ವಾಯುಗುಣಗಳ ಮೇಲೆ ಅವಲಂಬಿತವಾಗಿರುವುವೆಂದು ಬಕಲ್ ತಿಳಿಸಿದನು. ಆದರೆ, ಉತ್ತಮವಾದ ವಾಯು ಗುಣವನ್ನು ಹೊಂದಿರುವ ಪ್ರದೇಶಗಳಲ್ಲಿ ಸಹಸ್ರಾರು ವರ್ಷಗಳ ಕಾಲ ಯಾವ ನಾಗರಿಕತೆಯೂ ಮೂಡಲಿಲ್ಲ. ಆದರೆ, ಪರ್ವತಗಳಿಂದೊಡಗೂಡಿ, ಫಲವತ್ತಾದ ಭೂಮಿಯಿಲ್ಲದ ಸ್ಥಳಗಳಲ್ಲಿ ನಾಗರಿಕತೆ ಬೆಳೆದಿರುವುದು ಚಾರಿತ್ರಿಕ ವಿಷಯವಾಗಿದೆ. ಹಂಟಿಂಗ್‌ಟನ್ನನು ತನ್ನ 'ಸಿವಿಲಿಸೇಷನ್ ಅಂಡ್ ಕ್ಲೈಮೇಟ್' ಎಂಬ ನಾಗರಿಕತೆ ಮತ್ತು ಹವಾಮಾನಗಳಿಗೆ ಸಂಬಂಧಪಟ್ಟ ಗ್ರಂಥದಲ್ಲಿ ಉತ್ತಮವಾದ ವಾಯುಗುಣ

---

[3] ಅದೇ : ಪು. ೧೧೧

ನಾಗರಿಕತೆಯ ಬೆಳವಣಿಗೆಗೆ ಅತ್ಯಾವಶ್ಯಕವೆಂದು ಹೇಳಿದ್ದಾನೆ.[4] ಆದರೆ, ಅತ್ಯಂತ ಉತ್ತಮವಾದ ವಾಯುಗುಣವನ್ನು ಹೊಂದಿರುವ ದೇಶಗಳ ನಾಗರಿಕತೆ ಮಿಕ್ಕ ದೇಶಗಳ ನಾಗರಿಕತೆಯ ಅನೇಕ ಅಂಶಗಳನ್ನು ಪಡೆದಿರುವುದನ್ನು ಕಾಣುತ್ತೇವೆ. ಭೌಗೋಳಿಕ ಪಂಥದ ಸಮಾಜಶಾಸ್ತ್ರಜ್ಞರು ನಿರೂಪಿಸಿರುವ ನಿರ್ಣಾಯಕ ವಾದವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಆದರೂ ಮನುಷ್ಯನ ನಾಗರಿಕತೆಗೂ ಮತ್ತು ಆತನು ವಾಸಿಸುವ ಭೌಗೋಳಿಕ ವಾತಾವರಣಕ್ಕೂ ನಿಕಟಸಂಬಂಧವಿರುವ ಹಲವು ಅಂಶಗಳನ್ನು ಪರಿಶೀಲಿಸುವುದು ಯುಕ್ತವಾಗಿದೆ. ವಾಸ್ತವವಾಗಿ, ಮನುಷ್ಯನ ನಾಗರಿಕತೆಯ ಪ್ರಗತಿಗೂ, ಆತನು ಜೀವಿಸುವ ಭೌಗೋಳಿಕ ಪರಿಸರಕ್ಕೂ ಸಂಬಂಧವಿದೆ. ಆತನು ವಿಜ್ಞಾನದ ನೆರವಿನಿಂದ ನೈಸರ್ಗಿಕ ಶಕ್ತಿಗಳನ್ನು ನಿಯಂತ್ರಿಸಲು ಸತತವಾಗಿ ಪ್ರಯತ್ನಿಸುತ್ತಾನೆ. ಪ್ರಕೃತಿಯ ಶಕ್ತಿಗಳ ಮೇಲೆ ಮನುಷ್ಯನ ನಿಯಂತ್ರಣವು ಹೆಚ್ಚಿದಷ್ಟು, ಆತನು ತನ್ನ ಸ್ವಂತ ಶಕ್ತಿ ಸಾಮರ್ಥ್ಯಗಳನ್ನು ಅವಲಂಬಿಸುವುದು ಕಡಿಮೆಯಾಗುತ್ತದೆ. ಆದುದರಿಂದ, ನಾಗರಿಕತೆಯಲ್ಲಿ ಮುಂದುವರಿದ ಸಮುದಾಯಗಳು ಹೆಚ್ಚಾಗಿ ನೈಸರ್ಗಿಕ ಶಕ್ತಿಗಳನ್ನು ಅವಲಂಬಿಸಿರುವುದಿಲ್ಲ. ಭೌಗೋಳಿಕ ಪರಿಸರವು ಸಂಪೂರ್ಣವಾಗಿ ಮನುಷ್ಯನ ನಾಗರಿಕತೆಯ ಮಟ್ಟವನ್ನು ನಿರ್ಣಯಿಸುವುದಿಲ್ಲ. ಒಂದೇ ಭೌಗೋಳಿಕ ಪರಿಸರದಲ್ಲಿ ಉದ್ಭವಿಸಿದ ಅನೇಕ ನಾಗರಿಕತೆಗಳಲ್ಲಿ ಕೆಲವು ಮಾತ್ರ ಹಲವು ಶತಮಾನಗಳವರೆಗೆ ಬಾಳಿ, ಇನ್ನು ಕೆಲವು ಬಹಳ ಬೇಗ ನಶಿಸಿಹೋಗಿವೆ. ಇದಕ್ಕೆ ಭೌಗೋಳಿಕ ಪರಿಸರವು ಕಾರಣವಲ್ಲ. ಆರ್ನಾಲ್ಡ್ ಟಯೋನ್ಬಿ ಎಂಬ ಆಧುನಿಕ ಸಮಾಜಶಾಸ್ತ್ರಜ್ಞ ಈ ವಿಚಾರವನ್ನು ಸ್ಪಷ್ಟವಾಗಿ ತಿಳಿಸಿರುವನು. ಈಜಿಪ್ಟ್, ಹರಪ್ಪ–ಮಹೆಂಜದಾರೋ, ಹಿಟ್ಟೈಟ್, ಮೆಕ್ಸಿಕೊ, ಗ್ರೀಕ್, ರೋಮನ್, ಮಾಯಾ ಮೊದಲಾದ ನಾಗರಿಕತೆಗಳು ಭಿನ್ನವಾದ ಭೌಗೋಳಿಕ ಪರಿಸರಗಳಲ್ಲಿ ಮೂಡಿ, ಹೆಚ್ಚಿನ ಪ್ರಗತಿಯನ್ನು ಸಾಧಿಸಿದವು. ನಾಗರಿಕತೆಯು ಅನುಕೂಲವಾದ ವಾತಾವರಣದಲ್ಲಿ ಉದ್ಭವಿಸಿ ಅಭಿವೃದ್ಧಿಯಾಗುತ್ತದೆಂಬ ನಂಬಿಕೆಗೆ ವಿರೋಧವಾದ ಅಭಿಪ್ರಾಯವನ್ನು ಟಯೋನ್ಬಿ ಹೊಂದಿದ್ದಾನೆ. ಮನುಷ್ಯನು ಪ್ರಕೃತಿಯ ಪ್ರತಿಭಟನೆಯನ್ನು ಎದುರಿಸಿ, ನಿರಂತರ ಪ್ರಯತ್ನದಿಂದ ನಾಗರಿಕತೆಯನ್ನು ಕಟ್ಟಿರುವನೆಂದು ಅನೇಕ ನಿದರ್ಶನಗಳೊಡನೆ ಆತನು ವಿವರಿಸಿರುವನು. ಭೌಗೋಳಿಕ ವಾತಾವರಣವು ನಾಗರಿಕತೆಗಳ ಮೇಲೆ ಯಾವ ವಿಧವಾದ ಪ್ರಭಾವವನ್ನೂ ಬೀರುವುದಿಲ್ಲವೆಂದು ಹೇಳಲಾಗುವುದಿಲ್ಲ. ಅಂಥ ವಾದವು ಸಾಧುವಾದುದೂ ಅಲ್ಲ. ಆದರೆ, ಭೌಗೋಳಿಕ ಪರಿಸರದ ಪ್ರಭಾವವು ಒಂದೇ ವಿಧವಾದುದು ಎಂದಾಗಲಿ ಈಜಿಪ್ಟ್, ಮೆಸಪೊಟೋಮಿಯ ಮತ್ತು ಟೆನಿಸಿ ಕಣಿವೆಗಳ ಮೇಲೆ ಭೌಗೋಳಿಕ ವಾತಾವರಣ ಒಂದೇ ರೀತಿಯ ಪ್ರಭಾವವನ್ನು ಬೀರಿದೆಯೆಂದಾಗಲಿ ಹೇಳಲಾಗುವುದಿಲ್ಲ.[5] ಔದ್ಯೋಗಿಕ ನೈಪುಣ್ಯ, ವಾಣಿಜ್ಯ, ವ್ಯಾಪಾರ, ಹಣಕಾಸಿನ

---

[4] ಅದೇ : ಪು. ೧೦೧

[5] Arnold J. Toynbee, in R. M. Mac Iver and C. H. Page, *op. cit.*, ಪು ೧೦೩—೧೦೪

ಸಾಹಸಪೂರ್ಣ ವ್ಯವಹಾರಗಳು; ವೈಜ್ಞಾನಿಕ ಪ್ರಗತಿಯನ್ನು ಅವಲಂಬಿಸಿರುವ ಆರ್ಥಿಕ ಸನ್ನಿವೇಶಗಳು—ಇವುಗಳೆಲ್ಲ ಮನುಷ್ಯನ ಜೀವನದ ಮೇಲೆ ಪ್ರಭಾವ ಬೀರುತ್ತವೆ ಮತ್ತು ಅವನ ಪ್ರಗತಿಗೆ ಸಾಧಕವಾಗಿವೆ: ಇಂಗ್ಲೆಂಡಿನಲ್ಲಿ, ಕೈಗಾರಿಕೆಯ ಕ್ರಾಂತಿಯ ಪರಿಣಾಮವಾಗಿ, ಫಲವತ್ತಾದ ದಕ್ಷಿಣ ಪ್ರದೇಶಗಳಲ್ಲಿ ನೆಲಸಿದ್ದವರು, ಸಾಧಾರಣ ಭೂಗುಣ ಹೊಂದಿರುವ ಉತ್ತರ ಪ್ರದೇಶಗಳಿಗೆ ವಲಸೆಹೋದರು. ಆದರೆ, ಅಲ್ಲಿ ಭೌಗೋಳಿಕ ಪರಿಸರವು ದಕ್ಷಿಣದಲ್ಲಿ ಇದ್ದಂತೆಯೇ ಇದ್ದಿತು. ಅದರಲ್ಲಿ ಯಾವ ಬದಲಾವಣೆಯೂ ಇರಲಿಲ್ಲ. ಕೈಗಾರಿಕಾ ಕ್ರಾಂತಿ ಎರಡು ಪ್ರದೇಶಗಳಲ್ಲೂ ಪ್ರಭಾವ ಬೀರಿದ್ದಿತು. ಮನುಷ್ಯನು ಪ್ರಕೃತಿಯ ಮೇಲೆ ತನ್ನ ಸ್ವಾಮ್ಯವನ್ನು ಹೆಚ್ಚಿಸಿದಂತೆ ನಾಗರಿಕತೆಯ ಬೆಳವಣಿಗೆಗೆ ಸಮಾಜದ ಆಂತರಿಕ ಶಕ್ತಿಗಳ ಪ್ರಭಾವವು ಹೆಚ್ಚಾಗುತ್ತದೆ. ನಾವು ಆದಿವಾಸಿಗಳ ಜೀವನವನ್ನು ಗಮನಿಸಿದರೆ ಈ ವಿಷಯವು ಸ್ಪಷ್ಟವಾಗುತ್ತದೆ. ಆದಿವಾಸಿಗಳ ಜೀವನವು ಸರಳವಾದುದು. ಅವರ ಆರ್ಥಿಕ ಜೀವನವು ಸಂಪೂರ್ಣ ವಾಗಿ ಅವರು ವಾಸಿಸುವ ಭೌಗೋಳಿಕ ಪರಿಸರವನ್ನು ಅವಲಂಬಿಸಿದೆ. ಬೇಟೆ ಯಾಡುವುದು, ಮೀನುಹಿಡಿಯುವುದು, ಗೆಡ್ಡೆಗೆಣಸುಗಳನ್ನು ಆರಿಸಿ ತಿನ್ನುವುದು— ಇವುಗಳಿಂದ ಅವರ ಜೀವನವು ಸಾಗುತ್ತಿತ್ತು. ಅವರ ಉಡುಪು ಅಲ್ಲಿ ದೊರಕುವ ವಸ್ತುಗಳನ್ನವಲಂಬಿಸಿತ್ತು. ಅವರು ವಾಸಮಾಡುವ ಮನೆಗಳನ್ನು ಅಲ್ಲಿ ದೊರಕುವ ವಸ್ತುಗಳ ಸಹಾಯದಿಂದ ಕಟ್ಟುತ್ತಿದ್ದರು. ಅವರಿಗೆ ಹೊರಗಿನವರ ಸಂಪರ್ಕವಿರಲಿಲ್ಲ. ಅವರ ಕಲೆ ಮತ್ತು ವೃತ್ತಿಗಳು ಅವರಿಗೆ ದೊರಕುವ ವಸ್ತುಗಳನ್ನವಲಂಬಿಸಿದ್ದುವು. ಆದುದರಿಂದ, ಮಾನವಶಾಸ್ತ್ರಜ್ಞರು ಪ್ರಾಚೀನ ನಾಗರಿಕತೆಗಳನ್ನು ಭೌಗೋಳಿಕ ಪರಿಸರದಲ್ಲಿ ಹೆಚ್ಚಾಗಿ ದೊರಕುವ ವಸ್ತುವಿನ ಹೆಸರಿನಿಂದ ಕರೆಯುತ್ತಿದ್ದರು. "ಮಹಿಷ ಸಂಸ್ಕೃತಿ" (Buffalo-culture) "ಮುಸುಕಿನ ಜೋಳದ ಸಂಸ್ಕೃತಿ" (Maize-culture) ಮತ್ತು "ಪ್ರಾಚ್ಯ ವನ ಪ್ರದೇಶದ ಸಂಸ್ಕೃತಿ" (Eastern woodland culture) ಎಂಬ ಹೆಸರುಗಳು ಇದಕ್ಕೆ ಉದಾಹರಣೆಗಳು.

ನಾಗರಿಕತೆಯು ಬೆಳೆದಂತೆ, ಮನುಷ್ಯನು ಭೌಗೋಳಿಕ ಪರಿಸರದ ಅವಲಂಬನ ದಿಂದ ಮುಕ್ತನಾಗುತ್ತಾನೆ. ಅವನ ವೃತ್ತಿಗೂ ಮತ್ತು ಭೌಗೋಳಿಕ ಪರಿಸರಕ್ಕೂ ಯಾವ ಸಂಬಂಧವೂ ಇರುವುದಿಲ್ಲ. ಇದನ್ನು ಕೈಗಾರಿಕೆಗಳು ವಿಸ್ತರಿಸುವ ಪ್ರದೇಶ ಗಳಲ್ಲಿ ಕಾಣಬಹುದು. ವಿವಿಧ ಸಮಾಜಗಳ ಪರಸ್ಪರ ಸಂಬಂಧಗಳು ಹೆಚ್ಚಿರುವುದ ರಿಂದ, ಆ ಸಮಾಜಗಳ ಜೀವನದ ಬಗೆಯಲ್ಲಿ ಅನೇಕ ವಿಧವಾದ ಬದಲಾವಣೆಗಳಾಗು ತ್ತಿವೆ. ಸಾವಧಾನವಾಗಿ ಪರಿಶೀಲಿಸಿದರೆ, ಇಂದು ಮಾನವನ ಸರ್ವತೋಮುಖ ಪ್ರಗತಿಗೆ ಇರುವ ಅಡಚಣೆಗಳು ಭೌಗೋಳಿಕವಾದುವಲ್ಲ. ಅವು ಮಾನವನು ಸೃಷ್ಟಿ ಸಿರುವ ರಾಜಕೀಯ ಮತ್ತು ಸಾಂಸ್ಕೃತಿಕ ಪೂರ್ವಕಲ್ಪಿತ ಅಭಿಪ್ರಾಯಗಳಿಂದ ಮೂಡಿ ಬಂದಿವೆ. ಈ ಸಂದರ್ಭದಲ್ಲಿ ನಾವು ಇನ್ನೊಂದು ವಿಚಾರವನ್ನು ಪರಿಗಣಿಸಬೇಕು: ಒಂದೇ ಪ್ರದೇಶದಲ್ಲಿ ವಾಸಿಸುವ ವಿವಿಧ ಸಾಮಾಜಿಕ ಸಮೂಹಗಳ ಜೀವನದಲ್ಲಿ ಅನೇಕ

ಬದಲಾವಣೆಗಳನ್ನು ನೋಡುತ್ತಿದ್ದೇವೆ. ಇಂದಿನ ಮಹಾನಗರಗಳಲ್ಲಿ ವಾಸಿಸುತ್ತಿರುವ ಜನರ ಜೀವನದ ವೈವಿಧ್ಯವು ಇದಕ್ಕೆ ಸಾಕ್ಷಿ. ಒಂದೇ ಪ್ರಾಂತ್ಯದಲ್ಲಿ ಅತ್ಯಾಧುನಿಕ ರೀತಿಯಲ್ಲಿ ಜೀವನವನ್ನು ಸಾಗಿಸುತ್ತಿರುವ ಸಮಾಜಗಳನ್ನೂ, ಅನಾಗರಿಕ ಜೀವನವನ್ನು ಸಾಗಿಸುತ್ತಿರುವ ಆದಿವಾಸಿಗಳ ಸಮುದಾಯಗಳನ್ನೂ ಕಾಣುತ್ತೇವೆ. ಹೀಗೆ, ಒಂದೇ ಭೌಗೋಳಿಕ ಪರಿಸರದಲ್ಲಿ ನಾಗರಿಕತೆಯ ವಿವಿಧ ಶ್ರೇಣಿಗಳಲ್ಲಿರುವ ಸಮೂಹಗಳನ್ನು ನಾವು ಇಂದು ನೋಡುತ್ತಿದ್ದೇವೆ. ಅಮೆರಿಕ, ಆಸ್ಟ್ರೇಲಿಯ ಮತ್ತು ಭಾರತ ಈ ದೇಶ ಗಳಲ್ಲಿ ವಾಸಮಾಡುವ ಅನೇಕ ಆದಿವಾಸಿಗಳ ಜೀವನ ಈ ಅಭಿಪ್ರಾಯವನ್ನು ಪುಷ್ಟೀ ಕರಿಸುತ್ತದೆ. ಇದರಿಂದ ನಮಗೆ ಒಂದು ವಿಷಯವು ವಿದಿತವಾಗುತ್ತದೆ. ಮನುಷ್ಯನ ಜ್ಞಾನವು ಅಭಿವೃದ್ಧಿಯಾದಂತೆ, ಆತನು ಜೀವಿಸುವ ಭೌಗೋಳಿಕ ಪರಿಸರವು ಹೆಚ್ಚು ಅರ್ಥಗರ್ಭಿತವಾಗುತ್ತದೆ. ಖನಿಜ ಸಂಪತ್ತು ಭೂಗರ್ಭದಲ್ಲಿ ಸಾವಿರಾರು ವರ್ಷ ಗಳಿಂದಲೂ ಇದೆ. ಆದರೆ, ಮನುಷ್ಯನು ಅದನ್ನು ಭೂಮಿಯಿಂದ ತೆಗೆಯುವ ಬಗೆಯನ್ನು ಕಂಡುಹಿಡಿದಾಗಲೇ ಭೂಮಿಯ ಸಂಪತ್ತಿನ ಉಪಯೋಗ ಅವನಿಗೆ ವ್ಯಕ್ತವಾಯಿತು ಇದರಿಂದ ಭೌಗೋಳಿಕ ಪರಿಸರದ ಪೂರ್ಣ ಪ್ರಯೋಜನವು ಮನುಷ್ಯನ ಜ್ಞಾನಾಭಿ ವೃದ್ಧಿಯನ್ನವಲಂಬಿಸಿದೆ ಎಂದು ಹೇಳಬಹುದು. "ಸಂಸ್ಕೃತಿ, ಪರಿಸರದ ಪ್ರಭಾವವನ್ನು ಕುಂದುಮಾಡುವುದಕ್ಕೆ ಬದಲು, ಅದನ್ನು ಹೆಚ್ಚು ಪ್ರಯೋಜಕವಾಗಿಯೂ ಮತ್ತು ಅರ್ಥಪೂರ್ಣವಾಗಿಯೂ ಮಾಡುತ್ತದೆ. ಆದುದರಿಂದ, ಮನುಷ್ಯನ ತಾಂತ್ರಿಕ ಜ್ಞಾನವು ಹೆಚ್ಚಿದಷ್ಟೂ, ಒಂದು ಪ್ರದೇಶದ ನೈಸರ್ಗಿಕ ಶಕ್ತಿಗಳ ಪರಿಣಾಮವು ಶೂನ್ಯ ವಾಗದೆ, ವೃದ್ಧಿಯಾಗುತ್ತದೆ" ಎಂದು ಲೂಯಿ ಮಮ್‌ಫೋರ್ಡನು ತಿಳಿಸುತ್ತಾನೆ.

ಭೌಗೋಳಿಕ ಪರಿಸರವು ಮಾನವನ ಮೇಲೆ ತನ್ನ ಪ್ರಭಾವವನ್ನು ಎರಡು ವಿಧ ಗಳಲ್ಲಿ ಬೀರುತ್ತದೆ. ಈ ಪ್ರಭಾವಗಳನ್ನು ಮ್ಯಾಕ್‌ಐವರ್ ಮತ್ತು ಪೇಜ್ ಅವರು (ಅ) ಭೌಗೋಳಿಕ ಪ್ರತ್ಯಕ್ಷ ಪ್ರಭಾವಗಳು ಮತ್ತು (ಆ) ಭೌಗೋಳಿಕ ಪರೋಕ್ಷ ಪ್ರಭಾವ ಗಳು ಎಂದು ಎರಡು ಭಾಗಗಳಾಗಿ ವರ್ಗೀಕರಿಸಿರುವರು.[6]

ಭೌಗೋಳಿಕ ಪರಿಸರವು ಕೆಲವುಬಾರಿ ಮನುಷ್ಯನ ಜೀವನದ ಮೇಲೆ ನೇರವಾಗಿ ಅಥವಾ ಪ್ರತ್ಯಕ್ಷವಾಗಿ ತನ್ನ ಪ್ರಭಾವಗಳನ್ನು ಬೀರುತ್ತದೆ. ಮನುಷ್ಯನು ವಾಸಿಸುವ ನೆಲೆ ಮತ್ತು ಮನೆ; ರಸ್ತೆಗಳು, ಬೆಳೆಗಳು; ಅವನು ತನ್ನ ಆಹಾರಕ್ಕಾಗಿ ಮತ್ತು ಇತರ ಪ್ರಯೋಜನಗಳಿಗಾಗಿ ಸಾಕಿರುವ ಪ್ರಾಣಿಗಳು, ಖನಿಜಗಳು ಇವೇ ಮೊದಲಾದುವುಗಳ ಮೇಲೆ ಭೌಗೋಳಿಕ ಪರಿಸರದ ಪ್ರತ್ಯಕ್ಷ ಪ್ರಭಾವ ಕಾಣುತ್ತದೆ. ಆದರೆ, ಭೌಗೋಳಿಕ ಪ್ರಭಾವ ಅವನ ಜ್ಞಾನದ ಮಟ್ಟವನ್ನವಲಂಬಿಸಿದೆ. ಸಾವಿರಾರು ವರ್ಷಗಳಿಂದಲೂ ಯೂರೋಪಿನ ಖನಿಜ ಸಂಪತ್ತು ಭೂಮಿಯಲ್ಲಿ ಅಡಗಿದ್ದಿತು. ಆದರೆ ಆ ಸಂಪತ್ತು ಮನುಷ್ಯನಿಗೆ ಗೋಚರಿಸಿದುದು, ಆತನ ಜ್ಞಾನದ ಬೆಳವಣಿಗೆಯು ಒಂದು ಗೊತ್ತಾದ

[6] R M. Mac Iver and Page, *op. cit.*, ಪು. ೧೦೭

ಹಂತವನ್ನು ಮುಟ್ಟಿದಾಗ ಮಾತ್ರ ಎಂಬುದನ್ನು ನಾವು ಗಮನಿಸಬೇಕು. ಆದಿಕಾಲದಿಂದಲೂ ಪೆಟ್ರೋಲ್ ಮತ್ತು ಕಲ್ಲಿದ್ದಲು ಭೂಗರ್ಭದಲ್ಲಿದ್ದರೂ ಅವುಗಳ ಉಪಯೋಗ ಮನುಷ್ಯನಿಗೆ ಗೊತ್ತಾದುದು ಕೆಲವು ಶತಮಾನಗಳ ಹಿಂದೆ ಮಾತ್ರ ಎಂಬುದು ಇದಕ್ಕೆ ನಿದರ್ಶನ. ಸಹಸ್ರಾರು ವರ್ಷಗಳಿಂದ ನದಿಗಳು ಹರಿಯುತ್ತಿವೆ. ಆದರೆ ಅವುಗಳ ಉಪಯೋಗ ಮಾತ್ರ ಮನುಷ್ಯನ ಬುದ್ಧಿಶಕ್ತಿಯನ್ನು ಅವಲಂಬಿಸಿರುವುದು ಸರ್ವವಿದಿತವಾದ ವಿಷಯ. ನೀರಾವರಿ ಕ್ರಮ ಮತ್ತು ವಿದ್ಯುಚ್ಛಕ್ತಿಯ ಉತ್ಪಾದನೆ ಮೊದಲಾದುವು ಮನುಷ್ಯನ ಜ್ಞಾನದ ಪ್ರಗತಿಯಿಂದಾದ ಅನುಕೂಲತೆಗಳು. ವಾಣಿಜ್ಯ ಮತ್ತು ವ್ಯಾಪಾರಗಳ ಪರಿಣಾಮವಾಗಿ ಅನೇಕ ನಗರಗಳು ಉದ್ಭವಿಸಿದವು. ಹಾಗೆಯೆ, ಆರ್ಥಿಕ ಮತ್ತು ರಾಜಕೀಯ ಕಾರಣಗಳಿಂದ ಕೆಲವು ನಗರಗಳು ಕ್ಷೀಣಿಸಿದವು ಹೀಗೆ ಭೌಗೋಳಿಕ ಪರಿಸರ ಮತ್ತು ಸಾಮಾಜಿಕ ವ್ಯವಸ್ಥೆ ಪರಸ್ಪರ ಪ್ರಭಾವ ಹೊಂದಿವೆ. ಮನುಷ್ಯನ ಬುದ್ಧಿಶಕ್ತಿಯು ಎಷ್ಟೇ ಹೆಚ್ಚಾಗಿದ್ದರೂ, ಅದು ಉಪಯೋಗಕ್ಕೆ ಬರುವುದು ಭೌತಿಕ ವಸ್ತುಗಳನ್ನು ಉಪಯೋಗಕ್ಕಾಗಿ ಅಳವಡಿಸಿಕೊಳ್ಳುವಾಗ. ಭೌಗೋಳಿಕ ಪರಿಸರ ಮಾನವನಿಗೆ ಭೌತಿಕ ವಸ್ತುಗಳನ್ನು ಒದಗಿಸುತ್ತದೆ ಮತ್ತು ಸಾಮಾಜಿಕ ಪರಿಸರಗಳು ಆ ಭೌತಿಕವಸ್ತುಗಳನ್ನು ಜೀವಿತದಲ್ಲಿ ಬಳಸಿಕೊಳ್ಳಲು ಮಾನವನಿಗೆ ಸದವಕಾಶ ನೀಡುತ್ತವೆ.

ಭೌಗೋಳಿಕ ಅಂಶಗಳ ಪರೋಕ್ಷ ಪ್ರಭಾವಗಳನ್ನು ಪರಿಶೀಲಿಸುವಾಗ ನಾವು ಹೆಚ್ಚು ಎಚ್ಚರಿಕೆಯಿಂದಿರಬೇಕು. ಈ ವಿಷಯದಲ್ಲಿ ನಾವು ರೂಢಿಯಲ್ಲಿರುವ ನಂಬಿಕೆಗಳನ್ನು ಕಾಣುತ್ತೇವೆ. ವಾಯುಗುಣವು ಜನಾಂಗಗಳ ದೇಹರಚನೆಯ ಬಗ್ಗೆ ಪ್ರಭಾವ ಬೀರುವುದಲ್ಲದೆ ಜನಾಂಗಗಳ ನಾಗರಿಕತೆಯನ್ನು ಸಹ ಸೃಷ್ಟಿಸುತ್ತದೆ ಎಂಬುದು ಅಂಥ ಒಂದು ನಂಬಿಕೆ. "ಆಫ್ರಿಕದ ಅಗಾಧವಾದ ಬಿಸಿಲು ಅಲ್ಲಿ ವಾಸಮಾಡುವ ಜನರನ್ನು ಕಪ್ಪಾಗಿ ಮಾಡಿದೆ; ಆಫ್ರಿಕದ ಜನರ ನಾಗರಿಕತೆ ಅವರ ಪರಿಸರಕ್ಕನುಗುಣವಾದ ಸಾಧನೆ" ಎಂಬ ಹೇಳಿಕೆಯ ಮೊದಲ ಭಾಗದಲ್ಲಿ ಒಂದಷ್ಟು ಸತ್ಯಾಂಶವಿದೆ: ಮನುಷ್ಯನ ಅಂಗಗಳ ರಚನೆ ಮತ್ತು ಕ್ರಿಯೆಗಳ ಮೇಲೆ ವಾಯುಗುಣದ ಪ್ರಭಾವವಿರುತ್ತದೆ. ಚಳಿ ಹೆಚ್ಚಾಗಿರುವ ಪ್ರದೇಶಗಳಲ್ಲಿ ವಾಸಮಾಡುವ ಎಸ್ಕಿಮೋ ಜನರ ಮೂಗಿನ ರಂಧ್ರಗಳು ಸಣ್ಣಗಿರುತ್ತವೆ. ಇದರಿಂದ ಅವರು ತೆಗೆದುಕೊಂಡ ಹೊರಗಿನ ತಣ್ಣಗಾಳಿಯು, ಬೆಚ್ಚಗಿರುವ ಮೂಗಿನ ಕಿರುರಂಧ್ರಗಳ ಮೂಲಕ ದೇಹವನ್ನು ಪ್ರವೇಶಿಸಿದಾಗ ದೇಹದ ಶಾಖ ಸ್ವಲ್ಪ ಹೆಚ್ಚಾಗುತ್ತದೆ. ಉಷ್ಣದೇಶಗಳಲ್ಲಿ ವಾಸಿಸುವವರು ಕಪ್ಪಾಗಿರುತ್ತಾರೆ. ಅವರ ದೇಹದ ಸ್ವಾಭಾವಿಕ ವರ್ಣ ದ್ರವ್ಯವು ಸೂರ್ಯನ ಶಾಖದ ತೀಕ್ಷ್ಣತೆಯಿಂದ ಸ್ವಲ್ಪ ರಕ್ಷಣೆಯನ್ನು ಕೊಡಬಹುದು. ಆದರೆ, ಈ ಸಂದರ್ಭದಲ್ಲಿ ನಾವು ಒಂದು ವಿಷಯವನ್ನು ಮರೆಯಬಾರದು. ಹೊಸ ವಂಶಗಳು ಹುಟ್ಟುವುದು ಜೈವಿಕ ಮಾರ್ಪಾಟುಗಳ ಪರಿಣಾಮದಿಂದ. ಇಂತಹ ಬದಲಾವಣೆಗಳು ಬಸುಮುಟ್ಟಿಗೆ ಸೃಷ್ಟಿಕ್ರಮದಲ್ಲಾಗುತ್ತವೆ. ಇವುಗಳ ಮೇಲೆ ವಾಯುಗುಣವು ಯಾವ ಪರಿಣಾಮವನ್ನೂ ಬೀರುವುದಿಲ್ಲ.

ಈ ಸೃಷ್ಟಿಕ್ರಮದ ಬದಲಾವಣೆಗಳು ತಂದೆತಾಯಿಗಳಿಂದ ಮಕ್ಕಳಿಗೆ ರಕ್ತಗತವಾಗಿ ಹೋಗುತ್ತವೆ. ಇದರೊಂದಿಗೆ ಭೌಗೋಳಿಕ ಪರಿಸರವು ಮಾನವನ ಅಂಗಗಳ ಮೇಲೆ ಕೆಲವು ಪರಿಣಾಮಗಳನ್ನುಂಟುಮಾಡಬಹುದು. ಬೋಅಸ್ ಎಂಬ ಸಮಾಜಶಾಸ್ತ್ರಜ್ಞನು ಸಹ ಮನುಷ್ಯನ ಎತ್ತರ ಮತ್ತು ತೂಕದ ಮೇಲೆ ಪರಿಸರವು ಬೀರುವ ಪ್ರಭಾವವನ್ನು ತಿಳಿಸುತ್ತಾನೆ. ಆದರೆ, ಮಾನವನ ಭೌತಿಕ ಲಕ್ಷಣಗಳಿಗೂ ಮತ್ತು ಆತನ ನಾಗರಿಕತೆಯ ಸಾಧನೆಗೂ ಯಾವ ಸಂಬಂಧವೂ ಇಲ್ಲ

ಭೌಗೋಳಿಕ ಪರಿಸರಕ್ಕೂ, ವ್ಯಕ್ತಿಯ ಮತ್ತು ಸಮಾಜದ ಹಲವಾರು ಗುಣ ಮತ್ತು ಪ್ರವೃತ್ತಿಗಳಿಗೂ ಸಂಬಂಧಗಳನ್ನು ಹಲವು ಸಮಾಜಶಾಸ್ತ್ರಜ್ಞರು ನಿರೂಪಿಸಿರು ವರು. ಅವರ ಅಭಿಪ್ರಾಯದಲ್ಲಿ ವಸಂತಕಾಲದಲ್ಲಿ ಮನುಷ್ಯನು ಹೆಚ್ಚು ಲವಲವಿಕೆ ಯಿಂದಿರುತ್ತಾನೆ. ಆಗ ಅವನ ಬುದ್ಧಿ ಚಳಿಗಾಲಕ್ಕಿಂತ ಹೆಚ್ಚು ಚುರುಕಾಗಿರುತ್ತದೆ, ಬದಲಾಯಿಸಿದ ವಾತಾವರಣಕ್ಕೆ ಸಂಬಂಧಪಟ್ಟ ದೈಹಿಕ ಪ್ರತಿಕ್ರಿಯೆಯೇ ಈ ವ್ಯತ್ಯಾಸಕ್ಕೆ ಕಾರಣ. ಶೀತವಲಯ ಅಥವಾ ಸಮಶೀತೋಷ್ಣವಲಯಗಳಲ್ಲಿ ವಾಸಮಾಡುತ್ತಿದ್ದವರು ಬೇರೆ ಹವಾಮಾನವಿರುವ ಪ್ರದೇಶಗಳಿಗೆ ಬಂದು ನೆಲೆಸಿದ ಕೆಲವು ಕಾಲದ ಮೇಲೆ ತಮ್ಮ ಸ್ವಂತದೇಶದಲ್ಲಿ ಮಾಡುತ್ತಿದ್ದ ಕೆಲಸಕ್ಕಿಂತಲೂ ಹೆಚ್ಚು ಕೆಲಸಮಾಡಲು ಉಪಕ್ರಮಿಸುತ್ತಾರೆ. ಇದರಿಂದ ವಾಯುಗುಣವು ಒಬ್ಬ ಮನುಷ್ಯ ನನ್ನು ಹೆಚ್ಚು ಕೆಲಸಮಾಡುವಂತೆಯೂ ಇನ್ನೊಬ್ಬನನ್ನು ಕಡಿಮೆ ಕೆಲಸಮಾಡು ವಂತೆಯೂ ಪ್ರಚೋದಿಸುವುದಿಲ್ಲವೆಂಬುದು ವ್ಯಕ್ತವಾಗುತ್ತದೆ. ಹಲವು ಸಮಾಜ ಶಾಸ್ತ್ರಜ್ಞರು ಅಪರಾಧಗಳಿಗೂ ಮತ್ತು ವಾಯುಗುಣಕ್ಕೂ ಸಂಬಂಧವನ್ನು ಕಲ್ಪಿಸು ತ್ತಾರೆ. ಬೇಸಿಗೆಯಲ್ಲಿ ಅಪರಾಧಗಳು ಹೆಚ್ಚು, ಚಳಿಗಾಲದಲ್ಲಿ ಅಪರಾಧಗಳು ಕಡಿಮೆ ಎಂಬುದು ಅವರ ವಾದ. ಅಪರಾಧಗಳ ಸಂಖ್ಯೆಯಲ್ಲಿ ಕಾಣುವ ವ್ಯತ್ಯಾಸಕ್ಕೆ ಸೂರ್ಯನ ಶಾಖವು ಕಾರಣವಲ್ಲ. ಸಮಶೀತೋಷ್ಣವಲಯದಲ್ಲಿ ವಾಸಮಾಡುವ ಜನರು ಹೆಚ್ಚಾಗಿ ಬೇಸಿಗೆಯ ಕಾಲದಲ್ಲಿ ಸಾಮಾಜಿಕ ಸಂಬಂಧಗಳನ್ನು ಹೊಂದಿರುವರು. ಆದುದರಿಂದ, ಈ ಸಮಾಜಶಾಸ್ತ್ರಜ್ಞರ ಪ್ರಕಾರ ಆಗ ಹೆಚ್ಚು ಅಪರಾಧಗಳು ನಡೆಯಲೇ ಬೇಕು. ಚಳಿಗಾಲದ ಕ್ರಿಸ್‌ಮಸ್ ಹಬ್ಬದ ವೇಳೆಯಲ್ಲೂ ಅಸಂಖ್ಯಾತ ಅಪರಾಧಗಳು ನಡೆಯುವುದರಿಂದ ವಾಯುಗುಣಕ್ಕೂ ಮತ್ತು ಅಪರಾಧಕ್ಕೂ ಯಾವ ಸಂಬಂಧವೂ ಇಲ್ಲವೆಂದು ನಿಶ್ಚಿತವಾಗಿ ಹೇಳಬಹುದು.

ಯೂರೋಪಿನ ದೇಶಗಳಲ್ಲಿ ಜರಗುವ ಆತ್ಮಹತ್ಯೆಗಳಿಗೂ ಮತ್ತು ವಾಯು ಗುಣಕ್ಕೂ ಸಂಬಂಧವಿರುವುದೆಂದು ಹಲವು ಸಮಾಜಶಾಸ್ತ್ರಜ್ಞರು ನಿರೂಪಿಸಿದರು. ಫ್ರಾನ್ಸಿನ ಎಮಿಲಿ ಡರ್ಕ್‌ಹೀಮನು ಆತ್ಮಹತ್ಯೆಗಳ ವಿಷಯವಾಗಿ ವಿಚಾರಮಾಡಿ ಅನೇಕ ವಿವರಗಳನ್ನು ಸಂಗ್ರಹಿಸಿದನು. ಆತನ ಪರಿಶೋಧನೆಗಳಿಂದ ಆತ್ಮಹತ್ಯೆಗಳ ಸಂಖ್ಯೆಗೂ, ಶಾಖಕ್ಕೂ ಯಾವ ಸಂಬಂಧವೂ ಇಲ್ಲವೆಂಬ ವಿಷಯವು ಗೊತ್ತಾಯಿತು. ಆತನು ಸಂಗ್ರಹಿಸಿದ ವಿಷಯಗಳಿಂದ, ವ್ಯಕ್ತಿಗೂ ಮತ್ತು ಸಮಾಜಕ್ಕೂ ಇರುವ ಪರಸ್ಪರ

ಹೊಂದಾಣಿಕೆಯು ಮುಖ್ಯವಾಗಿ ತೋರಿತು. ಸಾಮಾಜಿಕ ಸನ್ನಿವೇಶಗಳಿಗೂ ಮತ್ತು ಸಮಾಜದಲ್ಲಾಗುವ ಆತ್ಮಹತ್ಯೆಗಳಿಗೂ ಸಂಬಂಧವಿರಬಹುದೇ ಹೊರತು, ಒಂದು ಕಾಲದ ವಾಯುಗುಣಕ್ಕೂ ಮತ್ತು ಆತ್ಮಹತ್ಯೆಗಳಿಗೂ ಸಂಬಂಧವಿರಲು ಸಾಧ್ಯವಿಲ್ಲ ವೆಂದು ಅವನು ತಿಳಿಸಿದನು. ಇದಲ್ಲದೆ, ಅನೇಕ ಉಷ್ಣ ಪ್ರದೇಶಗಳಲ್ಲಿ ಆತ್ಮಹತ್ಯೆಗಳು ಬಹಳ ಸ್ವಲ್ಪವಾಗಿರುತ್ತವೆ. ಆದುದರಿಂದ, ಡರ್ಕ್‌ಹೀಮನು ಆತ್ಮಹತ್ಯೆಗೆ ಕಾರಣಗಳನ್ನು ಪರಿಶೀಲಿಸುವಾಗ ವ್ಯಕ್ತಿಯ ಸಾಮಾಜಿಕ ಹಿನ್ನೆಲೆಗೆ ಹೆಚ್ಚು ಗಮನಕೊಟ್ಟನು : ಆತನ ಅಧ್ಯಯನದಿಂದ ಕೆಲವು ವಿಷಯಗಳು ಬೆಳಕಿಗೆ ಬಂದವು ; ನಾಗರಿಕತೆಯು ಹೆಚ್ಚಿದಂತೆ ಆತ್ಮಹತ್ಯೆಗಳ ಸಂಖ್ಯೆಯು ಹೆಚ್ಚುತ್ತದೆ. ಹಳ್ಳಿಗಳಲ್ಲಿ ಆತ್ಮಹತ್ಯೆಗಳ ಸಂಖ್ಯೆ ಕಡಿಮೆ. ನಗರಗಳಲ್ಲಿ ಆತ್ಮಹತ್ಯೆಗಳು ಹೆಚ್ಚು. ವಿಧುರರು ಮತ್ತು ಬ್ರಹ್ಮಚಾರಿಗಳು ಹೆಚ್ಚು ಸಂಖ್ಯೆಯಲ್ಲಿ ಆತ್ಮಹತ್ಯೆ ಮಾಡಿಕೊಂಡರೆ ಗೃಹಸ್ಥರಲ್ಲಿ ಆತ್ಮಹತ್ಯೆಗಳ ಸಂಖ್ಯೆ ಕಡಿಮೆ. ರೋಮನ್ ಕ್ಯಾಥೋಲಿಕರಿಗಿಂತ ಪ್ರಾಟಿಸ್ಟೆಂಟರಲ್ಲಿ ಹೆಚ್ಚುಮಂದಿ ಆತ್ಮಹತ್ಯೆಗೆ ಆಹುತಿಯಾಗಿರುತ್ತಾರೆ. ಇದರಿಂದ ಆತ್ಮಹತ್ಯೆಗೂ ಮತ್ತು ವ್ಯಕ್ತಿಯ ಸಾಮಾಜಿಕ ಹೊಂದಾಣಿಕೆಗೂ ಸಂಬಂಧವಿರುವುದು ಗೋಚರವಾಯಿತು. ಎಲ್ಲಿ ಸಾಮಾಜಿಕ ಪ್ರತ್ಯೇಕತೆಯು ಹೆಚ್ಚಾಗಿದ್ದು, ವ್ಯಕ್ತಿಗಳು ಏಕಾಂಗಿಗಳಾಗಿರುತ್ತಾರೋ, ಅಲ್ಲಿ ಅವರಿಗೆ ಜೀವನದಲ್ಲಿ ಒದಗುವ ಕ್ಲೇಶಗಳಿಗೆ ಸಮಾಧಾನವು ದೊರಕುವುದಿಲ್ಲ. ಜೀವನದಲ್ಲಿ ಬರುವ ಕ್ಲೇಶಗಳಿಗೆ ಸಮಾಧಾನ ಹೇಳುವ ಸ್ನೇಹಿತರಾಗಲಿ, ಬಂಧುಗಳಾಗಲಿ ಇಲ್ಲದಿರುವ ಸಂದರ್ಭಗಳಲ್ಲಿ ವ್ಯಕ್ತಿಯು ಜೀವನದಲ್ಲಿ ಜಿಗುಪ್ಸೆಹೊಂದಿ ಜೀವನ ದುಃಖಪೂರಿತ ವಾದುದೆಂದೂ, ಅಪ್ರಯೋಜಕವೆಂದೂ ಭಾವಿಸಿ ಆತ್ಮಹತ್ಯೆಗೆ ತೊಡಗುತ್ತಾನೆ. ಡರ್ಕ್‌ಹೀಮನು, ಆತ್ಮಹತ್ಯೆಗೆ ಇವು ಕಾರಣವೆಂದು ನಿರೂಪಿಸುವ ಗೋಜಿಗೆ ಹೋಗದೆ, ಆತ್ಮಹತ್ಯೆಗೆ ಕಾರಣವನ್ನು ನಿರೂಪಿಸುವವರು ಅಧ್ಯಯನ ಮಾಡಬೇಕಾದ ಅಂಶಗಳನ್ನು ತಾನು ಸೂಚಿಸಿರುವುದಾಗಿ ತಿಳಿಸಿರುವನು. ಆತ್ಮಹತ್ಯೆಗಳಿಗೆ ಕಾರಣವನ್ನು ಪರಿಶೀಲಿಸು ವವರು ವಾಯುಗುಣದ ವ್ಯತ್ಯಾಸಗಳಲ್ಲಿ ಕಾರಣವನ್ನು ಹುಡುಕುವುದಕ್ಕೆ ಬದಲು, ವ್ಯಕ್ತಿಗಳ ಸಾಮಾಜಿಕ ಹಿನ್ನೆಲೆಯನ್ನು ಪರಿಶೀಲಿಸಿದರೆ ಪ್ರಯೋಜನವುಂಟೆಂದು ಡರ್ಕ್‌ಹೀಮ್ ತಿಳಿಸಿದನು.

ವಾಯುಗುಣವು ವ್ಯಕ್ತಿಯ ಶಾರೀರಕ ಕ್ರಿಯೆಗಳ ಮೇಲೆ ತನ್ನ ಪರಿಣಾಮ ಬೀರುತ್ತದೆ. ವಾಯುಗುಣದಿಂದ ಉಸಿರಾಡುವುದು, ರಕ್ತದ ಒತ್ತಡ, ದೇಹದ ಬೆಳವಣಿಗೆ ಮೊದಲಾದುವುಗಳ ಸಂಬಂಧವಾದ ವ್ಯತ್ಯಾಸಗಳು ಕಂಡುಬರುತ್ತವೆ. ಈ ದೈಹಿಕ ಕ್ರಿಯೆಗಳು ಗೊತ್ತಾದ ಅಂಗಗಳನ್ನು ಅವಲಂಬಿಸಿವೆ. ಉಸಿರಾಡುವಿಕೆಯು ಶ್ವಾಸಕೋಶಗಳಿಗೆ ಸಂಬಂಧಿಸಿದ್ದು, ರಕ್ತದ ಒತ್ತಡವು ಹೃದಯಕ್ಕೆ ಸಂಬಂಧಪಟ್ಟದ್ದು ; ಹಾಗೆಯೇ ದೇಹದ ಬೆಳವಣಿಗೆಯು ನಿರ್ನಾಳ ಗ್ರಂಥಿಗಳಿಗೆ ಸಂಬಂಧಪಟ್ಟದ್ದು. ಆದರೆ ಸಾಮಾಜಿಕ ಕ್ರಿಯೆಗಳು ಆತನ ಸಂಸ್ಕೃತಿಯ ಹಿನ್ನೆಲೆಯಲ್ಲಿ ಜರುಗುತ್ತವೆ. ಆತನು ತನ್ನ ಪರಿಸರದ ಸಮಸ್ತ ಚಟುವಟಿಕೆಗಳಿಂದ ಪಡೆದುಕೊಂಡಿರುವ ಸಂಸ್ಕೃತಿಯು

ನಿರ್ಣಯಿಸುವ ರೀತಿಯಲ್ಲಿ ಅವನ ಸಾಮಾಜಿಕ ಜೀವನವು ನಡೆಯುತ್ತದೆ. ಆದುದರಿಂದ, ಸಾಮಾಜಿಕ ಕ್ರಿಯೆಗಳು ಶಾರೀರಕ ಕ್ರಿಯೆಗಳಂತೆ ವಾಯುಗುಣದ ಬದಲಾವಣೆಗಳಿಂದ ವ್ಯತ್ಯಾಸ ಹೊಂದಲು ಸಾಧ್ಯವಿಲ್ಲ.

ಮೇಲೆ ವಿವರಿಸಿದ ಹಲವು ವಿಷಯಗಳಿಂದ ಭೌಗೋಳಿಕ ಪರಿಸರದ ಪ್ರಭಾವವು ಮಿತವಾದುದೆಂಬುದು ಸ್ಪಷ್ಟವಾಗುತ್ತದೆ. ಭೌಗೋಳಿಕ ಪರಿಸರವು ಕೇವಲ ಬಾಹ್ಯ ಪರಿಸ್ಥಿತಿಗಳನ್ನು ಕಲ್ಪಿಸಬಲ್ಲುದೆ ಹೊರತು, ಮನುಷ್ಯನ ಸಾಮಾಜಿಕ ಕ್ರಿಯೆಗಳನ್ನು ನಿರ್ಧರಿಸಲಾರದು. ಆದರೂ ಸಮಾಜಶಾಸ್ತ್ರಜ್ಞನು ಭೌಗೋಳಿಕ ಪರಿಸರವನ್ನು ನಿರ್ಲಕ್ಷಿಸುವುದಕ್ಕಾಗುವುದಿಲ್ಲ. ಮನುಷ್ಯನು ಯಾವ ರೀತಿಯಲ್ಲಿ ಭೌಗೋಳಿಕ ಪರಿಸರಕ್ಕೆ ಹೊಂದಿಕೊಂಡು ಹೋಗುತ್ತಾನೆ, ತನ್ನ ಜ್ಞಾನದ ಸಹಾಯದಿಂದ ಭೌಗೋಳಿಕ ಪರಿಸರದ ವಿವಿಧ ಶಕ್ತಿಗಳನ್ನು ಮತ್ತು ಜೀವರಾಶಿಗಳನ್ನು ತನ್ನ ಅನುಕೂಲತೆಗೆ ತಕ್ಕಂತೆ ಹೇಗೆ ಪಳಗಿಸಿಕೊಳ್ಳುತ್ತಾನೆ ಮತ್ತು ಆ ಮೂಲಕ ಸಮಾಜಜೀವನದ ವಿವಿಧ ಕಾರ್ಯ ಕ್ಷೇತ್ರಗಳಲ್ಲಿ ಉಂಟಾಗುವ ಪ್ರಭಾವಗಳೇನು ಎಂಬುದನ್ನು ಸಮಾಜಶಾಸ್ತ್ರಜ್ಞನು ಸಕಾರಣವಾಗಿ ವಿವರಿಸಬೇಕು. ಇದು ಸಮಾಜಶಾಸ್ತ್ರಜ್ಞನ ಮುಖ್ಯ ಕೆಲಸ.

ಭೌಗೋಳಿಕ ಪರಿಸರದಲ್ಲಿ ಯಾವ ಮಹತ್ವವಾದ ಬದಲಾವಣೆಗಳಾಗದಿದ್ದರೂ ಮನುಷ್ಯನ ಜೀವಿತದಲ್ಲಿ ಪ್ರಮುಖ ಬದಲಾವಣೆಗಳಾಗುತ್ತವೆ. ಭೌಗೋಳಿಕ ಪರಿಸರವು ಒಂದು ಜನಾಂಗದ ನಾಗರಿಕತೆ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಬೇಕಾಗುವ ಸನ್ನಿವೇಶವನ್ನು ಕಲ್ಪಿಸುವುದರಲ್ಲಿ ಮುಖ್ಯ ಪಾತ್ರ ವಹಿಸುತ್ತದೆ. ಆ ಜನಾಂಗದ ನಾಗರಿಕತೆ ಮತ್ತು ಸಂಸ್ಕೃತಿ ಅಭಿವೃದ್ಧಿಯಾದಂತೆಲ್ಲಾ ಆ ಜನಾಂಗ ಭೌಗೋಳಿಕ ಮತ್ತು ಭೌತಿಕ ಶಕ್ತಿಗಳನ್ನು ಅದರ ಉಪಯೋಗಕ್ಕೆ ಅಳವಡಿಸಿಕೊಳ್ಳುತ್ತದೆ.

— ಎಚ್. ಎಂ. ಸದಾಶಿವಯ್ಯ

## ವೀರಕಾವ್ಯ

ಮಾನವಕೋಟಿಯನ್ನು ವರ್ಗೀಕರಣ ಮಾಡುವಾಗ ಪ್ರಾಚೀನ ಗ್ರೀಕ್ ತತ್ತ್ವಶಾಸ್ತ್ರಜ್ಞರು ಕ್ರಿಯಾಶೀಲರೂ ಸಾಹಸಪ್ರಿಯರೂ ಆದ ವೀರರಿಗೆ ಸಮಾಜದಲ್ಲಿ ವಿಶಿಷ್ಟಸ್ಥಾನಮಾನಗಳನ್ನು ಕಲ್ಪಿಸಿದ್ದರು. ಕೇವಲ ಹೊಟ್ಟೆ ಬಟ್ಟೆಗಳಿಗಾಗಿ ಪೇಚಾಡುತ್ತ, ಕ್ಷುಧಾತೃಷೆಗಳ ತೃಪ್ತಿಗಾಗಿ ಹೋರಾಡುತ್ತ, ಇಂದ್ರಿಯತೃಪ್ತಿಗಾಗಿ ತೊಳಲಾಡುತ್ತ ಕ್ರಿಮಿಕೀಟಗಳಂತೆ ಬಾಳುವೆ ನಡೆಸುವ ಜನರ ಬದುಕು ಬದುಕಲ್ಲ ವೆಂದು ಅವರು ತಿಳಿದಿದ್ದರು. ಭೂಲೋಕದ ನೆಲಗಟ್ಟಿನಲ್ಲಿ ನಿಂತು ಸಕಲ ಲೋಕ ಗಳನ್ನಾಳೆಯುವ ವಾಮನ ಶಕ್ತಿಯಲ್ಲಿ, ಭೂಲೋಕದಿಂದ ಸ್ವರ್ಗಲೋಕದವರೆಗೆ ಸೋಪಾನ ನಿರ್ಮಿಸಿ ಸ್ವರ್ಗಲೋಕದ ವಸ್ತುಗಳನ್ನು ಭೂಲೋಕಕ್ಕೆ ತರುವ

ಫಲ್ಗುಣ ಶೌರ್ಯದಲ್ಲಿ, ದೇವಗಂಗೆಯನ್ನು ತಿರೆಯ ಮೇಲೆ ಹರಿಸುವ ಭಗೀರಥ ಸಾಹಸದಲ್ಲಿ, ಯಮಲೋಕದಿಂದ ಅಗ್ನಿಶಕ್ತಿಯನ್ನು ಕಸಿದುಕೊಂಡು ಬರುವ ನಚಿಕೇತ ಸಾಮರ್ಥ್ಯದಲ್ಲಿ ಪ್ರಾಚೀನ ಗ್ರೀಕರಿಗೆ ಅಪಾರ ಗೌರವವಿತ್ತು. ಪುರುಷಕಾರದ ಪರಾಕಾಷ್ಠೆಯನ್ನೂ ಅದಮ್ಯ ಮಹಿಮೆಯನ್ನೂ ಮೆರೆಯ ಬೇಕೆಂಬುದೇ ಅವರ ಒಲಂಪಿಕ್ ಕ್ರೀಡೆಗಳ, ಯುದ್ಧೋದ್ಯಮಗಳ ಮತ್ತು ಸಾಹಸ ಪ್ರದರ್ಶನದ ಏಕೈಕ ಗುರಿಯಾಗಿತ್ತು. ಅಂಥ ಧೈರ್ಯಸಾಹಸಗಳನ್ನು ಮೆರೆಯು ತ್ತಿದ್ದ ವೀರರನ್ನು ಕುರಿತು ಕಥೆಕಟ್ಟಿ, ಹಬ್ಬ ಹರಿದಿನಗಳಲ್ಲಿ ಅವರ ಗುಣಗಾನ ಮಾಡುತ್ತಿದ್ದರು.

ಭೂಮಿಯ ಮೇಲೆ ಜನ್ಮವೆತ್ತಿದ ಮನುಷ್ಯರೆಲ್ಲ ಒಂದೇ ರೀತಿಯಾಗಿಲ್ಲ; ಕಣ್ಣು ಕಿವಿ ಮೂಗು ಕೈ ಕಾಲಿರುವವರೆಲ್ಲ ಏಕರೀತಿಯ ಬಾಳು ನಡೆಸುತ್ತಿಲ್ಲ; ಒಬ್ಬ ತಾಯಿಯ ಗರ್ಭದಿಂದ ಬಂದ ಅಣ್ಣತಮ್ಮಂದಿರಲ್ಲಿಯೇ ದಕ್ಷಿಣೋತ್ತರ ಧ್ರುವಗಳ ಅಂತರವಿರುತ್ತದೆ; ದೈಹಿಕ ಮತ್ತು ಬೌದ್ಧಿಕ ಶಕ್ತಿಸಾಮರ್ಥ್ಯಗಳಲ್ಲಿ ಮನುಷ್ಯನಿಂದ ಮನುಷ್ಯನಿಗೆ ಸಾಕಷ್ಟು ತಾರತಮ್ಯವಿರುತ್ತದೆ. ಈ ತಾರತಮ್ಯಕ್ಕೆ ಜನ್ಮಸಂಸ್ಕಾರವೂ ಸಾಮಾಜಿಕ ಸೌಲಭ್ಯ ಸನ್ನಿವೇಶಗಳೂ ಬಹುಮಟ್ಟಿಗೆ ಕಾರಣ ವೆನ್ನಬಹುದಾದರೂ. ಯಾವುದೋ ಒಂದು ಜನಾಂಗಕ್ಕೆ ಸೇರಿದ ಸಹಸ್ರ ಸಹಸ್ರ ಜನರಲ್ಲಿ ಯಾವನೋ ಒಬ್ಬ ವ್ಯಕ್ತಿಮಾತ್ರ ಸ್ವಶಕ್ತಿ ಸ್ವಸಾಮರ್ಥ್ಯಗಳಿಂದ ಸ್ವಯಂಭು ವಾಗಿ ವಿಜೃಂಭಿಸುತ್ತಾನೆ; ತಾನು ಸಂಭವಿಸಿದ ಸಮಾಜವನ್ನೇ ಕುಬ್ಜಗೊಳಿಸಿ ಹಿಮಾಚಲ ಸ್ಪರ್ಧಿಯಾಗಿ, ಮೇರು ಸದೃಶನಾಗಿ ನಿಲ್ಲುತ್ತಾನೆ. ಅಂಥವನಿಗೆ ವಾರಿಧಿಯೆಲ್ಲ ಗೋಷ್ಪದ ಜಲವಾಗಿ, ಹಿಮಾಚಲವೊಂದು ಗುಡ್ಡವಾಗಿ, ಬ್ರಹ್ಮಾಂಡ ವೆಲ್ಲ ಕ್ರೀಡಾಂಗಣವಾಗಿ, ನಭೋಮಂಡಲವೆಲ್ಲ ಮುಷ್ಟಿಗ್ರಾಹ್ಯವಾಗಿ ಕಾಣುತ್ತವೆ; ಬ್ರಹ್ಮಸೃಷ್ಟಿಗೆ ಬದಲಾಗಿ ಮತ್ತೊಂದು ಲೋಕವನ್ನೆ ಸೃಜಿಸುವ ವಿಶ್ವಾಮಿತ್ರ ಶಕ್ತಿ ಅವನದು; ತನ್ನ ಶಕ್ತಿ ಅಕ್ಷೋಣವಾದದ್ದು, ಅಪ್ರತಿಹತವಾದದ್ದು, ನಿರುಪಮ ವಾದದ್ದು ಎಂಬ ಆತ್ಮಪ್ರತ್ಯಯದಿಂದ ಅದ್ಭುತಕಾರ್ಯಗಳನ್ನೆಸಗಿ ಅವನು ಜನ ಮನಸ್ಸಿನಲ್ಲಿ ಆಶ್ಚರ್ಯ ಚಿಹ್ನೆಯಾಗಿ ನಿಲ್ಲುತ್ತಾನೆ.

ವೀರಪುರುಷ ಮನುಷ್ಯರೂಪದ ಶತ್ರುಗಳೊಡನೆಯೇ ಯುದ್ಧಮಾಡ ಬೇಕೆಂಬ ನಿಯಮವಿಲ್ಲ; ಅವನು ಪ್ರಾಕೃತಿಕ ಶಕ್ತಿಗಳೊಡನೆ ಹೋರಾಟ ನಡೆಸಿ ಕೃತಾರ್ಥನಾಗಬಹುದು. ಅಖಿಲೀಸ್[1] ಸ್ಕಮಾಂದರ್ ನದಿಯೊಡನೆ, ಒಡಿಸಿಯಸ್[2] ಸಮುದ್ರದೊಡನೆ, ನಿಶ್ವಾಸಮಾತ್ರದಿಂದ ಮುನ್ನೂರು ಜನರನ್ನು ಕೊಲ್ಲುತ್ತಿದ್ದ ಗೂಳಿಯೊಡನೆ ಗಿಲ್ಗಾಮಿಶ್ ಹೋರಾಟ ನಡೆಸಿ ಜಯಶೀಲರಾಗಿದ್ದಾರೆ.

---

1. *Heroic Poetry*: C. N. Bowra, ಪು. ೪೯
2. *Ibid*: ಪು. ೪೯

ಹಿಮಾಚಲವನ್ನೇರಬೇಕಾದರೆ, ಸಮುದ್ರವನ್ನೀಸಿ ಬರಬೇಕಾದರೆ ಕಡಲೊಳಗೆ ಮುಳುಗಿ ಅದರ ರಹಸ್ಯವನ್ನು ಶೋಧಿಸಿ ಜಯಡಿಂಡಿಮ ಬಾರಿಸಬೇಕಾದರೆ, ಮರುಭೂಮಿಯನ್ನಳೆಯಬೇಕಾದರೆ, ಶೀತವಲಯಗಳನ್ನು ಸುತ್ತಿ ಜೀವಸಹಿತ ಹಿಂದಿರುಗಿ ಬರಬೇಕೆಂದರೆ ಅಪಾರ ಧೈರ್ಯವೂ ಅಚಲ ಛಲವೂ ಅತ್ಯವಶ್ಯ. ತೊಳಲಾಟ ಹಸಿವು ನೀರಡಿಕೆ ರೋಗರುಜಿನ ಮೊದಲಾದ ದೈಹಿಕ ಮತ್ತು ಮಾನಸಿಕ ಕ್ಲೇಶಗಳನ್ನೆದುರಿಸಲು ಸಿದ್ಧವಾಗಿರಬೇಕು. ಅವನು ಸಾಹಸಕಾರ್ಯ ಪ್ರವೃತ್ತನಾಗಿದ್ದಾಗ ಬಲಿಯಾದರೂ ಬದುಕಿದಂತೆಯೇ ಸರಿ; ಜೀವಂತವ್ಯಕ್ತಿಗಿಂತ ಅವನು ಬಹುಮಾನ್ಯನಾಗುತ್ತಾನೆ. ಕಲ್ಪನಾತೀತವೂ ಅಸದೃಶವೂ ಆದ ಆ ಸಾಹಸ ಕಾರ್ಯದಿಂದ ಅವನು ಮಾನವ ಸಮಾಜಕ್ಕೆ ಭೂಷಣನಾಗುತ್ತಾನೆ; ತನ್ಮೂಲಕ ಲೋಕಪೂಜ್ಯನಾಗುತ್ತಾನೆ. ಮಾನವನೊಂದು ದುರ್ಬಲ ಜಂತುವಲ್ಲ, ಅವನೊಂದು ಯಃಕಶ್ಚಿತ್ ವಸ್ತುವಲ್ಲ; ದೇವಾಂಶ ಸಂಭೂತನೆಂಬ ಹೆಮ್ಮೆಗೆ ಅವನು ಕಾರಣನಾಗುತ್ತಾನೆ.

ತನ್ನ ಸುತ್ತಮುತ್ತಣ ಮನುಷ್ಯರಿಗಿಂತ ಅಧಿಕವಾದ ಶಕ್ತಿಸಾಮರ್ಥ್ಯವಿದ್ದರೆ ಸಾಲದು, ಅದು ಕ್ರಿಯೆಯಲ್ಲಿ ವ್ಯಕ್ತವಾಗಬೇಕು. ವೀರಜೀವನದ ಅಗ್ನಿಪರೀಕ್ಷೆಯಲ್ಲಿ ಅವನು ತೇರ್ಗಡೆಯಾಗಬೇಕು. ಅವನಿಗೆ ಜಯಲಕ್ಷ್ಮಿ ಹಾರ ಹಾಕಬೇಕಾಗಿಲ್ಲ. ರಣರಂಗದಲ್ಲಿ ಬದುಕಿ ಬಂದವನಿಗಿಂತ ಸತ್ತು ವೀರಸ್ವರ್ಗವನ್ನೇರಿದವನಿಗೇ ಗೌರವ. ಇಬ್ಬರೂ ಗಣ್ಯರೇ. ಇಬ್ಬರೂ ಕರ್ತವ್ಯ ಪರಾಯಣರಾಗಿ, ತಮ್ಮ ಧ್ಯೇಯೋದ್ದೇಶಗಳನ್ನು ಪರಿಪೂರ್ಣವಾಗಿ ಸಾಧಿಸಿದ ಧೀರರು. ಮಾನವನ ಶಕ್ತಿ ಎಷ್ಟು ಅದಮ್ಯವಾದದ್ದು ಅದ್ಭುತವಾದದ್ದು ಎಂಬುದನ್ನು ತೋರಿಸಿ ಮಾನವತ್ವದ ಹಿರಿಮೆಯನ್ನು ಸಂಸ್ಥಾಪಿಸಿದ ಸಾಹಸಮಲ್ಲರು; ಹೇಡಿಗಳಲ್ಲಿಯೂ ದುರ್ಬಲರಲ್ಲಿಯೂ ಚೈತನ್ಯವನ್ನುಕ್ಕಿಸಬಲ್ಲ ತೇಜೋವಂತರು. ಮಾನವಕೋಟಿಯ ಅಭೀಪ್ಸೆ ಆಕಾಂಕ್ಷೆಗಳಿಗೆ ಅವರು ಕೈದುವಾಗುತ್ತಾರೆ. ಉದಾತ್ತಧ್ಯೇಯ ಸಾಧನೆಯಲ್ಲಿ ಸಾಹಸ ಧೈರ್ಯಗಳನ್ನು ಮೆರೆದನಂತರ ಒದಗಬಹುದಾದ ಸಾವು ವೀರಮರಣವೆಂಬ ಪ್ರಶಂಸೆಗೆ ಪಾತ್ರವಾಗುತ್ತದೆ; ಹೆಮ್ಮೆಯ ಮತ್ತು ತೃಪ್ತಿಯ ವಿಷಯವಾಗುತ್ತದೆ; ಅವರ ಬಾಳು ವ್ಯರ್ಥವಾಗಲಿಲ್ಲವೆಂಬ ತೃಪ್ತಿ ಲಭಿಸುತ್ತದೆ. ವೀರಜೀವನದಲ್ಲಿ ಕಾಲಿಟ್ಟಾಗಲೇ ಅವನಿಗೆ ಸಾವು ಕಟ್ಟಿಟ್ಟಬುತ್ತಿ. ರಣಾಂಗಣದಲ್ಲಿ ಸಾವಿರಾರು ಜನರ ತಲೆ ತೆಗೆದುಕೊಂಡ ವ್ಯಕ್ತಿ ಮರಣಕ್ಕೆ ಖಂಡಿತ ಹಿಂಜರಿಯಲಾರನು. ಇಂಥ ವೀರ ಜೀವಂತನಾಗಿದ್ದರೆ ಸ್ತುತಿಪದ್ಯದ ಮೂಲಕ, ಸತ್ತುಹೋದರೆ ಚರಮಗೀತೆಯ ಮೂಲಕ ಮುಂದಿನ ಪೀಳಿಗೆಯ ನೆನಪಿನಲ್ಲಿ ಶಾಶ್ವತವಾಗುಳಿಯುತ್ತಾನೆ.

ಸಾಮಾನ್ಯವಾಗಿ ವೀರಾರಾಧನೆಯ ಕಾವ್ಯ ಅಲ್ಪಪ್ರಮಾಣದಲ್ಲಿಯೋ ಅಧಿಕ ಪ್ರಮಾಣದಲ್ಲಿಯೋ ಪ್ರಪಂಚದ ಎಲ್ಲ ದೇಶಗಳಲ್ಲಿಯೂ ದೊರಕುತ್ತದೆ. ಪುರುಷಕಾರ

ಪ್ರಧಾನವಾದ ಕಾವ್ಯಗಳು ಗೋಚರವಾಗುವುದಕ್ಕೆ ಮುಂಚೆ ಭೂತಮಹಿಮಾ ಪ್ರಧಾನವಾದ (Shamanistic) ಕಾವ್ಯಗಳು ಸಾಕಷ್ಟು ಪ್ರಸಿದ್ಧವಾಗಿದ್ದುವು. ಪ್ರಾಕೃತಿಕ ಶಕ್ತಿಗಳು ಮನುಷ್ಯ ವಶವಾಗದಿದ್ದಾಗ, ಅವುಗಳ ರುದ್ರಭಯಂಕರ ಸ್ವರೂಪವನ್ನೂ ಭೀಷಣ ವ್ಯಾಪಾರಗಳನ್ನೂ ಕಂಡಾಗ ನಿರಾಯುಧನೂ ನಿರಾಶ್ರಯನೂ ಆದ ಆದಿಮಾನವ ತತ್ತರಿಸುತ್ತಿದ್ದನು. ತನ್ನ ಸಾಹಸ ಪ್ರಯತ್ನ ಗಳೆಲ್ಲ ನಿರರ್ಥಕವಾಗಿ, ಶಕ್ತ್ಯುತ್ಸಾಹಗಳು ವ್ಯಯವಾದಾಗ ಅವನು ತನ್ನ ದುಃಸ್ಥಿತಿಯ ಕಾರಣವನ್ನು ಕಣ್ಣಿಗೆ ಕಾಣದ ಪ್ರಾಕೃತಿಕ ಶಕ್ತಿಗಳ ದುಶ್ಚೇಷ್ಟೆ ಗಳಿಗೆ ಆರೋಪಿಸುತ್ತಿದ್ದನು. ಹಾಗೆಯೇ ತನ್ನಂಥ ಮತ್ತೊಬ್ಬ ವ್ಯಕ್ತಿ ಜೀವನದ ಹೋರಾಟದಲ್ಲಿ ಜಯಶೀಲನಾಗಿ, ಸಾಮಾನ್ಯ ಮಾನವನನಿಗೆಟುಕದ ಅದ್ಭುತಕಾರ್ಯಗಳನ್ನೆಸಗಿದಾಗ, ಅದೆಲ್ಲ ಭೌತಶಕ್ತಿಗಳ ವಿಶೇಷಾನುಗ್ರಹದಿಂದ ಮಾತ್ರ ಸುಲಭಸಾಧ್ಯವೆಂದು ನಂಬುತ್ತಿದ್ದನು. ಹೀಗಾಗಿ ಅಗೋಚರವಾದ ಶಕ್ತಿಪ್ರಭಾವಗಳ ನಡುವೆ ಮಾನವ ಸಿಕ್ಕಿಕೊಂಡಿರುವುದಾಗಿಯೂ, ಅವುಗಳ ಮೇಲೆ ಮನುಷ್ಯ ಹತೋಟಿಯಿಟ್ಟುಕೊಳ್ಳುವುದಾದರೆ, ಎಂಥ ಕಾರ್ಯಗಳನ್ನಾದರೂ ಸರಿಯೆ ಸಾಧಿಸಬಹುದೆಂದೂ ಮಾನವ ನಂಬುವಂತಾಯಿತು. ಈ ಅಪೌರುಷೇಯ ಶಕ್ತಿಗಳನ್ನು ಅಮಾನುಷ ರೀತಿಯಲ್ಲಿ ಯಕ್ಷಿಣಿಮಂತ್ರ ಮಾಯಮಾಟಗಳ ಮೂಲಕ ವಶಪಡಿಸಿಕೊಂಡು ರೂಪ ಪರಾವರ್ತನ ವಿದ್ಯೆಯ ಮೂಲಕ ಆಶ್ಚರ್ಯ ಕರವಾದ ಕಾರ್ಯಗಳನ್ನು ಸಾಧಿಸುವಂಥ ವ್ಯಕ್ತಿ ಸಮಾಜದಲ್ಲಿ ಗಣ್ಯನೆನಿಸಿಕೊಂಡು, ಪೂಜಾಗೌರವಗಳಿಗೆ ಭಾಜನನಾಗುತ್ತಿದ್ದನು. ಮಾನವ ಸ್ವಶಕ್ತಿ ಸ್ವಸಾಮರ್ಥ್ಯ ಗಳನ್ನು ಸಂಪೂರ್ಣವಾಗಿ ಅರಿತುಕೊಳ್ಳುವುದಕ್ಕೆ ಮುಂಚಿನ ಅನಾಗರಿಕ ಸಮಾಜ ದಲ್ಲಿ ಈ ಇಂದ್ರಜಾಲ ವಿದ್ಯೆಗೆ ಸಾಕಷ್ಟು ಮಾನ್ಯತೆಯಿರುತ್ತಿತ್ತು. ಪ್ರಪಂಚದ ಆಗುಹೋಗುಗಳಿಗೆ ಈ ಕಣ್ಣುಕಟ್ಟು ವಿದ್ಯೆಯೇ ಕಾರಣವೆಂದು ಜನ ನಂಬಿ ಕೊಂಡಿದ್ದರು. ಆದ್ದರಿಂದ ಎಲ್ಲ ವಿದ್ಯೆಗಳಿಗೆ ಇಂದ್ರಜಾಲ ವಿದ್ಯೆಯೇ ಕೇಂದ್ರ ವಾಯಿತು; ಇಂದ್ರಜಾಲಿಗನಿಗೆ ಸಮಾಜದಲ್ಲಿ ಅಗ್ರಪೂಜೆ ಅಗ್ರವೀಳ್ಯಗಳು ದೊರೆತವು; ಅವನನ್ನು ಕುರಿತ ಹಾಡುಗಳು ಪ್ರಚುರವಾದುವು.

ಕಾಲಕ್ರಮೇಣ ಮಾನವನ ಜ್ಞಾನಕೋಶ ವಿಸ್ತರಿಸಿದಂತೆಲ್ಲ, ಅವನ ವಿವೇಕ ಕುಡಿವರಿದಂತೆಲ್ಲ, ಸ್ವಶಕ್ತಿಯಲ್ಲಿ ನಂಬಿಕೆ ಮೊಳೆಯಲಾರಂಭಿಸಿತು. ಪ್ರಾಕೃತಿಕ ಶಕ್ತಿಗಳ ವಿನಾಶಕಾರೀ ವ್ಯಾಪಾರಗಳಿಗೆ ತಾನು ತಡೆಯೊಡ್ಡಬಹುದೆಂಬ, ಪ್ರಕೃತಿ ಯನ್ನು ಗೆದ್ದೋ ಅಥವಾ ಒಲಿಸಿಕೊಂಡೋ ತನ್ನ ಪ್ರಯೋಜನಕ್ಕೆ ಬಳಸಿಕೊಳ್ಳ ಬಹುದೆಂಬ ಆತ್ಮವಿಶ್ವಾಸ ಮೂಡಿತು. ಆದರೂ ಅಪರಿಪಕ್ವವಾದ ಜ್ಞಾನದಿಂದಾಗಿ ಅವನು ಅನೇಕ ಅಡಚಣೆಗಳನ್ನು ಎಡರುತೊಡರುಗಳನ್ನು ಎದುರಿಸಬೇಕಾಗಿತ್ತು; ತನ್ನ ಸಾಹಸಪ್ರಯತ್ನಕ್ಕೆ ಪರಿಭವವೊದಗಿದಾಗ, ಯಾವುದೋ ಅಗೋಚರವಾದ ಶಕ್ತಿಯ ಕೈವಾಡ ಆ ಪರಿಭವಕ್ಕೆ ಕಾರಣವೆಂದು ನಂಬುತ್ತಿದ್ದನು. ಆ ಶಕ್ತಿಗೆ

ವಿಧಿನಿಯತಿಯೆಂದೋ ದೈವಲೀಲೆಯೆಂದೋ ಹೆಸರಿಟ್ಟು, ತನ್ನ ಜಯಾಪಜಯಗಳಿಗೆ ಆ ಸೂತ್ರಧಾರೀಶಕ್ತಿ ಬಹುಮಟ್ಟಿಗೆ ಕಾರಣವೆಂದು ತಿಳಿದಿದ್ದನು. ಹೀಗಾಗಿ ಅವನ ದೃಷ್ಟಿಯಲ್ಲಿ ಭೂಲೋಕ ದೇವಮಾನವರ ಕ್ರೀಡಾರಂಗವಾಗಿಯೋ ರಣರಂಗವಾಗಿಯೋ ಪರಿಣಮಿಸಿತು. ಆದ್ದರಿಂದ ಕಾವ್ಯಲೋಕದಲ್ಲಿ ಮಾನವ ಸಾಹಸಕ್ಕೆ ದೊರೆತ ಪ್ರಾಮುಖ್ಯತೆ ದೈವಲೀಲೆಗೂ ದೊರಕಿತು. ವೀರರ ಸಾಹಸಪ್ರಶಂಸೆಯ ಜೊತೆಗೆ ದೈವಲೀಲೆಯನ್ನು ಕುರಿತು ಚಾರಣಕವಿಗಳು ಹಾಡು ಕಟ್ಟಿ, ವೀರರ ಮಹಿಮೆಯನ್ನು ಸಾರಿದರು. ವೀರಕಾವ್ಯದ ವಿಕಾಸಕ್ರಮದಲ್ಲಿ ಇದು ಎರಡನೆಯ ಮೈಲಿಗಲ್ಲು.

ಮುಂದಿನ ಹಂತದಲ್ಲಿ ಪ್ರಚುರವಾದ ವೀರಕಾವ್ಯಗಳಲ್ಲಿ ಪುರುಷನಿಗೆ ಮತ್ತು ಪುರುಷಕಾರಕ್ಕೆ ಸರ್ವಪ್ರಾಧಾನ್ಯ ಲಭಿಸಿತು. ಈ ಕಾವ್ಯಗಳಲ್ಲಿ ದೇವರುಗಳಿಗೆ ವಿಶಿಷ್ಟಸ್ಥಾನವಿಲ್ಲ; ಅವರು ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ವ್ಯವಹರಿಸುವುದಿಲ್ಲ; ಅವರು ಒಮ್ಮೊಮ್ಮೆ ವ್ಯಕ್ತಿಗಳ ಕಡೆ ಪಕ್ಷಪಾತ ತೋರಿಸಬಹುದು ; ಆದರೆ ಆದು ಅಸಾರ್ಥಕವಾಗಿ ಪರಿಣಮಿಸಬಹುದು. ಭೀಷ್ಮನಿಷ್ಠೆಯ, ಭೀಮಧೈರ್ಯದ, ಆಂಜನೇಯ ಸಾಹಸದ ಮಾನವನಿಗೆ ಸಮಾಜ ತನ್ನೆಲ್ಲ ಶಕ್ತಿಸಾಹಸಗಳನ್ನು ಸಮರ್ಪಿಸಿ, ತನ್ನ ಆಶೆ ಆಕಾಂಕ್ಷೆ ಅಭೀಪ್ಸೆಗಳ ಕ್ರಿಯಾರೂಪದ ಸಾರ್ಥಕತೆಗಾಗಿ ಅವನನ್ನೆ ನೆಮ್ಮಿ, ಅವನ ಮುಂದೆ ತಲೆಬಾಗಿ ನಿಂತಿತು; ಮಾನವನೇ ಲೋಕದ ಕೇಂದ್ರವೆಂಬ, ಅವನ ಸಾಹಸಕ್ಕೆ ಇತಿಮಿತಿಯಿಲ್ಲವೆಂಬ, ಅವನಿಗೆ ಪ್ರತಿಸ್ಪರ್ಧಿಯೇ ಇಲ್ಲವೆಂಬ ಭಾವನೆ ಜನಮನಸ್ಸಿನಲ್ಲಿ ಬಲವಾಗಿ ಬೇರೂರಿತು. ಅವನು ಮಾನವ ಸಮಾಜದ ಪ್ರತಿನಿಧಿಯಾಗಿ, ಮಾರ್ಗದರ್ಶಿಯಾಗಿ, ಸಂರಕ್ಷಕಶಕ್ತಿಯಾಗಿ, ಆರಾಧ್ಯ ವ್ಯಕ್ತಿಯಾಗಿ, ಕಾವ್ಯನಾಯಕನಾದನು. ಅವನನ್ನು ಕುರಿತು ಕಟ್ಟಿದ ಕಾವ್ಯ ವೀರಕಾವ್ಯವಾಯಿತು. ಮಾನವನ ಸಾಹಸಪ್ರಯತ್ನಗಳನ್ನೂ ಕೀರ್ತಿಮಹಿಮೆಗಳನ್ನೂ ಗೌರವಿಸುವಂಥ ರಾಷ್ಟ್ರಮಾತ್ರ ವೀರಕಾವ್ಯವನ್ನು ಸೃಷ್ಟಿಸಿ, ಮಾನವ ಜೀವನದ ಹೆಬ್ಬಯಕೆಯನ್ನು ತೃಪ್ತಿಪಡಿಸುತ್ತದೆ; ಯಾವ ರಾಷ್ಟ್ರದಲ್ಲಿ ಪುರುಷಕಾರಕ್ಕೆ ಬೆಲೆಯಿಲ್ಲವೋ ಅಲ್ಲಿ ವೀರಕಾವ್ಯ ಹುಲುಸಲಾರದು.

ಪ್ರಪಂಚದ ಅನೇಕ ಭಾಗಗಳಲ್ಲಿ ವೀರಕಾವ್ಯಗಳು ಸೃಷ್ಟಿಯಾಗಿವೆ. ಇವುಗಳಲ್ಲಿ ಗ್ರೀಕರ ಇಲಿಯಡ್ ಮತ್ತು ಒಡಿಸ್ಸಿ, ಹಳೆಯ ಬೇಬಿಲೋನಿಯನ್, ಹಿಟ್ಟೈಟ್ ಮತ್ತು ಅಸ್ಸೀರಿಯನ್ ಭಾಷೆಗಳಲ್ಲಿ ಪ್ರಚುರವಾಗಿರುವ ಗಿಲ್ಗಾಮಿಶ್, ಆಂಗ್ಲೊ–ಸಾಕ್ಸನ್‌ರ ಬೀವುಲ್ಫ್, ನಾರ್ಸ್ ಜನರ ಎಲ್ಡರ್ ಎಡ್ಡ, ಫ್ರೆಂಚರ ಸಾಂಗ್ ಆಫ್ ರೋಲೆಂಡ್ ಮತ್ತು ಫಿನ್ನರ ಕಾಲಿವೇಲ ಮೊದಲಾದುವು ಪುರಾತನ ಜಾತಿಗೆ ಸೇರಿದುವು ; ಈ ಸಂಪ್ರದಾಯದ ಹಿನ್ನೆಲೆಯಲ್ಲಿ ನೂತನ ಜಾತಿಯ ವೀರಕಾವ್ಯಗಳು ಬಹುಸಂಖ್ಯೆಯಲ್ಲಿ ಹುಟ್ಟಿಕೊಂಡಿವೆ. ಪುರಾತನ ಜಾತಿಯ ವೀರಕಾವ್ಯಗಳು ಬಹುಕವಿಕೃತವಾದರೆ, ನೂತನ ಜಾತಿಯ ವೀರಕಾವ್ಯಗಳು ಏಕಕವಿಕೃತವಾದುವು.

ರಷ್ಯ, ಯೂಗೋಸ್ಲಾವಿಯ, ಬಲ್ಗೇರಿಯ, ಎಸ್ತೋನಿಯ, ಆಲ್ಬೇನಿಯ, ಆರ್ಮೀನಿಯ, ಸುಮಾತ್ರ, ಸೈಬೀರಿಯ, ಅರೇಬಿಯ, ಜಪಾನ್ ಮೊದಲಾದ ಭೂಭಾಗಗಳಲ್ಲಿ ನೂತನ ಜಾತಿಯ ವೀರಕಾವ್ಯಗಳು ಪ್ರಚಾರದಲ್ಲಿವೆ. ಈ ಎರಡು ವರ್ಗಗಳಲ್ಲಿಯೂ ಭೂತಮಹಿಮಾ ಪ್ರಧಾನವಾದ ಮತ್ತು ಪುರುಷಕಾರ ಪ್ರಧಾನವಾದ ಕಾವ್ಯಗಳು ಸಿಗುತ್ತವೆ. ಟಿಬೆಟ್ಟಿನ ವೀರಕಾವ್ಯಗಳಲ್ಲಿ ಕಿಂಗ್ ಕೇಸರ್ ಆಫ್ ಲಿಂಗ್ ಪ್ರಧಾನವ್ಯಕ್ತಿ; ಅವನೊಬ್ಬ ವೀರಯೋಧ; ಐತಿಹಾಸಿಕ ವ್ಯಕ್ತಿ. ಅವನಲ್ಲಿ ಯೋಧಸಹಜವಾದ ಸಾಹಸಗುಣಗಳೂ ಇವೆ. ವೀರಯೋಧನಲ್ಲಿರಬೇಕಾದ ದೈಹಿಕ ಶಕ್ತಿ ಬೌದ್ಧಿಕ ಸಾಮರ್ಥ್ಯಗಳು ಅವನಲ್ಲಿ ಯಥೇಚ್ಛವಾಗಿವೆ; ಅವನ ಹುಟ್ಟು ಬೆಳವಣಿಗೆಯ ಅಸಾಧಾರಣ ವ್ಯಾಪಾರಗಳಲ್ಲಿ ಭವಿಷ್ಯ ಸೂಚಕ ಚಿಹ್ನೆಗಳಿವೆ; ಅವನು ಗಳಿಸಿದ ಜಯಗಳು ವೀರೋಚಿತವಾಗಿವೆ. ಆದರೆ ಆ ಜಯ ಪರಂಪರೆಗೆ ಅವನ ಯಕ್ಷಿಣೀವಿದ್ಯೆ ಪ್ರಧಾನ ಹೇತುವಾಗಿದೆ. ತನಗೆ ವಶವಾಗಿದ್ದ ರೂಪಪರಾವರ್ತನ ವಿದ್ಯೆಯಿಂದ ನಾನಾರೂಪಗಳನ್ನು ಧರಿಸುವುದಲ್ಲದೆ, ಭೂತಗಳನ್ನು ಸೃಷ್ಟಿಸಿ, ಅವರಿಂದ ಶತ್ರುಗಳನ್ನು ನಡುಗಿಸುತ್ತಾನೆ. ಈ ಲಕ್ಷಣಗಳಿಂದ ಟಿಬೆಟ್ಟಿನ ವೀರಕಾವ್ಯಗಳು ಭೂತಮಹಿಮಾ ಪ್ರಧಾನವಾದ ಕಾವ್ಯಗಳನ್ನು ಹೋಲುತ್ತವೆಂದು ಧಾರಾಳವಾಗಿ ಹೇಳಬಹುದು. ಸೈಬೀರಿಯಾದ ಯಾಕುತರ ವೀರಕಾವ್ಯಗಳಲ್ಲಿ ಇಂದ್ರಜಾಲ ವಿದ್ಯೆಗೆ ಪ್ರಾಶಸ್ತ್ಯವಿದ್ದರೂ ಕಾಳಗ ಹೋರಾಟಗಳು ಸಮನಿಸಿದಾಗ ಕಥಾನಾಯಕ ತನ್ನ ವ್ಯಕ್ತಿತ್ವಕ್ಕೆ ತಗುವಂತೆ ರಣಕೌಶಲವನ್ನು ಮೆರೆಯುತ್ತಾನೆ. ಆದ್ದರಿಂದ ಅವು ವೀರಕಾವ್ಯವೆಂಬ ನಾಮಕರಣಕ್ಕೆ ಯೋಗ್ಯವಾಗುತ್ತವೆ. ಶುದ್ಧವೀರಕಾವ್ಯದಲ್ಲಿ ಮಾನವ ಕೇಂದ್ರವ್ಯಕ್ತಿಯಾದರೂ, ಅವನ ಸಾಹಸದ ಹಿರಿಮೆಗೆ ಪ್ರಧಾನಪಟ್ಟವಾದರೂ, ಒಮ್ಮೊಮ್ಮೆ ಮಾನವ ಜೀವನದ ನಾಟಕರಂಗದಲ್ಲಿ ದೇವತೆಗಳೂ ಪಾತ್ರಧಾರಿಗಳಾಗಿ ಭಾಗವಹಿಸುವುದುಂಟು. ಇಲಿಯಡ್ ಮತ್ತು ಒಡಿಸ್ಸಿ ಕಾವ್ಯಗಳಲ್ಲಿ ದೇವತೆಗಳು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ತಮ್ಮ ಪ್ರಭಾವವನ್ನು ಬೀರುತ್ತಾರೆ; ಆದರೆ ಅಖಿಲೀಸ್‌ನಂಥ ಮಹಾವ್ಯಕ್ತಿಗಳ ಗೌರವಕ್ಕೆ ಅದರಿಂದ ಕುಂದುಂಟಾಗುವುದಿಲ್ಲ.

ವೀರಕಾವ್ಯದ ಪ್ರಧಾನಗುಣ ವಸ್ತುನಿಷ್ಠೆ; ಕಥನ ಮಾರ್ಗವೇ ಅದರ ಪ್ರಮುಖ ಲಕ್ಷಣ. ಪ್ರಾರಂಭದಿಂದ ಅಂತ್ಯದವರೆಗೆ ಕ್ರಿಯೆ ಪ್ರತಿಬಂಧಕವಿಲ್ಲದೆ ಅವಿಚ್ಛಿನ್ನವಾಗಿ ಹರಿಯಬೇಕು. ಕಥೆಯ ಬೆಳವಣಿಗೆಯಲ್ಲಿ ಕವಿಯ ಪ್ರಯತ್ನ ಪ್ರಭಾವಗಳು ಕಣ್ಣಿಗೆ ರಾಚುಬಡಿದಂತೆ ಎದ್ದು ಕಾಣಬಾರದು. ಕಥೆ ತಾನೇ ತಾನಾಗಿ ಬೆಳೆಯಬೇಕು. ಕವಿಯ ಟೀಕೆ ಟಿಪ್ಪಣಿಗಳಿಗೆ ಎಡೆಯಿರಬಾರದು. ಕವಿಯ ಆಲೋಚನೆ ಅಭಿಪ್ರಾಯಗಳ ರಂಗು ಕಣ್ಣಿಗೆ ಬಡಿಯುವಂತೆ ಕಾವ್ಯಕ್ಕೆ ಅಂಟಿಕೊಂಡಿರಬಾರದು. ಅಂದರೆ ಒಂದು ಬಗೆಯ ನಿಸ್ಸಂಗತ್ವ ಕಾವ್ಯದ ಶೀಲವಾಗಿರಬೇಕು. ನಾಟಕೀಯತೆ ಅದರ ವಿಶಿಷ್ಟ ಲಕ್ಷಣವಾಗಿ, ಒಮ್ಮೊಮ್ಮೆ ಹಸೆಗೆ ನಿಲ್ಲುವುದೂ

ಉಂಟು. ಸನ್ನಿವೇಶ ರಚನೆಗೆ, ವ್ಯಕ್ತಿಯ ಮಹಿಮಾ ಪ್ರಕಾಶನಕ್ಕೆ ಅತ್ಯವಶ್ಯವೆಂದು ತೋರಿದಾಗ, ವೈವಿಧ್ಯತೆಯನ್ನು ಸಾಧಿಸುವ ಸಲುವಾಗಿ ಔಚಿತ್ಯವರಿತು ಕ್ರಿಯೆಯ ಅಂಗವಾಗಿ ಕವಿ ಭಾಷಣಗಳನ್ನು ನೇಯಬಹುದು. ಸಾಮಾನ್ಯವಾಗಿ ವೀರಕಾವ್ಯ ಅಷ್ಟೇನೂ ವಿದ್ಯಾವಂತರಲ್ಲದ ಶ್ರೋತೃವೃಂದಕ್ಕೆ ಉದ್ದೇಶಿತವಾದ್ದರಿಂದ ವಿಷಯ ಆಕರ್ಷಕವಾಗಿರಬೇಕು, ಕಥನ ರೀತಿ ಸರಳವಾಗಿರಬೇಕು, ಭಾವಗಳ ಜಟಿಲ ಜಾಲದಲ್ಲಿ ಕ್ರಿಯೆ ಸಿಕ್ಕಿಕೊಂಡು ಮಿಸುಕಾಡಬಾರದು. ಮಹಾಕಾವ್ಯ ಸಂಕೀರ್ಣವಾಗಿದ್ದಷ್ಟು ಅದರ ಘನತೆ ಹೆಚ್ಚುತ್ತದೆ; ಕಥನಕಾವ್ಯ ಸರಳವಾಗಿದ್ದಷ್ಟೂ ಅದರ ಚಾರುತ್ವ ಮೆರೆಯುತ್ತದೆ.

ವೀರಕಾವ್ಯ ಮುಖ್ಯವಾಗಿ ಮಹಾವೀರನೊಬ್ಬನ ಜೀವನ ಚರಿತ್ರೆ; ಅವನ ಜೊತೆಗೆ ಇತರ ವ್ಯಕ್ತಿಗಳು ಬರುವುದಾದರೆ ಪೋಷಕಪಾತ್ರಗಳಾಗಿ ಬರುತ್ತವೆ, ಚಕ್ರವರ್ತಿಗೆ ಪರಿವಾರವರ್ಗವಿರುವಂತೆ. ಆ ವ್ಯಕ್ತಿಗಳು ತಮ್ಮ ವ್ಯಕ್ತಿತ್ವವನ್ನೆಲ್ಲ ನಾಯಕ ಶಿರೋಮಣಿಯ ಏಳ್ಗೆಗಾಗಿ ಧಾರೆಯೆರೆಯಬೇಕಾಗುತ್ತದೆ; ಕೊನೆಗೆ ಅವು ವಾಚಕರ ಅವಜ್ಞೆಗೂ ಗುರಿಯಾಗಿ ವಿಸ್ಮೃತಿಯ ಅಂಧಕಾರದಲ್ಲಿ ಮರೆಯಾಗಬಹುದು. ಕಥೆ ಕೆಲವರಿಗಾಗಿ ಬೆಳೆಯುವುದೂ, ಕೆಲವರ ಪ್ರಾಶಸ್ತ್ಯ ಮಾತ್ರ ಅದರಲ್ಲಿ ಕಂಡು ಬರುವುದೂ ಸಹಜ. ಪೋಷಕ ಪಾತ್ರಗಳ ಚಿತ್ರಣ ಎಷ್ಟೇ ಮನೋಹರವಾಗಿದ್ದರೂ, ಅದು ನಾಯಕನ ವ್ಯಕ್ತಿತ್ವವನ್ನು ಮರೆಸುವಂತಾದರೆ, ತ್ಯಾಜ್ಯವಾಗುತ್ತದೆ. ತೊಟ್ಟಿಲಿಂದ ಗೋರಿಯ ತನಕ ನಾಯಕನ ಮಹಿಮಾತಿಶಯವನ್ನು ಕವಿ ವರ್ಣಿಸಬೇಕಾಗುತ್ತದೆ. ನಾಯಕನ ಹುಟ್ಟು ಬೆಳವಣಿಗೆಗಳಲ್ಲಿ, ಅವನ ನಡೆನುಡಿಗಳಲ್ಲಿ, ಚಲನವಲನಗಳಲ್ಲಿ, ಸ್ವರೂಪ ಸ್ವಭಾವಗಳಲ್ಲಿ ಕವಿ ಅಸಾಮಾನ್ಯ ವೈಶಿಷ್ಟ್ಯವನ್ನು ಕಾಣುತ್ತಾನೆ. ಅವನು ದೈವಾಂಶಸಂಭೂತನಿರಬಹುದು; ಅಸಾಮಾನ್ಯ ರೀತಿಯಲ್ಲಿ ಸಂಭವಿಸಬಹುದು. ಅವನು ಸಮುದ್ರದ ತಳದಲ್ಲಿ ಜನ್ಮತಾಳಬಹುದು; ಕುಂಭದಲ್ಲಿ ಹುಟ್ಟಬಹುದು; ಕಿವಿಯಲ್ಲಿ ಹುಟ್ಟಬಹುದು; ಅವನು ತಾಯ ಬಸಿರಿಂದ ವಜ್ರಕವಚ ಧಾರಿಯಾಗಿಯೇ ಹೊರಗೆ ಬರಬಹುದು; ಹುಟ್ಟಿದ ಮೇಲೆ ತಾಯಿ ಅವನನ್ನು ಬೆಂಕಿಯಲ್ಲಿಯೋ ಅಮೃತದಲ್ಲಿಯೋ ಅದ್ದದ್ದಿ ಮೇಲೆತ್ತಬಹುದು.[3] ಹುಟ್ಟಿದ ಮೇಲೆ ಮಗು ಸಿಕ್ಕಾಬಟ್ಟೆ ಬೆಳೆಯುತ್ತದೆ; ಕ್ಷಣಕ್ಷಣಕ್ಕೂ ಬೆಳೆಯುತ್ತದೆ; ಇತರರು ಕೂತಲ್ಲೆ ಕೂತರೆ, ಮಲಗಿದಲ್ಲೆ ಮಲಗಿದರೆ, ನಿಂತಲ್ಲೆ ನಿಂತರೆ ಕಥಾನಾಯಕ ಮುಗಿಲುದ್ದ ಬೆಳೆಯುತ್ತಾನೆ. ಅವನ ಶಕ್ತಿಸಾಮರ್ಥ್ಯ ಸೌಂದರ್ಯಗಳನ್ನು ಕಂಡ ಜನ ಬೆರಗಾಗುತ್ತಾರೆ. ಎಲ್ಲಿ ಹೋದರೂ ಅವನಿಗೆ ಜಯ; ಅವನ ಕಣ್ಣ ಮಿಟುಕಿಗೆ ವಿರೋಧಿ ಜನ ಶರಣಾಗು

---

3 ಅಖಿಲೀಸ್‌ನ ಶರೀರವನ್ನು ಎಂಥ ಮಹೋಗ್ರ ಬಾಣವಾದರೂ ಸರಿಯೆ, ಚುಚ್ಚದಿರಲೆಂದು ಅವನ ತಾಯಿ ಮಗು ಹುಟ್ಟಿದ ಕೂಡಲೇ ಬೆಂಕಿಯಲ್ಲದ್ದಿದಳಂತೆ

ತ್ತಾರೆ. ಅವನ ಪ್ರತಿಯೊಂದು ಕ್ರಿಯೆಯಲ್ಲಿಯೂ ಅಸಾಮಾನ್ಯತೆ ಎದ್ದು ಕಾಣುತ್ತದೆ. ಅವನು ಪ್ರಾಣಾಪಾಯಕ್ಕೆ ಹೆದರುವುದಿಲ್ಲ. ಉದಾತ್ತವಾದ ಧ್ಯೇಯ ಸಾಧನೆಗಾಗಿ, ಲೋಕಕಲ್ಯಾಣಕ್ಕಾಗಿ ಅವನು ಯುದ್ಧಮಾಡುತ್ತಾನೆ. ಸದುದ್ದೇಶ ಮೂಲವಲ್ಲದ ಅವನ ಶೌರ್ಯಪ್ರಯೋಗ ವ್ಯರ್ಥವಾಗುತ್ತದೆ. ಆದರೆ ವೀರನಾದವನ್ನು ಬಲಹೀನನನ್ನು ಅಣಕಿಸಬಾರದು, ಸೋತವನನ್ನು ಭರ್ತ್ಸನೆ ಮಾಡಬಾರದು, ಅವಮಾನಪಡಿಸಬಾರದು. ಅದು ವೀರಲಕ್ಷಣವಲ್ಲ. ಕಥಾನಾಯಕ ರಕ್ತಪಾತ ದಿಂದಲೇ ತನ್ನ ಶೌರ್ಯವನ್ನು ಮೆರೆಯಬೇಕಾಗಿಲ್ಲ; ತನ್ನ ವ್ಯಕ್ತಿತ್ವದ ಭೀಕರತೆ ಯಿಂದಲೇ ಶತ್ರುಗಳನ್ನು ತಲ್ಲಣಗೊಳಿಸಬಹುದು. ಅವನು ಸಾಯಲೇಬೇಕೆಂಬ ನಿಯಮವಿಲ್ಲ; ಆದರೆ ವೀರಮರಣವೇ ಅವನ ಜೀವನದ ಸಹಜ ಪರಿಸಮಾಪ್ತಿ ಯೆಂದು ಹೇಳಲಡ್ಡಿಯಿಲ್ಲ.

— ದೇ.ಜ.ಗೌ.

## ಮಣ್ಣಿನ ವಾಸನೆ

ಬೇಸಗೆಯ ಕೊನೆಕೊನೆಯಲ್ಲಿ ಬಿರುಬಿಸಿಲಿನ ತಾಪಕ್ಕೆ ನೆಲ ಕಾದು ಕೆಂಪಾಗಿ, ಉತ್ತು ಬಿಟ್ಟಿದ್ದ ಗದ್ದೆಮಣ್ಣು ಧೂಳುಧೂಳಾಗಿರುವಾಗ ಆಕಾಶದಲ್ಲಿ ಮೋಡ ಮುಂದಯಿಸಿ ಕಪ್ಪುಕಪ್ಪಾಗಿ, ಆಗ ತಂಗಾಳಿಯ ತೆರೆಯೊಂದು ದೂರದಿಂದ ಬಂದು ಬಡಿದಾಗ, ಹಠಾತ್ತಾಗಿ ಹನಿ ಹನಿ ಮಳೆ ನೆಲಕ್ಕೆ ಸಿಂಪಡಿಸಿದಾಗ ನೆಲದೊಡಲಿನಿಂದ ಕಂಪೊಂದು ಹೊಮ್ಮಿ ಬರುತ್ತದೆ. ಆ ಮಣ್ಣಿನ ವಾಸನೆ ಅಂತರಂಗದ ಅತ್ಯಂತ ಕೆಳ ತೆಳು ಪದರುಗಳನ್ನೂ ತಟ್ಟಿ, ಮೈಯೆಲ್ಲ ನವಿರುಗಟ್ಟಿ ಎಲ್ಲೆಲ್ಲೋ ಸುತ್ತಾಡಿ ಕೊನೆಗೆ ಮನೆಗೆ ಮರಳಿದಂತೆ ಮನಸ್ಸು ಸುಕ್ಕು ಬಿಚ್ಚಿ ನುಣುಪಾಗುತ್ತದೆ. ಅಪೂರ್ವವಾದ, ವಿವರಣೆಗೆ ಅಸಾಧ್ಯ ಎನ್ನುವಂಥ ಅನುಭವ ಆಗುತ್ತದೆ. ತೀರ ಸಾಮಾನ್ಯವೂ ಅತ್ಯಂತ ನಿಕೃಷ್ಟವೂ ಎಂದು ಭಾವಿಸಲಾಗುವ ಈ ಮಣ್ಣು, ಅದರ ವಾಸನೆ ನಮ್ಮ ಜೀವನದ ಮೂಲಭೂತವಾದೊಂದು ಅಂಶಕ್ಕೆ ಸಂಬಂಧಪಟ್ಟಿದ್ದಿರ ಬೇಕು ಎಂದು ಆಗ ಅನ್ನಿಸುತ್ತದೆ. ಆಕಾಶದ ಮೇಲ್ನಾಡಿನಿಂದ ಇಳಿವ ಮಳೆ, ಸುಟ್ಟ ಹುಡಿಮಣ್ಣು–ಇವುಗಳ ಹಠಾತ್ ಸಂಪರ್ಕದಿಂದ ಸಂಭವಿಸುವ ಈ ಗಂಧಾ ವತಾರ ಮರ್ತ್ಯಜೀವನದ ಗುಟ್ಟನ್ನೇ ರಟ್ಟು ಮಾಡುವ ಒಂದು ಒಗಟು ಎನ್ನಿಸು ತ್ತದೆ. ಆ ಒಗಟಿನ ಅರ್ಥವೇನು?

ತಿಳಿಯುವುದಿಲ್ಲ. ತಿಳಿದ ಹಾಗೆ ಅನ್ನಿಸಿದರೂ ಹೇಳಬರುವುದಿಲ್ಲ. ಈ ಮಣ್ಣು–ಕೊಳೆ, ಕಸ, ಗೊಬ್ಬರ, ಹುಳು, ಕೊಳೆಯುತ್ತಿರುವ, ನಾರುತ್ತಿರುವ ಸೇಂದ್ರಿಯ ಪದಾರ್ಥಗಳ ಅಸಹ್ಯ ಹೇಗೋ ಹಾಗೆಯೇ ಕೊನರುತ್ತಿರುವ ಚಿಗುರು,

ಅರಳಿದ, ಅರಳುತ್ತಿರುವ ಹೂವು, ಕಾಯಿಯ ಹುಳಿ, ಹಣ್ಣಿನ ಸವಿ, ಪುಟ್ಟ ಕೂಸಿನ ಮುಗ್ಧ ಮಂದಹಾಸ, ಹೆಣ್ಣಿನ ಕಣ್ಣಿನ ಹೊಳಪು, ಕೆನ್ನೆಯ ಕೆಂಪು, ಉಸುರಿನ ಕಂಪೂ ಹೌದು. ಮಣ್ಣನ್ನು ಬಿಟ್ಟರೆ ಇವೆಲ್ಲ ಎಲ್ಲಿ? ಗೊಬ್ಬರ ಮಣ್ಣುಗಳ ಸತ್ವವೇ ಹೂವಿನ ಮೃದುತ್ವ, ಹಣ್ಣಿನ ಪರಿಪಾಕ, ಬೀಜದ ಪ್ರವಾದಿತ್ವ ಅಲ್ಲವೇ? ಹೂವು ಬೇಡ, ಹೂವಿನ ಕಂಪುಬೇಕು ಎಂದು ಒಬ್ಬ ಹಿರಿಯ ಕವಿ ಅಪ್ಪಣೆ ಕೊಡಿಸಿದ್ದು ಈಗ ನೆನಪಿಗೆ ಬರುತ್ತದೆ. ಕಾವ್ಯವೂ ಹಾಗೆಯೇ ಎಂದು ಅವರು ಸೂಚಿಸಿದ್ದರು. ಗುಲಾಬಿ ಬೇಕು, ಅದರ ಮುಳ್ಳು ಬೇಡ; ಗುಲಾಬಿಯ ಅತ್ತರು ಬೇಕು, ಗುಲಾಬಿ ಬೇಡ; ಮುಗಿಲುಬೇಕು, ನೆಲ ಬೇಡ; ಅಂತರಂಗದ ಅದೃಶ್ಯ, ಅಮೂರ್ತ ಜೀವನ ಬೇಕು, ಶರೀರದ ಕೋಟಲೆ ಬೇಡ–ಎಂಬ ಈ ವಾಸ್ತವಿಕ ದ್ವಂದ್ವದ ನಿರಾಕರಣೆ ಒಂದು ಬಗೆಯ ಮನೋಧರ್ಮಕ್ಕೆ ತೀರ ಸಾಧಾರಣವಾದುದು. ಇರುವ ಎರಡೂ ಮಣ್ಣಿನ ಕಣ್ಣುಗಳನ್ನು ಮುಚ್ಚಿಕೊಂಡು ಸಶರೀರ ಸ್ವರ್ಗಾರೋಹಣಮಾಡಿ, ಮನಸ್ಸಿನಲ್ಲಿಯೇ ಮಂಡಿಗೆ ತಿಂದು, ಬರಿಗೈಯಲ್ಲಿ ಹತ್ತೊಂಭತ್ತು ಮೊಳ ಹಾಕಿ, ಬಾಳನ್ನೇ ಒಂದು ವಿಸ್ತೃತ, ನಿರಂತರ ಹಗಲುಗನಸನ್ನಾಗಿ ಮಾಡುವ ಪ್ರವೃತ್ತಿ ಇದು. ಇದು ಜೀವನದಲ್ಲಿ ವ್ಯಕ್ತಗೊಂಡಾಗ ಪರೋಪದೇಶ ಪಾಂಡಿತ್ಯ, ಭಾಷಣಶೂರತ್ವವಾಗಿ, ಸಾಹಿತ್ಯದಲ್ಲಿ ಆದರ್ಶಪರ ವಾಗ್ವಿಜೃಂಭಣೆಯೋ, ಶಬ್ದಗಳ ಅರ್ಥವನ್ನೂ ವ್ಯಕ್ತಿತ್ವವನ್ನೂ ಮರೆತು ಬರೇ ನಾದವನ್ನು ಹಿಂಡ ಬಯಸುವ ಬುದ್ಧಿಕ್ಷಯವೋ ಆಗಿ ಗೋಚರವಾಗುತ್ತದೆ. ತ್ರಿಕರಣಗಳಲ್ಲಿ ಮನಸ್ಸಿಗೆ ಮಾತ್ರ ಬೆಲೆ ಕೊಡುವ, ವಾಕ್ಕಿನಲ್ಲಿ ಮಾತ್ರ ಪ್ರವೃತ್ತನಾಗುವ, ಕರ್ಮನಿವೃತ್ತಿ ಮಾರ್ಗ ಇದು. ಕೈ ಕೆಸರಾಗದೆ, ಬಾಯಿ ಮೊಸರಾಗಬೇಕೆಂದು ಬಯಸುವ ಕರ್ಮಸಂನ್ಯಾಸ ಇದು.

ಆತ್ಮವೊಂದೇ ಯಾವಾಗಲೂ ಇರುವಂಥದಾದುದರಿಂದ ಅದೊಂದೇ ಸತ್ಯವಾಗಿಯೂ ಆದಕಾರಣ ಆಧ್ಯಾತ್ಮಿಕತೆಯೇ ಪರಮ ಪುರುಷಾರ್ಥವಾಗಿಯೂ ಇರಬಹುದು–ಅದು ತತ್ವಜ್ಞಾನಕ್ಕೆ ಸಂಬಂಧಪಟ್ಟ ಮಾತು; ಜೀವನವನ್ನು ದಾಟಿ ಆಚೆ ಹೋಗಿ ತುರೀಯಾವಸ್ಥೆಯನ್ನು ಮುಟ್ಟಿ ಸತ್ಯವನ್ನು ಕಂಡವರು ಆಡಬಹುದಾದ ಮಾತು ಅದು. ಅಂಥವರೂ ಕೂಡಾ ಸಾಯುವ ತನಕ ಇಲ್ಲೇ, ಈ ಮಣ್ಣಿನಲ್ಲೇ, ಈ ದೇಹದೊಡನೆಯೇ ಇರಬೇಕಾಗುತ್ತದೆ, ಈ ನಾಲಗೆ ಈ ಕೈಬಾಯಿಗಳ ಮೂಲಕವಾಗಿಯೇ ತಮ್ಮ ದಿವ್ಯಜ್ಞಾನವನ್ನು ಪ್ರಕಟಿಸಬೇಕಾಗುತ್ತದೆ ಎಂಬುದನ್ನು ನಾವು ಮರೆಯುವಂತಿಲ್ಲ. ಲೋಕ ಸಂಗ್ರಹದ, ನಿಷ್ಕಾಮ ಕರ್ಮದ ಅಗತ್ಯವನ್ನು ಅವರಲ್ಲಿ ಅನೇಕರು ಒತ್ತಿಹೇಳಿದ್ದನ್ನೂ ನಾವು ಮರೆಯುವಂತಿಲ್ಲ. ನಾವು ಜೀವಂತವಾಗಿರುವವರೆಗೂ ಈ ದೇಹ ವ್ಯಾಪಾರವೇನೂ ನಿಲ್ಲತಕ್ಕದ್ದಲ್ಲ. ನಮ್ಮ ಆತ್ಮದಲ್ಲೋ ಅಂತರಂಗದಲ್ಲೋ ಏನಾದರೂ ನಡೆಯುತ್ತಿದ್ದರೆ ಅದು ವ್ಯಕ್ತವಾಗುವುದು ಈ ಮಣ್ಣಿನ ಶರೀರದ ಮೂಲಕವಾಗಿಯೇ. ಕೇವಲ

ಆತ್ಮಗಳ ದರ್ಶನ ಭಾಗ್ಯ ನಮ್ಮ ಈ ಮಣ್ಣಿನ ಕಣ್ಣುಗಳಿಗೆ ಇಲ್ಲ; ಎಲ್ಲಾದರೂ ಕೇವಲ ಆತ್ಮಗಳು ಪ್ರಕಟವಾಗಲು ಯತ್ನಿಸಿ ಸಫಲವಾದರೆ ಅವನ್ನು ನಾವು ಪ್ರೇತಗಳೆಂದು ಕರೆಯುತ್ತೇವೆ; ಅವು ಪ್ರಕಟವಾಗುವುದೂ ಸತ್ತಮೇಲೇ ಹೊರತು ಅದಕ್ಕೆ ಮೊದಲು ಅಲ್ಲ. ನಮ್ಮ ನಿಜವಾದ ಬದುಕಿನಲ್ಲಿ–ಹಗಲುಗನಸಿನ ಮಂಪರಿನಲ್ಲಿ ಅಲ್ಲ–ನಮಗೆ ಆತ್ಮದ ಅರಿವು ಏನಾದರೂ ಬರುವುದಿದ್ದರೆ ಅದು ಈ ದೇಹದ ಮೂಲಕವಾಗಿ ಅಲ್ಲದೆ ಅನ್ಯಥಾ ಅಲ್ಲ. ಅದೇ ರೀತಿ ಕಾವ್ಯವೂ ಕೂಡಾ ಈ ಸಜೀವ ಜಗತ್ತಿಗೆ, ದ್ವಂದ್ವ ಪ್ರಪಂಚಕ್ಕೆ ಸೇರಿದ್ದು. ಅಲ್ಲಿಯೂ ಕೂಡ ಕವಿಯ ಅಂತರ್ಗತವಾದ ಭಾವನೆಯೋ ಅನುಭವವೋ ಹೊಸ ಕಾಣ್ಕೆಯೋ ಇನ್ನೊಬ್ಬರ ಅರಿವಿಗೆ ಬರುವುದು ಶಬ್ದಛಂದಸ್ಸು ಲಯಗಳಲ್ಲಿ ಅವು ಶರೀರಧಾರಣೆ ಮಾಡಿದಾಗ ಮಾತ್ರ. ಕಾವ್ಯ ಅಥವಾ ಇನ್ನು ಯಾವುದೇ ಕಲೆಯಾಗಲೀ ಕವಿಯ ಅಂತರಂಗ ವ್ಯಾಪಾರಗಳಿಗೆ ಹೊರಗಿರುವ, ಹೊರಗೆ ನಡೆಯುವ ವಿದ್ಯಮಾನ, ಚಟುವಟಿಕೆ, ಘಟನೆ, ವಸ್ತು–ಇವುಗಳಲ್ಲಿ ಮಾತ್ರ ರೂಪ ತಳೆಯಬಲ್ಲುದು. 'ಆತ್ಮವನ್ನು ಶರೀರದ ಮೂಲಕವೇ ಊಹಿಸಿ ಅರಿಯಬೇಕಾಗುವಂತೆ ಕಲೆಗಾರನ ವೈಯಕ್ತಿಕ ಅನುಭವವನ್ನು ಅವನ ಕೃತಿಗಳ ಮೂಲಕ ಮಾತ್ರವೇ ಊಹಿಸಿ ತಿಳಿಯುವುದು ಸಾಧ್ಯ.'

ಕವಿಯ ಕರ್ಮ ಕಾವ್ಯ; ಅದು ಅವನ ಭಾಷಣವಲ್ಲ. ಒಂದು ಮಾತಿಗೂ ಅದರಂತೆ ನಡೆಯುವುದಕ್ಕೂ ಇರುವ ವ್ಯತ್ಯಾಸ ಎಷ್ಟು ಗಾಢವಾದದ್ದೋ ಅಷ್ಟೇ ಗಾಢವಾದದ್ದು ಅಂತರಂಗದ ಅನುಭವಕ್ಕೂ ಅದನ್ನು ಕವಿ ಶಬ್ದಗಳಲ್ಲಿ ಸೃಷ್ಟಿಸುವುದಕ್ಕೂ ಇರುವ ವ್ಯತ್ಯಾಸ. ಎಲ್ಲ ಕಲೆಯ ಮೂಲ ದ್ರವ್ಯವೂ ಕಲೆಗಾರನ ವೈಯಕ್ತಿಕ ಅನುಭವವೇ ಹೊರತು ಬೇರೆ ಅಲ್ಲ. ಈ ಅನುಭವಗಳನ್ನು ಪಡೆಯುವುದು ಇಂದ್ರಿಯಗಳ, ಮನಸ್ಸಿನ ಮೂಲಕ. ಹಾಗೆ ಪಡೆದ ಬಹಿರಂಗ ಲೋಕದ ಅನುಭವ ಮನಸ್ಸಿನ ಕೆಳಪದರುಗಳಿಗಿಳಿದು ಅಲ್ಲಿ ತುಂಬಿಕೊಂಡಿರುವ ವ್ಯಕ್ತಿ ಮತ್ತು ಅವನ ಜನಾಂಗದ ಅರ್ಧಸ್ಮೃತ ಅಥವಾ ವಿಸ್ಮೃತ ಭಾವಾನುಭವ ಸಂವೇದನಗಳೊಡನೆ ಸಮರಸಗೊಂಡು ಮಾಗಿ ಸ್ವಪ್ರದರ್ಶನಕ್ಕೆ ತಕ್ಕ ನಿಮಿಷವನ್ನು ಕಾಯುತ್ತಿರುತ್ತದೆ. ಇದು ಕಲೆಗಾರನಲ್ಲಿ ಮಾತ್ರವಲ್ಲ, ಎಲ್ಲರಲ್ಲೂ ಇರುವ, ಕಲೆಯಾಗಿ ಪರಿಣತವಾಗಬಲ್ಲ, ಯೋಜಿಸಬಲ್ಲ ಕಚ್ಚಾ ಮಾಲು. ಕವಿಯ ಮನಸ್ಸಿನೊಳಗೇ ಇರುವಾಗ ಈ ಅನುಭವ ಅಮೂರ್ತ, ಅಸ್ತವ್ಯಸ್ತ, ರೂಪಹೀನ. ಅದಕ್ಕೆ ತಕ್ಕ ಶರೀರವನ್ನು ಸೃಷ್ಟಿಸಿ ಅದನ್ನು ಕಲೆಯಾಗಿ ಮಾರ್ಪಡಿಸುವುದು ಕಲೆಗಾರನ ಕೆಲಸ. ಆದ ಕಾರಣ ವಾಗ್ರೂಪಧಾರಣೆ ಮಾಡಿದಾಗಲೇ ಅದು ಕೃತಿ, ಹಾಗೆ ತಕ್ಕ ಶರೀರ ಪಡೆದಾಗಲೇ ಸಾರ್ಥಕ. ಅಂಥ ಶರೀರದ ಮೂಲಕವಾಗಿಯೇ ಅದು ಸಹೃದಯನ ಅಂತರಂಗಕ್ಕೆ ಉತ್ತರಿಸಬೇಕು. ಈ ಶರೀರವನ್ನು ಕವಿ, ಸಾಹಿತಿ ತನ್ನ ಮನಸ್ಸಿಗಿಂತ ಭಿನ್ನವಾದ ಹೊರ ಜಗತ್ತಿನ ವಸ್ತುಗುಚ್ಛಗಳಲ್ಲಿ, ಘಟನಾ ಸರಣಿಯಲ್ಲಿ, ಕ್ರಿಯಾಪರಂಪರೆಯಲ್ಲಿ, ವಿಶಿಷ್ಟ ಸನ್ನಿವೇಶಗಳಲ್ಲಿ ಸೃಷ್ಟಿಸುತ್ತಾನೆ;

ಹೀಗೆ ಕವಿಯು ಅನುಭವ ಅಥವಾ ಭಾವ ಯಾವ ಯಾವ ವಸ್ತುರೂಪದಲ್ಲಿ ಮೈತಳೆಯುತ್ತದೋ ಅದನ್ನು ಆ ಆ ಭಾವದ, ಅನುಭವದ ವಸ್ತು ಪ್ರತಿರೂಪ ಅಥವಾ ವಸ್ತುವ್ಯತಿಕರ ಎನ್ನಬಹುದು ಎಂಬ ಕವಿ ಎಲಿಯಟ್ಟನ ಅಭಿಪ್ರಾಯ ವನ್ನು ಇಲ್ಲಿ ನೆನೆಯಬಹುದು. ಈ ವಸ್ತು ಪ್ರತಿರೂಪ ಯಾವ ಅನುಭವವನ್ನು ಕಲೆಗಾರ ಪ್ರಕಟಿಸಬಯಸುತ್ತಾನೋ ಆ ಅನುಭವದ ಸೂತ್ರವಾಗುತ್ತದೆ. ಹೀಗೆ ಇಂದ್ರಿಯಾನುಭವದಲ್ಲಿ ಕೊನೆಗೊಳ್ಳುವ ಹೊರಜಗತ್ತಿನ ವಿದ್ಯಮಾನಗಳನ್ನು ಕೊಟ್ಟರೆ ಉದ್ದಿಷ್ಟವಾದ ಭಾವದ ಅಥವಾ ಅನುಭವದ ಪ್ರಬೋಧನೆ ಓದುವವನಲ್ಲಿ ಉಂಟಾಗುತ್ತದೆ.

ಆದ ಕಾರಣ ಕವಿಯು ಅಥವಾ ಕಲೆಗಾರನ ಕೆಲಸ ತನ್ನ ಅನುಭವಕ್ಕೆ ತಕ್ಕ ವಸ್ತುಪ್ರತಿರೂಪವನ್ನು ಸೃಷ್ಟಿಸುವುದು. ಈ ಅರ್ಥದಲ್ಲೇ ಕವಿ 'ನೂತನ ಬ್ರಹ್ಮ' ನಲ್ಲದೆ ಅಘಟಿತ ಘಟನೆಗಳನ್ನು ಕಲ್ಪಿಸುವುದರಿಂದ ಅಲ್ಲ. ಬ್ರಹ್ಮ ಹೇಗೆ ಪ್ರತಿ ಯೊಂದು ಆತ್ಮಕ್ಕೂ ತಕ್ಕ ದೇಹವನ್ನು ಸೃಷ್ಟಿಸಬೇಕಾಗುತ್ತದೋ ಹಾಗೆ ಕವಿಯೂ ತನ್ನ ಭಾವಕ್ಕೆ ತಕ್ಕ ಪ್ರತಿ ರೂಪಗಳನ್ನು ಶಬ್ದಗಳಲ್ಲಿ ವಸ್ತುಗಳ ಮೂಲಕ ಸೃಷ್ಟಿಸುತ್ತಾನೆ. ಆತ್ಮ ಹೇಗೆ ದೇಹದೊಳಗಡೆ ಎಲ್ಲೋ ಇದ್ದರೂ ನಮಗೆ ಕಾಣುವುದು ದೇಹಮಾತ್ರವೋ, ಕಾಣುವ ದೇಹದ ವಿವಿಧ ವ್ಯಾಪಾರಗಳಿಂದ ಮಾತ್ರ ನಾವು ಅಂತರ್ಗತ ಆತ್ಮವನ್ನು ಊಹಿಸಿ ತಿಳಿಯಬಹುದೋ, ಅದೇ ರೀತಿ ಕಾಗದದ ಮೇಲೆ ಅಚ್ಚಾಗಿರುವ ಅಕ್ಷರಗಳ ಮೂಲಕವೇ ಅಲ್ಲಿ ರೂಪು ತಳೆಯುವ ಭಾವವನ್ನು ಅರಿತು ಅನುಭವಿಸಬೇಕಾಗುತ್ತದೆ. ಆದ್ದರಿಂದ ಕವಿಯ ಮನಸ್ಸಿನಲ್ಲಿ ಏನಿತ್ತು ಏನಿರಲಿಲ್ಲ ಎಂದು ಕೃತಿಯನ್ನು ಬಿಟ್ಟು ಊಹಾಪೋಹ ನಡೆಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಕವಿತೆ ಏನಾಗಿದೆ, ಕೃತಿ ಎಂಥದಾಗಿದೆ, ಏನು ಹೇಳುತ್ತದೆ, ಸೂಚಿಸುತ್ತದೆ ಎಂದು ಓದಿ, ಭಾವಿಸಿ, ಪರ್ಯಾಲೋಚಿಸಿ ಅರಿಯುವು ದೊಂದೇ ರಸಿಕನಿಗೆ ಸಾರ್ಥಕವಾಗುವ ಕೆಲಸ.

ಸಾಹಿತ್ಯದ ಎಲ್ಲ ಪ್ರಕಾರಗಳಿಗೂ ಈ ಮಾತು ಅನ್ವಯಿಸುತ್ತದೆ. ಆದ ಕಾರಣ ಗದ್ಯದಲ್ಲಾಗಲೀ ಪದ್ಯದಲ್ಲಾಗಲೀ ಅದು ಸಾಹಿತ್ಯ ಎನ್ನಿಸಬೇಕಾದರೆ ಅಲ್ಲಿ ಭಾಷೆ ಕೇವಲ ಮಾಧ್ಯಮ ಅಥವಾ ಮನಸ್ಸಿನಲ್ಲಿರುವುದನ್ನು ಹೊರಕ್ಕೆ ತರುವ ವಾಹನ ಮಾತ್ರವಲ್ಲ; ಕಲೆಗಾರನ ವೈಯಕ್ತಿಕ ಅನುಭವದ ಪ್ರತಿರೂಪ, ದೇಹ. ಸಾಹಿತ್ಯದಲ್ಲಿ ಭಾವ ಮತ್ತು ಅದರ ರೂಪ ಅಭಿನ್ನ. ಅದೇ ಸಾಹಿತ್ಯದ ಮೂಲ ಲಕ್ಷಣ. ಸಾಹಿತ್ಯದ ಸೃಷ್ಟಿಕ್ರಿಯೆಯಲ್ಲಿ ಮೊದಲು ಅನುಭವ ಅಥವಾ ಭಾವ, ಅನಂತರ ಅದಕ್ಕೆ ತಕ್ಕ ಭಾಷೆಯನ್ನು ಪ್ರತಿಮೆಗಳನ್ನೂ ಹುಡುಕುವುದು—ಈ ರೀತಿ ಒಂದಾದ ಮೇಲೆ ಇನ್ನೊಂದು ಎಂಬ ರೀತಿಯಲ್ಲಿ ಕೆಲಸ ನಡೆಯುವುದಿಲ್ಲ, ಅವು ಏಕಕಾಲಕ್ಕೆ ನಡೆಯುವಂಥವು. ಎಂದರೆ, ಸಾಹಿತ್ಯ ಭಾಷೆಯಲ್ಲೇ ನಡೆಯುವ ಕೆಲಸ. ಇಲ್ಲವಾದರೆ ದೇಹ, ಜೀವ ಅಥವಾ ಆತ್ಮ ಬೇರ್ಪಟ್ಟ ಹಾಗೆ. ಹಾಗಾದಲ್ಲಿ ಮೃತ್ಯು ಅಥವಾ ಪ್ರೇತ. ಆ ಎರಡೂ ಜೀವನವೂ ಅಲ್ಲ, ಸಾಹಿತ್ಯವೂ ಅಲ್ಲ.

ನಮ್ಮ ಮನಸ್ಸಿನಲ್ಲಿ ಹುಟ್ಟುವ ಆಶೆ ಆಕಾಂಕ್ಷೆಗಳು, ದುಃಖ ಪಶ್ಚಾತ್ತಾಪಗಳು, ಸುಖ ಸಮಾಧಾನಗಳು, ರಾಗದ್ವೇಷಗಳು ಮೂರು ಬಗೆಯಾಗಿ ವ್ಯಕ್ತಗೊಳ್ಳಲು ಯತ್ನಿಸುತ್ತವೆ: ಮಾತಿನಲ್ಲಿ, ಕೃತಿಯಲ್ಲಿ, ಸ್ವಪ್ನದಲ್ಲಿ. ನಮ್ಮ ಮನೋಗತ ಮಾತಿನಲ್ಲೂ, ಕೃತಿಯಲ್ಲೂ ವ್ಯಕ್ತವಾದಾಗ ಅವು ವಸ್ತುರೂಪವನ್ನು ಪಡೆದು ಇನ್ನೊಬ್ಬರ ಬುದ್ಧಿಗೆ ನಿಲುಕುವಂತೆ ಆಗುತ್ತದೆ; ಅದು ಕೃತಿಯಾಗಿ ಮಾರ್ಪಟ್ಟಾಗಲೇ ಅದಕ್ಕೆ ನಿಜವಾದ ವಾಸ್ತವಿಕ ರೂಪ ಸಿದ್ಧಿಸುತ್ತದೆ. ಸ್ವಪ್ನದಲ್ಲಿ ಅವು ಪ್ರತಿಮೆಗಳಾಗಿ ಚಿಮ್ಮಿ ಧ್ವನಿಪೂರ್ಣವಾಗಿ ಭಾವಾಭಿನಯವನ್ನು ನಡಸುತ್ತ ಅವಕ್ಕೆ ಸಾರ್ವಕಾಲಿಕತೆಯ ಆಳ ಬರುತ್ತದೆ. ಆದ ಕಾರಣ ಸಾಹಿತ್ಯ ಭಾಷೆಯಲ್ಲೇ ಸಂಭವಿಸುವುದಾದರೂ ಅದಕ್ಕೆ ಕೃತಿ ಮತ್ತು ಸ್ವಪ್ನಗಳ ಗುಣ ವಿಶೇಷಗಳು ಸೇರಿ ಸಮರಸಗೊಳ್ಳದೆ ಅದು ಸಾರ್ಥಕವಾಗದು. ಕೃತಿಯ ವಿಶೇಷ ಗುಣ ವಾಸ್ತವಿಕತೆಯಾದರೆ ಸ್ವಪ್ನದ ವಿಶೇಷ ಗುಣವೆಂದರೆ ಸುಪ್ತ ಚೇತನಕ್ಕೂ ನಮ್ಮ ಮನೋವ್ಯಾಪಾರಗಳಿಗೂ ಸಾಂಗತ್ಯವನ್ನೇರ್ಪಡಿಸುವ ಇಂದ್ರಜಾಲ. ವಾಸ್ತವಿಕ ದೇಹ, ಸ್ವಪ್ನಪ್ರಬೋಧಕ ಪ್ರತಿಮೆ, ವಿಮರ್ಶೆಯ ತೂಕ, ಸಂಯೋಜನೆ–ಈ ಮೂರೂ ಏಕತ್ರ ಸಂಧಿಸಿದಾಗಲೇ ಶ್ರೇಷ್ಠ ಸಾಹಿತ್ಯ ಕೃತಿಯ ಅವತಾರ. ಇಲ್ಲಿ ನಾವು ನೆನಪಿಡಬೇಕಾದ್ದು ಸಾಹಿತ್ಯ ನಮ್ಮ ಅಂತರಂಗದ ಸಂಪೂರ್ಣ ಕ್ರಿಯೆಯನ್ನು ಬಹಿರಂಗಗೊಳಿಸುವ ಕೆಲಸ ಎಂಬುದನ್ನು. ಗದ್ಯ ವಿವರಣೆ ಜಾಗೃತ ಮನಸ್ಸಿನ ಕೆಲಸ; ಕಾವ್ಯ ರಚನೆ ಸುಪ್ತ ಚೇತನ, ಜಾಗೃತ ಮನಸ್ಸುಗಳ ಅಪೂರ್ವ ಸಹಕಾರದ ಅಥವಾ ಸ್ವಪ್ನ, ಜಾಗೃತಿ, ಪರಿಶ್ರಮಗಳ ಏಕತ್ರ ಸಂಯೋಗದ ಫಲ.

ಪ್ರತಿಯೊಂದು ಜೀವಿಗೂ ಒಂದೊಂದು ಮಣ್ಣಿನ ದೇಹ ಹೇಗೆ ಸರ್ವಥಾ ಅಗತ್ಯವೋ ಅದೇ ರೀತಿ ಸಫಲ ಸಾಹಿತ್ಯದ ಪ್ರತಿಯೊಂದು ಕೃತಿಗೂ ಅದರದೇ ಆದ ಮಣ್ಣಿನ, ವಾಸ್ತವಿಕ ದೇಹ ಅತ್ಯವಶ್ಯ. ಅಂಥ ದೇಹದಲ್ಲಿ ಸಾರ್ವಕಾಲಿಕ, ಸಾರ್ವತ್ರಿಕ ಎನ್ನಬಹುದಾದ ಜೀವನಾನುಭವ ಆ ದೇಹಕ್ಕೆ ವಿಶಿಷ್ಟವಾದ ರೀತಿಯಲ್ಲಿ ಧ್ವನಿಸಬೇಕು. ಈ ಕಾರಣದಿಂದಲೇ ಒಂದು ಸಾಹಿತ್ಯ ಕೃತಿಯನ್ನು ·ಸಾವಯವಿ ಎಂದು ಪರಿಭಾವಿಸಬೇಕಾಗುತ್ತದೆ. ವಿವಿಧ ಅಂಗಗಳಿಂದ ಕೂಡಿದ ದೇಹದಲ್ಲಿ ಹೇಗೆ ಅದರ ಪ್ರತ್ಯಂಗವೂ ತನ್ನದೇ ಆದ ವೈಶಿಷ್ಟ್ಯ ಕ್ರಿಯೆಗಳನ್ನು ಹೊಂದಿದ್ದರೂ ಒಟ್ಟು ದೇಹದ ಅಂಗವಾಗಿ ಮಾತ್ರ ಇದ್ದು, ಉಳಿದ ಅಂಗಗಳೊಡನೆ ಸಹಕರಿಸುತ್ತ ಒಟ್ಟು ದೇಹದ ತಾಳಲಯಗಳಿಗೆ ಬದ್ಧವಾಗಿರುತ್ತದೋ ಅದೇ ರೀತಿ ಒಂದು ಸಾಹಿತ್ಯ ಕೃತಿಯ ಪ್ರತಿಯೊಂದು ಅಂಗವೂ ತನಗೆ ತಾನೇ ಪರಿಪೂರ್ಣವಲ್ಲ; ಇಡೀ ಕೃತಿಯ ಮೇಳಗಾನದಲ್ಲಿ ಬೆರೆತು ಒಂದಾಗುವ ಆದರೂ ತನ್ನ ಸ್ಥಾನ ವೈಶಿಷ್ಟ್ಯಗಳನ್ನು ಕಾಯ್ದಿಟ್ಟುಕೊಳ್ಳುವ ಸ್ವರ. ಆದ ಕಾರಣ ಒಂದು ಕವನವನ್ನು ತೆಗೆದುಕೊಂಡು ಅದರಲ್ಲಿ ನಾದ ಮಾಧುರ್ಯವಿದೆ, ಇನ್ನೊಂದರಲ್ಲಿ ಪ್ರತಿಮೆಗಳು ಚೆನ್ನಾಗಿವೆ, ವಸ್ತು ಉತ್ತಮವಾಗಿವೆ ಅಥವಾ ನೀತಿಬೋಧೆ ಗ್ರಾಹ್ಯವಾಗಿದೆ ಎಂದು

ಮುಂತಾಗಿ ಹೇಳುವುದರಲ್ಲಿ ಹೆಚ್ಚು ಅರ್ಥವಿಲ್ಲ. ಒಂದು ದೇಹದಲ್ಲಿ ಮೂಗು ಚೆನ್ನಾಗಿದೆ, ಕಣ್ಣು ಮೋಹಕವಾಗಿದೆ, ಸ್ವರ ಇಂಪಾಗಿದೆ ಎಂಬುವುದಕ್ಕಿಂತ ಒಟ್ಟಿನಲ್ಲಿ ಆ ದೇಹ ಹೇಗಿದೆ, ಚೆನ್ನಾಗಿರುವ ಈ ಒಂದು ಅಂಗ ಆ ಇಡೀ ದೇಹದ ಶಿಲ್ಪದಲ್ಲಿ ಹೇಗೆ ಹೊಂದಿಕೊಳ್ಳುತ್ತದೆ ಎಂಬುದೇ ಬಹು ಮುಖ್ಯವಾದ ಮಾತು. ಒಂದು ಕವನದಲ್ಲಿನ ಒಂದು ಸಾಲನ್ನೋ, ಶ್ಲೋಕವನ್ನೋ, ಶಬ್ದಚಿತ್ರವನ್ನೋ ಸವಿಯುವ ನಮ್ಮ ವಾಡಿಕೆ ಕಾವ್ಯಾಭ್ಯಾಸಕ್ಕೆ ಹೆಚ್ಚು ಸಹಾಯಕವಾದುದಲ್ಲ. ಇಡೀ ಕವನವನ್ನೇ ಒಂದು ಘಟಕವಾಗಿ, ಒಂದು ಸರ್ವಾಂಗಪರಿಪೂರ್ಣ ಶರೀರವನ್ನಾಗಿ ಕವಿ ರಚಿಸುವುದೂ ಅದನ್ನು ಹಾಗೆಯೇ ಪರಿಭಾವಿಸಿ ಬೆಲೆ ಕಟ್ಟಲು ಯತ್ನಿಸುವುದೂ ಕೃತಿ ರಚನೆಗೆ ಹೇಗೋ ಹಾಗೆ ಕಾವ್ಯ ಸಾಹಿತ್ಯಗಳ ಅಭ್ಯಾಸವಿಮರ್ಶೆಗೂ ಈಗ ಅತ್ಯಗತ್ಯವಾದ ಕೆಲಸ. ಅಂಗಾಂಗ ಸಾಮರಸ್ಯವುಳ್ಳ ಕೃತಿಶಿಲ್ಪದ ಅಭ್ಯಾಸದಿಂದ ಮಾತ್ರ ನಮ್ಮ ಮನಸ್ಸಿಗೆ ಸಾಹಿತ್ಯದಿಂದ ದೊರೆಯಬೇಕಾದ ಸಾರ್ಥಕ ಶಿಕ್ಷಣ ದೊರೆಯುತ್ತದೆ. ಈ ಪ್ರಯತ್ನಗಳಿಂದ ಮನಸ್ಸಿನ ಸಮಗ್ರೀಕರಣ ಸಾಧ್ಯವಾಗಿ ಬುದ್ಧಿಜೀವನದ ಪುನರ್ಘಟನೆ ಸಿದ್ಧಿಸುತ್ತದೆ. ಯಾವ ಕೃತಿಗೆ ಈ ಬಗೆಯ ಸಾಕಲ್ಯ, ಸಮಗ್ರತೆ ಇರುವುದೋ ಅಂಥ ಕೃತಿಯನ್ನು ರಚಿಸಬಲ್ಲ ಪ್ರತಿಭೆಯೇ ಶ್ರೇಷ್ಠ, ಸರ್ವೋತ್ತಮ ಎಂಬ ವಿಶೇಷಣಗಳಿಗೆ ಅರ್ಹವಾಗಬಲ್ಲದು.

ಮಣ್ಣಿನ ವಾಸನೆ ಎಲ್ಲಿ ಇಲ್ಲವೋ ಅಲ್ಲಿ ಜೀವವಿಲ್ಲ. ಮಣ್ಣಿಗೂ ಜೀವಕ್ಕೂ ಅವಿಚ್ಛಿನ್ನ ಸಂಬಂಧ. ಜೀವ ಪ್ರಪಂಚಕ್ಕೆ ಸೇರಿದ ಸಾಹಿತ್ಯದಲ್ಲಿ ಎಂಥೆಂಥ ಉದಾತ್ತವಾದ ವಿಚಾರಗಳೂ, ಕಲ್ಪನೆಗಳೂ ಇರಲಿ, ಅದರಲ್ಲೂ ಈ ಪಾರ್ಥಿವ ಲೋಕದ ವಾಸನೆ ಹೊಡೆಯುತ್ತಿದ್ದರೆ ಮಾತ್ರ ಅದು ನಿಜವಾದದ್ದೂ ಸಾರ್ಥಕವಾದದ್ದೂ ಆಗಬಲ್ಲದು. ಈ ಮಣ್ಣಿನ ವಾಸನೆ ಇಲ್ಲದ್ದು ಅದು ಮೃತ್ಯುಲೋಕಕ್ಕೆ ಅಥವಾ ಅಮೃತಲೋಕಕ್ಕೆ ಸೇರಿದ್ದಲ್ಲದೆ, ನಮ್ಮ ಈ ಬಡ ಮಣ್ಮಯ ಲೋಕಕ್ಕೆ ಸೇರಿದ್ದಂತೂ ಅಲ್ಲ.

— ಗೋಪಾಲಕೃಷ್ಣ ಅಡಿಗ

## ಈ ಸಂಪುಟದ ಲೇಖಕರು

**ಶ್ರೀರಂಗಪಟ್ಟಣಂ ಕೃಷ್ಣಮಾಚಾರ್ಯ** (ಸು. 1800): ಚನ್ನಪಟ್ಟಣದ ಸದರದಾಲತ್ತು ಕೋರ್ಟಿನಲ್ಲಿ ವಕೀಲರಾಗಿದ್ದರು. ಕಾಲೇಜಿನಲ್ಲಿ ಪಂಡಿತ ವಿದ್ಯಾರ್ಥಿಯುದ್ಯೋಗದಲ್ಲಿರುವಾಗ ಕಾಲೇಜು ಬೋರ್ಡಿನ ಸೆಕ್ರೆಟರಿಗಳಾಗಿದ್ದ ಕ್ಯಾಪ್ಟನ್ ಹಾರ್ಕಿನರ ಆದೇಶದಂತೆ 'ಹೊಸಗನ್ನಡ ನುಡಿಗನ್ನಡಿ'ಯೆಂಬ ವ್ಯಾಕರಣಗ್ರಂಥವನ್ನು ರಚಿಸಿದರು. ಇವರ ಇತರ ಗ್ರಂಥಗಳು: ಧಾತುಮಂಜರಿ, ಶಬ್ದಮಂಜರಿ, ಹಳಗನ್ನಡ ನುಡಿಗನ್ನಡಿ. ಪ್ರಕೃತ ಭಾಗವನ್ನು 'ಇವರ ಹೊಸಗನ್ನಡ ನುಡಿಗನ್ನಡಿ' ಗ್ರಂಥದಿಂದ (ಪುಟಗಳು iii ರಿಂದ viii) ಆಯಲಾಗಿದೆ.

**ಹೊಸಕೆರೆ ಚಿದಂಬರಯ್ಯ** (1870–1938): ಮೈಸೂರು ಸರಕಾರದ ವಿದ್ಯಾಭ್ಯಾಸ ಇಲಾಖೆಯಲ್ಲಿ ಉಪಾಧ್ಯಾಯರಾಗಿದ್ದು ಆಮೇಲೆ ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿದ್ದರು. ಧಾರವಾಡದ ಕರ್ನಾಟಕ ರಾಷ್ಟ್ರೀಯ ಶಾಲೆಯಲ್ಲಿ (1924) ಅಧ್ಯಾಪಕರಾಗಿದ್ದರು. 'ಪರಮಾರ್ಥ' 'ಭಕ್ತಬಂಧು' ಮಾಸಿಕ ಪತ್ರಿಕೆಗಳ ಸಂಪಾದಕರಾಗಿದ್ದರು. ಇವರ ಕೆಲವು ಪ್ರಮುಖ ಗ್ರಂಥಗಳು: 'ನೀತಿಸಾರ', 'ಬ್ರಹ್ಮಸೂತ್ರಗಳ ಬೆಳಕು', 'ಗೀತಾರ್ಥ ಚಂದ್ರಿಕೆ', 'ಜೀವನ್ಮುಕ್ತಿ ವಿವೇಕ' . ಪ್ರಕೃತ ಭಾಗವನ್ನು 'ಆರ್ಯಧರ್ಮ ಪ್ರದೀಪ' ಗ್ರಂಥದಿಂದ (ಪುಟಗಳು 392ರಿಂದ 398) ಆಯಲಾಗಿದೆ.

**ಬೆಳ್ಳಾವೆ ವೆಂಕಟನಾರಾಯಣಪ್ಪ** (1871–1943): ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ವಿಜ್ಞಾನದ ಅಧ್ಯಾಪನ ಇವರ ವ್ಯವಸಾಯ ಕ್ಷೇತ್ರವಾಗಿದ್ದರೂ ಹೊಸಗನ್ನಡದ ಪ್ರಗತಿಗಾಗಿ ದುಡಿದರು. 'ವಿಜ್ಞಾನ' ಮಾಸಪತ್ರಿಕೆಯನ್ನು ಕೆಲಕಾಲ ನಡೆಸಿದರು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಪ್ರಥಮ ಅಧ್ಯಕ್ಷರಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ–ಇಂಗ್ಲಿಷ್ ನಿಘಂಟಿನ ಪ್ರಧಾನ ಸಂಪಾದಕರಾಗಿದ್ದರು. ಕನ್ನಡ ಸಾಹಿತ್ಯ ಸಮ್ಮೇಳನದ 23ನೇ ಅಧಿವೇಶನದ (ಜಮಖಂಡಿ, 1937) ಅಧ್ಯಕ್ಷರಾಗಿದ್ದರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಗುಣಸಾಗರ' 'ಜೀವವಿಜ್ಞಾನ', 'ಪಂಪಭಾರತ' (ಪರಿಷ್ಕೃತ). ಪ್ರಕೃತ ಭಾಗವನ್ನು ಇವರ 'ಜೀವವಿಜ್ಞಾನ' (ಪುಟಗಳು 267–279) ಗ್ರಂಥದಿಂದ ಆಯಲಾಗಿದೆ.

**ಆಲೂರ ವೆಂಕಟರಾಯರು** (1880–1964): ಕರ್ನಾಟಕ ಕುಲಪುರೋಹಿತರೆನಿಸಿದ ಇವರು 'ಜಯಕರ್ನಾಟಕ' ಪತ್ರಿಕೆಯನ್ನು ಆರಂಭಿಸಿ ಆ ಮೂಲಕ ಕವಿ ವಿಮರ್ಶಕ ಶ್ರೇಷ್ಠರಾದ ಗೆಳೆಯರ ಗುಂಪನ್ನು ಕಟ್ಟಿ ಕಾವ್ಯ, ಕಥೆ, ವಿಮರ್ಶೆ, ವಿಚಾರಗಳನ್ನು ಪ್ರಸಾರಮಾಡಿದರು. ಕನ್ನಡಸಾಹಿತ್ಯ ಸಮ್ಮೇಳನದ ಹದಿನಾರನೆ ಅಧಿವೇಶನದ (ಮೈಸೂರು 1930) ಅಧ್ಯಕ್ಷರಾಗಿದ್ದರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಗೀತಾರಹಸ್ಯ' (ಅನು), 'ಕರ್ನಾಟಕ ಗತವೈಭವ', 'ನನ್ನ ಜೀವನ ಸ್ಮೃತಿಗಳು' (ಪೂರ್ವ ಮತ್ತು ಉತ್ತರ ರಂಗಗಳು). ಪ್ರಕೃತ ಭಾಗವನ್ನು ಇವರ 'ಗೀತಾಭಾವ ಪ್ರದೀಪ' (ದ್ವಿತೀಯ ಭಾಗ) (ಪುಟಗಳು 28 ರಿಂದ 38) ಗ್ರಂಥದಿಂದ ಆಯಲಾಗಿದೆ.

**ಗೋವಿಂದ ಪೈ** (1883–1963): ಮಂಜೇಶ್ವರದ ವಿದ್ವಾಂಸರು. ರಾಷ್ಟ್ರಕವಿಗಳು. ಇವರ ಕೆಲವು ಪ್ರಮುಖ ಗ್ರಂಥಗಳು: 'ಹೆಬ್ಬೆರಳು', 'ಗೊಲ್ಗೊಥಾ, ಮತ್ತು ವೈಶಾಖಿ' 'ಗಿಳಿವಿಂಡು', 'ಮೂರು ಉಪನ್ಯಾಸಗಳು'. ಕನ್ನಡ ಸಾಹಿತ್ಯ ಸಮ್ಮೇಳನದ ಮೂವತ್ತ ನಾಲ್ಕನೆ ಅಧಿವೇಶನದ (ಮುಂಬಯಿ 1951) ಅಧ್ಯಕ್ಷರಾಗಿದ್ದರು. ಪ್ರಕೃತ ಭಾಗವನ್ನು ಗೋವಿಂದ ಪೈ ಸ್ಮಾರಕ ಗ್ರಂಥವಾದ 'ದೀವಿಗೆ' ಯಿಂದ (ಭಾಗ–2, ಪುಟಗಳು 33–36) ಆಯಲಾಗಿದೆ.

**ಬಿ. ಎಂ. ಶ್ರೀಕಂಠಯ್ಯ** (1884–1946): ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರು. ಕನ್ನಡ ನವೋದಯದ ಶಿಲ್ಪಿಗಳಲ್ಲಿ ಪ್ರಮುಖರು. 1926ರಿಂದ 4 ವರ್ಷಗಳ ಕಾಲ ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರರಾಗಿದ್ದರು. ಮುಂದೆ 1927ರಲ್ಲಿ ಗೌರವ ಕನ್ನಡ

ಪ್ರಾಧ್ಯಾಪಕರಾದರು. ನಿವೃತ್ತರಾದ ಮೇಲೆ 1942ರಲ್ಲಿ ಧಾರವಾಡ ಕೆ. ಇ. ಬೋರ್ಡ್ ಆರ್ಟ್ಸ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಕನ್ನಡ ಸಾಹಿತ್ಯ ಸಮ್ಮೇಳನದ ಹದಿನಾಲ್ಕನೆ ಅಧಿವೇಶನದ(ಕಲಬುರ್ಗಿ, 1928) ಅಧ್ಯಕ್ಷರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ 'ಶ್ರೀಕಂಠಯ್ಯ ಅಚ್ಚುಕೂಟ'ದ ಸ್ಥಾಪನೆಗೆ ಕಾರಣರಾದರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಅಶ್ವತ್ಥಾಮನ್', 'ಇಂಗ್ಲಿಷ್ ಗೀತಗಳು', 'ಹೊಂಗನಸುಗಳು', 'ಪಾರಶಿಕರು', 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಭಾಗ 1, 2. ಪ್ರಕೃತ ಭಾಗ ವನ್ನು ಇವರ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ (ಭಾಗ-1) (ಪುಟಗಳು 163-167) ಗ್ರಂಥದಿಂದ ಆಯಲಾಗಿದೆ.

**ಹರ್ಡೇಕರ ಮಂಜಪ್ಪ** (1886-1947): ಕೆಲವು ಕಾಲ ಉಪಾಧ್ಯಾಯರಾಗಿದ್ದು ಅನಂತರ ಅದನ್ನು ಬಿಟ್ಟುಕೊಟ್ಟು ಇಡಿಯ ಜೀವಮಾನವನ್ನು ಪತ್ರಿಕಾವ್ಯವಸಾಯ, ಗ್ರಂಥರಚನೆ, ವಿದ್ಯಾಪ್ರಸಾರ ಮುಂತಾದ ಕಾರ್ಯಗಳಲ್ಲಿ ಕಳೆದರು. ಮಹಾತ್ಮ ಗಾಂಧಿಯವರ ನೈತಿಕ ತತ್ತ್ವಪ್ರಸಾರಕ್ಕಾಗಿ 1922ರಲ್ಲಿ ಹುಬ್ಬಳ್ಳಿಯಲ್ಲಿ, 1923ರಲ್ಲಿ ಹರಿಹರದಲ್ಲಿ, 'ಸತ್ಯಾಗ್ರಹ ಆಶ್ರಮ' ಸ್ಥಾಪನೆ. ಮುಂದೆ ಆಲಮಟ್ಟಿಯಲ್ಲಿ ವೀರಶೈವ ವಿದ್ಯಾಲಯ ಸ್ಥಾಪನೆ. ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದ ಇವರು 'ಕರ್ನಾಟಕ ಗಾಂಧಿ' ಎಂದು ಪ್ರಸಿದ್ಧರಾಗಿದ್ದರು. 'ಖಾದೀಶಾಸ್ತ್ರ', 'ಬಸವ ಚರಿತ್ರೆ', 'ಆರೋಗ್ಯವೇ ಜೀವನ', ಮೊದಲಾದುವು ಇವರ ಪ್ರಮುಖ ಗ್ರಂಥಗಳು. ಪ್ರಕೃತ ಭಾಗವನ್ನು 'ರಾಷ್ಟ್ರಧರ್ಮದ್ರಷ್ಟಾರ-ಹರ್ಡೇಕರ ಮಂಜಪ್ಪ' ಗ್ರಂಥದಿಂದ (ಪುಟಗಳು 884-887) ಆಯಲಾಗಿದೆ.

**ಡಿ. ವಿ. ಗುಂಡಪ್ಪ** (1888): ಘನವಿದ್ವಾಂಸರು, ರಾಜಕಾರಣಿಗಳು ಎಂಬುದಾಗಿ ಅಖಿಲ ಕರ್ನಾಟಕಕ್ಕೆ ಪರಿಚಿತರು. ಮೈಸೂರು ನ್ಯಾಯವಿಧಾಯಕ ಸಮಿತಿ, ಬೆಂಗಳೂರು ಪುರಸಭೆ, ಪತ್ರಿಕಾ ಕರ್ತರ ಸಂಘ-ಮುಂತಾದ ಸಮಿತಿಗಳ ಸದಸ್ಯರಾಗಿದ್ದರು. ಕನ್ನಡ ಸಾಹಿತ್ಯ ಸಮ್ಮೇಳನದ ಹದಿನೆಂಟನೆ ಅಧಿವೇಶನದ (ಮಡಿಕೇರಿ, 1932) ಅಧ್ಯಕ್ಷರಾಗಿದ್ದರು. ಸಾಹಿತ್ಯ ಅಕಾದೆಮಿಯ ಪ್ರಶಸ್ತಿ ವಿಜೇತರು. ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯ ಪ್ರಮುಖ ಕಾರ್ಯಕರ್ತರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಮಂಕುತಿಮ್ಮನ ಕಗ್ಗ', 'ಉಮರನ ಒಸಗೆ', 'ನಿವೇದನ', 'ಜ್ಞಾಪಕ ಚಿತ್ರಶಾಲೆ', 'ಗೋಪಾಲಕೃಷ್ಣ ಗೋಖಲೆ'. ಪ್ರಕೃತ ಭಾಗವನ್ನು ಇವರ 'ವೃತ್ತಪತ್ರಿಕೆ' ಗ್ರಂಥದಿಂದ (ಪುಟಗಳು 88-105) ಆಯಲಾಗಿದೆ.

**ಎ. ಆರ್. ಕೃಷ್ಣಶಾಸ್ತ್ರೀ** (1890-1968): ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದರು. 'ಪ್ರಬುದ್ಧ ಕರ್ನಾಟಕ'ದ ಸಂಸ್ಥಾಪಕರಲ್ಲೊಬ್ಬರು. ಸಾಹಿತ್ಯ ಅಕಾದೆಮಿಯ ಪ್ರಶಸ್ತಿವಿಜೇತರು. ಕನ್ನಡ ಸಾಹಿತ್ಯ ಸಮ್ಮೇಳನದ ಇಪ್ಪತ್ತಾರನೆ ಅಧಿವೇಶನದ (ಹೈದರಾಬಾದ್, 1941) ಅಧ್ಯಕ್ಷರಾಗಿದ್ದರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಬಂಕಿಮಚಂದ್ರ', 'ನಿಬಂಧಮಾಲಾ', 'ಸಂಸ್ಕೃತ ನಾಟಕ', 'ವಚನ ಭಾರತ', 'ಕಥಾಮೃತ', 'ಭಾಷಣಗಳು ಲೇಖನಗಳು'. ಪ್ರಕೃತ ಭಾಗವನ್ನು ಡಾ. ಕೃಷ್ಣ ಮೂರ್ತಿಯವರ 'ಧ್ವನ್ಯಾಲೋಕ ಮತ್ತು ಲೋಚನಸಾರ' ಗ್ರಂಥಕ್ಕೆ ಬರೆದಿರುವ ಮುನ್ನುಡಿ(ಪುಟಗಳು viiರಿಂದ x)ಯಿಂದ ಆಯಲಾಗಿದೆ.

**ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ** (1890-1939): ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ವಿಶಿಷ್ಟಾದ್ವೈತ ಮತ್ತು ಆಗಮಗಳಲ್ಲಿ ಪ್ರಾಧ್ಯಾಪಕರಾಗಿದ್ದರು. ಮಹಾಮಹೋ ಪಾಧ್ಯಾಯ ಮತ್ತು ಪಂಡಿತರತ್ನ ಬಿರುದುಗಳನ್ನು ಪಡೆದರು. ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಸಂಸ್ಕೃತ ಎಂ.ಎ. ಮತ್ತು ಆನರ್ಸ್ ತರಗತಿಗಳಿಗೆ ಪಾಠ ಹೇಳುತ್ತಿದ್ದರು. ಸಂಸ್ಕೃತದಲ್ಲಿ 'ದರ್ಶನೋದಯ', 'ಮಾನವೀಯ ರಹಸ್ಯ ಶ್ಲೋಕವಾರ್ತಿಕಂ' ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಪ್ರಕೃತ ಭಾಗವನ್ನು ಇವರ 'ಹಿಂದೂದರ್ಶನಸಾರ' ಗ್ರಂಥದಿಂದ (ಪುಟಗಳು 2ರಿಂದ 10) ಆಯಲಾಗಿದೆ.

**ಮಾಸ್ತಿ ವೆಂಕಟೇಶ ಅಯ್ಯಂಗಾರ್** (1891): ಪ್ರಸಿದ್ಧ ಸಾಹಿತಿಗಳು. ಸಾಹಿತ್ಯ ಅಕಾದೆಮಿ ಪ್ರಶಸ್ತಿ ವಿಜೇತರು. ಇವರು 'ಶ್ರೀನಿವಾಸ' ಎಂಬ ಕಾವ್ಯನಾಮದಿಂದ ಪರಿಚಿತರಾಗಿದ್ದಾರೆ. 'ಜೀವನ'

ಮಾಸಪತ್ರಿಕೆಯ ಸಂಪಾದಕರಾಗಿ ಬಹುಕಾಲ ಸೇವೆಸಲ್ಲಿಸಿದ್ದಾರೆ. ಕನ್ನಡ ಸಾಹಿತ್ಯ ಸಮ್ಮೇಳನದ ಹದಿನೈದನೆ ಅಧಿವೇಶನದ (ಬೆಳಗಾವಿ 1929) ಅಧ್ಯಕ್ಷರಾಗಿದ್ದರು. ಇವರ ಕೆಲವು ಪ್ರಮುಖ ಕೃತಿಗಳು: 'ಚೆನ್ನ ಬಸವನಾಯಕ', 'ಚಿಕವೀರರಾಜೇಂದ್ರ', 'ವಿಮರ್ಶೆ', 'ಭಾವ' (3 ಭಾಗಗಳು) ಕೆಲವು ಸಣ್ಣಕತೆಗಳು. ಪ್ರಕೃತ ಭಾಗವನ್ನು ಅವರ ವಿಮರ್ಶೆ (ಭಾಗ-1) ಗ್ರಂಥದಿಂದ (ಪುಟಗಳು 18ರಿಂದ 23) ಆಯಲಾಗಿದೆ.

**ರಾಳ್ಳಪಲ್ಲಿ ಅನಂತಕೃಷ್ಣಶರ್ಮ (1893) :** ಮೈಸೂರು ವಿಶ್ವವಿದ್ಯಾನಿಲಯದಲ್ಲಿ ತೆಲುಗು ವಿಭಾಗದ ನಿವೃತ್ತ ಅಧ್ಯಾಪಕರು. ಸಾಹಿತ್ಯ ಮತ್ತು ಸಂಗೀತಗಳಲ್ಲಿ ವಿದ್ವಾಂಸರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಸಾಹಿತ್ಯ ಮತ್ತು ಜೀವನ ಕಲೆ', 'ಗಾನಕಲೆ'. ಪ್ರಕೃತ ಭಾಗವನ್ನು ಇವರ 'ಸಾಹಿತ್ಯ ಮತ್ತು ಜೀವನ ಕಲೆ' (ಪುಟಗಳು 7ರಿಂದ 13) ಗ್ರಂಥದಿಂದ ಆಯಲಾಗಿದೆ.

**ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ (1895-ಮ.?) :** ಮೈಸೂರು ವಿಶ್ವವಿದ್ಯಾನಿಲಯದಲ್ಲಿ ತತ್ತ್ವಶಾಸ್ತ್ರದ ಉಪಪ್ರಾಧ್ಯಾಪಕರಾಗಿದ್ದರು. ಪ್ರಕೃತ ಭಾಗವನ್ನು ಇವರ 'ಗ್ರೀಕರ ತತ್ತ ಶಾಸ್ತ್ರ ಸಂಗ್ರಹ' (ಪುಟಗಳು 229ರಿಂದ 238) ಗ್ರಂಥದಿಂದ ಆಯಲಾಗಿದೆ.

**ದೇವುಡು ನರಸಿಂಹಶಾಸ್ತ್ರಿ (1896-1962) :** ವಿದ್ವಾಂಸರು ಮತ್ತು ಸಾಹಿತಿಗಳು. ಸಾಹಿತ್ಯ ಅಕಾದೆಮಿ ಪ್ರಶಸ್ತಿ ವಿಜೇತರು. ಇವರ ಕೆಲವು ಪ್ರಮುಖ ಗ್ರಂಥಗಳು; 'ಮಹಾ ಬ್ರಾಹ್ಮಣ', 'ಮಹಾ ಕ್ಷತ್ರಿಯ', 'ಅಂತರಂಗ', 'ಮಯೂರ'. ಪ್ರಕೃತ ಭಾಗವನ್ನು ಇವರ 'ಕರ್ಣಾಟಕ ಸಂಸ್ಕೃತಿ' ಗ್ರಂಥದಿಂದ (ಪುಟಗಳು 174ರಿಂದ 183) ಆಯಲಾಗಿದೆ.

**ನಾರಾಯಣಶಾಸ್ತ್ರೀ ಎನ್. ಎಸ್. (1897-ಮ.?) :** ಮೈಸೂರು ವಿಶ್ವವಿದ್ಯಾನಿಲಯದ ಮನಶ್ಶಾಸ್ತ್ರ ವಿಭಾಗದ ಉಪಪ್ರಾಧ್ಯಾಪಕರಾಗಿದ್ದರು. ಪ್ರಕೃತ ಭಾಗವನ್ನು ಇವರ 'ಕನಸುಗಳು' ಗ್ರಂಥದಿಂದ (ಪುಟಗಳು 19-26) ಆಯಲಾಗಿದೆ.

**ಜಿ. ಹನುಮಂತರಾವ್ (1898) :** ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಗ್ರಂಥಪಾಲರು. ಮಹಾರಾಜಾ ಕಾಲೇಜಿನಲ್ಲಿ ತತ್ತ್ವಶಾಸ್ತ್ರ ವಿಭಾಗದ ಉಪಪ್ರಾಧ್ಯಾಪಕರೂ ಆಗಿದ್ದರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಸಮಾಜದ ರೋಗರುಜಿನಗಳು', 'ಋಗ್ವೇದ ಸೂಕ್ತಗಳು', 'ಕುಟುಂಬ ಜೀವನ', 'ವಿಜ್ಞಾನ', 'ಧರ್ಮ ದೀಪಕರು', 'ತರ್ಕಶಾಸ್ತ್ರ' ಭಾಗ 1-2. ಪ್ರಕೃತ ಭಾಗವನ್ನು ಇವರ 'ಆಧುನಿಕ ತತ್ವಶಾಸ್ತ್ರ ಸಮಸ್ಯೆಗಳು' (ಪುಟಗಳು 3ರಿಂದ 11) ಗ್ರಂಥದಿಂದ ಆಯಲಾಗಿದೆ.

**ಎಸ್. ವಿ. ರಂಗಣ್ಣ (1898) :** ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಇಂಗ್ಲಿಷ್ ಪ್ರಾಧ್ಯಾಪಕರು. ಸಾಹಿತ್ಯ ಅಕಾದೆಮಿ ಪ್ರಶಸ್ತಿ ವಿಜೇತರು. ಇವರ ಕೆಲವು ಪ್ರಮುಖ ಗ್ರಂಥಗಳು:'ಶೈಲಿ', 'ಹೊನ್ನಶೂಲ', 'ಪಾಶ್ಚಾತ್ಯ ಗಂಭೀರ ನಾಟಕಗಳು', 'ರಂಗ ಬಿನ್ನಪ'. ಪ್ರಕೃತ ಭಾಗವನ್ನು ಇವರ 'ಹೊನ್ನಶೂಲ' ಗ್ರಂಥದಿಂದ (ಪುಟಗಳು 14ರಿಂದ 19) ಆಯಲಾಗಿದೆ.

**ಎಂ. ಯಾಮುನಾಚಾರ್ಯ (1899-1969) :** ಮೈಸೂರು ವಿಶ್ವವಿದ್ಯಾನಿಲಯದ ತತ್ತ್ವಶಾಸ್ತ್ರ ಉಪಪ್ರಾಧ್ಯಾಪಕರಾಗಿದ್ದರು. ಮೈಸೂರು ಗಾಂಧಿ ವಿಚಾರಪರಿಷತ್ತಿನ ಅಧ್ಯಕ್ಷರಾಗಿದ್ದರು. ಇವರ ಕೆಲವು ಗ್ರಂಥಗಳು: 'ಆಳ್ವಾರುಗಳು', 'ಆಧುನಿಕ ತರ್ಕಶಾಸ್ತ್ರ ಸಂಗ್ರಹ'. ಪ್ರಕೃತ ಗ್ರಂಥವನ್ನು ಇವರ 'ಪಾಶ್ಚಾತ್ಯ ರಾಜಕೀಯ ತತ್ವಗಳು' ಗ್ರಂಥದಿಂದ (ಪುಟಗಳು 1 ರಿಂದ 38) ಆಯಲಾಗಿದೆ.

**ವಿ. ಸೀತಾರಾಮಯ್ಯ (1899) :** ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರು. ಕನ್ನಡ ಸಾಹಿತ್ಯ ಸಮ್ಮೇಳನದ ಮೂವತ್ತಾರನೆ ಅಧಿವೇಶನದ (ಕುಮುಟ 1954) ಅಧ್ಯಕ್ಷರಾಗಿದ್ದರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಕರ್ಣಾಟಕ ಕಾದಂಬರಿ', 'ಬೆಳದಿಂಗಳು', 'ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ'. ಪ್ರಕೃತ ಭಾಗವನ್ನು ಇವರ 'ಹಣಪ್ರಪಂಚ' ಗ್ರಂಥದಿಂದ (ಪುಟಗಳು 1ರಿಂದ 13) ಆಯಲಾಗಿದೆ.

**ಎ. ನಾರಾಯಣರಾವ್** (1900–ಮ.?): ಮೈಸೂರು ವಿಶ್ವವಿದ್ಯಾನಿಲಯದ ಪ್ರಾಣಿಶಾಸ್ತ್ರ ಉಪಪ್ರಾಧ್ಯಾಪಕರಾಗಿದ್ದರು. 'ಪ್ರಾಣಿಜೀವನ' ಮತ್ತು 'ಪ್ರಾಣಿಶಾಸ್ತ್ರ' ಇವರ ಪ್ರಮುಖ ಗ್ರಂಥಗಳು. ಪ್ರಕೃತ ಭಾಗವನ್ನು ಇವರ 'ಪ್ರಾಣಿಜೀವನ' ಗ್ರಂಥದಿಂದ (ಪುಟಗಳು 12ರಿಂದ 31) ಆಯಲಾಗಿದೆ.

**ಎಚ್. ಕೃಷ್ಣರಾವ್** (1900): ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಇತಿಹಾಸದ ಉಪಪ್ರಾಧ್ಯಾಪಕರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಪ್ಲೇಟೋವಿನ ರಿಪಬ್ಲಿಕ್', 'ಅರಿಸ್ಟಾಟಲನ ರಾಜ್ಯಶಾಸ್ತ್ರ', 'ಚರಿತ್ರೆಯ ಮಹಾಪುರುಷರು', 'ಸರ್ಕಾರದ ಪದ್ಧತಿ ಮತ್ತು ರಚನಾಕ್ರಮ'. ಪ್ರಕೃತ ಭಾಗವನ್ನು ಇವರ 'ರಾಜನೀತಿ' ಗ್ರಂಥದಿಂದ (ಪುಟಗಳು 85ರಿಂದ 98) ಆಯಲಾಗಿದೆ.

**ಆರ್. ಎಲ್. ನರಸಿಂಹಯ್ಯ** (1902–1969): ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಭೌತಶಾಸ್ತ್ರದ ಅಧ್ಯಾಪಕರಾಗಿದ್ದು ನಿವೃತ್ತರಾದ ಅನಂತರ ಬೆಂಗಳೂರಿನ ನ್ಯಾಷನಲ್ ಕಾಲೇಜು, ಆಚಾರ್ಯ ಪಾಠಶಾಲೆಗಳಲ್ಲಿ ಪ್ರಾಧ್ಯಾಪಕರಾಗಿದ್ದರು. ವೈಜ್ಞಾನಿಕ ವಿಷಯವನ್ನು ಕನ್ನಡ ಭಾಷೆಯ ಮೂಲಕ ನಿಷ್ಕೃಷ್ಟವಾಗಿ ತಿಳಿಸಿಕೊಡುವ ಪ್ರಯತ್ನದಲ್ಲಿ ಇವರು ಯಶಸ್ಸುಗಳಿಸಿದರು. ಇವರ ಪ್ರಮುಖ ಗ್ರಂಥಗಳು: 'ಶಕ್ತಿ', 'ಜಗತ್ತುಗಳ ಹುಟ್ಟು, ಸಾವು', 'ನಕ್ಷತ್ರದರ್ಶನ'. ಪ್ರಕೃತ ಭಾಗವನ್ನು ಇವರ 'ಶಕ್ತಿ' ಗ್ರಂಥದಿಂದ (ಪುಟಗಳು 23ರಿಂದ 30) ಆಯಲಾಗಿದೆ.

**ಮಧುರಚೆನ್ನ** (1903–1953): ಮಧುರಚೆನ್ನರೆಂಬ ಕಾವ್ಯನಾಮದಿಂದ ಚೆನ್ನಮಲ್ಲಪ್ಪ ಗಲಗಲಿ (ಹಲಸಂಗಿ) ಪ್ರಸಿದ್ಧರಾಗಿದ್ದಾರೆ. ಇವರ ಕೆಲವು ಪ್ರಮುಖ ಗ್ರಂಥಗಳು: 'ನನ್ನನಲ್ಲ', 'ಬೆಳಗು', 'ಕಾಳರಾತ್ರಿ', 'ಪೂರ್ವರಂಗ', ಪ್ರಕೃತ ಭಾಗವನ್ನು ಇವರ 'ಆತ್ಮಸಂಶೋಧನೆ' ಗ್ರಂಥದಿಂದ (ಪುಟಗಳು 75ರಿಂದ 81) ಆಯಲಾಗಿದೆ.

**ಕುವೆಂಪು** (1904): ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಕುಲಪತಿಗಳು. ರಾಷ್ಟ್ರಕವಿಗಳು. ಜ್ಞಾನಪೀಠ ಮತ್ತು ಸಾಹಿತ್ಯ ಅಕಾದೆಮಿ ಪ್ರಶಸ್ತಿ ವಿಜೇತರು. ಪದ್ಮಭೂಷಣ ಬಿರುದಾಂಕಿತರು. ಇವರು ಕನ್ನಡ ಸಾಹಿತ್ಯ ಸಮ್ಮೇಳನದ ಮೂವತ್ತೊಂಬತ್ತನೆಯ ಅಧಿವೇಶನದ (ಧಾರವಾಡ 1957) ಅಧ್ಯಕ್ಷರಾಗಿದ್ದರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಶ್ರೀರಾಮಾಯಣ ದರ್ಶನಂ', 'ಕಾನೂರು ಸುಬ್ಬಮ್ಮ ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು', 'ರಸೋವೈಸಃ' 'ರಕ್ತಾಕ್ಷಿ', 'ಅಗ್ನಿಹಂಸ'. ಪ್ರಕೃತ ಭಾಗವನ್ನು ಇವರ 'ತಪೋನಂದನ' ಗ್ರಂಥದಿಂದ (ಪುಟಗಳು 24ರಿಂದ 33) ಆಯಲಾಗಿದೆ.

**ಪು.ತಿ.ನ.** (1905): ಸರ್ಕಾರಿ ಸೇವೆಯಿಂದ ನಿವೃತ್ತರಾದ ಮೇಲೆ ಕೆಲವು ಕಾಲ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟು (ಪರಿಷ್ಕರಣ) ಕಛೇರಿಯಲ್ಲಿ ಸಂಪಾದಕರಾಗಿದ್ದರು. ಸಾಹಿತ್ಯ ಅಕಾದೆಮಿ ಪ್ರಶಸ್ತಿ ವಿಜೇತರು. ಇವರ ಕೆಲವು ಪ್ರಮುಖ ಗ್ರಂಥಗಳು: 'ಗೋಕುಲನಿರ್ಗಮನ', 'ರಾಮಾಚಾರಿಯ ನೆನಪು', 'ಹಣತೆ', 'ಮಾಂದಳಿರು', 'ಹಂಸದಮಯಂತಿ ಮತ್ತು ಇತರ ರೂಪಕಗಳು', 'ಈಚಲ ಮರದ ಕೆಳಗೆ'. ಪ್ರಕೃತ ಲೇಖನವನ್ನು ಅವರ 'ಕಾವ್ಯಕುತೂಹಲ'ದಿಂದ (ಪುಟಗಳು 73ರಿಂದ 79) ಆಯಲಾಗಿದೆ.

**ತೀ. ನಂ. ಶ್ರೀಕಂಠಯ್ಯ** (1906–1966): ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾಗಿದ್ದರು. ಇವರ ಕೆಲವು ಪ್ರಮುಖ ಗ್ರಂಥಗಳು; 'ಭಾರತೀಯ ಕಾವ್ಯಮೀಮಾಂಸೆ', 'ನಂಬಿಯಣ್ಣನ ರಗಳೆ (ಸಂ)' 'ಗದಾಯುದ್ಧ(ಸಂ)', 'ರಾಕ್ಷಸನ ಮುದ್ರಿಕೆ', 'ಬಿಡಿಮುತ್ತು', 'ಒಲುಮೆ'. ಪ್ರಕೃತ ಭಾಗವನ್ನು ಇವರ 'ಭಾರತೀಯ ಕಾವ್ಯಮೀಮಾಂಸೆ' ಗ್ರಂಥದಿಂದ (ಪುಟಗಳು 220ರಿಂದ 227) ಆಯಲಾಗಿದೆ.

**ಡಿ. ಎಲ್. ನರಸಿಂಹಾಚಾರ್** (1906–1971): ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾಗಿದ್ದರು. ಕನ್ನಡ ಸಾಹಿತ್ಯ ಸಮ್ಮೇಳನದ ನಲವತ್ತೊಂದನೆ ಅಧಿವೇಶನದ (ಬಿದರೆ 1960)

ಪಧ್ಯಕ್ಷರಾಗಿದ್ದರು. ಇವರ ಕೆಲವು ಪ್ರಮುಖ ಗ್ರಂಥಗಳು; 'ವಡ್ಡಾರಾಧನೆ' (ಸಂ), 'ಶಬ್ದಮಣಿ ದರ್ಪಣ'(ಸಂ), 'ಕನ್ನಡ ಗ್ರಂಥಸಂಪಾದನೆ', 'ಶಬ್ದವಿಹಾರ', 'ಪಂಪಭಾರತ ದೀಪಿಕೆ'. ಪ್ರಕೃತ ಭಾಗವನ್ನು ಇವರ 'ಪೀಠಿಕೆಗಳು ಲೇಖನಗಳು' ಗ್ರಂಥದಿಂದ (ಪುಟಗಳು 993ರಿಂದ 1001) ಆಯಲಾಗಿದೆ.

ಬಿ. ಕುಪ್ಪುಸ್ವಾಮಿ (1907): ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಮನಶ್ಶಾಸ್ತ್ರ ಪ್ರಾಧ್ಯಾಪಕರು. ಇವರ ಪ್ರಮುಖ ಗ್ರಂಥಗಳು: 'ಮಕ್ಕಳ ಭಾವಜೀವನ', 'ಮಕ್ಕಳ ಬೆಳವಣಿಗೆ'. ಪ್ರಕೃತ ಭಾಗವನ್ನು ಇವರ 'ಮಕ್ಕಳ ಭಾವಜೀವನ' ಗ್ರಂಥದಿಂದ (ಪುಟಗಳು 29ರಿಂದ 41) ಆಯಲಾಗಿದೆ.

ಎಸ್. ಎಸ್. ಭೂಸನೂರ ಮಠ (1911): ಮೊದಲು ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲೂ ಅನಂತರ ಕರ್ನಾಟಕ ವಿಶ್ವವಿದ್ಯಾನಿಲಯದ ವಚನವಾಙ್ಮಯ ವಿಭಾಗದಲ್ಲೂ ಕನ್ನಡ ಪ್ರಾಧ್ಯಾಪಕರಾಗಿದ್ದು ಈಗ ನಿವೃತ್ತರಾಗಿದ್ದಾರೆ. ಇವರ ಕೆಲವು ಪ್ರಮುಖ ಗ್ರಂಥಗಳು: 'ವಚನ ಸಾಹಿತ್ಯ ಸಂಗ್ರಹ', 'ಶೂನ್ಯಸಂಪಾದನೆ', 'ಲಿಂಗಲೀಲಾವಿಲಾಸ ಚಾರಿತ್ರ'. ಪ್ರಕೃತಗ್ರಂಥ ಭಾಗವನ್ನು ಇವರ 'ಪರಾಮರ್ಶೆ' ಗ್ರಂಥದಿಂದ (ಪುಟಗಳು 30 ರಿಂದ 38) ಆಯಲಾಗಿದೆ.

ಎಚ್. ಎಸ್. ಪಾಟೀಲ (1914): ಬೊಂಬಾಯಿಯ ಸಿಡೆನ್‌ಹ್ಯಾಂ ಕಾಲೇಜಿನಲ್ಲೂ ದೆಹಲಿಯ ಎನ್. ಸಿ. ಇ. ಆರ್. ಟಿ.ಟಿ ಇಂಡಿಯನ್ ಕೌನ್ಸಿಲ್ ಫಾರ್ ಕಲ್ಚರಲ್ ರಿಲೇಷನ್ಸ್‌ಗಳಲ್ಲಿ ಗ್ರಂಥ ಪಾಲರಾಗಿದ್ದು ಈಗ ನಿವೃತ್ತರಾಗಿದ್ದಾರೆ. 'ತಕ್ಕಡಿ' ಮೊದಲಾದ ಗ್ರಂಥಗಳನ್ನು ರಚಿಸಿದ್ದಾರೆ. ಪ್ರಕೃತ ಭಾಗವನ್ನು 'ಜೀವನ' ಮಾಸಪತ್ರಿಕೆ (ಜುಲೈ 1947)ಯಿಂದ (ಪುಟಗಳು 82ರಿಂದ 85) ಆಯಲಾಗಿದೆ.

ಎಚ್. ಎಮ್. ಸದಾಶಿವಯ್ಯ (1917): ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಸಮಾಜವಿಜ್ಞಾನ ವಿಭಾಗದಲ್ಲಿ ರೀಡರ್. ಇವರ ಕೆಲವು ಮುಖ್ಯ ರಚನೆಗಳು: 'ಸಮಾಜಶಾಸ್ತ್ರ' (ಭಾಗ 1), 'ಎ ಕಂಪ್ಯಾರಿಟಿವ್ ಸ್ಟಡಿ ಆಫ್ ಟು ವೀರಶೈವ ಮೊನಾಸ್ಟರೀಸ್'. ಪ್ರಕೃತಭಾಗವನ್ನು ಇವರ ಸಮಾಜಶಾಸ್ತ್ರ (ಭಾಗ 1) ಗ್ರಂಥದಿಂದ (ಪುಟಗಳು 91ರಿಂದ 101) ಆಯಲಾಗಿದೆ.

ದೇ. ಜವರೇಗೌಡ (1918): ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರೂ, ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರೂ ಆಗಿದ್ದು ಈಗ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದಾರೆ. ಹೆಸರಾಂತ ಗದ್ಯಲೇಖಕರು. ಸೋವಿಯೆತ್‌ಲ್ಯಾಂಡ್–ನೆಹರೂ ಪ್ರಶಸ್ತಿವಿಜೇತರು. ಕನ್ನಡ ಸಾಹಿತ್ಯ ಸಮ್ಮೇಳನದ ನಲವತ್ತೇಳನೆ ಅಧಿವೇಶನದ (ಬೆಂಗಳೂರು 1970) ಅಧ್ಯಕ್ಷರಾಗಿದ್ದರು. ಕನ್ನಡಕ್ಕೆ ಉನ್ನತ ಸ್ಥಾನ ದೊರಕಿಸಿಕೊಡುವಲ್ಲಿ ಇವರ ಪಾತ್ರ ಹಿರಿದು. ಇವರ ಕೆಲವು ಪ್ರಮುಖ ಗ್ರಂಥಗಳು: 'ಪುನರುತ್ಥಾನ', 'ಹಮ್ಮುಬಿಮ್ಮು', 'ಕುಲಪತಿಯ ಭಾಷಣಗಳು' 'ಬೆರಕೆ ಸೊಪ್ಪು', 'ಗಂಗೋತ್ರಿ'(ಸಂ), 'ಕಬ್ಬಿಗರ ಕಾವಂ(ಸಂ)', 'ನೂರೆಂಟು ಪುಸ್ತಕಗಳು'. ಪ್ರಕೃತ ಭಾಗವನ್ನು ಇವರ 'ನಂಜುಂಡಕವಿ' ಗ್ರಂಥದಿಂದ (ಪುಟಗಳು 136ರಿಂದ 144) ಆಯಲಾಗಿದೆ.

ಗೋಪಾಲಕೃಷ್ಣ ಅಡಿಗ. (1918): ಕನ್ನಡದ ನವ್ಯಕಾವ್ಯ ಸಂಪ್ರದಾಯ ಪ್ರವರ್ತಕರಲ್ಲೊಬ್ಬರು. ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದು ಕೆಲವು ಕಾಲ ಸಾಗರ ಮತ್ತು ಉಡುಪಿ ಕಾಲೇಜುಗಳಲ್ಲಿ ಪ್ರಿನ್ಸಿಪಾಲರಾಗಿದ್ದರು. ಈಗ ದೆಹಲಿಯ ನ್ಯಾಷನಲ್ ಬುಕ್ ಟ್ರಸ್ಟಿಗಾಗಿ ಕೆಲಸಮಾಡುತ್ತಿದ್ದಾರೆ. ಇವರ ಕೆಲವು ಪ್ರಮುಖ ಗ್ರಂಥಗಳು: 'ಕಟ್ಟುವೆವು ನಾವು', 'ಚಂಡೆಮದ್ದಳೆ', 'ಭೂಮಿಗೀತ', 'ಭೂಗರ್ಭ ಯಾತ್ರೆ', (ಅನು.) ಪ್ರಕೃತ ಭಾಗವನ್ನು ಇವರ 'ಮಣ್ಣಿನ ವಾಸನೆ' ಗ್ರಂಥದಿಂದ (ಪುಟಗಳು 119–125) ಆಯಲಾಗಿದೆ.

WO 10456—MUPM—25,000 + 100—14-7-72

## ಕನ್ನಡ ಅಧ್ಯಯನ ಸಂಸ್ಥೆಯ ಕೆಲವು ಪ್ರಕಟಣೆಗಳು

ಹೊರೆಸನ ಸಾಹಿತ್ಯ ವಿಮರ್ಶೆ : ಎನ್. ಬಾಲಸುಬ್ರಮಣ್ಯ

ಪಂಪ–ನನ್ನಯ—ಒಂದು ಸಮೀಕ್ಷೆ : ಕೆ. ವೆಂಕಟರಾಮಪ್ಪ

ಪಂಪಭಾರತ ದೀಪಿಕೆ : ಡಿ. ಎಲ್. ನರಸಿಂಹಾಚಾರ್

ಸುವರ್ಣ ಸಂಚಯ : ಸಂಪಾದಿತ

ಮುಮ್ಮಡಿ ಕೃಷ್ಣರಾಜ ಒಡೆಯರು : ಸಂಪಾದಿತ

ಗಳಗನಾಥ : ಸಂಪಾದಿತ

ಮುದ್ದಣ : ಸಂಪಾದಿತ

ಭಾರತೀಯ ಸಾಹಿತ್ಯದಲ್ಲಿ ಗಾಂಧೀಜಿ : ಸಂಪಾದಿತ

**Gandhiji in Indian Literature : Edited**

ಶ್ರೀ ರಾಮಾಯಣ ದರ್ಶನಂ : ಕುವೆಂಪು
(ಸುಲಭ ಬೆಲೆ ಆವೃತ್ತಿ)